# ಶ್ರೀನಿವಾಸ ಹಾವನೂರ ಅವರ ಸಮಗ್ರ ಸಾಹಿತ್ಯ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು
ಡಿ. ಬಸವರಾಜ

ಮಾರ್ಗದರ್ಶಕರು
ಡಾ. ಎಫ್.ಟಿ.ಹಳ್ಳಿಕೇರಿ
ಪ್ರಾಧ್ಯಾಪಕರು



ಭಾಷಾ ನಿಕಾಯ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ- ೫೮೩ ೨೭೬
೨೦೧೬

679

# "ಶ್ರೀನಿವಾಸ ಹಾವನೂರ ಅವರ ಸಮಗ್ರ ಸಾಹಿತ್ಯ"

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕರು

ಡಿ. ಬಸವರಾಜ





ಮಾರ್ಗದರ್ಶಕರು

ಡಾ. ಎಫ್.ಟಿ.ಹಳ್ಳಿಕೇರಿ

ಪ್ರಾಧ್ಯಾಪಕರು





ಭಾಷಾ ನಿಕಾಯ

ಹಸ್ತಪ್ರತಿಶಾಸ್ತ್ರ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿದ್ಯಾರಣ್ಯ-೫೮೩ ೨೭೬

೨೦೧೬

# ಮಾರ್ಗದರ್ಶಕರ ದೃಢೀಕರಣ ಪತ್ರ

**ಶ್ರೀ ಡಿ. ಬಸವರಾಜ** ಅವರು ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **'ಶ್ರೀನಿವಾಸ ಹಾವನೂರ ಅವರ ಸಮಗ್ರ ಸಾಹಿತ್ಯ'** ಎಂಬ ವಿಷಯಕ್ಕೆ ಸಂಬಂಧಿಸಿದ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಭಾಷಾ ನಿಕಾಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ :
ಸ್ಥಳ : ವಿದ್ಯಾರಣ್ಯ

**(ಡಾ. ಎಫ್.ಟಿ.ಹಳ್ಳಿಕೇರಿ)**
ಮಾರ್ಗದರ್ಶಕರು
ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

## ಸಂಶೋಧಕರ ಘೋಷಣಾ ಪತ್ರ

**'ಶ್ರೀನಿವಾಸ ಹಾವನೂರ ಅವರ ಸಮಗ್ರ ಸಾಹಿತ್ಯ'** ಎಂಬ ವಿಷಯಕ್ಕೆ ಸಂಬಂಧಿಸಿದ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಭಾಷಾನಿಕಾಯದ ಹಸ್ತಪ್ರತಿಶಾಸ್ತ್ರ ವಿಭಾಗದ ಪ್ರಾಧ್ಯಾಪಕರಾದ ಡಾ. ಎಫ್.ಟಿ.ಹಳ್ಳಿಕೇರಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**(ಡಿ.ಬಸವರಾಜ)** ಡಿ.ಬಸವರಾಜ

ದಿನಾಂಕ : 03/11/2016
ಸ್ಥಳ : ವಿದ್ಯಾರಣ್ಯ

ಪಿಎಚ್.ಡಿ ಸಂಶೋಧನಾ ವಿದ್ಯಾರ್ಥಿ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪರಿವಿಡಿ

## ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ ಮತ್ತು ಸ್ವರೂಪ

೧೯ನೇ ಶತಮಾನದ ಕೊನೆಯ ಭಾಗ ಹಾಗೂ ೨೦ನೇ ಶತಮಾನದ ಮೊದಲ ಭಾಗದ ಕರ್ನಾಟಕ ಸಾಹಿತ್ಯ, ಇತಿಹಾಸ, ಸಂಶೋಧನೆ ಕುರಿತಾಗಿ ಅಧ್ಯಯನ ಮಾಡಿದವರ ಸಂಖ್ಯೆ ಅತ್ಯಂತ ವಿರಳ. ಅಂಥ ವಿರಳ ವಿದ್ವಾಂಸರಲ್ಲಿ ಶ್ರೀನಿವಾಸ ಹಾವನೂರ ಒಬ್ಬರು. 'ಹೊಸಗನ್ನಡ ಅರುಣೋದಯ' ಕಾಲಘಟ್ಟವನ್ನು ಆಮೂಲಾಗ್ರವಾಗಿ ಶೋಧಿಸಿದ ಶ್ರೇಷ್ಠ ಸಂಶೋಧಕರು. ಒಂದು ಕಡೆ ಸಂಶೋಧಕರಾಗಿ, ಇನ್ನೊಂದು ಕಡೆ ಸೃಜನಶೀಲ ಬರಹಗಾರರಾಗಿ ಗುರುತಿಸಿಕೊಂಡವರು. ಇವರ ಒಟ್ಟು ಬರಹಗಳನ್ನು ಗಮನಿಸಿ ಹೇಳುವುದಾದರೆ ಇತಿಹಾಸ, ಸಮಾಜ, ಸಾಹಿತ್ಯ ಹಾಗೂ ಸಂಸ್ಕೃತಿ ಸಂಬಂಧಿಸಿದಂತೆ ಅಧ್ಯಯನ ಮಾಡಿದ್ದಾರೆ.

'ಶ್ರೀನಿವಾಸ ಹಾವನೂರ ಅವರ ಸಮಗ್ರ ಸಾಹಿತ್ಯ' ಎಂಬ ಹೆಸರಿನಲ್ಲಿ ಈ ಮಹಾಪ್ರಬಂಧವನ್ನು ಸಮಾರೋಪ ಒಳಗೊಂಡಂತೆ ಒಂಬತ್ತು ಅಧ್ಯಾಯಗಳಲ್ಲಿ ವಿನ್ಯಾಸಗೊಳಿಸಲಾಗಿದೆ. ಶ್ರೀನಿವಾಸ ಹಾವನೂರ ಅವರು ಹಾವೇರಿ ಜಿಲ್ಲೆ ಹಾವನೂರ ಗ್ರಾಮದಲ್ಲಿ ಜನಿಸಿದರು. ಮುಂದೆ ಅವರ ಪ್ರಾಥಮಿಕ ಶಿಕ್ಷಣ ಗಾವಠಿ ಶಾಲೆಯಿಂದ ಆರಂಭವಾಗಿ ನಂತರ ಪ್ರೌಢಶಿಕ್ಷಣ ಹಾವೇರಿಯಲ್ಲಿ, ಮುಂದೆ ಜೂನಿಯರ್ ಬಿ.ಎ. ಪದವಿ ಧಾರವಾಡದಲ್ಲಿ ಅಭ್ಯಾಸ ಮಾಡುತ್ತ; ವಿದ್ಯಾವರ್ಧಕ ಸಂಘದ ಲೈಬ್ರರಿಯಲ್ಲಿ ಸಹಾಯಕ ಗ್ರಂಥಪಾಲಕರಾಗಿ ಕಾರ್ಯನಿರ್ವಹಿಸುತ್ತಿದ್ದರು. ಇದೇ ಸಂದರ್ಭದಲ್ಲಿ ರಂ.ಶ್ರೀ ಮುಗಳಿಯವರು ಯಾವುದೋ ಕಾರ್ಯಕ್ರಮದಲ್ಲಿ ಭಾಷಣ ಮಾಡುವ ನಿಮಿತ್ತವಾಗಿ ಧಾರವಾಡಕ್ಕೆ ಬಂದಿದ್ದರು. ಆ ಸಂದರ್ಭದಲ್ಲಿ 'ಬಿ.ಎ.ಫೈನಲ್ ಕಲಿಯಲು ತಾವಿರುವ ಸಾಂಗಲಿಗೆ ಬರಬೇಕೆಂದಿದ್ದೇನೆ' ಎಂದು ಕೇಳಿದರು. ಅದಕ್ಕೆ ಅವರು ಅನುಮತಿ ನೀಡಿದರು. ಹೀಗಾಗಿ ಬಿ.ಎ. ಪದವಿ ಶಿಕ್ಷಣವನ್ನು ಸಾಂಗ್ಲಿಯಲ್ಲಿ ಪಡೆದರು.

ಮುಂದಿನ ದಿನಗಳಲ್ಲಿ ಪುಣೆಯಲ್ಲಿ ಎಂ.ಎ. ಸ್ನಾತಕೋತ್ತರ ಪದವಿ ಪಡೆದರು. ನಂತರ ಮುಂಬಯಿಯಲ್ಲಿ ತಾತ್ಕಾಲಿಕ ಬೇರೆ ಬೇರೆ ಹುದ್ದೆಗಳಲ್ಲಿ ನಾಲ್ಕೈದು ವರ್ಷ

ನಿರ್ವಹಿಸಿದರು. ಆ ಮೇಲೆ ಮುಂಬಯಿ ಟಿ.ಐ.ಎಫ್.ಆರ್. ಗ್ರಂಥಾಲಯದಲ್ಲಿ ಸಹಾಯಕ ಗ್ರಂಥಪಾಲಕರಾಗಿ ಕಾರ್ಯನಿರ್ವಹಿಸಿದರು. ಈ ಅವಧಿಯಲ್ಲಿ ರಂ.ಶ್ರೀ ಮುಗಳಿಯವರ ಮಾರ್ಗದರ್ಶನದಲ್ಲಿ 'ಹೊಸಗನ್ನಡ ಅರುಣೋದಯ' ಎಂಬ ವಿಷಯದ ಮೇಲೆ ಪುಣೆ ವಿಶ್ವವಿದ್ಯಾಲಯದಿಂದ ಪಿಎಚ್.ಡಿ ಪದವಿ ಪಡೆದರು. ನಂತರ ಮಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಮುಖ್ಯಸ್ಥರಾಗಿ, ಆ ಮೇಲೆ ಮುಂಬಯಿ ವಿಶ್ವವಿದ್ಯಾಲಯದಲ್ಲಿ ಕನ್ನಡ ವಿಭಾಗದ ಮುಖ್ಯಸ್ಥರಾಗಿ ಎರಡು ವರ್ಷಗಳ ಕಾಲ ಕಾರ್ಯನಿರ್ವಹಿಸಿ ನಿವೃತ್ತಿಗೊಂಡರು. ನಂತರ ಮಂಗಳೂರು ಥಿಯೋಲಾಜಿಕಲ್ ಕಾಲೇಜಿನಲ್ಲಿ ಗೌರವ ಸಂಶೋಧಕರಾಗಿ ಕೆಲವು ವರ್ಷ ಸೇವೆ ಸಲ್ಲಿಸಿದರು. ಬೋಧನೆ, ಶೋಧನೆ ಹೀಗೆ ಅಧ್ಯಾಪನ ಜೀವನ ನಡೆಸಿದ ಹಾವನೂರ ಅವರ ಬದುಕು ಮತ್ತು ಸಮಗ್ರ ಸಾಹಿತ್ಯ ಕುರಿತಂತೆ ಹಲವು ಉದ್ದೇಶಗಳನ್ನು ಇರಿಸಿಕೊಂಡು ಈ ಅಧ್ಯಯನ ಮಾಡಲಾಗಿದೆ.

ಶ್ರೀನಿವಾಸ ಹಾವನೂರ ಅವರ ಸಮಗ್ರ ಕೃತಿಗಳ ಮಹತ್ವವನ್ನು ಸಂಶೋಧನಾತ್ಮಕವಾಗಿ ಅಧ್ಯಯನಕ್ಕೆ ಒಳಪಡಿಸುವ ಪ್ರಯತ್ನಗಳು ಇದುವರೆಗೂ ನಡೆದಿಲ್ಲ. ಆ ಕೊರತೆಯನ್ನು ತುಂಬಿಕೊಡುವ ಬಹುಮುಖ್ಯ ಉದ್ದೇಶ ಈ ಮಹಾಪ್ರಬಂಧದ್ದಾಗಿದೆ. ಶ್ರೀನಿವಾಸ ಹಾವನೂರ ಸಮಗ್ರ ಸಾಹಿತ್ಯದ ವ್ಯಾಪ್ತಿ ಕುರಿತಂತೆ ಒಂದು ಸಂಕ್ಷಿಪ್ತವಾದ ನೋಟವನ್ನು ಕೊಡುವುದರ ಮೂಲಕ ಅವರ ಅಧ್ಯಯನ ವಿಷಯ ವೈವಿಧ್ಯತೆಯನ್ನು ಸಂಕ್ಷಿಪ್ತವಾಗಿ ಒಂದು ಕಡೆಗೆ ದಾಖಲಿಸುವ ಪ್ರಯತ್ನ ಈ ಮಹಾಪ್ರಬಂಧದ ಮತ್ತೊಂದು ಉದ್ದೇಶವಾಗಿದೆ. ಸಣ್ಣಕಥೆ, ಲಲಿತ ಪ್ರಬಂಧ, ವಿಚಾರ ಸಾಹಿತ್ಯ, ಜೀವನ ಚರಿತ್ರೆ, ವಿಮರ್ಶೆ, ಸಂಪಾದನೆ, ಅನುವಾದ, ಪತ್ರಿಕೋದ್ಯಮ ಇತ್ಯಾದಿ ಸೃಜನಶೀಲ ಸಾಹಿತ್ಯ ಕೃಷಿ ಜೊತೆಗೆ ಸಂಶೋಧನೆಯಂತಹ ಗಂಭೀರ ಕ್ಷೇತ್ರದಲ್ಲಿ ಶ್ರೀನಿವಾಸ ಹಾವನೂರ ಅವರು ಸೇವೆ ಸಲ್ಲಿಸಿದ್ದಾರೆ. ಹೀಗಾಗಿ ಸಂಶೋಧನೆ ಮತ್ತು ಸೃಜನಶೀಲ ಸಾಹಿತ್ಯಕ್ಕೆ ಹಾವನೂರ ಅವರ ಕೊಡುಗೆಯನ್ನು ನಿರೂಪಿಸುವುದು ಈ ಮಹಾಪ್ರಬಂಧದ ಇನ್ನೊಂದು ಉದ್ದೇಶವಾಗಿದೆ.

ಸಂಶೋಧನೆ ಎನ್ನುವುದು ಸುಲಭದ ದಾರಿಯಲ್ಲ; ಹಾವನೂರ ಅವರು 'ಹೊಸಗನ್ನಡ ಅರುಣೋದಯ' ಎಂಬ ಮಹಾಪ್ರಬಂಧವನ್ನು ಸಿದ್ಧಡಿಸುವುದರ ಮೂಲಕ ತಾನೊಬ್ಬ ಸಮರ್ಥ ಸಂಶೋಧಕ ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಕ್ರೈಸ್ತ ಮಿಶನರಿಗಳ ಆಗಮನ, ಪತ್ರಿಕೋದ್ಯಮದ ಅಸ್ತಿತ್ವ, ಆ ಕಾಲಘಟ್ಟದ ಧಾರ್ಮಿಕ ಸಂಸ್ಥೆಗಳ ಪಾತ್ರ, ತತ್ವಪದಗಳ ರಚನೆ ಇತ್ಯಾದಿ ಸಂಗತಿಗಳನ್ನು ಹೊಸಗನ್ನಡ ಅರುಣೋದಯ ಗ್ರಂಥದಲ್ಲಿ ಸಾದರ ಪೂರಕವಾಗಿ ಚರ್ಚಿಸಿದ್ದಾರೆ. ಈ ಚರ್ಚೆಗೆ ಬೇಕಾದ ಆಕರ ಸಾಮಗ್ರಿಗಳ ಸರ್ವೇಕ್ಷಣ ಸಂಗ್ರಹ, ವಿಶ್ಲೇಷಣೆ ಮತ್ತು ಅಧ್ಯಯನಗಳಲ್ಲಿ ಹಾವನೂರ ಅವರು ತೊಡಗಿಕೊಂಡ ರೀತಿ ಮತ್ತು ಪರಿಶ್ರಮವನ್ನು ಸೈದ್ಧಾಂತಿಕವಾಗಿ ವಿವೇಚಿಸುವುದು ಈ ಮಹಾಪ್ರಬಂಧದ ಮತ್ತೊಂದು ಉದ್ದೇಶವಾಗಿದೆ.

ಇಲ್ಲಿಂದ ಆರಂಭವಾದ ಹಾವನೂರ ಅವರ ಸಂಶೋಧನೆ ತುಂಗಭದ್ರೆ ವರವೊ, ಶಾಪವೊ, ಕೆಳದಿ ಅರಸರ ಸಂಬಂಧ, ವಿಜಯನಗರ ಕಾಲದ ಆನಂದ ನಿಧಿ, ಮೆಕೆಂಜಿಯ ಅಜ್ಞಾತ ಸಂಗ್ರಹ, ಟಿಪ್ಪು ಕುರಿತ ಬ್ರಿಟೀಷರ ಆಕರಗಳು ಆದಿಲ್ ಗ್ರಂಥಸಂಪದ, ಸುರಪುರದ ದುರಂತ ಇತ್ಯಾದಿ ಸಂಗತಿಗಳು ಹಾಗೂ 'ಮರೆಯಲಾಗದ ಮುಂಬಯಿ ಕರ್ನಾಟಕ' ಎಂಬ ಕೃತಿಯಲ್ಲಿ ಬಿಡಿ ಲೇಖನಗಳು ಮುಂಬಯಿ ಕರ್ನಾಟಕ ಎಂಬ ಪರಿಕಲ್ಪನೆ, ಮುಂಬಯಿ ಕರ್ನಾಟಕ ಪೂರ್ವ ಇತಿಹಾಸ, ಕಿತ್ತೂರಿನ ಚರಿತ್ರೆಯಲ್ಲಿ ಎಲೆಮರೆಕಾಯಿಯಾದ ಮಹತ್ವದ ಸಂಗತಿ, ಮೊಂಡುಗೈ ಭೀಮರಾಯ, ತಳ್ಳಿ ನ್ಯಾಯ ಸಾಧನೆಯ ವಿಚಿತ್ರ ಪದ್ಧತಿ, ಕಿತ್ತೂರಿನ ಬೆಳಕಿಗೆ ಬಂದಿರದ ಕೆಲ ಅಂಶಗಳು, ಬ್ರಿಟಿಷ್ ದಾಖಲೆಗಳು ರೂಪಿಸಿದ ಸಂಗೊಳ್ಳಿ ರಾಯಣ್ಣ, ಮುಧೋಳ ರಾಜರ ಪರಕಾಯ ಪ್ರವೇಶ ಇನ್ನು ಮುಂತಾದ ಮಹತ್ವದ ವಿಷಯಗಳ ಬಗೆಗೆ ಚರ್ಚೆಗೆತ್ತಿಕೊಂಡಿದ್ದಾರೆ.

ಸಂಶೋಧನ ಕ್ಷೇತ್ರದ ಕಾರ್ಯ ವ್ಯಾಪ್ತಿ ವಿಸ್ತಾರಕ್ಕೆ ಹಾಗೂ ಕನ್ನಡ ಭಾಷೆ, ಸಂಸ್ಕೃತಿ, ಚರಿತ್ರೆ ಇತರರಿಗೆ ಸುಲಭವಾಗಿ ತಿಳಿಯಲು ಕನ್ನಡ ಭಾಷೆಯ ವಿಷಯವನ್ನು ಕಂಪ್ಯೂಟರಿಗೆ ಅಳವಡಿಸಿದ ಕೀರ್ತಿ ಹಾವನೂರ ಅವರಿಗೆ ಸಲ್ಲುತ್ತದೆ. ಅಲ್ಪ ಸಮಯ ಹೆಚ್ಚು ಕೆಲಸ, ಅಲ್ಪ ಶ್ರಮ ಹೆಚ್ಚು ಕ್ರೋಢೀಕರಣ, ಮಿತವಾದ ಹಣ ವೆಚ್ಚ, ಸಂಶೋಧನಾರ್ಥಿಗಳ ವಿಷಯವನ್ನು ಸುಲಭವಾಗಿ ಪಡೆಯಲು ಕಂಪ್ಯೂಟರ್ ಸಹಾಯಯಾಗುತ್ತದೆ. ಹೀಗಾಗಿ ಹಾವನೂರ ಅವರು ಕಂಪ್ಯೂಟರನ್ನು ಕುರಿತು ನಡೆಸಿದ ಚಿಂತನೆಗಳನ್ನು ಇಲ್ಲಿ ಚರ್ಚಿಸುವುದು ಮುಖ್ಯವಾಗಿದೆ.

ಕನ್ನಡ ಭಾಷೆ, ಸಂಸ್ಕೃತಿ, ಸಾಹಿತ್ಯವನ್ನು ನಾಡಿನ ಜನರು ತಿಳಿದುಕೊಳ್ಳುವ ಅಥವಾ ಪಡೆದುಕೊಳ್ಳಲು ಈ ಕಂಪ್ಯೂಟರ್ ವಿಷಯದ ಅಳವಡಿಕೆ ಕಾಲದಿಂದ ಕಾಲಕ್ಕೆ ಹೆಚ್ಚು ಮಹತ್ವ ಪಡೆದುಕೊಳ್ಳುತ್ತಿದೆ ಎಂಬುದು ಹಾವನೂರ ಅವರ ಸಂಶೋಧನೆಯ ಮಹತ್ವವನ್ನು ಪ್ರತಿನಿಧಿಸುತ್ತದೆ. ವಿಜ್ಞಾನ ಕ್ಷೇತ್ರದಲ್ಲಿ ಸಂಶೋಧನೆಯ ಕಾರ್ಯನಿರ್ವಹಿಸುವವರನ್ನು ಕಂಡು ಹಾವನೂರ ಅವರು ಕಂಪ್ಯೂಟರ್‌ಗೆ ಕನ್ನಡ ಭಾಷೆಯ ವಿಷಯವನ್ನು ಏಕೆ ಅಳವಡಿಸಬಾರದು ಎಂದು ಆಲೋಚಿಸಿದರು. ಹೀಗೆ ಆಧುನಿಕ ದಿನಮಾನಗಳಲ್ಲಿ ಕನ್ನಡ ಭಾಷಿಗರಿಗೆ ಕಂಪ್ಯೂಟರ್ ಸಹಾಯ ಪಡೆಯುವ ಅವಕಾಶವನ್ನು ಶ್ರೀನಿವಾಸ ಹಾವನೂರ ಅವರು ಕಲ್ಪಿಸಿಕೊಟ್ಟರು. ಈ ರೀತಿಯ ಸಂಗತಿಗಳನ್ನು ಕುರಿತು ಇವರ ಶೋಧನೆಗಳು ಗಮನಾರ್ಹವಾಗಿವೆ. ಈ ಎಲ್ಲಾ ಅಂಶಗಳನ್ನು ಅಧ್ಯಯನಕ್ಕೆ ಒಳಪಡಿಸುವ ಮೂಲಕ ಕನ್ನಡ ಶ್ರೇಷ್ಠ ಸಂಶೋಧಕರಾದ ಹಾವನೂರ ಅವರ ವೈಚಾರಿಕ ಹಾಗೂ ವೈಜ್ಞಾನಿಕ ವ್ಯಕ್ತಿತ್ವವನ್ನು ಪರಾಮರ್ಶಿಸುವ ಉದ್ದೇಶವನ್ನು ಇಲ್ಲಿ ಹೊಂದಲಾಗಿದೆ.

ಸಂಶೋಧನೆಯಂತೆ ಹಾವನೂರ ಅವರ ಇನ್ನೊಂದು ಕ್ಷೇತ್ರ ಸೃಜನ ಸಾಹಿತ್ಯ. ಈ ಸಾಹಿತ್ಯ ಕ್ಷೇತ್ರದಲ್ಲಿ ಸಣ್ಣಕಥೆ, ಲಲಿತ ಪ್ರಬಂಧ, ವಿಚಾರ ಸಾಹಿತ್ಯ, ಜೀವನ ಚರಿತ್ರೆ ಹಾಗೂ

ವಿಮರ್ಶಾ ಸಾಹಿತ್ಯವನ್ನು ಪರಿಭಾವಿಸಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಹಾವನೂರ ಅವರು ಮೂಲತಃ ಕಥೆಗಾರರಲ್ಲದ್ದಿರೂ ದೇವುಡು ಅವರ ನಂತರ ಮನುಷ್ಯನ ಅಂತರಂಗದ ತೆರೆಗಳನ್ನು ಬಿಡಿಸಿ ಕಥೆಗಳಲ್ಲಿ ತೋರಿಸಿದರು. ೧೯೬೨ರಲ್ಲಿ 'ಹೋಟೆಲಿನ ಪ್ರಭಾವ' ಎಂಬ ಮೊದಲ ಕಥೆ ಇವರಿಂದ ಪ್ರಕಟವಾಯಿತು. 'ಗಂಧ ಮತ್ತು ಕಲ್ಲು' ಕಥಾಸಂಕಲನವು ಒಂಬತ್ತು ಕಥೆಗಳನ್ನು ಒಳಗೊಂಡಿದೆ. ಲೇಪಾಕ್ಷಿಯೂ ಲೇಡಿಸ್ ಹಾಸ್ಟೆಲೂ, ಅವರು, ಮುರಳಿ ಸ್ವಪ್ನ, ವಾತ್ಸಲ್ಯ ಪರೀಕ್ಷೆ, ಸಂಭಾವಿತೆ, ಗಂಧ ಮತ್ತು ಕಲ್ಲು, ಕಾಗೆಗೆ ಹೇಳಿದ ಕಥೆ, ಇಂತಿ ನಮಸ್ಕಾರ, ಮಾವನವರು ಇತ್ಯಾದಿ ಬಿಡಿ ಕಥೆಗಳನ್ನು ಒಳಗೊಂಡಿದೆ. ಈ ಕಥಾಸಂಕಲನದ ಕೇಂದ್ರ ವಸ್ತು ಮಹಿಳೆ, ಹೆಣ್ಣಿನ ಜೀವನದ ಏಳು-ಬೀಳುಗಳ ನಡುವೆ ಜೀವನದ ಬಂಡಿ ದಾಟಿಸಿದ ಘಟ್ಟವನ್ನು ಕಾಣಬಹುದು. ಬಾಲ್ಯ, ಪ್ರೌಢಾವಸ್ಥೆ, ವೃದ್ಧಾಪ್ಯ ಈ ಅವಧಿಗಳನ್ನು ದಾಟಿದ ವಿಶಿಷ್ಟ ಸಂಗತಿಗಳನ್ನು ಇಲ್ಲಿ ಕಥೆಗಳಾಗಿ ಹೆಣೆದಿದ್ದಾರೆ. ಇನ್ನೊಂದು ಕಥಾ ಸಂಕಲನ 'ಕುಚೋದ್ಯದ ಕಥೆಗಳು' ಒಂಭತ್ತು ಬಿಡಿ ಕಥೆಗಳನ್ನೊಳಗೊಂಡ ಇದು ಕನ್ನಡ ಸಾಹಿತ್ಯದ ವಿಶಿಷ್ಟತೆಯನ್ನು ಪ್ರತಿನಿಧಿಸುತ್ತದೆ. ವ್ಯಕ್ತಿಯ ದುರುಳ ಸ್ವಭಾವ, ದುರುಳ ಆಲೋಚನೆ ಸಂದರ್ಭ, ಸನ್ನಿವೇಶಕ್ಕೆ ಅನುಗುಣವಾಗಿ ಹುಟ್ಟಿಕೊಳ್ಳುತ್ತವೆ. ಪ್ರತಿಬಿಂಬ, ಆತ್ಮನಸ್ತು ಕಾಮಾಯ ಸರ್ವಂ ಭವತೆ, ಪ್ರತಿಭಾಶಾಲಿ, ಇರುವೆ ಮತ್ತು ಚಿಟ್ಟೆ, ಜೊತೆಗಾರ್ತಿ, ವಿಷಾರಿ, ಕಾಮದಹನ ಇತ್ಯಾದಿ ಬಿಡಿ ಕಥೆಗಳನ್ನೊಳಗೊಂಡಿವೆ. ಪ್ರತಿ ಪಾತ್ರವೂ ವಿಶಿಷ್ಟತೆಯನ್ನು ಒಳಗೊಂಡಿದೆ. ಈ ಕಥಾ ವಿಷಯ ಒಳಿತು ಮತ್ತು ಕೆಡುಕು ಎರಡು ಪರಿಣಾಮಗಳನ್ನು ಓದುಗರ ಮೇಲೆ ಪ್ರಭಾವ ಬೀರುವುದರ ಮೂಲಕ ಸಮಾಜದ ಸ್ವಾಸ್ಥ್ಯವನ್ನು ಕಾಪಾಡಲು ಸಾಧ್ಯವಾಗಿರುವ ಚಿತ್ರಣ ಈ ಕಥೆಗಳಲ್ಲಿ ಅನಾವರಣಗೊಂಡಿದೆ.

'ಒಂದಷ್ಟು ಲಘು ಒಂದಷ್ಟು ಗಂಭೀರ' ಎಂಬ ಲಲಿತಪ್ರಬಂಧ ಸಂಕಲನವು ಹದಿನಾರು ಬಿಡಿ ಪ್ರಬಂಧಗಳನ್ನೊಳಗೊಂಡಿದೆ. ಆಧುನಿಕ ಕನ್ನಡ ಸಾಹಿತ್ಯ ತನ್ನದೇಯಾದ ವಿಶಿಷ್ಟತೆಯನ್ನು ಹೊಂದಿದೆ. ಲಲಿತಪ್ರಬಂಧ ತಿಳಿಹಾಸ್ಯವನ್ನು ಒಳಗೊಂಡಿರುತ್ತದೆ. ಕೌಟುಂಬಿಕ, ಸಾಮಾಜಿಕ ಹಾಗೂ ಧಾರ್ಮಿಕ ವಿಷಯಗಳು ಓದುಗನಿಗೆ ಮನೋರಂಜನೆಯ ಜೊತೆಗೆ ನೀತಿಯನ್ನು ಕೊಡುತ್ತವೆ. ಹಾಗೆಯೇ ಓದುಗನ ಮನಸ್ಸನ್ನು ಸೂಕ್ಷ್ಮಗ್ರಹಿಕೆಯ ಕಡೆಗೆ ಕೊಂಡೊಯ್ಯುತ್ತದೆ. ಈತ ಸತ್ಯನಾರಾಯಣ, ವಿಷ್ಣುವಿನ ಅವತಾರಗಳು, ಒಕ್ಕಲಗಿತ್ತಿ, ಹೆಸರು ಅಡ್ಡ ಹೆಸರು ಅಡ್ನಾಡಿ ಹೆಸರು, ಹೆಸರು ಹೆಸರನ್ನೆ ಮರೆತಾಗ, ನಿಂದೆ, ಟೀಕೆ, ವಿಮರ್ಶೆ, ಮನಶಾಂತಿಯ ಸಪ್ತಸೂತ್ರಗಳು, ನನ್ನಷ್ಟಕ್ಕೆ ನಾನು, ಮರಣ ಸಂಭ್ರಮ, ಹಾಲಿನ ಕೆನೆ, ವಿದೇಶಗಳಲ್ಲಿ ನಾ ಕಂಡ ನಾರಿಯರು ಇನ್ನು ಮುಂತಾದ ಹಲವು ಬಿಡಿ ಪ್ರಬಂಧಗಳು ವಿಶಿಷ್ಟವಾಗಿವೆ. ಇವು ಸಮಾಜಕ್ಕೆ ತನ್ನದೇಯಾದ ಸಂದೇಶವನ್ನು ಕೊಡುತ್ತವೆ. ಕೆಲವು ಧಾರ್ಮಿಕ ಕ್ಷೇತ್ರದ ಕುರಿತು ಚರ್ಚೆಗೊಂಡಿವೆ. ಇನ್ನು ಕೆಲವು ಕೌಟುಂಬಿಕ ಸಂಗತಿ ಚರ್ಚೆಗೆ ಒಳಪಟ್ಟಿದೆ ಮತ್ತೆ ಕೆಲವು ಸಾಮಾಜಿಕ ಸಂಬಂಧಗಳ ವಿಷಯಗಳು ಪ್ರಸ್ತಾಪಗೊಂಡಿದೆ.

ಹಾವನೂರ ಅವರ ವಿಚಾರ ಸಾಹಿತ್ಯವನ್ನು ವಿಶ್ಲೇಷಿಸಲಾಗಿದೆ. ಅವಿವಾಹಿತೆ ಎನ್ನುವ ಶೀರ್ಷಿಕೆಯ ವಿಚಾರ ಸಾಹಿತ್ಯದಲ್ಲಿ ಕೇಂದ್ರ ವಸ್ತು ಮಹಿಳೆ, ಅವಿವಾಹಿತೆ, ಪರಿತ್ಯಕ್ತ, ವಿಧವೆ ಈ ಅಂಶಗಳನ್ನು ಆಧರಿಸಿ ಹೆಣ್ಣಿನ ಬದುಕಿನ ಬಾಲ್ಯ, ಪ್ರೌಢಾವಸ್ಥೆ ಮತ್ತು ವೃದ್ಧಾಪ್ಯ ಈ ಕಾಲಘಟ್ಟಗಳಲ್ಲಿ ಬದುಕಿನ ಸ್ವರೂಪವನ್ನು ಸೂಕ್ಷ್ಮವಾಗಿ ನೋಡಲಾಗಿದೆ. ಇದರ ಮುಂದುವರಿದ ಭಾಗವಾಗಿ 'ಜೀವನ ಚರಿತ್ರೆ'; ಇದರ ಅಡಿಯಲ್ಲಿ ಕನ್ನಡ ನಾಡು, ನುಡಿ, ಭಾಷೆ ಸಂಸ್ಕೃತಿಯಂಥ ಹತ್ತು ಹಲವು ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದ ಮಹನೀಯರಾದ ಗಳಗನಾಥ, ಬಿ.ಜಿ.ಚಿಮ್ಮಲಗಿ, ಫರ್ಡಿನಾಂಡ್ ಕಿಟೆಲ್ ಇವರ ಸೇವೆ ಮತ್ತು ಕಾರ್ಯಗಳನ್ನು ಆಧರಿಸಿ ಇವರ ವ್ಯಕ್ತಿತ್ವದ ಚಿತ್ರಣವನ್ನು ನಿರೂಪಿಸಲಾಗಿದೆ. ಹಾಗೂ ಕೆಲವು ಕೃತಿಗಳನ್ನು ವಿಮರ್ಶೆಯ ಅಡಿಯಲ್ಲಿ ಚರ್ಚೆಗೆ ಎತ್ತಿಕೊಂಡಿದೆ. ಕನ್ನಡ ಸಾಹಿತ್ಯ ದರ್ಶನ, ವಾದಿರಾಜರ ತೀರ್ಥ ಪ್ರಬಂಧ, ಗೋವಿಂದ ವಾಙ್ಮಯ ದರ್ಶನ– ಈ ಕೃತಿಗಳನ್ನು ಹಾವನೂರ ಅವರು ಚರ್ಚಿಸುವುದರ ಮೂಲಕ ಸಂಶೋಧನೆಯ ಜೊತೆಗೆ ಹೇಗೆ ಸೃಜನಶೀಲ ಸಮರ್ಥ ಬರಹಗಾರ ಎಂಬುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಶ್ರೀನಿವಾಸ ಹಾವನೂರ ಅವರು ಸಂಪಾದನೆ ಮತ್ತು ಸೃಜನಶೀಲ ಬರಹಗಾರರಾಗಿಯೂ ಮುಖ್ಯರಾಗಿದ್ದಾರೆ. ಸಂಪಾದಕರಾಗಿ, ಅನುವಾದಕರಾಗಿ, ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಅಪರೂಪದ ಕೃತಿಗಳನ್ನು ಕೊಟ್ಟಿದ್ದಾರೆ. ಸಂಪಾದನೆ ಅಡಿಯಲ್ಲಿ ಮತ್ತು ಗ್ರಂಥ ಸಂಪಾದನೆ ಎಂದು ಎರಡು ರೀತಿಗಳಿವೆ. ಹತ್ತು ಹಲವು ಹಸ್ತಪ್ರತಿಗಳ ಅಥವಾ ಕೈಬರಹ ಪ್ರತಿಗಳ ಸಹಾಯದಿಂದ ಕವಿ ಪಾಠವನ್ನು ಒಂದು ಕಡೆ ಪರಿಷ್ಕರಿಸಿ ಕೊಡುವ ವಿಧಾನ ಗ್ರಂಥ ಸಂಪಾದನೆಯಾದರೆ; ಬೇರೆಯವರ ಲೇಖನಗಳನ್ನು, ವಿಚಾರಗಳನ್ನು ಸಂಗ್ರಹಿಸಿ ಕೊಡುವುದು ಸಂಪಾದನೆ ಎನಿಸುತ್ತದೆ. ಈ ದೃಷ್ಟಿಯಿಂದ ಹಾವನೂರ ಅವರ ಗ್ರಂಥಸಂಪಾದನೆ ಕೃಷಿ ಕಡಿಮೆ ಎಂದೇ ಹೇಳಬೇಕು.

ಸಂಪಾದನೆಗೆ ಸಂಬಂಧಿಸಿದಂತೆ 'ಮರೆಯಲಾಗದ ಬರಹಗಾರರು' ಎಂಬ ಶೀರ್ಷಿಕೆಯ ಅಡಿಯಲ್ಲಿ ಹೊಸಗನ್ನಡ ಕಾಲಘಟ್ಟದಲ್ಲಿ ಇಂಗ್ಲಿಷ್ ಕವನಗಳನ್ನು ಪರಿಚಯಿಸಿದ ಪ್ರಮುಖರಲ್ಲಿ ಹಟ್ಟಿಯಂಗಡಿ ನಾರಾಯಣ ಅವರು ಒಬ್ಬರು. ಅವರ ವಿಚಾರಧಾರೆಯ ಮಹತ್ವವನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. ಹಾಗೆಯೇ ಇದರ ಮುಂದುವರಿದ ಭಾಗವಾಗಿ ಕನ್ನಡ ಮೇರು ವಿದ್ವಾಂಸರಲ್ಲಿ ಒಬ್ಬರಾದ ರಂ.ಶ್ರೀ ಮುಗಳಿಯವರ ವ್ಯಕ್ತಿತ್ವವನ್ನು ಚಿತ್ರಿಸಲಾಗಿದೆ. ಪಂಪ ಮತ್ತು ರನ್ನರ ಕನ್ನಡ ಸಾಹಿತ್ಯದ ವೈಶಿಷ್ಟ್ಯತೆಯನ್ನು ನಿರೂಪಿಸಲಾಗಿದೆ. ನಂತರದಲ್ಲಿ 'ಮಧ್ಯಕಾಲೀನ ಕರ್ನಾಟಕ' ಕೃತಿಯ ಜಿ.ಎಸ್.ದೀಕ್ಷಿತರ ಐತಿಹಾಸಿಕ ನೆಲೆಯ ಆಯ್ದು ಬಿಡಿ ಲೇಖನಗಳ ಮಹತ್ವವನ್ನು ಕುರಿತು ಚರ್ಚಿಸಲಾಗಿದೆ. ಬಸವಣ್ಣನ ಜೀವನ, ಕಾಲ, ಕಲಚೂರಿ ೨ನೇ ಬಿಜ್ಜಳನ ಸಾವು ಕುರಿತು, ಬಸವಣ್ಣನ ಇತಿಹಾಸದ ವಚನ ವಿಶ್ಲೇಷಣೆ, ಡಿ.ವಿ.ಜಿಯವರ ದೃಷ್ಟಿಯಲ್ಲಿ ವಿದ್ಯಾರಣ್ಯ ವಿಜಯನಗರ ಕಾಲದ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿ,

ಮಧ್ಯಕಾಲೀನ ಕರ್ನಾಟಕ ಶಿಕ್ಷಣ, ಮಧ್ಯಕಾಲೀನ ಶಿಕ್ಷಣ ಮತ್ತು ವಿಜ್ಞಾನ, ಭಾರತೀಯ ಹಿನ್ನೆಲೆಯಲ್ಲಿ ಕರ್ನಾಟಕದ ಧಾರ್ಮಿಕ ಮತ್ತು ಸಾಮಾಜಿಕ ಜೀವನ ಈ ರೀತಿಯ ವಿಷಯಗಳನ್ನು ಇಲ್ಲಿ ಪರಿಚಯಿಸಲಾಗಿದೆ.

'ಪಾ.ವೆಂ. ಆಚಾರ್ಯರ ಹರಟೆಗಳು' ಎಂಬ ಕೃತಿಯನ್ನು ಸಂಪಾದನೆಯ ಅಡಿಯಲ್ಲಿ ನಿರೂಪಿಸಲಾಗಿದೆ. ಅವರ ಸಾಹಿತ್ಯದ ಕೃಷಿ ಆರಂಭದಿಂದ ಹಿಡಿದು ಶಾಲಾ ಮಾಸ್ತರ, ಮುದ್ರಣಾಲಯದ ಮೇನೇಜರ್, ಪತ್ರಿಕಾ ಸಂಪಾದಕರಾಗಿ, ಹೊಟೇಲ್ ಬಿಲ್ ರೈಟರ್‌ರಾಗಿ ವೈವಿಧ್ಯಮಯ ಸಾಹಿತ್ಯದ ಕೃಷಿಯನ್ನು ಪರಿಚಯಿಸಲಾಗಿದೆ. 'ಬೆಂಗೇರಿಯವರ ಬರಹ' ಎಂಬ ಕೃತಿಯಲ್ಲಿ ಚದುರಿ ಹೋಗಿರುವ ಅವರ ಬಿಡಿ ಬರಹಗಳನ್ನು ವಿಷಯವಾರು ಸಂಪಾದನೆಯ ಅಡಿಯಲ್ಲಿ ಚರ್ಚಿಸಿದೆ. ಸಾಮಾಜಿಕ ಚಿಂತನೆ, ಭಾಷೆ, ಸಾಹಿತ್ಯ, ಶಾಸನ ಹೀಗೆ ಹಲವು ವಿಷಯಗಳನ್ನು ಚರ್ಚೆಗೆ ಒಳಪಡಿಸಲಾಗಿದೆ. ಇತಿಹಾಸಕ್ಕೆ ಸಂಬಂಧಿಸಿದಂತೆ ಕೃಷಿ ಮಾಡಿದ ಲೇಖಕರನ್ನು ಮತ್ತು ಅವರ ಸಾಹಿತ್ಯ ಸಾಧನೆಯನ್ನು ಒಂದು ಕಡೆ ಸಂಗ್ರಹಿಸಿ ಕೊಟ್ಟಿದ್ದಾರೆ.

ಅನುವಾದ ಸಾಹಿತ್ಯವನ್ನು ಕುರಿತು ಚರ್ಚಿಸುವುದಾದರೆ ಹಾವನೂರ ಅವರು ಕನ್ನಡದ ಜೊತೆಗೆ ಇಂಗ್ಲಿಷ್‌ನಲ್ಲಿ ಪ್ರಬುದ್ಧತೆಯನ್ನು ಪಡೆದಿದ್ದರು. ಭೂಮಿ ಮತ್ತು ಆಕಾಶ ಸಂಬಂಧ, ಪೂರ್ವವೇದ ಆಚರಣೆ, ಕನ್ನಡ ಸಾಹಿತ್ಯಕ್ಕೆ ಬಾಸೆಲ್ ಮಿಶನರಿಗಳ ಕೊಡುಗೆ, ಮಂಗಳೂರು ಭೋಟನ್ ಪ್ರಕೃತಿಯ ಸ್ವಯಂ ಮುದ್ರಣ ಮುಂತಾದ ಲೇಖನಗಳು ಅನುವಾದಗೊಂಡಿವೆ. ಮೊಗ್ಲಿಂಗ್ ಅವರಿಗೆ ಇರುವ ಕನ್ನಡ ಭಾಷೆಯ ಅಭಿಮಾನವನ್ನು ಆರಂಭದಲ್ಲಿ ಕನ್ನಡಿಗರಿಗೆ ಪರಿಚಯಿಸಿದ ಕೀರ್ತಿ ಹಾವನೂರ ಅವರಿಗೆ ಸಲ್ಲುತ್ತದೆ. ಹೀಗಾಗಿ ಅನುವಾದ ಕ್ಷೇತ್ರದಲ್ಲಿ ಕೂಡ ಹಾವನೂರ ಅವರು ಕೃಷಿ ಮಾಡಿದ ಸಂಗತಿಯನ್ನು ನಿರೂಪಿಸುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

**ಅಧ್ಯಯನ ಸ್ವರೂಪ**

ಮಹಾಪ್ರಬಂಧದ ಅಧ್ಯಯನಕ್ಕೆ ಸಂಬಂಧಿಸಿದಂತೆ ಸಮಾರೋಪವನ್ನು ಒಳಗೊಂಡಂತೆ ಒಂಬತ್ತು ಅಧ್ಯಾಯಗಳನ್ನು ಒಳಗೊಂಡಿದೆ. ಪ್ರತಿ ಅಧ್ಯಯನದ ವಿಷಯ ಅನುಸಾರವಾಗಿ ಸಂಗ್ರಹ ಮಾಡಿಕೊಂಡು ಕೃತಿ ಮತ್ತು ಬಿಡಿ ಲೇಖನಗಳನ್ನು ವರ್ಗೀಕರಿಸಿಕೊಂಡು ಅಧ್ಯಯನ ಮಾಡಲಾಗಿದೆ.

**ಅಧ್ಯಾಯ ಒಂದು :** ಅಧ್ಯಯನದ ಉದ್ದೇಶ ಮತ್ತು ಸ್ವರೂಪ ಕುರಿತು ಅಧ್ಯಾಯ ಒಂದರಲ್ಲಿದೆ. ಇಲ್ಲಿ ಅಧ್ಯಯನಗಳ ಸಮೀಕ್ಷೆಯಲ್ಲಿ ನೀಡಲಾಗಿದೆ.

**ಅಧ್ಯಾಯ ಎರಡು :** ಶ್ರೀನಿವಾಸ ಹಾವನೂರ ಅವರ ಬದುಕು ಎಂಬ ಶೀರ್ಷಿಕೆಯ ಈ ಅಧ್ಯಾಯದಲ್ಲಿ ಅವರ ಶಿಕ್ಷಣ, ವೃತ್ತಿ, ಕಾರ್ಯಸಾಧನೆ, ನಿವೃತ್ತಿ ನಂತರ ಕೆಲಸ

ಕಾರ್ಯಗಳ ಬಗೆಗೆ ಪರಿಚಯಾತ್ಮಕ ಮತ್ತು ವಿಶ್ಲೇಷಣಾತ್ಮಕವಾದ ಮಾಹಿತಿಗಳನ್ನು ಇಲ್ಲಿ ನೀಡಲಾಗಿದೆ. ಊರೂರು ಸುತ್ತುತ್ತಾ ಬೇರೆ ಬೇರೆ ಕ್ಷೇತ್ರಗಳಲ್ಲಿ ಉದ್ಯೋಗ ಮಾಡುತ್ತ ತನ್ನ ಹವ್ಯಾಸಗಳನ್ನು ಪ್ರವೃತ್ತಿಯನ್ನಾಗಿಸಿಕೊಂಡ ಹಾವನೂರ ಅವರ ಬದುಕಿನ ಭಾಗಗಳನ್ನು ಪರಿಚಯಾತ್ಮಕವಾಗಿ ಈ ಅಧ್ಯಾಯದಲ್ಲಿ ನೀಡಲಾಗಿದೆ.

**ಅಧ್ಯಾಯ ಮೂರು** : ಈ ಅಧ್ಯಾಯದಲ್ಲಿ 'ಹಾವನೂರ ಅವರ ಸಮಗ್ರ ಸಾಹಿತ್ಯದ ವ್ಯಾಪ್ತಿ' ಕುರಿತು ಅವಲೋಕಿಸಲಾಗಿದೆ. ಅವರ ಸಾಹಿತ್ಯ ಕೃಷಿಯು ಸೃಜನ ಸಾಹಿತ್ಯದ ಸಣ್ಣಕಥೆಯಿಂದ ಆರಂಭಗೊಂಡು ಲಲಿತಪ್ರಬಂಧ, ವಿಚಾರ ಸಾಹಿತ್ಯ, ಜೀವನ ಚರಿತ್ರೆ, ವಿಮರ್ಶೆ, ಸಂಶೋಧನೆ, ಸಂಪಾದನೆ, ಅನುವಾದ ಇತರೆ ಸಾಹಿತ್ಯ, ಪತ್ರಿಕೆ, ನಿಘಂಟು, ಶಬ್ದ ಪ್ರಯೋಗಕೋಶ, ಪತ್ರಿಕೋದ್ಯಮ, ಪುಸ್ತಕೋದ್ಯಮ ಕಾದಂ-ಕಥನ ಮತ್ತು ಬಿಡಿ ಲೇಖನ ಕನ್ನಡ ಸಂಶೋಧನೆ, ಮಿಶನರಿ ಮತ್ತು ಬ್ರಿಟಿಷ್ ಅಧಿಕಾರಿಗಳ ಕಾರ್ಯವೈಖರಿಯ ಸ್ವರೂಪ, ಮುದ್ರಣ ಗ್ರಂಥೋದ್ಯಮ, ಪತ್ರಿಕೋದ್ಯಮ, ಶಿಕ್ಷಣ ಹೀಗೆ ಹಲವು ಕಾರ್ಯಗಳನ್ನು ಶೋಧಿಸಿದ ಅವರ ವಿವಿಧ ವಿಷಯಗಳನ್ನು ಸೋದಾಹರಣವಾಗಿ ಚರ್ಚಿಸಲಾಗಿದೆ.

**ಅಧ್ಯಾಯ ನಾಲ್ಕು** : ಈ ಅಧ್ಯಾಯದಲ್ಲಿ ಶ್ರೀನಿವಾಸ ಹಾವನೂರ ಅವರು ಸೃಜನ ಸಾಹಿತ್ಯ ಇತಿಹಾಸಕ್ಕೆ ಸಂಬಂಧಿಸಿದ ಹಲವು ಶೋಧಿಸಿದ ಸಂಗತಿಗಳನ್ನು ವಿಶ್ಲೇಷಿಸಲಾಗಿದೆ. ಸಂಶೋಧನೆ ನೆಲೆಯಲ್ಲಿ ಹಾವನೂರ ಅವರ ವೈಜ್ಞಾನಿಕ ಮತ್ತು ವೈಚಾರಿಕ ದೃಷ್ಟಿಕೋನದ ಬಗ್ಗೆ ಅವಲೋಕಿಸಲಾಗಿದೆ. ಕನ್ನಡ ಸಾಹಿತ್ಯ ಮತ್ತು ಕರ್ನಾಟಕ ಚರಿತ್ರೆಯನ್ನು ತಿಳಿಯಬೇಕಾದರೆ 'ಹೊಸಗನ್ನಡ ಅರುಣೋದಯ ಎಂಬ ಮಹಾಪ್ರಬಂಧ ಒಂದು ಮಾದರಿಯ ಗ್ರಂಥವಾಗಿದೆ. ಹಳೆಗನ್ನಡ ಕೃತಿಗಳ ಸಂಗ್ರಹ, ಸಂಪಾದನೆ, ಪರಿಷ್ಕರಣೆ, ಶಾಸನ, ವ್ಯಾಕರಣ ಕೃತಿಗಳು ಹೀಗೆ ಹಲವು ಮಹತ್ವದ ವಿಚಾರಗಳು ಚರ್ಚೆಗೆ ಒಳಪಟ್ಟಿವೆ. ತುಂಗಭದ್ರೆ ವರವೋ? ಶಾಪವೋ ಎಂಬ ಕೃತಿಯು ಹದಿನೆಂಟು ಬಿಡಿ ಲೇಖನಗಳನ್ನು ಒಳಗೊಂಡಿದೆ. 'ಮರೆಯಲಾಗದ ಮುಂಬಯಿ ಕರ್ನಾಟಕ' ಎಂಬ ಕೃತಿಯು ಹತ್ತೊಂಬತ್ತು ಬಿಡಿ ಬರಹಗಳ ಒಂದು ಗುಚ್ಛವಾಗಿದೆ.

**ಅಧ್ಯಾಯ ಐದು** : ಶ್ರೀನಿವಾಸ ಹಾವನೂರ ಅವರು ಸಾಹಿತ್ಯ ಕೃಷಿಯು ಆರಂಭವಾದದ್ದು ಸೃಜನ ಸಾಹಿತ್ಯದ ಸಣ್ಣಕಥೆಯಿಂದ. ಅವರ ಸೃಜನಸಾಹಿತ್ಯ ಪ್ರಮಾಣ ಕಡಿಮೆ ಇದ್ದರೂ ಗುಣಾತ್ಮಕ ದೃಷ್ಟಿಯಿಂದ ಬಹಳ ಶ್ರೇಷ್ಠವಾದದ್ದು ಎನ್ನುವುದರಲ್ಲಿ ಎರಡು ಮಾತಿಲ್ಲ. ಸಮರ್ಥ ಬರಹಗಾರರಾಗಿ ಸಣ್ಣ ಕಥೆ, ಲಲಿತ ಪ್ರಬಂಧ, ವಿಚಾರಸಾಹಿತ್ಯ, ಜೀವನ ಚರಿತ್ರೆ, ವಿಮರ್ಶೆ ಇವುಗಳು ಗಂಭೀರ ಆಲೋಚನೆ, ತಿಳಿಹಾಸ್ಯ, ನೀತಿ ಈ ಅಂಶಗಳು ಪ್ರಸ್ತಾಪಗೊಂಡಿವೆ. 'ಗಂಧ ಮತ್ತು ಕಲ್ಲು' ಎಂಬ ಕಥಾ ಸಂಕಲನವು ಒಂಬತ್ತು ಕಥೆಗಳನ್ನು ಒಳಗೊಂಡಿದೆ. ಮಹಿಳಾ ಕೇಂದ್ರಿತ ಕಥಾವಸ್ತು, ಜೀವನ ಏಳು-ಬೀಳುಗಳನ್ನು ದಾಟಿದ ಬದುಕಿನ ಸ್ವರೂಪ, ಸಮಾಜ ನೋಡುವ ದೃಷ್ಟಿಕೋನ, ಬದುಕಿನ ಸಂಕಲನದಲ್ಲಿ ವಿವಿಧ

ಘಟ್ಟಗಳಲ್ಲಿ ಅನುಭವಿಸಿದ ಆತಂಕ, ಅವಮಾನಗಳು ಅಭಿವ್ಯಕ್ತಗೊಂಡಿವೆ. ಮತ್ತೊಂದು 'ಕುಚೋದ್ಯದ ಕಥೆಗಳು' ದುರುಳ ಸ್ವಭಾವ, ದುರಳ ಆಲೋಚನೆ ಪ್ರತಿನಿತ್ಯ ಬದುಕಿನ ವ್ಯವಹಾರಗಳಲ್ಲಿ ತಂತ್ರ ಮತ್ತು ಪ್ರತಿತಂತ್ರಗಳ ಸ್ವಭಾವಗಳು ಚಿತ್ರಣಗೊಂಡಿದೆ. ತಿಳಿಹಾಸ್ಯ ನೀತಿ ಮತ್ತು ಸಂಶೋಧನ ದೃಷ್ಟಿಕೋನ ಅಲ್ಲದೇ ವೈಜ್ಞಾನಿಕ ಮತ್ತು ವೈಚಾರಿಕ ನೆಲೆಯಲ್ಲಿನ ವಿಷಯ ಲಲಿತ ಪ್ರಬಂಧ ಸಂಕಲನವನ್ನು ಚರ್ಚೆಗೊಳಪಡಿಸಲಾಗಿದೆ. ದೈವತ್ವದ ಹುಟ್ಟು, ಸಾಮಾಜಿಕ ಆಚರಣೆ ಅಸ್ತಿತ್ವ ಪಡೆದುಕೊಂಡಿದ್ದು, ಸಂಪ್ರದಾಯ, ನಂಬಿಕೆ ಜನರಲ್ಲಿ ಹೆಚ್ಚು ಚಾಲ್ತಿ ಪಡೆದುಕೊಂಡಿದ್ದು ಹಾಗೆಯೇ ನಾಮಪದ ಸಂಬಂಧವಾಚಕ, ಮನಸ್ಥಿತಿ, ಸ್ಥಿತಪ್ರಜ್ಞೆ, ಬೆಂಗಳೂರು ಮತ್ತು ಮುಂಬಯಿ ಆಡಳಿತಾತ್ಮಕವಾಗಿ ಅಸ್ತಿತ್ವ ಪಡೆದುಕೊಂಡರೆ, ಸಾಂಸ್ಕೃತಿಕವಾಗಿ ಪಡೆಯದಿರುವುದು ವಿಪರ್ಯಾಸ, ಸಾಂಸ್ಕೃತಿಕವಾಗಿ ಪಡೆಯಬೇಕು ಎನ್ನುವ ಅಂಶವನ್ನು ಪ್ರತಿಬಿಂಬಿಸುವುದು ಇಲ್ಲಿ ಪ್ರಮುಖ ಉದ್ದೇಶ.

'ವಿಚಾರ ಸಾಹಿತ್ಯ' ಮಹಿಳೆ ಕೇಂದ್ರಿತ ವಸ್ತು. ಮಹಿಳೆಯ ಬಾಲ್ಯ, ಪ್ರೌಢ ಮತ್ತು ವೃದ್ಧಾಪ್ಯ ಈ ಅವಧಿಯಲ್ಲಿ ಅವಿವಾಹಿತೆಯಾಗಿ, ಪರಿತ್ಯಕ್ತೆ ಮತ್ತು ವಿಧವೆ ಈ ಅಂಶಗಳು ಅವಳ ಬದುಕಿನಲ್ಲಿ ಬಂದು ಹೋಗುವ ಸಂಕಷ್ಟ, ಆತಂಕ, ಅವಮಾನ ಅವುಗಳನ್ನು ಸಹಿಸಿಕೊಂಡ ಬದುಕಿನ ಚಿತ್ರಣ ಅನಾವರಣಗೊಂಡಿದೆ. ಕನ್ನಡ ನಾಡು, ನುಡಿ, ಸಾಂಸ್ಕೃತಿಕವಾಗಿ ಮಾಡಿದ ಸೇವೆಯನ್ನು ಪರಿಗಣಿಸಿ ಅಂಥವರ ಜೀವನ ಚರಿತ್ರೆಯನ್ನು ಹಾವನೂರ ಅವರು ಕಟ್ಟಿಕೊಟ್ಟಿದ್ದಾರೆ. ಕನ್ನಡ ಸಾಹಿತ್ಯದರ್ಶನ, ಗೋವಿಂದ ಪೈಯವರ ಪತ್ರಸಾಹಿತ್ಯ, ವಾದಿರಾಜರ ತೀರ್ಥಪ್ರಬಂಧ ಇವುಗಳನ್ನು ವಿಮರ್ಶಾತ್ಮಕ ನೆಲೆಯಲ್ಲಿ ನೋಡಲಾಗಿದೆ.

**ಅಧ್ಯಾಯ ಆರು** : ಸಂಪಾದನೆಯ ವ್ಯಾಪ್ತಿಯಲ್ಲಿ ಶ್ರೀನಿವಾಸ ಹಾವನೂರ ಅವರು ಮಾಡಿದ ಸಾಹಿತ್ಯ ಕೃಷಿಯ ಬಗೆಗಿನ ವಿಶ್ಲೇಷಣೆ ಈ ಅಧ್ಯಾಯದಲ್ಲಿದೆ. ಭಾಷೆ, ಸಮಾಜ ಸಾಂಸ್ಕೃತಿಕವಾಗಿ ಹೀಗೆ ವಿಭಿನ್ನ ವಿಚಾರಗಳು ಇಲ್ಲಿ ಪ್ರಸ್ತಾಪಗೊಂಡಿವೆ. ಸಂಪಾದನಾ ಸಾಹಿತ್ಯದ ವ್ಯಾಪ್ತಿಯಲ್ಲಿ ಹೊಸಗನ್ನಡ ಕಾಲಘಟ್ಟದಲ್ಲಿ ಆದ ಇಂಗ್ಲಿಷ್ ಗೀತೆಯ ತರ್ಜುಮೆ, ಹಟ್ಟಿಯಂಗಡಿ ನಾರಾಯಣ ಅವರ ಸಾಹಿತ್ಯ ಬರವಣಿಗೆಯ ಮಹತ್ವ, ರಂ.ಶ್ರೀ ಮುಗಳಿಯವರ ಸಾಹಿತ್ಯ ರಚನೆ, ಪಾ.ವೆಂ.ಆಚಾರ್ಯರ ಹರಟೆ, ಬೆಂಗೇರಿಯವರ ಬರಹ, ಜಗದ್ವಿಖ್ಯಾತರು ಇನ್ನು ಮುಂತಾದ ಸಂಪಾದನಾ ಕೃತಿಗಳ ಮೇಲಿನ ವಿಶ್ಲೇಷಣೆ ಈ ಅಧ್ಯಾಯದಲ್ಲಿದೆ.

**ಅಧ್ಯಾಯ ಏಳು** : ಇತರೆ ಸಾಹಿತ್ಯದ ವ್ಯಾಪ್ತಿಯಲ್ಲಿ ಗೋವಿಂದ ಪೈಯವರ ಪತ್ರ ಸಾಹಿತ್ಯ, ನಿಘಂಟು, ಶಬ್ದಪ್ರಯೋಗ ಕೋಶ, ಕಾದಂ-ಕಥನ ಈ ಎಲ್ಲಾ ವಿಷಯಗಳಿವೆ. ಪತ್ರ ಸಾಹಿತ್ಯದ ಉದ್ದೇಶ ಮಹತ್ವಗಳ ಬಗೆಗೆ ಹಾವನೂರ ಅವರ ವಿಚಾರಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಕ್ರಿ.ಶ. ೧೯೪೩-೭೭ರವರೆಗೆ ಸಂಗ್ರಹಿಸಿದ ಪತ್ರಗಳ ವಿವರಗಳನ್ನು ಚರ್ಚಿಸಲಾಗಿದೆ. ಶ್ರೀನಿವಾಸ ಹಾವನೂರ ಅವರ ಬಿಡಿ ಲೇಖನಗಳನ್ನು

ಕ್ರೋಢೀಕರಿಸುವುದರೊಂದಿಗೆ ಅವುಗಳ ಮಹತ್ವವನ್ನು ತಿಳಿಯುವ ಪ್ರಯತ್ನ ಈ ಅಧ್ಯಾಯದಲ್ಲಿ ಮಾಡಲಾಗಿದೆ. ಹಾಗೆಯೇ ವಿಶ್ಲೇಷಣಾತ್ಮಕ ಮತ್ತು ವಿಮರ್ಶಾತ್ಮಕ ದೃಷ್ಟಿಕೋನ ವಿಧಾನವನ್ನು ಅನುಸರಿಸಲಾಗಿದೆ.

**ಅಧ್ಯಾಯ ಎಂಟು** : ಮಿಶನರಿಗಳು ಮತ್ತು ಬ್ರಿಟಿಷ್ ಅಧಿಕಾರಿಗಳು ಮಾಡಿದ ಮಹತ್ವ ಕಾರ್ಯಗಳನ್ನು ಈ ಅಧ್ಯಾಯದಲ್ಲಿ ಅವಲೋಕಿಸಲಾಗಿದೆ. ಶಿಕ್ಷಣ, ಮುದ್ರಣ, ಪತ್ರಿಕೋದ್ಯಮ, ಪುಸ್ತಕೋದ್ಯಮ, ಕ್ರೈಸ್ತಮತ ಪ್ರಚಾರ, ಮುದ್ರಣ ಬಳಕೆ, ನೂತನ ಶಿಕ್ಷಣ, ಉದ್ಯಮ, ಕೈಗಾರಿಕೆ, ಯಂತ್ರ ಸಂಚಾರ ಇನ್ನಿತರೆ ವಿಷಯಗಳಲ್ಲಿ ಪಾಶ್ಚಾತ್ಯರಿಗಿದ್ದ ವಿಚಾರಗಳನ್ನು ಚರ್ಚಿಸಲಾಗಿದೆ. ಈ ಅಧ್ಯಯನ ಪಾಶ್ಚಿಮಾತ್ಯರ ಚಿಕಿತ್ಸಕ ಮನೋವೃತ್ತಿ, ವ್ಯವಹಾರದ ಜಾಣ್ಮೆ, ಇದರಿಂದ ಭಾರತೀಯರಿಗೆ, ಆಗಿರುವ ಅನುಕೂಲಗಳ ಬಗೆಗೆ ವಿಚಾರ ಮಾಡಲಾಗಿದೆ.

**ಅಧ್ಯಾಯ ಒಂಬತ್ತು** : ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನು ನೀಡಲಾಗಿದೆ. ಒಟ್ಟಾರೆಯಾಗಿ ಶ್ರೀನಿವಾಸ ಹಾವನೂರ ಅವರ ಸಮಗ್ರ ಸಾಹಿತ್ಯ ಎಂಬ ಮಹಾಪ್ರಬಂಧದ ಮೂಲಕ ಕನ್ನಡ ನಾಡು, ನುಡಿ, ಸಂಸ್ಕೃತಿ, ಚರಿತ್ರೆ, ಸಂಶೋಧನೆ ಇತ್ಯಾದಿ ಕ್ಷೇತ್ರಗಳಿಗೆ ಶ್ರೀನಿವಾಸ ಹಾವನೂರ ಅವರ ಕೊಡುಗೆಗಳ ಬಗೆಗೆ ವಿಶ್ಲೇಷಣೆಯನ್ನು ಮಾಡಲಾಗಿದೆ. ಹಾವನೂರ ಅವರ ಸಮಗ್ರ ಸಾಹಿತ್ಯದ ಮೇಲೆ ಬೆಳಕು ಚೆಲ್ಲುವ ಪ್ರಯತ್ನ ಇದಾಗಿದೆ. ಅವರ ಸಾಹಿತ್ಯದ ಬಗ್ಗೆ ಸಂಶೋಧನೆ ಮಾಡುವ ಮುಂದಿನ ಸಂಶೋಧಕರಿಗೆ ಪ್ರಸ್ತುತ ಮಹಾಪ್ರಬಂಧ ಸಹಾಯವಾಗುತ್ತದೆ ಎಂಬುದು ನನ್ನ ಆಶಯ.

ಸಂಶೋಧನೆ, ಸೃಜನ ಸಾಹಿತ್ಯ ಸಂಪಾದನೆ ಹಾಗೂ ಅನುವಾದ ಸಾಹಿತ್ಯ ಜೊತೆಗೆ ಇತರೆ ಸಾಹಿತ್ಯದ ಪ್ರಕಾರಗಳಲ್ಲಿ ಕೂಡ ಹಾವನೂರ ಅವರು ಕೆಲಸ ಮಾಡಿದ್ದಾರೆ. ಶ್ರೀಯುತರ ಇತರ ಸಾಹಿತ್ಯ ಕುರಿತು ಹೇಳುವುದಾದರೆ ಪತ್ರ ಸಾಹಿತ್ಯದಲ್ಲಿ ಸಂಶೋಧನೆ ಸಂಗತಿ, ಕನ್ನಡ ಪತ್ರಿಕಾ ಸೂಚಿ, ಪತ್ರಿಕೋದ್ಯಮದ ಚರಿತ್ರೆ, ಅನ್ಯಭಾಷೆಯ ಪತ್ರಿಕೆಗಳು ಮುಂತಾದ ಬಿಡಿ ಲೇಖನಗಳನ್ನು ಬರೆದಿದ್ದಾರೆ. ವಿಶೇಷವಾಗಿ ವ್ಯಾಕರಣ, ಛಂದಸ್ಸು, ವ್ಯಕ್ತಿ ಚಿತ್ರಣ ಕಾದಂ-ಕಥನ ಮುಂತಾದ ಸಂಗತಿಗಳನ್ನು ನಿರೂಪಿಸಲಾಗಿದೆ. ಇವರ ಸಾಹಿತ್ಯ ಓದುಗರಲ್ಲಿ ಕುತೂಹಲವನ್ನು ಉಂಟುಮಾಡುತ್ತದೆ. ಅಂತಹ ಕುತೂಹಲ ವಿಷಯಗಳನ್ನು ದಾಖಲಿಸುವ ಉದ್ದೇಶವನ್ನು ಅಧ್ಯಯನ ಹೊಂದಿದೆ.

ಹಾವನೂರ ಅವರು ಬಿಡಿ ಲೇಖನಗಳನ್ನು ಬರೆದಿದ್ದಾರೆ. ಕಳೆದ ಶತಮಾನದಲ್ಲಿ ತಾವು ಕಂಡುಕೊಂಡ, ಓದಿದ ಇಲ್ಲವೇ ನೋಡಿದ ವಿಷಯಗಳನ್ನು ಕುರಿತು ಬಿಡಿ ಲೇಖನಗಳಲ್ಲಿ ಚರ್ಚಿಸಿದ್ದಾರೆ. ಸಂಚು ಒಂದು ಪ್ರವೇಶ ಸ್ಥಳನಾಮ ಅಧ್ಯಯನವಾಗಿದೆ. ಕನ್ನಡ ಸಾಹಿತ್ಯದ ಅವಸ್ಥಾಭೇದಗಳು, ಸಮಯ ಪ್ರಜ್ಞೆ ಮತ್ತು ಚಾಕಲೇಟ್ ಇಂಥ ಹತ್ತಾರು ಬಿಡಿ ಲೇಖನಗಳು ಅವರಿಂದ ರಚನೆಯಾಗಿವೆ. ಇವುಗಳನ್ನು ಪ್ರತ್ಯೇಕವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಕನ್ನಡ ಸಂಶೋಧನೆ ಮತ್ತು ಶ್ರೀನಿವಾಸ ಹಾವನೂರ ಸಮಗ್ರ ಸಾಹಿತ್ಯವನ್ನು ಗಮನಿಸಿದ ಮೇಲೆ ಸಾಹಿತ್ಯ ಸಂಸ್ಕೃತಿ ಪುರಾತತ್ವ ಕ್ಷೇತ್ರಗಳಲ್ಲಿ ದುಡಿದಿರುವುದು ಗಮನಕ್ಕೆ ಬರುತ್ತದೆ. ಅವರು ಕಥೆ, ಕಾದಂಬರಿ, ಲಲಿತ ಪ್ರಬಂಧ ಅನುವಾದ ಕ್ಷೇತ್ರದಲ್ಲಿ ದುಡಿದರು. ಹೊಸಗನ್ನಡ ಅರುಣೋದಯ ಮಹಾಪ್ರಬಂಧವು ಹಾವನೂರ ಅವರ ಸಂಶೋಧನ ಕ್ಷೇತ್ರದಲ್ಲಿ ಬಹುಕಾಲ ನೆನಪಿಸುವ ಗ್ರಂಥವಾಗಿದೆ. ಮಿಶನರಿಗಳ ಕುರಿತು ಸ್ಥಳೀಯ ಪಂಡಿತರ ಕುರಿತು, ಮುದ್ರಣ ಕುರಿತು, ಈ ಎಲ್ಲಾ ಕಾರ್ಯಚಟುವಟಿಕೆಗಳ ಕುರಿತು ಅವರು ಚರ್ಚಿಸುವ ಸಂಗತಿಗಳು ಬಹುಜನ ವಿದ್ವಾಂಸರಿಗೆ ಮೆಚ್ಚುಗೆಯಾಗಿದೆ. ಈ ಹಿನ್ನೆಲೆಯಲ್ಲಿ ಹಾವನೂರ ಅವರು ೧೯ನೇ ಶತಮಾನದ ಕರ್ನಾಟಕದ ಆಡಳಿತ ಮತ್ತು ಶೈಕ್ಷಣಿಕ ಚರಿತ್ರೆಯನ್ನು ನಿರೂಪಿಸುವಲ್ಲಿ ಮೇಲ್ಪಂಕ್ತಿಯಲ್ಲಿ ನಿಲ್ಲುತ್ತಾರೆ. ಒಟ್ಟಾರೆಯಾಗಿ ಕನ್ನಡ ಸಂಶೋಧನ ಕ್ಷೇತ್ರಕ್ಕೆ ಹಾವನೂರ ಅವರ ಕೊಡುಗೆಯನ್ನು "ಶ್ರೀನಿವಾಸ ಹಾವನೂರ ಅವರ ಸಮಗ್ರ ಸಾಹಿತ್ಯ" ಎಂಬ ಈ ಮಹಾಪ್ರಬಂಧದಲ್ಲಿ ಅವಲೋಕಿಸಲು ಪ್ರಯತ್ನಿಸಲಾಗಿದೆ.

**ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ**

ಶ್ರೀನಿವಾಸ ಹಾವನೂರ ಅವರ ಬದುಕು ಮತ್ತು ಸಾಹಿತ್ಯ ಕುರಿತು ಇದುವರೆಗೆ ಕೆಲವು ಅಧ್ಯಯನಗಳು ನಡೆದಿವೆ. ಸಂ-ಕಥನ ಎಂಬ ಕೃತಿಯಲ್ಲಿ ಶ್ರೀನಿವಾಸ ಹಾವನೂರ ಅವರ ಸಾಹಿತ್ಯ ಸಂಶೋಧನೆ ಮತ್ತು ಬದುಕು ಕುರಿತು ನಾ.ದಾಮೋದರ ಶೆಟ್ಟಿಯವರು ಡಿಸೆಂಬರ್ ೨೦೦೮ರಲ್ಲಿ ಸಂಪಾದಿಸಿದ್ದಾರೆ. ಈ ಕೃತಿಯು ಆಯ್ದು ಬರಹಗಳನ್ನು ಒಳಗೊಂಡಿದೆ. ಸಣ್ಣಕಥೆ ಇತಿಹಾಸ, ಸಂಶೋಧನೆ ಕಾದಂ-ಕಥನ, ಸಾಮಾಜಿಕ ವಿಷಯ ದಾಸಸಾಹಿತ್ಯ, ಕ್ರೈಸ್ತ ಸಾಹಿತ್ಯ ಪತ್ರಿಕೋದ್ಯಮ ಹೀಗೆ ವಿವಿಧ ವಿಷಯಗಳು ವಿಶ್ಲೇಷಣೆಗೊಂಡಿವೆ.

'ಸಂಕಥನ' ಎಂಬ ಕೃತಿಯಲ್ಲಿ ಸಿ.ಜಿ.ಉಷಾದೇವಿಯವರು ಶ್ರೀನಿವಾಸ ಹಾವನೂರ ಅವರ 'ಹೊಸಗನ್ನಡ' ಅರುಣೋದಯ ಎಂಬ ಕೃತಿ ಕುರಿತು ತಮ್ಮದೇ ಶೈಲಿಯಲ್ಲಿ ವಿಶ್ಲೇಷಿಸಿದ್ದಾರೆ. ಆಧುನಿಕ ಕನ್ನಡ ಸಾಹಿತ್ಯ ಇತಿಹಾಸದ ಮಾಹಿತಿಗಳನ್ನು ಪಡೆಯಬೇಕಾದರೆ ಈ ಕೃತಿಯು ಪೂರಕ ಸಾಮಗ್ರಿ ಮತ್ತು ಸಂಪನ್ಮೂಲ ಒದಗಿಸುತ್ತದೆ ಎಂಬುದನ್ನು ವಿಶ್ಲೇಷಣೆ ಮಾಡಿದ್ದಾರೆ.

'ಸಂಕಥ' ಎಂಬ ಕೃತಿಯಲ್ಲಿ ಶ್ರೀನಿವಾಸ ಹಾವನೂರ ಅವರನ್ನು ಕುರಿತು ಅಸಹಜ ಅವಧೂತ ಎಂಬ ಶೀರ್ಷಿಕೆಯ ಅಡಿಯಲ್ಲಿ ಬಿ.ಎ.ವಿವೇಕ ರೈ ಅವರು ಹಾವನೂರ ಒಡನಾಟದ ವಿಷಯ ಕುರಿತು ಬಿಚ್ಚಿಟ್ಟಿದ್ದಾರೆ. ಮಂಗಳೂರು ವಿಶ್ವವಿದ್ಯಾಲಯ ಮತ್ತು ದಕ್ಷಿಣ ಕನ್ನಡ ಜಿಲ್ಲೆ ಹಾಗೂ ಕೊಡಗು ಪ್ರಾದೇಶಿಕ ಭಾಗದ ಸಾಹಿತ್ಯ, ಸಂಸ್ಕೃತಿ ಸಾಮಾಗ್ರಿಗಳ ಸಂಗ್ರಹ ಆ ಭಾಗದ ಹಿರಿಯ ತಲೆಮಾರಿನ ವಿದ್ವತ್ ಪ್ರತಿಭೆ ಕುರಿತು ಮಾಡಿದ ಮಹತ್ವ ಕಾರ್ಯವನ್ನು ಬಿ.ಎ.ವಿವೇಕ ರೈ ಅವರು ವಿಶ್ಲೇಷಿಸಿದ್ದಾರೆ.

'ಸಂಕಥನ' ಎಂಬ ಕೃತಿಯಲ್ಲಿ 'ನಮ್ಮ ನಡುವಣ ವಿದ್ವತ್ ಸೇತು' ಎನ್ನುವ ಲೇಖನದಲ್ಲಿ ಹಾವನೂರ ಅವರು ಕಾರ್ಯಸಾಧನೆ ಕುರಿತು ಜೆ.ಎಸ್. ಸದಾನಂದ ಅವರು ಅನುಭವದ ಮಾತನ್ನು ಹಂಚಿಕೊಂಡಿದ್ದಾರೆ. ಶ್ರೀನಿವಾಸ ಹಾವನೂರ ಅವರು ಸಂಶೋಧನೆಯಲ್ಲಿ ಮೂರು ಅಂಶಗಳನ್ನು ಗುರುತಿಸುತ್ತಾರೆ. ೧೯ನೇ ಶತಮಾನದ ಕನ್ನಡದ ಅರುಣೋದಯ ಸಾಹಿತ್ಯ, ಇದರಲ್ಲಿಯ ಮಿಶನರಿಗಳ ಸಾಧನೆ ಮರು ಮೌಲ್ಯಮಾಪನ, ೨ ಕನ್ನಡ ಹರಿದಾಸ ಸಾಹಿತ್ಯ, ೩. ಕಂಪ್ಯೂಟರ್ ಬಳಸಿ ಕನ್ನಡ ಶೈಲಿಶಾಸ್ತ್ರದ ಅಧ್ಯಯನ ಹೊಸದಾರಿ ಕಂಡುಕೊಂಡದ್ದುನ್ನು ತೋರಿಸಿದರು. ನಮ್ಮ ಹಳೆಯ ಕಾಲದ ಗ್ರಂಥಾಲಯವನ್ನು (ಥಿಯಾಲಾಜಿಕಲ್ ಮಂಗಳೂರು) ಆಧುನಿಕ ಕಾಲಕ್ಕೆ ತಕ್ಕಂತೆ ವರ್ಗೀಕರಣ ತತ್ವಕ್ಕೆ ಅಳವಡಿಸಿರುವುದನ್ನು ಒಳಗೊಂಡಿದೆ.

'ಕನ್ನಡ ಸಂಶೋಧನೆ ಶ್ರೀನಿವಾಸ ಹಾವನೂರ ಕೊಡುಗೆ ಎಂಬ ವಿಷಯದ ಸಂಪ್ರಬಂಧವನ್ನು ರವೀಂದ್ರ ಶೆಟ್ಟಿಯವರು ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೧೧ರಲ್ಲಿ ಸಲ್ಲಿಸಿದ್ದಾರೆ. ಈ ಸಂಪ್ರಬಂಧದಲ್ಲಿ ಸಂಶೋಧನೆ, ಇತಿಹಾಸ, ಪತ್ರಿಕೋದ್ಯಮ, ಕ್ರೈಸ್ತ ಸಾಹಿತ್ಯ, ದಾಸಸಾಹಿತ್ಯ, ಹೊಸಗನ್ನಡ ಅರುಣೋದಯ ಇತ್ಯಾದಿಗಳ ಕುರಿತಾಗಿ ಶ್ರೀನಿವಾಸ ಹಾವನೂರರ ಕೊಡುಗೆಗಳ ಬಗ್ಗೆ ಸಂಕ್ಷಿಪ್ತವಾಗಿ ವಿಶ್ಲೇಷಿಸಿದ್ದಾರೆ.

ಹನುಮಂತಪ್ಪ ಸಂಜೀವಣ್ಣನವರು 'ಕನ್ನಡ ಸಾಹಿತ್ಯಕ್ಕೆ ಹಾವೇರಿ ಜಿಲ್ಲೆಯ ಕೊಡುಗೆ' ಎಂಬ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಧಾರವಾಡದ ಕರ್ನಾಟಕದ ವಿಶ್ವವಿದ್ಯಾಲಯಕ್ಕೆ ೨೦೦೭ರಲ್ಲಿ ಸಲ್ಲಿಸಿದ್ದಾರೆ. ಶ್ರೀನಿವಾಸ ಹಾವನೂರ ಅವರು ಸದರಿ ಜಿಲ್ಲೆಯವರಾದ್ದರಿಂದ ಅಧ್ಯಯನ ವ್ಯಾಪ್ತಿಗೆ ಒಳಪಡಿಸಿದ್ದಾರೆ. ಅವರ ಸಾಹಿತ್ಯ, ಇತಿಹಾಸ, ಸಂಶೋಧನೆ ಕ್ಷೇತ್ರದಲ್ಲಿ ಮಾಡಿದ ಕಾರ್ಯಸಾಧನೆ ಮೇಲೆ ಸಂಶೋಧಕರು ಕೆಲವು ಸಂಗತಿಗಳನ್ನು ವಿವರಿಸಿದ್ದಾರೆ.

'ಕೃಷ್ಣ ಕೋಲ್ಹಾರ ಕುಲಕರ್ಣಿ ಬದುಕು ಬರಹ' ಎಂಬ ಮಹಾಪ್ರಬಂಧವನ್ನು ಪಿಎಚ್.ಡಿ ಪದವಿಗಾಗಿ ಸುಮಿತ್ರಾ ದಶರತ್ ಸಾವಂಥ ಅವರು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ೨೦೧೧ರಲ್ಲಿ ಸಲ್ಲಿಸಿದ್ದಾರೆ. ಪ್ರಸ್ತುತ ಮಹಾ ಪ್ರಬಂಧದಲ್ಲಿ ಶ್ರೀನಿವಾಸ ಹಾವನೂರ ಮತ್ತು ಕೃಷ್ಣಕೋಲ್ಹಾರ ಕುಲಕರ್ಣಿ, ಒಡನಾಟದ ಸಂಗತಿಗಳನ್ನು ವಿಶ್ಲೇಷಿಸಿದ್ದಾರೆ. ಮುಂಬಯಿ ಕರ್ನಾಟಕ ಸಂಘ, ಮತ್ತು ಸಾಹಿತ್ಯ ಕೂಟಗಳ ಕಾರ್ಯಕ್ರಮದಲ್ಲಿ ತೊಡಗಿಕೊಂಡು ಮಾಡಿದ ಕನ್ನಡ ಸಾಹಿತ್ಯ ಸಂಸ್ಕೃತಿ ಕಾರ್ಯದ ಮೇಲೆ ಸಂಶೋಧಕರು ಎತ್ತಿ ಹಿಡಿದ್ದಾರೆ. ಸಮಗ್ರ ದಾಸಸಾಹಿತತ್ಯ ಸಂಪಾದನೆ ಕಾರ್ಯ ಮಾಡುವಲ್ಲಿ ಇವರಿಬ್ಬರ ಸಾಧನೆಯನ್ನು ಮಹಾಪ್ರಬಂಧದಲ್ಲಿ ಕೊಂಡಾಡಿದ್ದಾರೆ.

ಕನ್ನಡ ವಾರಪತ್ರಿಕೆ ತರಂಗ (ಜನವರಿ ೨– ೧೯೯೪)ರಲ್ಲಿ ಕೃಷ್ಣ ಕೋಲ್ಹಾರ ಕುಲಕರ್ಣಿ ಅವರ 'ಪ್ರಭಾವ ಬೀರಿದ ವ್ಯಕ್ತಿ' ಎಂಬ ಲೇಖನ ಪ್ರಕಟಿಸಲಾಗಿದೆ. ಈ

ಲೇಖನದಲ್ಲಿ ಶ್ರೀನಿವಾಸ ಹಾವನೂರ ಅವರು ಕುಲಕರ್ಣಿಯವರ ಮೇಲೆ ಬೀರಿದ ಪ್ರಭಾವಗಳನ್ನು ಕುರಿತು ವಿವರಿಸಿದ್ದಾರೆ. ಅಲ್ಲದೆ ಚಿಕಿತ್ಸಕ ಪ್ರವೃತ್ತಿ ಎಂಬ ಶೀರ್ಷಿಕೆಯ ಸದರಿ ಪತ್ರಿಕೆಯಲ್ಲಿ (೧೧.೧೧.೧೯೬೫ರಲ್ಲಿ) ಶ್ರೀನಿವಾಸ ಬದುಕಿನ ಘಟನೆಗಳನ್ನು ಕುರಿತು ಚರ್ಚೆಗೆ ಒಳಪಡಿಸಿದ್ದಾರೆ.

'ವಿದ್ವತ್ತಿನ ಸರಳ ಮುಖ' ಎಂಬ ಲೇಖನವನ್ನು ಏಪ್ರಿಲ್ ೫, ೨೦೧೫ರಂದು ವಿಜಯ ವಾಣಿ ಪತ್ರಿಕೆಯಲ್ಲಿ ಸಂಜಯ ಹಾವನೂರ ಬರೆದಿದ್ದಾರೆ. ಶ್ರೀನಿವಾಸ ಹಾವನೂರ ಅವರ ೮೧ರ ವಯಸ್ಸಿನಲ್ಲಿ ಅನೇಕ ಪುರಸ್ಕಾರ, ಸಾರ್ವಜನಿಕ ಸತ್ಕಾರ ಮತ್ತು ಸಂಕಥ ಅಭಿನಂದನ ಗ್ರಂಥ ಇವುಗಳನ್ನು ಸ್ವೀಕರಿಸಿ, ಆರು ತಿಂಗಳ ನಂತರ ಶ್ರೀನಿವಾಸ ಹಾವನೂರ ಅವರು ತಮ್ಮ ಹುಟ್ಟೂರಾದ ಹಾವನೂರರಲ್ಲಿ ಮೆರವಣಿಗೆ ದೃಶ್ಯ ನೆನಪಿಸಿಕೊಂಡ ಅವರ ಸಂಭ್ರಮಿಸಿದ ಸಂಗತಿಯನ್ನು ಸಂಜಯ ಹಾವನೂರ ಅವರು ವಿಶ್ಲೇಷಣೆ ಮಾಡಿದ್ದಾರೆ. ಹಾಗೆಯೇ ೨೦೦೬ರಲ್ಲಿ ಹಾವನೂರ ಅವರು ಕಾಯಿಲೆಗೆ ಒಳಗಾದ ಸಂಗತಿ ಸ್ಮರಿಸಿಕೊಂಡು ಸಂಜಯ ಹಾವನೂರ ನೆನಪಿಸಿಕೊಂಡು ಪತ್ರಿಕೆಯಲ್ಲಿ ಅನುಭವವನ್ನು ಹಂಚಿಕೊಂಡಿದ್ದಾರೆ.

## ಅಧ್ಯಾಯ ಎರಡು

# ಶ್ರೀನಿವಾಸ ಹಾವನೂರ ಅವರ ಬದುಕು

ಹುಟ್ಟು, ಬದುಕು, ಸಾವು ಪ್ರಕೃತಿ ಒಡಲಿನಲ್ಲಿ ಇರುವ ಎಲ್ಲಾ ಜೀವರಾಶಿಗಳಿಗೂ ನಿಶ್ಚಿತ. ಹುಟ್ಟಿಗೊಂದು ಕಾರಣ. ಬದುಕಿಗೊಂದು ಅರ್ಥ-ಗುರಿ ಸಾಧನೆ ಸಾವಿನ ಮೊದಲಿಗೆ ಇರಬೇಕಾದ ಅಗತ್ಯಗಳು. ಈ ಗುರಿಯನ್ನು ಅರಸಿ ಬಾಳಿದ ಮಹನೀಯರಲ್ಲಿ ಶ್ರೀನಿವಾಸ ಹಾವನೂರ ಅವರು ಒಬ್ಬರು. ಅವರ ಬದುಕಿನ ವಿವಿಧ ಹಂತಗಳನ್ನು ಈ ಅಧ್ಯಾಯದಲ್ಲಿ ಅವಲೋಕಿಸಲಾಗಿದೆ.

**ಮನೆತನದ ಹಿನ್ನೆಲೆ**

ಗಲಗಲಿ ಮನೆತನದ ಮೊದಲಿಗರಾದ ಮುದ್ಗಲಾಚಾರ್ಯರು ಪಾಂಡಿತ್ಯಕ್ಕೆ ಹೆಸರಾದವರು. ಅವರ ಪತ್ನಿ ಪ್ರಥಮ ಮಹಿಳಾ ದಾಸರೆನಿಸಿಕೊಂಡ ಗಲಗಲಿ ಅವ್ವನವರು. ಈ ಪಾಂಡಿತ್ಯ ತಲೆಮಾರಿನಿಂದ ತಲೆಮಾರಿಗೆ ಪ್ರತಿನಿಧಿಸುತ್ತಾ ಬಂದಿದೆ. ತಮ್ಮ ಮನೆತನದ ವಿದ್ವತ್‌ಪರಂಪರೆಯನ್ನು ಹಾವನೂರ ಅವರು ಮುಂದುವರಿಸಿಕೊಂಡು ಬಂದವರಾಗಿದ್ದಾರೆ.

**ಜನನ – ಬಾಲ್ಯ**

ನರಸಿಂಹಾಚಾರ್ಯ ಮತ್ತು ರಮಾಬಾಯಿ ದಂಪತಿಗಳ ಹಿರಿಯ ಮಗನಾದ ಶ್ರೀನಿವಾಸ ಹಾವನೂರ ಅವರು ೨೮ ಡಿಸೆಂಬರ್ ೧೯೨೭ರಂದು ಹಾವೇರಿ ಜಿಲ್ಲೆಯ ಹಾವನೂರ ಗ್ರಾಮದಲ್ಲಿ ಜನಿಸಿದರು. ಸಂಪ್ರದಾಯಸ್ಥ ಬಡ ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದ ಹಾವನೂರ ಅವರು ಬಾಲ್ಯದಲ್ಲಿ ಸಾಕಷ್ಟು ಕಷ್ಟ-ನಷ್ಟಗಳನ್ನು ಅನುಭವಿಸಿದವರು. ಇದರಿಂದ ಆತ್ಮಸ್ಥೈರ್ಯವನ್ನು ಬೆಳೆಸಿಕೊಂಡರು. 'ಈಸಬೇಕು ಇದ್ದು ಜಯಿಸಬೇಕು' ಎಂಬ ದಾಸರ ವಾಣಿಯಂತೆ ಅರಿತು ಬದುಕಿ ಕಷ್ಟಗಳನ್ನು ಸ್ವೀಕರಿಸಿದವರು. ತಮ್ಮ ಶೈಕ್ಷಣಿಕ ದೋಣಿಗೆ ಹರಿಗೋಲು ಹಾಕುತ್ತಾ ತಮ್ಮ ಚಿತ್ತವನ್ನು ಸಾಧನೆಯ ಕಡೆಗೆ ಹರಿಸಿದರು. ತಮ್ಮ ಸಂಶೋಧನೆಯ ಮೂಲಕ ಹೊಸಗನ್ನಡ ಕಾಲಘಟ್ಟದ ಇತಿಹಾಸವನ್ನು ಈ ನಾಡಿನ ಜನರಿಗೆ ತಿಳಿಸಿಕೊಟ್ಟರು.

ಆಧುನಿಕ ಸಾಹಿತ್ಯ ಸಂದರ್ಭದಲ್ಲಿ ಹಾವನೂರ ಅವರು ಸೃಜನಶೀಲ ಬರಹಗಾರರಾಗಿ, ಸಾಹಿತಿಗಳಾಗಿ, ವಿಶಿಷ್ಟ ಸಂಶೋಧಕರಾಗಿ ನಿರಂತರವಾಗಿ ಕೆಲಸವನ್ನು ಮಾಡಿದ್ದಾರೆ. ಹಾವನೂರ ಎಂಬುದು ಶ್ರೀನಿವಾಸ ಅವರ ಮನೆತನದ ಹೆಸರು. ಅವರಿಗೆ ಮೊದಲ ಇಟ್ಟ ಹೆಸರು ಶ್ರೀನಿವಾಸ. ಬಾಲ್ಯದಲ್ಲಿ 'ಐರಣಿ' ಮನೆತನದವರು ದತ್ತು ತೆಗೆದುಕೊಂಡ ಮಗುವಾಗಿದ್ದರಿಂದ ಶ್ರೀನಿವಾಸ ಅವರಿಗೆ ಈ ಅಡ್ಡಹೆಸರು ಬಂತು. ಈ ಹೆಸರು ಉಚ್ಚಾರದಲ್ಲಿ 'ಇರಾನಿ', 'ಐರಾಣಿ', 'ಐರನಿ' ಹೀಗೆ ಮಾರ್ಪಾಡು ಆಗಿದ್ದರಿಂದ ಅದನ್ನು ಕೈಬಿಟ್ಟು ಜನ್ಮವೆತ್ತಿದ ನೆಲದ ಪ್ರೀತಿಯಿಂದ 'ಹಾವನೂರ' ಎಂದು ಅಡ್ಡ ಹೆಸರನ್ನಾಗಿ ಮಾಡಿಕೊಂಡರು.

ಹಾವನೂರ ಅವರ ತಾಯಿಗೆ ಹದಿನಾಲ್ಕು ಮಕ್ಕಳು; ಅವರಲ್ಲಿ ಬದುಕಿ ಉಳಿದವರು ಆರು ಜನ ಮಾತ್ರ. ಹಾವನೂರ ಅವರ ತಾಯಿ ಯಾವಾಗಲೂ ತಮ್ಮ ಸೊಸೆಯಂದಿರನ್ನು ಕುರಿತು ಹೀಗೆ ತಮಾಷೆ ಮಾಡುತ್ತಿದ್ದಳು. ಎರಡು ಮೂರು ಮಕ್ಕಳಾದ ಮೇಲೆ ಮಕ್ಕಳು ಹೆರುವುದನ್ನು ಸಾಕು ಎಂದು ನಿಲ್ಲಿಸುತ್ತೀರಿ. ನೀವು ಕೈಲಾಗದವರು ಎಂದು ಹೇಳುತ್ತಿದ್ದರು. ಅತಿಯಾದ ಸಂತಾನದಿಂದ ಹಾವನೂರ ಅವರ ತಾಯಿ ನಿಶಃಕ್ತಳಾಗಿದ್ದಳು. ಅವರ ದೇಹದಲ್ಲಿ ರಕ್ತ ಪ್ರಮಾಣವು ತುಂಬ ಕಡಿಮೆಯಾಗಿತ್ತು. ಆದರೆ ಅವರ ಮನದ ಬಯಕೆ ಹಾಗೆ ಉಳಿದಿತ್ತು. "ತನ್ನ ಕಡೆಯ ಮಗನ ಮದುವೆ ಆಗಬೇಕು ಎಂಬುದು ಮತ್ತು ತನ್ನ ಹಿರಿಯ ಮಗನ ತೊಡೆಯ ಮೇಲೆ ಮಲಗಿದ್ದಾಗ ತಾನು ಕಣ್ಣು ಮುಚ್ಚಬೇಕು ಎಂಬುದು ಅವರ ಬಯಕೆಯಾಗಿತ್ತು. ಬಯಕೆಯಂತೆ ಒಂದೇ ದಿನದಲ್ಲಿ ಎರಡು ಬಯಕೆಗಳು ಜರುಗಿದವು. ಶೀನಣ್ಣ (ಶ್ರೀನಿವಾಸ ಹಾವನೂರ) ಅಮ್ಮನಿಗೆ ಚಮಚದಿಂದ ನೀರು ಕುಡಿಸಲೆಂದು ತೊಡೆಯ ಮೇಲೆ ಮಲಗಿಸಿಕೊಂಡಿದ್ದಾಗ ಪ್ರಾಣ ಹೋಯಿತು. ಅದೇ ಗಳಿಗೆಯಲ್ಲಿ ದೂರದ ಸೋದೆಯಲ್ಲಿ ಅವರ ತಮ್ಮನ ಮದುವೆ ಜರುಗಿತ್ತು".[೧]

**ಶಿಕ್ಷಣ**

ಪೂರ್ವಕಾಲದಲ್ಲಿ ಸರಕಾರಿ ಮತ್ತು ಗಾವಠಿ ಶಾಲೆಗಳು ಇದ್ದವು. ಆಕಸ್ಮಿಕವಾಗಿ ಯಾರಾದರೂ ಖಾಸಗಿಯಾಗಿ ಶಾಲೆಯನ್ನು ಆರಂಭಿಸಿದರೆ ಅಂಥವರಿಗೆ ಸರ್ಕಾರದಿಂದ ವಿದ್ಯಾರ್ಥಿಗಳ ಸಂಖ್ಯೆಗಳಿಗನುಗುಣವಾಗಿ ಅನುದಾನ ಕೊಡುತ್ತಿದ್ದರು. ಹಾವನೂರ ಅವರು ಸರಕಾರಿ ಶಾಲೆಯಲ್ಲಿ ಪ್ರವೇಶ ಪಡೆದರು. ಶ್ರೀನಿವಾಸ ಹಾವನೂರ ತಮ್ಮ ಊರಿನಲ್ಲಿ ಶಿಕ್ಷಣವನ್ನು ಆರಂಭಿಸಿದರು. ಮೂರನೆಯ ತರಗತಿಯಲ್ಲಿ ಅಭ್ಯಾಸ ಮಾಡುತ್ತಿದ್ದ ಸಂದರ್ಭದಲ್ಲಿ ಒಂದು ಸಲ ಶಾಲೆಗೆ ಇನ್ಸ್‌ಪೆಕ್ಟರ್ ಭೇಟಿ ಕೊಟ್ಟಿದ್ದರು. ಆ ಸಮಯದಲ್ಲಿ ಈತನನ್ನು ಶಾಲೆಯ ಗುರುಗಳು ಪ್ರತಿಭಾವಂತ ವಿದ್ಯಾರ್ಥಿಯೆಂದು ತಿಳಿದು ಮುಂದೆ ಕೂಡಲು ಹೇಳಿದರು. ಇನ್ಸ್‌ಪೆಕ್ಟರ್ ಹಾವನೂರ ಅವರನ್ನೇ ಪ್ರಶ್ನೆ ಕೇಳಿದರು. ಆಗ ಸರಿಯಾಗಿ ಉತ್ತರಿಸಿದರು. ಹಾಗಾಗಿ ಮತ್ತೊಂದು ಪ್ರಶ್ನೆಯನ್ನು ಕೇಳಿದರು. ಆಗ ಮುಗಂ ಆಗಿ ಉತ್ತರ ಹೇಳಿದರು. ಈ ವಿಷಯ ಅವರ ತಂದೆಗೆ ತಿಳಿಯಿತು. ಇದರಿಂದ ಅವರು ಕೋಪಿತರಾಗಿ

ಗೌರವಕ್ಕೆ ಚ್ಯುತಿ ತಂದೆ ಎಂದು ಆತನನ್ನು ದೊಣ್ಣೆಯಿಂದ ಬಾರಿಸಿದರು. ಆಗ ಹಾವನೂರ ಅವರು ಬೇಸರ ಮಾಡಿಕೊಳ್ಳಲಿಲ್ಲ. ಇದರಿಂದ ಪಾಠ ಕಲಿತರು, ಉತ್ತರ ಸ್ಪಷ್ಟವಾಗಿ ಗೊತ್ತಿದ್ದರೆ ಮಾತ್ರ ಹೇಳಬೇಕು. ಇಲ್ಲವಾದರೆ ಮುಗಂ ಉತ್ತರ ಹೇಳಬಾರದೆಂದು ಅಂದೇ ಅವರು ನಿರ್ಧರಿಸಿದರು.

ಆ ಶಾಲೆಯಲ್ಲಿ ಸವಣೂರು ಎಂಬ ಶಿಕ್ಷಕರು ಬಹಳ ಆತ್ಮೀಯತೆಯಿಂದ ಹಾವನೂರ ಅವರನ್ನು ನೋಡಿಕೊಳ್ಳುತ್ತಿದ್ದರು. ನಂತರ ಇವರ ತಂದೆಯವರು ಖಾಸಗಿ ಶಾಲೆ ಆರಂಭಿಸಿದರು. ಆದರೆ ಸರ್ಕಾರದ ಶಾಲೆ ಬಿಟ್ಟು ಖಾಸಗಿ ಶಾಲೆಗೆ ಹೋಗುವುದು ಇವರಿಗೆ ಇಷ್ಟವಿರಲಿಲ್ಲ. ತಂದೆಯವರ ಮಾತು ಮೀರುವಂತಿರಲಿಲ್ಲ. ಆ ಸಂದರ್ಭದಲ್ಲಿ ಇಷ್ಟ-ಕಷ್ಟ ಮುಖ್ಯವಾಗಿರಲಿಲ್ಲ. ಬದುಕಿನ ಪರಿಸ್ಥಿತಿಯು ಬಹಳ ಮುಖ್ಯ; ಪರಿಸ್ಥಿತಿಗೆ ಹೊಂದಿಕೊಳ್ಳುವ ಅನಿವಾರ್ಯತೆ ಬಿಟ್ಟರೆ ಇವರಿಗೆ ಬೇರೆ ದಾರಿಯೇ ಇರಲಿಲ್ಲ.

ಮುಂದೆ ಹಾವೇರಿಯಲ್ಲಿ ಮುನಿಸಿಪಲ್ ಹೈಸ್ಕೂಲ್‌ಗೆ ಐದನೇ ತರಗತಿಗೆ ಪ್ರವೇಶ ಪಡೆದರು. ವಿದ್ಯಾರ್ಥಿಗಳಿಗೆ ಕೂಡಲು ಆಸನಗಳ ಅನುಕೂಲವಿತ್ತು. ಜೀವನ ಅಂದರೆ ಏನೆಂದು ತಿಳಿದಿರಲಿಲ್ಲ. ತಿಳಿದುಕೊಳ್ಳುವ ಕುತೂಹಲದಿಂದಾಗಿ ಬೇರೆಯವರ ಮನೆಯಲ್ಲಿದ್ದುಕೊಂಡು ಶಿಕ್ಷಣ ಮುಂದುವರಿಸಿದರು. ಅವರು ಕೊಟ್ಟಾಗ (ಇವರಿಗೆ ಹಸಿದಾಗೆಲ್ಲ) ಊಟ ಮಾಡುತ್ತಿದ್ದರು. (ಒಂದೊಂದು ಸಲ ಅವರು ಕೊಟ್ಟ ಹಳಸಿದ ಆಹಾರವನ್ನು ತಿನ್ನುವುದು ಅನಿವಾರ್ಯವಾಗಿತ್ತು.)

ಒಂದು ಸಲ ಶಾಲೆಯ ಶುಲ್ಕ ಪಾವತಿಸಲು ಸಾಧ್ಯವಾಗಿರಲಿಲ್ಲ. ಈ ಸಂಗತಿಯನ್ನು ಶಿಕ್ಷಕರು ಈತನ ಗಮನಕ್ಕೆ ತಂದಿದ್ದರು. ಆ ಶಿಕ್ಷಕರ ತರಗತಿಗೆ ಹೋಗುವುದನ್ನೇ ಬಿಟ್ಟು ಉಳಿದ ಶಿಕ್ಷಕರ ತರಗತಿಗಳಿಗೆ ಕುಳಿತುಕೊಳ್ಳುತ್ತಿದ್ದರು. ಆ ಶಿಕ್ಷಕರ ತರಗತಿಯ ಕೊಠಡಿಯ ಕಿಟಕಿಯ ಪಕ್ಕದಲ್ಲಿ ಕುಳಿತುಕೊಂಡು ಪಾಠ ಕೇಳುತ್ತಿದ್ದರು. ಏಕೆಂದರೆ ಮತ್ತೆ ಫೀ ಕೇಳಿದರೆ? ಎಂಬ ಭಯವು ಅವರನ್ನು ಆವರಿಸಿತ್ತು. ಸ್ನೇಹಿತರಿಂದ ನೋಟ್ಸ್ ಪಡೆದುಕೊಂಡು ಟಿಪ್ಪಣಿ ಮಾಡಿಕೊಳ್ಳುತ್ತಿದ್ದರು.

ಚಿಕ್ಕವಯಸ್ಸಿನಲ್ಲಿ ಅವರು ಬರೆಯಲು ಆರಂಭಿಸಿದರು. ಶಾಲೆಯ ವಾರ್ಷಿಕ ಪತ್ರಿಕೆಗಾಗಿ 'ಹೋಟಲ್ ಪ್ರಭಾವ' ಎಂಬ ಲೇಖನ ಬರೆದರು. ಆ ನಂತರ ಹಾವನೂರರಿಗೆ ಬರೆಯುವ ಹವ್ಯಾಸ ಇಮ್ಮಡಿಯಾಯಿತು. ತರಗತಿಯಲ್ಲಿ ಕುಳಿತಾಗ 'Gypsy Gril' ಎಂಬ ಪಠ್ಯದಲ್ಲಿದ್ದ ಕವಿತೆ ಅನುವಾದ ಮಾಡಿದರು. ಈ ಸಂಗತಿಯನ್ನು ಎಲ್ಲಾ ವಿದ್ಯಾರ್ಥಿಗಳ ಮುಂದೆ ಶ್ಲಾಘಿಸಿದರು. ಅಲ್ಲದೆ ಶಾಲೆಯ ಪತ್ರಿಕೆಯಾದ 'ತೇಜಸ್ವಿ'ಯಲ್ಲಿ ಆ ಕವಿತೆಯನ್ನು ಪ್ರಕಟಿಸಿದರು. ಶಿಕ್ಷಕರು ಅಂದಿನಿಂದ ಸ್ವತಂತ್ರ ಕವಿತೆ ಬರೆಯುವಂತೆ ಪ್ರೇರಣೆ ನೀಡಿದರು. ನಂತರ ರಜೆಯಲ್ಲಿ 'ನೆರಳು' ಎನ್ನುವ ಕವಿತೆ ಬರೆದಿದ್ದರು. ಅದರ ಪ್ರತಿ ಅವರ ಬಳಿ ಬಹಳ ದಿನವಿತ್ತು. ಇವರು ಓದುವ ಕಾಲಕ್ಕೆ ಇಬ್ಬರು ಸ್ನೇಹಿತರಿದ್ದರು. ಗುರುರಾಜ ಆಮೂರ

(ಪ್ರಖ್ಯಾತ ವಿಮರ್ಶಕರು, ಇನ್ನೊಬ್ಬರು ಸದಾಶಿವ ಒಡೆಯರು ಸೀನಿಯರ್‌ರಾಗಿದ್ದರು. ಇವರ ಸ್ನೇಹವು ಅಧ್ಯಯನಶೀಲತೆಗೆ ಪೂರಕವಾಯಿತು. ಹಾಗೆಯೇ ಹಾವನೂರ ಊಟ, ವಸತಿ, ಹಾವೇರಿಯಲ್ಲಿದ್ದಂತೆ ವಾರಾನ್ನದ ಮನೆ ಮುಂದುವರಿದಿತ್ತು. ಈ ಅನುಭವವು ಹಾವನೂರ ಅವರಿಗೆ ಸಾಹಿತ್ಯ ಬರವಣಿಗೆಗೆ ಪ್ರೇರಣೆ ನೀಡಿದವು. ಈ ಸಂದರ್ಭದಲ್ಲಿ ಕರ್ನಾಟಕ ಹೈಸ್ಕೂಲ್‌ನಲ್ಲಿ ಎನ್.ಪಿ.ಕುಲಕರ್ಣಿ ಮತ್ತು ರಂಗನಾಥ ನೆಗಳೂರು ಅವರು ಪ್ರೋತ್ಸಾಹ ನೀಡಿದರು.

ಹೈಸ್ಕೂಲ್ ಮುಗಿಯುವರೆಗೂ ಕಥೆ ಕಾವ್ಯಗಳನ್ನು ಬರೆಯುವುದರಲ್ಲಿ ಮಗ್ನರಾಗಿದ್ದರು. ಆದರೆ ಮೆಟ್ರಿಕ್ ಪರೀಕ್ಷೆ ಹತ್ತಿರ ಬಂದಾಗ ಆತ್ಮಚರಿತ್ರೆ ಬರೆಯಲು ಆರಂಭಿಸಿದರು. ಶಾಲೆಯಲ್ಲಿ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಪುರಸ್ಕಾರ ಏರ್ಪಡಿಸಿದ್ದರು. ಪುರಸ್ಕಾರ ಸ್ವೀಕರಿಸಿ ಮಾತನಾಡಿನ ಶಾಂತಿನಾಥ ದೇಸಾಯಿ ಅವರು ಶಾಲೆಯ ಸಾಹಿತ್ಯಿಕ ಪರಿಸರದ ಬಗ್ಗೆ ಮಾತನಾಡುತ್ತ "ಈ ವಯಸ್ಸಿನಲ್ಲಿ ಆತ್ಮಚರಿತ್ರೆಯನ್ನು ಬರೆಯುವವರಿದ್ದಾರೆ, ಅವರೇ ಶ್ರೀನಿವಾಸ ಹಾವನೂರ" ಎಂದು ಹೇಳಿದರು.

ಹಾವನೂರ ಅವರಿಗೆ ಹಗಲಿನ ಸಂದರ್ಭದಲ್ಲಿ ಓದಲು ಸಾಧ್ಯವಿರಲಿಲ್ಲ. ಏಕೆಂದರೆ ತಾವು ಉಳಿದುಕೊಂಡ ಮನೆಯಲ್ಲಿ ಕೆಲಸ ಮಾಡುವುದು ಅನಿವಾರ್ಯವಾಗಿತ್ತು. ಹೀಗಾಗಿ ಅವರು ರಾತ್ರಿ ಹೆಚ್ಚು ಅಭ್ಯಾಸ ಮಾಡುತ್ತಿದ್ದರು. ಹಗಲು ಕೆಲಸ ಮಾಡಿ ದಣಿದು ರಾತ್ರಿ ಮಲಗಿದರೆ ಎಚ್ಚರವಾಗುತ್ತಿರಲಿಲ್ಲ. ಓದಲು ಸರಿಯಾದ ಸಮಯಕ್ಕೆ ಏಳಬೇಕೆಂದರೆ ಅವರ ಬಳಿ ಗಡಿಯಾರವೂ ಕೂಡ ಇರಲಿಲ್ಲ. ರಾತ್ರಿ ೧೦ರ ಸುಮಾರಿಗೆ ಹೋಟೆಲ್‌ಗೆ ಹೋಗುತ್ತಿದ್ದರು. ಅಲ್ಲಿ ಉಳಿದ ತಿಂಡಿಯನ್ನು ಕೊಡುತ್ತಿದ್ದರು. ಅದನ್ನು ತಿಂದು ನೀರು ಕುಡಿದು ಮಲಗಿದರೆ ೩ ತಾಸಿನಲ್ಲಿ ಎಚ್ಚರವಾಗುತ್ತಿತ್ತು. ಉಳಿದ ಸಮಯವನ್ನು ತಮ್ಮ ಅಧ್ಯಯನಕ್ಕೆ ಬಳಸಿಕೊಂಡು ವಿದ್ವತ್ತನ್ನು ತಮ್ಮದಾಗಿಸಿಕೊಂಡರು. ಆ ಕಾಲದಲ್ಲಿ ಹಾವನೂರ ಅವರಿಗೆ ಕಾಲೇಜು ಶುಲ್ಕ ಪಾವತಿಸಿ ಪ್ರವೇಶ ಪಡೆಯಬೇಕೆಂದರೆ ಸ್ಕಾಲರ್‌ಶಿಪ್ ಇಲ್ಲದೆ ಸಾಧ್ಯವಿರಲಿಲ್ಲ. ಇದಕ್ಕೆಲ್ಲ ಬಂಧುಗಳನ್ನು ಪರಿಚಯದವರನ್ನು ಪರಿಚಯವಿಲ್ಲದವರನ್ನು ಕಂಡು ದೈನ್ಯತೆಯಿಂದ ಹೇಳಿಕೊಳ್ಳುತ್ತಿದ್ದರು. ಹಲವು ಸಮಸ್ಯೆಗಳ ನಡುವೆಯೂ ಕರ್ನಾಟಕ ಕಾಲೇಜಿನಲ್ಲಿ ಪ್ರವೇಶ ಪಡೆದರು.

ಕರ್ನಾಟಕ ಸಂಘವು ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಸ್ಪರ್ಧೆಯನ್ನು ಏರ್ಪಡಿಸುತ್ತಿತ್ತು. ಆ ಮೂಲಕ ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸಲಾಗುತ್ತಿತ್ತು. ಆ ಸಂದರ್ಭದಲ್ಲಿ ಸಾಹಿತ್ಯಕ ಮತ್ತು ಸಾಂಸ್ಕೃತಿಕವಾಗಿ ವಿದ್ಯಾರ್ಥಿಗಳನ್ನು ಬೆಳೆಸುವುದು ಸಂಘದ ಮೂಲ ಉದ್ದೇಶ. ಹೀಗೆ ಆಯೋಜನೆಗೊಂಡ ವಿವಿಧ ಕವಿತೆ ಮತ್ತು ಕಥಾ ಸ್ಪರ್ಧೆಯಲ್ಲಿ ಹಾವನೂರ ಅವರು ಭಾಗವಹಿಸುತ್ತಿದ್ದರು. ಆ ಮೂರು ವರ್ಷದ ಸ್ಪರ್ಧೆಯಲ್ಲಿ ತಪ್ಪದೇ ದ್ವಿತೀಯ ಸ್ಥಾನ ಇಲ್ಲವೆ ತೃತೀಯ ಸ್ಥಾನವನ್ನಾದರೂ ಹಾವನೂರ ಅವರು ಪಡೆದುಕೊಳ್ಳುತ್ತಿದ್ದರು.

ಶ್ರೀರಂಗರು ಕಾಲೇಜಿನ ಶುಲ್ಕ ನಿರ್ಧರಿಸುವ ಕಮಿಟಿಯ ಅಧ್ಯಕ್ಷರಾಗಿದ್ದರು. ಅವರ ಪರಿಚಯ ಹಾವನೂರ ಅವರಿಗಿತ್ತು. ಆ ಕಾರಣದಿಂದ ಅವರು ಬರೆದ ನಾಟಕದ ಬರವಣಿಗೆಯನ್ನು ಕಂಡ ಶ್ರೀರಂಗರು ಕೆಲವು ಸಲಹೆಗಳನ್ನು ನೀಡಿದರು. ನಾಟಕ ಅಂದರೆ ಪಾತ್ರ ಸಂಭಾಷಣೆಯಲ್ಲಿ ಸೃಷ್ಟಿಯಾಗಬೇಕು. ಅದಕ್ಕೆ ನಿದರ್ಶನವೆಂದರೆ ಇಬ್ಸೆನ್ನಿನ 'Warriors at Hegeland' ಈ ನಾಟಕವನ್ನು ನೋಡಿದರೆ ನಿಮಗೆ ತಿಳಿಯುತ್ತದೆ ಎಂದು ಹೇಳಿದರು. ಇದನ್ನು ಗಮನಿಸಿದ ಹಾವನೂರ ಅವರು ಅಂದೇ ತಮ್ಮ ನಾಟಕದ ಬರವಣಿಗೆಗೆ ವಿರಾಮವಿತ್ತರು. ತಮ್ಮ ಕಾಲೇಜು ಅಭ್ಯಾಸ ಅವಧಿಯಲ್ಲಿ ಎರಡು ವರ್ಷವೂ ತೃತೀಯ ದರ್ಜೆಯಲ್ಲಿ ಉತ್ತೀರ್ಣರಾಗಿದ್ದರು. ಆ ಕಾರಣದಿಂದ ಸ್ಕಾಲರ್‌ಶಿಪ್‌ನಿಂದ ವಂಚಿತರಾಗಿದ್ದರು. ಮುಂದಿನ ಅಭ್ಯಾಸಕ್ಕೆ ಶುಲ್ಕ ಪಾವತಿಸಲು ಕಷ್ಟವಾಗಿತ್ತು. ಇದಕ್ಕೆ ಪರ್ಯಾಯ ಮಾರ್ಗವನ್ನು ಕಂಡುಕೊಳ್ಳಬೇಕಾಗಿತ್ತು. ಈ ವಿಷಯ ತಿಳಿದ ಶ್ರೀರಂಗರು ಹಾವನೂರ ಅವರ ಮುಂದಿನ ವಿದ್ಯಾಭ್ಯಾಸಕ್ಕೆ ಅನುಕೂಲ ಮಾಡಿಕೊಡಲು ಕರ್ನಾಟಕ ವಿದ್ಯಾವರ್ಧಕ ಸಂಘದ ಹತ್ತಿರ ಬರಲು ಸೂಚಿಸಿದರು. ಅವರ ಮಾರ್ಗದರ್ಶನದಂತೆ ಹಾವನೂರ ಅವರು ಅಲ್ಲಿಗೆ ನಡೆದರು. ಆ ವೇಳೆಗೆ ಶ್ರೀರಂಗರು ಕರ್ನಾಟಕ ವಿದ್ಯಾವರ್ಧಕ ಸಂಘದ ಕಾರ್ಯಾಧ್ಯಕ್ಷರೆಂದು ಗೊತ್ತಾಯಿತು. ಅವರ ಸಹಾಯದಿಂದ ಹಾವನೂರ ಅವರಿಗೆ ಕರ್ನಾಟಕ ವಿದ್ಯಾವರ್ಧಕ ಸಂಘದ ಗ್ರಂಥಾಲಯಲ್ಲಿ ನೌಕರಿ ದೊರಕಿತು. ಶ್ರೀರಂಗರು ಕೊಡಿಸಿದ ನೌಕರಿಯಿಂದ ವಿದ್ಯಾಭ್ಯಾಸ ಮುಂದುವರಿಯಲು ಮತ್ತು ಬದುಕು ನಿರ್ವಹಿಸಲು ಅನುಕೂಲವಾಯಿತು.

ಹಾವನೂರ ಅವರು ಜ್ಯೂನಿಯರ್ ಬಿ.ಎ. ಅಭ್ಯಾಸ ಮಾಡುತ್ತಿದ್ದಾಗ ಒಂದು ಕಾರ್ಯಕ್ರಮದ ಅಂಗವಾಗಿ ಧಾರವಾಡಕ್ಕೆ ರಂ.ಶ್ರೀ ಮುಗಳಿಯವರು ಬಂದಿದ್ದರು. ಆ ಸಂದರ್ಭದಲ್ಲಿ ಅವರು ಲೈಬ್ರರಿಯಲ್ಲಿ ಸಹಾಯಕರಾಗಿ ಕೆಲಸ ಮಾಡುತ್ತಿದ್ದರು. ಮುಗಳಿಯವರು ಲೈಬ್ರರಿಗೆ ಬಂದು ಹಳೆಗನ್ನಡ ಕಾವ್ಯದ ಪುಸ್ತಕ ಕೇಳಿದರು. ಆ ಕಾವ್ಯವನ್ನು ಹುಡುಕಿ ಕೊಟ್ಟರು. ಆ ವೇಳೆಗಾಗಲೇ ಹಾವನೂರ ಅವರು ರಂ.ಶ್ರೀ ಮುಗಳಿಯವರ ಕಾದಂಬರಿ ಅಭ್ಯಾಸ ಮಾಡಿ ಅವರ ಸಾಹಿತ್ಯದ ಬಗ್ಗೆ ತಿಳಿದುಕೊಂಡಿದ್ದರು. ಕನ್ನಡ ಸಾಹಿತ್ಯ ಚರಿತ್ರೆ ಬರೆಯಲು ತೊಡಗಿದ್ದರು ಎಂಬುದು ಕೂಡ ಅವರಿಗೆ ತಿಳಿದಿತ್ತು. ಅದೇ ಸಂದರ್ಭದಲ್ಲಿ ನಡೆದ ಕಾರ್ಯಕ್ರಮ ಒಂದರಲ್ಲಿ ರಂ.ಶ್ರೀ.ಮುಗಳಿಯವರ ಭಾಷಣ ಮುಗಿದರೂ ತುಂಬ ಗದ್ದಲವಿತ್ತು. ಅದರೂ ಹಾವನೂರ ಅವರು ಭೇಟಿಯಾಗಿ ಸರ್ ತಾವಿರುವ ಸಾಂಗಲಿ ಕಾಲೇಜಿನಲ್ಲಿ ಬಿ.ಎ.ಫೈನಲ್ ಪದವಿ ಅಭ್ಯಾಸ ಮಾಡಲು ಬರಬೇಕೆಂದಿದ್ದೇನೆ. ಬರಬಹುದೆ? ಎಂದು ಹೇಳಿದರು. ಆಗ ಅವರು ಬಾ ಎಂದು ಉತ್ತರಿಸಿದರು.

ಹಾವನೂರ ಅವರು ತಮ್ಮ ಆತ್ಮೀಯ ಸ್ನೇಹಿತರಾದ ಲಕ್ಷ್ಮೇಶ್ವರ ವಿಠಲರಿಗೆ ತಮ್ಮ ದೈನಂದಿನ ಆತಂಕವನ್ನು ಹೇಳಿಕೊಳ್ಳುತ್ತಿದ್ದರು. ಸ್ನೇಹಿತರ ಮನೆಯ ಪರಿಸರ ಮುದುಡಿದ ಮನಸ್ಸು ಅರಳಲು ಪೂರಕವಾಗಿತ್ತು. ಹಾವನೂರ ಸಾಂಗಲಿ ಕಾಲೇಜಿಗೆ ಹೋಗುವ

ವಿಷಯ ತಿಳಿಸಿದರು. ಅದಕ್ಕೆ ಅವರು ಅವಶ್ಯವಾಗಿ ಹೋಗು ಎಂದು ಪ್ರೋತ್ಸಾಹಿಸಿದರು. ಆಗ ಹೋಗಲು ಹಣದ ಸಮಸ್ಯೆ ಇರುವುದನ್ನು ಹೇಳಿದರು. ತಕ್ಷಣವೇ ಅವರು ನೂರು ರೂಪಾಯಿ ಕೊಟ್ಟರು. ಈ ಎಲ್ಲಾ ಜವಾಬ್ದಾರಿಯನ್ನು ಅವರ ತಂದೆಯವರು ನಿರ್ವಹಿಸಬೇಕಾಗಿತ್ತು. ಆದರೆ 'ತಾನೊಂದು ಬಗೆದರೆ ದೈವವೊಂದು ಬಗೆಯಿತು' ಎಂಬ ಗಾದೆಯಂತೆ ಬದುಕು ವಿಭಿನ್ನ ಸ್ವರೂಪದಾಗಿತ್ತು. ಅವರದು ಯಾವಾಗಲು ಬರಿಗೈ. ಯಾವುದೋ ಕೋರ್ಟಿನ ವ್ಯವಹಾರದಲ್ಲಿ ತೊಡಗಿಕೊಂಡು ಆ ಓಡಾಟದಲ್ಲಿ ಊರಲ್ಲಿದ್ದ ಹದಿನಾಲ್ಕು ಜನ ಮಕ್ಕಳ ಸಂಸಾರ ನಡೆಸುವುದೇ ದುಸ್ತರ. ಆದರೂ ಅವರು ಲಕ್ಷ್ಮೇಶ್ವರದ ಬಂಧುಗಳನ್ನು ಕಂಡು ಈತ ಹಿರಿಯ ಮಗ ಮುಂದೆ ದುಡಿದು ಹಾಕುವವ ಎಂದು ಹೇಳಿ ಅವರಿಂದ ನೂರು ರೂಪಾಯಿ ಪಡೆದುಕೊಂಡರು. ಆ ಕೂಡಲೇ ಶ್ರೀನಿವಾಸನನ್ನು ಸಾಂಗಲಿಯ ಗಾಡಿಗೆ ಹತ್ತಿಸಿದರು.

ಹಾವನೂರ ತಂದೆ ಮತ್ತು ಸ್ನೇಹಿತರು ಕೊಟ್ಟ ಹಣವನ್ನು ರಂ.ಶ್ರೀ.ಮುಗಳಿಯವರಿಗೆ ಕೊಟ್ಟರು. ಅವರ ಕಾಲು ಹಿಡಿದು ಕೇಳಿದರು. "ಇಷ್ಟೆ ಹಣ ನನಗೆ ದೊರಕಿದ್ದು; ಬಿ.ಎ.ಮುಗಿಸುವ ಭಾರ ನಿಮ್ಮದೇ ಎಂದು ಹೇಳುವಾಗ ಅವರ ಕಣ್ಣಲ್ಲಿ ನೀರು ಬಂದಿತ್ತು"[೬] ಈ ಮಾತನ್ನು ಹೇಳಿದ ಹಾವನೂರ ಇಷ್ಟು ಹಣದಿಂದ ವಿದ್ಯಾಭ್ಯಾಸ ಮುಗಿಸುವುದು ಸಾಧ್ಯವಿಲ್ಲವೆಂಬುದನ್ನು ಅರಿತಿದ್ದರು. ಬದುಕಿನ ಅನಿವಾರ್ಯ ಪರಿಸ್ಥಿತಿ ಕೇಳುವಂತೆ ಮಾಡುತ್ತದೆ.

ಮನುಷ್ಯ ಪರಿಸ್ಥಿತಿಯ ಕೈಗೊಂಬೆಯಾಗುವುದು ಸಹಜ. ಆದರೆ ರಂ.ಶ್ರೀ. ಮುಗಳಿಯವರಿಗೆ ಇದು ಸತ್ವಪರೀಕ್ಷೆಯೇ ಸರಿ. ಶಿಕ್ಷಣ, ಊಟ, ವಸತಿ ಇವುಗಳನ್ನು ಒದಗಿಸುವುದು ಅವರಿಗೆ ಅನಿವಾರ್ಯವಾಗಿತ್ತು. ಮುಗಳಿ ಅವರು ಮನುಷ್ಯತ್ವದ ಮೌಲ್ಯಕ್ಕೆ ಹೆಚ್ಚು ಒತ್ತು ಕೊಟ್ಟಿದ್ದರು. ಉಪನ್ಯಾಸಕ ಹುದ್ದೆಯ ಜೊತೆಗೆ ಹಾಸ್ಟೆಲಿನ ಜವಾಬ್ದಾರಿಯೂ ಇವರದಾಗಿತ್ತು. ಹೀಗಾಗಿ ಹಾವನೂರ ಅವರು ಗ್ರಂಥಾಲಯದ ಶುಲ್ಕದಿಂದ ವಿನಾಯಿತಿ ನೀಡಿದರು. ಅಲ್ಲದೇ ಪ್ರವೇಶ ಶುಲ್ಕವನ್ನು ಕೂಡ ತಾವೇ ಪಾವತಿಸಿದರು. ವಿದ್ಯಾರ್ಥಿಗಳಿಗಾಗಿ ನಾಲ್ಕು ಹಾಸ್ಟೆಲ್ ಮತ್ತು ಖಾಸಗಿ ಖಾನಾವಳಿಯಿತ್ತು. ಇವೆರಡರ ಸಹಾಯದಿಂದ ಹಾಗೂ ಮನೆಯಿಂದ ಒಂದು ವಾರಕ್ಕೆ ಊಟ ಮತ್ತು ವಸತಿ ವ್ಯವಸ್ಥೆಯನ್ನು ಮಾಡಿದರು. ಅಂದರೆ ಮೂರು ದಿವಸ ಹಾಸ್ಟೆಲ್‌ನಲ್ಲಿ ಮತ್ತು ಮೂರು ದಿವಸ ಖಾನಾವಳಿಯಲ್ಲಿ ಊಟಕ್ಕೆ ವ್ಯವಸ್ಥೆ ಮಾಡಿ ಬಾಕಿ ಉಳಿದ ಒಂದು ದಿನ ಮಾತ್ರ ತಮ್ಮ ಮನೆಯಲ್ಲಿ ಊಟ ಮಾಡಲು ಅವಕಾಶ ಕಲ್ಪಿಸಿಕೊಟ್ಟರು.

ಹಾವನೂರ ಅವರು ರಂ.ಶ್ರೀ ಮುಗಳಿಯವರು ನೀಡಿದ ಮಾರ್ಗದರ್ಶನ ಮತ್ತು ನೀಡಿದ ಸಹಾಯ ಕುರಿತು ಹೀಗೆ ಹೇಳಿದ್ದಾರೆ. "ಆರ್ಥಿಕ ಸ್ವಾವಲಂಬನೆ ಇಲ್ಲದವರಿಗೆ ಮುಗಳಿಯವರ ಸಹಾಯ ಅನಿವಾರ್ಯವಾಗಿತ್ತು. ಆದರೆ ನನಗೆ ಮಾಡಿದ ಸಹಾಯ ಪ್ರಾಯಶಃ ಇನ್ನಾರಿಗೂ ಮಾಡಿರಲಿಕ್ಕಿಲ್ಲ"[೭] ಸಾಂಗಲಿಯಿಂದ ೧೦-೧೨ ಕಿ.ಮೀ. ದೂರದಲ್ಲಿರುವ

ವಿಶ್ರಾಮ ಭಾಗದ ಕಾಲೇಜಿನಲ್ಲಿ ವಿದ್ವತ್‌ವಲಯವೇ ಇದೆ. ಈ ವಿದ್ವತ್‌ವಲಯದಲ್ಲಿ ತಮ್ಮನ್ನು ಕ್ರಿಯಾಶೀಲರನ್ನಾಗಿ ಮಾಡಿಕೊಂಡಿದ್ದರು. ಅಲ್ಲದೆ ಹಾವೇರಿ ಮತ್ತು ಧಾರವಾಡದಲ್ಲಿದ್ದಾಗ ಊಟ ಎಂದರೆ ಹೊಟ್ಟೆಗೆ ಏನಾದರೂ ತುಂಬಿಕೊಳ್ಳುವುದೆಂದು ಭಾವಿಸಿಕೊಂಡಿದ್ದರು. ಆದರೆ ಸಾಂಗಲಿಗೆ ವಿದ್ಯಾಭ್ಯಾಸಕ್ಕೆ ಸೇರಿಕೊಂಡಾಗ ಸಮಯಕ್ಕೆ ಸರಿಯಾಗಿ ರುಚಿ ರುಚಿಯಾದ ಊಟ ರಂ.ಶ್ರೀ.ಮುಗಳಿಯವರ ಸಹಾಯದಿಂದ ಹಾವನೂರ ಅವರಿಗೆ ದೊರೆಯುತ್ತಿತ್ತು. ಆದರೆ ಆಕಸ್ಮಿಕವಾಗಿ ಒಂದು ದಿನ ಒಂದು ಘಟನೆ ನಡೆಯಿತು. ಹಾವನೂರ ಎಂದಿನಂತೆ ರಂ.ಶ್ರೀಮುಗಳಿಯವರ “ಮನೆಗೆ ಊಟದ ಸಮಯದಲ್ಲಿ ಹೋಗಿದ್ದರು. ಕೈತೊಳೆದುಕೊಂಡು ಬಂದು ಅವರು ‘ಒಳ್ಳೆಯದು ಎಂದರು. ಅದರರ್ಥ ನೀನಿನ್ನು ಹೋಗಬಹುದೆಂದು. ಆದರೆ ಅವತ್ತು ಶುಕ್ರವಾರ; ಅಲ್ಲಿಯೇ ಅವರ ಊಟ ಮಾಡುವ ದಿನವಾಗಿತ್ತು. ಹಾಗೆಂದು ಅವರಿಗೆ ಹೇಳಲಿಕ್ಕೆ ಸಂಕೋಚ. ಒಂದು ಕ್ಷಣ ತಡೆದರು. ಏನಾದರೂ ಬೇಕಿತ್ತೆ? ಎಂದು ಕೇಳಿದರು. ಆಂ! ಏನಿಲ್ಲ ಎಂದು ಹೊರ ನಡೆದರು. ತಾಳಲಾರದಷ್ಟು ಹಸಿವಾಗಿತ್ತು. ಕಾಲೇಜಿನ ಆವರಣದಲ್ಲಿದ್ದ ಹೋಟೆಲಿಗೆ ಹೋದರು. ಜೇಬಿನಲ್ಲಿ ಒಂದು ಕಾಸು ಇಲ್ಲ. ಆದರೂ ಉದ್ರಿ ಹೇಳಿ ಒಂದು ದೋಸೆ ಮಾಡಿಸಿಕೊಂಡು ಗಪಗಪನೆ ತಿನ್ನತೊಡಗಿದರು.”[೫]

ಆ ವೇಳೆಗೆ ಮುಗಳಿಯವರ ಮನೆಯ ಆಳು ಬಂದು “ಎಷ್ಟು ಹುಡುಕಬೇಕು ನಿಮ್ಮನ್ನು? ಸಾಹೇಬರು ಕರ್ಯಾ ಹತ್ತ್ಯಾರ ಲಗೂನ ನಡೀರಿ ಎಂದು ಗಡಿನಾಡ ಕನ್ನಡದಲ್ಲಿ ಹೇಳಿಹೋದ. ಅವರು ಹೇಳಿದಂತೆ ಹಾವನೂರ ಅವರು ಮತ್ತೆ ರಂ.ಶ್ರೀ ಮುಗಳಿ ಅವರ ಮನೆಗೆ ಹೋದರು. ಆಗ ರಂ.ಶ್ರೀ ಮುಗಳಿಯವರು ಅಲ್ಲೋ ಹೇಳಬಾರದೇನು? ಇವತ್ತು ಊಟ ನಮ್ಮ ಮನೆಯಲ್ಲಿ ಅದ ಅಂತ ಎಂದರು. ಅವರ ದನಿಯ ಮೇಲಿಂದ ಅವರ ಶ್ರೀಮತಿಯವರಿಂದ ತುಸು ಬೈಸಿಕೊಂಡಿದ್ದಾರೆಂಬುದು ಸ್ಪಷ್ಟವಾಗಿತ್ತು. ಹಾವನೂರ ಊಟವಾಗುವವರೆಗೂ ಅಂದರೆ ಹದಿನೈದು ನಿಮಿಷ ತಡವಾಗಿ ಕ್ಲಾಸ್ ತೆಗೆದುಕೊಳ್ಳುವುದಾಗಿ ಹೇಳಿ ಕಳುಹಿಸಿದರು.”[೬]

ಮುಗಳಿಯವರು ಬೋಧಿಸುವ ವಿಧಾನ ಬಹಳ ಸರಳವಾಗಿತ್ತು. ವಿಷಯ ಎಷ್ಟೇ ಕ್ಲಿಷ್ಟವಾಗಿದ್ದರೂ ಸರಳಗೊಳಿಸಿ ಹೇಳುತ್ತಿದ್ದರು. ಅಲ್ಲದೆ ಹಳೆಗನ್ನಡ ಪದ್ಯಗಳಿದ್ದರೆ ಬಹಳ ರಸವತ್ತಾಗಿ ಹೇಳುತ್ತಿದ್ದರು. ಆನರ್ಸ್ ಕ್ಲಾಸಿಗೆ ಶಬ್ದಮಣಿದರ್ಪಣವಿತ್ತು. ಅದನ್ನು ಬಹಳ ಸರಳವಾಗಿ ಕಲಿಸುತ್ತಿದ್ದರು. ಅವರ ಧ್ವನಿ ಹೇಗಿತ್ತು ಎಂದರೆ ವೀಣೆಯ ತಂತಿಗಳ ಮೇಲೆ ಕೈಯಾಡಿಸಿದರೆ ಹೇಗೆ ಧ್ವನಿ ಹೊರಹೊಮ್ಮುತ್ತದೆಯೋ ಹಾಗಿತ್ತು.

ಆ ಕಾಲಕ್ಕೆ ರಂ.ಶ್ರೀ ಮುಗಳಿಯವರು ನಿರಂತರ ಅಧ್ಯಯನಶೀಲತೆ, ಅಪಾರವಾದ ಪಾಂಡಿತ್ಯದಿಂದ ಕೂಡಿದ ಬೋಧನೆಯಿಂದ ಉತ್ತಮ ಪ್ರಾಧ್ಯಾಪಕರೆಂಬ ಹೆಸರಿಗೆ ಪಾತ್ರರಾಗಿದ್ದರು. ಅವರ ವಿದ್ಯಾರ್ಥಿ ಎ.ಟಿ.ಪಾಟೀಲರು ಮರಾಠಿ ಮಾಧ್ಯಮದಲ್ಲಿ

ಕಲಿಯುತ್ತಿದ್ದರು. ಆಕಸ್ಮಿಕವಾಗಿ ಮುಗಳಿಯವರ ತರಗತಿಗೆ ಕುಳಿತುಕೊಂಡಾಗ ಮನ ಪರಿವರ್ತನೆಗೊಂಡು ಕನ್ನಡದಲ್ಲಿ ಬಿ.ಎ. ಪ್ರವೇಶ ಪಡೆದರು. ಕನ್ನಡ ಮಾತನಾಡಲಿಕ್ಕೆ ಬರುತ್ತಿತ್ತು. ಆದರೆ ಬರವಣಿಗೆ ಬರುತ್ತಿರಲಿಲ್ಲ. ಕನ್ನಡ ಬಾಲಬೋಧೆಯ ಪುಸ್ತಕ ತೆಗೆದುಕೊಂಡು ರ ಠ ಈ ಕ ಕಲಿಯಲು ತೊಡಗಿದರು. ಈ ನಿದರ್ಶನವು ಮುಗಳಿಯವರ ಕಲಿಸುವ ರೀತಿ ವಿದ್ಯಾರ್ಥಿಗಳ ಮೇಲೆ ಎಂಥ ಪರಿಣಾಮ ಬೀರಿತ್ತು ಎನ್ನುವುದನ್ನು ಸ್ಪಷ್ಟಪಡಿಸುತ್ತದೆ. ಬಿ.ಎ. ಆನರ್ಸ್‌ಗೆ ಸೇರಿದಾಗ ತರಗತಿಯಲ್ಲಿ ಅವರ ಜೊತೆಗೆ ಇದ್ದವರು ಶ್ರೀಮತಿ ಸರೋಜನಿ ಮಹಿಷಿ ಮತ್ತು ಶ್ರೀಮತಿ ನಾಯಕ (ಸದಾನಂದ ನಾಯಕ ಹೆಂಡತಿ). ಹಾವನೂರ ಅವರು ತರಗತಿಯಲ್ಲಿ ಪ್ರಶ್ನೆಗೆ ಉತ್ತರಿಸುತ್ತಿದ್ದರು. ಬಿ.ಎ. ಪ್ರಥಮ ದರ್ಜೆಯಲ್ಲಿ ಉತ್ತೀರ್ಣನಾಗುತ್ತೇನೆಂದು ಅಂದುಕೊಂಡಿದ್ದರು. ಆದರೆ ಮೊದಲನೆ ಸ್ಥಾನ ಸರೋಜನಿ ಮಹಿಷಿಯವರದಾಗಿತ್ತು. ಎರಡನೆಯ ಸ್ಥಾನ ಹಾವನೂರ ಅವರದಾಗಿತ್ತು.

ಮಹತ್ವದ ಅಂಶವೆಂದರೆ ಎರಡು ಅಂಕಿಗೂ ಅವರಿಗೂ ಅವಿನಾಭಾವ ಸಂಬಂಧ; ಅದೇನೆಂದರೆ ಮೊದಲ ರ್‍ಯಾಂಕ್ ಬಂದಿದ್ದರೆ ಫೆಲೋಶೀಪ್ ಮತ್ತು ಹಾಸ್ಟೆಲಿನ ರೂಮ್ ಉಚಿತವಾಗಿ ಸಿಗುತ್ತಿತ್ತು. ಇದಲ್ಲದೆ ಹಾಸ್ಟೇಲಿನ ಮೇಲ್ವಿಚಾರಕರಾಗಬಹುದಿತ್ತು. ಅನೀರಿಕ್ಷಿತ ಫಲಿತಾಂಶದಿಂದ ಅವರು ಅವಕಾಶದಿಂದ ವಂಚಿತರಾದರು. ಆದರೂ ಆ ಫಲಿತಾಂಶವು ಅವರ ಬದುಕಿನ ದಾರಿಯನ್ನು ಬದಲಾಯಿಸಿತು. ಅದೇನೆಂದರೆ ಪ್ರಥಮ ರ್‍ಯಾಂಕ್ ಬಂದವರು ಸರೋಜನಿ ಮಹಿಷಿ. ಆದ್ದರಿಂದ ಗಂಡು ಮಕ್ಕಳ ಹಾಸ್ಟೆಲಿಗೆ ಮೇಲ್ವಿಚಾರಕರಾಗಿ ಕೆಲಸ ನಿರ್ವಹಿಸುವುದು ತುಂಬ ಕಷ್ಟ, ಕಾರಣ ಆ ಹುದ್ದೆ ಹಾವನೂರ ಪಾಲಿಗೆ ಒಲಿದು ಬಂದಿತ್ತು. ಆ ಕೆಲಸ ನಿರ್ವಹಿಸುವರು ಇಂಗ್ಲಿಷ್ Tutor ಆಗಿ ಕೆಲಸ ಮಾಡಬೇಕಾಗಿತ್ತು. ಆದ್ದರಿಂದ ಹುದ್ದೆಗೆ ಹಾವನೂರ ಅವರು ಆರ್ಹ ವ್ಯಕ್ತಿಯಾಗಿ ಆಯ್ಕೆಯಾದರು. ಇವರು ಯಾವುದಾದರೂ ಹುದ್ದೆಗೆ ಅರ್ಜಿಯನ್ನು ಸಲ್ಲಿಸಬೇಕಾದರೆ ಇತರೆ ನೌಕರಿ ಅನುಭವದ ವಿಷಯ ತಿಳಿಸದೆ; "Fellow Tutor For English in the Willingdon College" ಈ ವಿಷಯವನ್ನು ತಪ್ಪದೆ ಬರೆಯುತ್ತಿದ್ದರು.

ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಗ್ರಂಥಾಲಯದಲ್ಲಿ ಕೆಲಸ ಮಾಡುತ್ತಾ ಎಂ.ಎ. ಪರೀಕ್ಷೆ ತೆಗೆದುಕೊಂಡರು. ಆದರೆ ಪೂರ್ವಸಿದ್ಧತೆ ಇಲ್ಲದ ಕಾರಣ ಎರಡು ಸಲ ಪರೀಕ್ಷೆಗೆ ಹೋಗಲಿಲ್ಲ. ಮೂರನೆಯ ಸಲ ಮಾತ್ರ ಛಲವಿಟ್ಟು ಪುಣೆಗೆ ಹೋದರು. ಪ್ರತಿದಿನ ಮಧ್ಯಾಹ್ನ ೩ ಗಂಟೆಗೆ ಪರೀಕ್ಷೆ ಆರಂಭವಾಗುತ್ತಿತ್ತು. ಒಟ್ಟು ಏಳು ವಿಷಯಗಳಿದ್ದವು. ಕನ್ನಡ ವಿಷಯದ ಪರೀಕ್ಷೆಗೆ ನಿಗದಿತ ಸಮಯಕ್ಕಿಂತ ಒಂದು ಗಂಟೆ ತಡವಾಗಿ ಹೋಗಿದ್ದರು. ಗಡಿಯಾರ ಕೈಕೊಟ್ಟ ಪರಿಣಾಮವಾಗಿ ಈ ರೀತಿಯಾಯಿತು ಎಂದು ಕೊಠಡಿ "ಸೂಪರ್‌ವೈಸರಿಗೆ (ಆ ಕಾಲೇಜು ಪ್ರಾಂಶುಪಾಲರು) ಗೋಗರೆದರು. ಅವರು ಸಾಧ್ಯವಿಲ್ಲವೆಂದರು. ಅರ್ಧ ತಾಸಿನೊಳಗೆ ಬಂದಿದ್ದರೆ ಮಾತ್ರ ಒಳಗೆ ಬಿಡಬಹುದಿತ್ತು.

ನೀವು ವಿಶ್ವವಿದ್ಯಾಲಯದಲ್ಲಿ ಕೆಲಸ ಮಾಡುವರು. ಅಷ್ಟಕ್ಕೂ ಉಳಿದಿರುವ ಎರಡೇ ತಾಸುಗಳ ಅವಧಿಯಲ್ಲಿ ನೀವು ಬರೆದು ಪಾಸಾಗುವುದಾದರೂ ಹೇಗೆ? ಎಂದು ಕೇಳಿದರು. ಎರಡು ಸಾರಿ ತಪ್ಪಿಸಿಕೊಂಡಿದ್ದೇನೆ. ಈ ಸಲವೂ ತಪ್ಪಿಸಿದರೆ ನಾನು ಎಂ.ಎ. ಆಸೆಯನ್ನು ಬಿಡಬೇಕಾಗುತ್ತದೆ."[೮] ಎಂದು ವಿನಯಪೂರ್ವಕವಾಗಿ ಬೇಡಿಕೊಂಡು ಅವಕಾಶವನ್ನು ಕಲ್ಪಿಸಿಕೊಡಿರೆಂದು ಕೇಳಿಕೊಂಡರು. ಆಗ ಪ್ರಾಂಶುಪಾಲರು ನಿನಗೆ ಪರೀಕ್ಷೆ ಬರೆಯಲು ಅವಕಾಶ ಮಾಡಿಕೊಟ್ಟರೆ ನನ್ನ ನೌಕರಿ ಕಳೆದುಕೊಳ್ಳಬೇಕಾಗುತ್ತದೆ ಎಂದು ಹೇಳಿದರು. ಆದರೂ ಹಾವನೂರ ಅವರು ವಿನಂತಿಸಿಕೊಂಡರು. "ಏನಾದರೂ ಮಾಡಿ ಅವಕಾಶ ಮಾಡಿಕೊಡಿರಿ! ಇಡೀ ಆಯುಷ್ಯದುದ್ದಕ್ಕೂ ನಿಮ್ಮ ಉಪಕಾರವನ್ನು ಮರೆಯಲಾರೆ"[೯] ಎಂದು ವಿನಮ್ರವಾಗಿ ವಿನಂತಿಸಿದಾಗ ಅವರು ಅವಕಾಶ ಕಲ್ಪಿಸಿದರು.

ಮುಂದೆ ಪುಣೆ ವಿಶ್ವವಿದ್ಯಾಲಯದಲ್ಲಿ ಪಿಎಚ್.ಡಿ ಅಧ್ಯಯನಕ್ಕಾಗಿ ನೋಂದಣಿ ಮಾಡಿಸಿದರು. ಅವರ ಅಧಿಕೃತ ಮಾರ್ಗದರ್ಶಕರು ಮುಗಳಿಯವರು. ಆ ಸಮಯದಲ್ಲಿ ಮುಂಬೈಯ T.I.F.Rದಲ್ಲಿ ಸಹಾಯಕ ಗ್ರಂಥಪಾಲಕರಾಗಿ ಹಾವನೂರ ಕೆಲಸ ಮಾಡುತ್ತಿದ್ದರು. ಈ ಕಾರಣದಿಂದ Shift duty ಹಾಕಿಸಿಕೊಂಡಿದ್ದರು. ವಿಶ್ವವಿದ್ಯಾಲಯದಲ್ಲಿ ಎರಡು ತಾಸು ಅಭ್ಯಾಸ ಮಾಡಿ ತಮ್ಮ ಕಛೇರಿಗೆ ಹೋಗುತ್ತಿದ್ದರು. ಅವರು ಆಯ್ಕೆ ಮಾಡಿಕೊಂಡ ವಿಷಯ ೧೯ನೇ ಶತಮಾನದ ಸಾಹಿತ್ಯ(ಹೊಸಗನ್ನಡದ ಅರುಣೋದಯ). ನೋಂದಣಿ ಮಾಡಿ ಏಳು ವರ್ಷ ಕಳೆದರೂ ಬರವಣಿಗೆ ಮಾಡಿರಲಿಲ್ಲ. ರಂ.ಶ್ರೀ.ಮುಗಳಿಯವರು ಮುಂಬಯಿಗೆ ಬಂದಾಗ ಹಾವನೂರ ಈ ರೀತಿ ಹೇಳಿದರು.

ಸರ್ "ತುಂಬಾ ಸಾಮಗ್ರಿ ಮಾಹಿತಿ ಸಂಪಾದಿಸಿದ್ದೇನೆ. ಸ್ವೀಕರಿಸಬೇಕು? ಎಷ್ಟು ಮಟ್ಟಿಗೆ ಹೇಳಬೇಕು? ತಿಳಿಯದಾಗಿದೆ ಎಂದು ಹೇಳಿದರು. ಅದಕ್ಕೆ ಅವರು ಹೊಸಗನ್ನಡ ಆರಂಭ ಕಾಲದ ಸಾಹಿತ್ಯದ ಬಗ್ಗೆ ಸಂಶೋಧನೆ ಇದೆಯಷ್ಟೆ 'ಹೊಸತು' ಎನ್ನುವುದು ಅಂದರೆ ಹಳೆಗನ್ನಡ ನಡುಗನ್ನಡ ಕಾಲದಲ್ಲಿ ಬಾರದೇ ಇದ್ದದ್ದು ಎಂದರು".[೧೦] ರಂ.ಶ್ರೀ ಮುಗಳಿಯವರು ಓದಿ ಅರ್ಧ ಪುಟದಷ್ಟು ವಿಷಯವನ್ನು ಮಾರ್ಗದರ್ಶನ ಮತ್ತು ಸಲಹೆ ನೀಡಿದರು. ಈ ಸಲಹೆ ಅವರ ದಾರಿಯನ್ನು ಸುಗಮಗೊಳಿಸಿತು. ಆದರೆ ಅವರ ಮಹಾಪ್ರಬಂಧದ ಬರವಣಿಗೆಯನ್ನು ಕೂಲಂಕಷವಾಗಿ ಓದಿ ತಿದ್ದಿದವರು ಸಿ.ಎಂ. ಕುಲಕರ್ಣಿಯವರು. ಅವರು ಮುಂಬಯಿ ವಿಶ್ವವಿದ್ಯಾಲಯದ ಇತಿಹಾಸ ಪ್ರಾಧ್ಯಾಪಕರಾಗಿದ್ದರು. "ಕನ್ನಡ ಸಾಹಿತ್ಯದಲ್ಲಿಯೂ ಅವರು ಪರಿಣಿತಿ ಹೊಂದಿದ್ದರು. ಮುಂಬಯಿಯಲ್ಲಿಯೇ ಅನೇಕ ಕನ್ನಡ ಸಾಹಿತಿಗಳಿಗೆ ಹಿರಿಯಣ್ಣನಂತೆ ಅವರಿದ್ದರು. ಯಾವ ವಿಷಯವೇ ಇರಲಿ ತೂಗಿ ನೋಡುವ, ಸಮಂಜಸವಾದದ್ದನ್ನು ತಿದ್ದಿ ಹೇಳುವ ಯೋಗ್ಯತೆ ಉಳ್ಳವರಾಗಿದ್ದರು. ಅವರು ಹಾವನೂರ ಮಹಾಪ್ರಬಂಧದ ಪ್ರತಿ ವಾಕ್ಯವನ್ನು ಓದಿದ್ದಾರೆ. ಸಂಪ್ರದಾಯ ಮತ್ತು ಪರಂಪರೆಯ ಈ ಶಬ್ದಗಳ ಅರ್ಥವನ್ನು ತಿಳಿಯದೇ ಒಂದೇ ಆಗಿ ಬಳಸಿದ್ದರೆ ಅವರ ತಪ್ಪನ್ನು ಎತ್ತಿ ತೋರಿಸಿದ್ದಾರೆ."[೧೧]

ಮುಂಬಯಿ ಪರಿಸರದಲ್ಲಿ ಭೀಮಾರಾವ್ ಚಿಟಗುಪ್ಪಿಯವರು ಹಿರಿಯರಾಗಿ ಹಾವನೂರರಿಗೆ ಸಲಹೆ ಕೊಡುತ್ತಿದ್ದರು. ಇವರ ಮಹಾಪ್ರಬಂಧ ತಿದ್ದುವ ಕೆಲಸ ಮಾಡಿದರು. ಮುಂಬಯಿಯಲ್ಲಿ ೧೯೭೦ರಲ್ಲಿ ಕನ್ನಡ ಟೈಪ್ ಮಾಡುವವರು ಇರಲಿಲ್ಲ. ಅವರ ಸ್ನೇಹಿತರಾದ ವ್ಯಾಸರಾಯ ನಿಂಜೂರು, ಕೃಷ್ಣಕೋಲ್ಹಾರ ಕುಲಕರ್ಣಿ ಇಬ್ಬರು ಸೇರಿ ಹಸ್ತಪ್ರತಿಯನ್ನು ಬರೆದು ಕೊಡಲು ಸ್ವಇಚ್ಛೆಯಿಂದ ಒಪ್ಪಿಕೊಂಡು ಬರೆದುಕೊಟ್ಟರು. ಈ ಮಹಾಪ್ರಬಂಧದ ಹಸ್ತಪ್ರತಿಯನ್ನು ಪುಣೆ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದರು.

ಹಾ.ಮಾ.ನಾಯಕರು ಮತ್ತು ಮರಿಯಪ್ಪ ಭಟ್ಟರು ಮಹಾಪ್ರಬಂಧ ಪರೀಕ್ಷಕರಾಗಿದ್ದರು. ಹಾವನೂರ ಅವರು ಅಕಡೆಮಿಕ್ ಸಾಲಿನಲ್ಲಿ ಇಲ್ಲದವರು. ಮೌಖಿಕ ಪರೀಕ್ಷೆಯಲ್ಲಿ ಯಾವ ರೀತಿ ಪ್ರಶ್ನೆ ಕೇಳುತ್ತಾರೋ ಎಂಬ ಕಳವಳದಲ್ಲಿದ್ದವರು. ಆದರೆ ಆಶ್ಚರ್ಯ! ಇಬ್ಬರು ಪ್ರತ್ಯೇಕವಾಗಿ ಅವರ ಮೌಖಿಕ ಪರೀಕ್ಷೆಯ ಅಗತ್ಯವಿಲ್ಲ ಎಂದು ಅವರ ವರದಿಯಲ್ಲಿ ಬರೆದಿದ್ದರು. ಅದನ್ನು ನೋಡಿ ಅಶ್ಚರ್ಯಪಟ್ಟರು. ಹೀಗಾಗಿ ನಂತರದಲ್ಲಿ ಮಹಾಪ್ರಬಂಧವನ್ನು ಮೈಸೂರು ವಿಶ್ವವಿದ್ಯಾನಿಲಯದ ವತಿಯಿಂದ(೧೯೭೫) ಪ್ರಕಟಿಸಿದರು. ಈ ಕೃತಿ ಬಹುಮೌಲ್ಯವುಳ್ಳದ್ದು. ಮೂರು ಸಲ ಮರುಮುದ್ರಣಗೊಂಡಿರುವುದೇ ಅದರ ಮಹತ್ವವನ್ನು ಸಾರುತ್ತದೆ.

**ವೃತ್ತಿ ಜೀವನ**

ಈ ಮೊದಲೇ ಹೇಳಿರುವಂತೆ ಶ್ರೀನಿವಾಸ ಹಾವನೂರ ಅವರು ಬಿ.ಎ. ಎರಡನೆಯ ವರ್ಷದಲ್ಲಿ ಓದುವಾಗಲೇ ಶ್ರೀರಂಗರ ಸಹಾಯದಿಂದ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ಗ್ರಂಥಾಲಯದಲ್ಲಿ ಸಹಾಯ ಗ್ರಂಥಪಾಲಕರಾಗಿ ಸೇರಿಕೊಂಡರು. ಶ್ರೀರಂಗರು ಹಾವನೂರ ಅವರಿಗೆ "ಇಲ್ಲಿಯ ಲೈಬ್ರರಿ ನೋಡಿಕೊಳ್ಳಬೇಕು. ಆಫೀಸಿನ ಕೆಲಸವನ್ನು ಮಾಡಬೇಕು. ಲೆಕ್ಕ ಬರೆಯಲಿಕ್ಕೆ ಬರ್ತದೇನು? ಚಿಂತಿಲ್ಲ! ಇವರು ಕಮಾಲಾಪುರ ಅಂತ ಇವರು ಕಾರ್ಯದರ್ಶಿಗಳು ಅವರು ಹೇಳಿದ ಕೆಲಸ ಮಾಡಬೇಕು. ನೀನು ಕಾಲೇಜು ಮುಗಿಸಿ ಸಂಜೆಗೆ ಎರಡು ತಾಸು ಬಂದ್ರ ಸಾಕು. ಸಂಬಳ ಸದ್ಯಕ್ಕೆ ೨೫ ರೂ ಮುಂದೆ ನೋಡೋಣಂತೆ"[೧೨] ಎಂದು ಹೇಳಿದರು.

ಕಾರ್ಯದರ್ಶಿಗಳಾದ ಕಮಾಲಾಪುರ ಅವರು ಹಾವನೂರ ಅವರಿಗೆ "ನೀನು ಕಡಿದಷ್ಟು ತುರಿಸಿಕೊಳ್ಳುವವ ಕಾಣಸ್ತದ ಎಂದರು. ಆಗ ಅವರು ಸೀಟಿಗೆ ಹಿಂದಿರುಗುತ್ತ ಅದಕ್ಕಿಂತ ಜಾಸ್ತಿ ತುರುಸಿಕೊಂಡ್ರ ಹುಚ್ಚ ಅಂತಾರ ಎಂದು ವಟಗುಟ್ಟಿದರು. ಅವರಿಗೆ ಕೇಳಿಸದ ಹಾಗೆ ಹೇಳಿದರು. ಮತ್ತೊಮ್ಮೆ ಬೇರೊಂದು ಕಾರಣದಿಂದ ಅವರು ಬೈದಾಗ ಹಾವನೂರ ತಡೆಯದೇ ಅತ್ತರು. ಕಾಲೇಜಿಗೆ ಹೋದಾಗ ಶ್ರೀರಂಗರನ್ನು ಕಂಡು ತುಂಬ ಬೈತಾರೆ ಸರ್ ನೌಕರಿ ಬಿಡಿತೀನಿ ಪಗಾರವೂ ಕಡಿಮೆ"[೧೩] ಎಂದರು. ಹೀಗೆ ತಮ್ಮ ಮನದ ಆತಂಕವನ್ನು ತೋಡಿಕೊಂಡರು.

ಹಾವನೂರ ಅವರ ಮನಸ್ಸಿನ ಸ್ಥಿತಿ ತಿಳಿದ ಶ್ರೀರಂಗರೂ ಹೀಗೆ ಹೇಳಿದರು. ನೀನು ಕಮಾಲಾಪುರ ಮಾತಿನಿಂದ ತುಂಬಾ ಬೇಸರವಾಗಿದ್ದು ನನಗೆ ತಿಳಿಯಿತು. ನೀನು ಮೊದಲು ತಾಳ್ಮೆಯನ್ನು ಕಳೆದುಕೊಳ್ಳಬೇಡ ಎಂದು ಸಮಾಧಾನಪಡಿಸಲು ಪ್ರಯತ್ನಿಸಿದರು. “ಎ! ಅವರು ನಿನಗೆ ನಿಜವಾಗಿ ಬೈಯುವುದಿಲ್ಲ; ಮನೆಯಲ್ಲಿ ಬೈಸಿಕೊಂಡಿರುತ್ತಾರೆ. ಅದರೆ ನಿನ್ನ ಮ್ಯಾಲೆ Reaction ಮಾಡ್ಯಾರ ನಿನ್ನ ಸಂಬಳ ಹೆಚ್ಚು ಮಾಡೋದಕ್ಕೆ ಅರ್ಜಿ ಕೊಡು ಎಂದರು. ಹಾಗೆ ಅರ್ಜಿ ಕೊಟ್ಟು ಹಾವನೂರ ಅವರು ತಮ್ಮ ಊರಿಗೆ ಹೋಗಿದ್ದರು. ನನ್ನ ಕೆಲಸ ಕಾರ್ಯದರ್ಶಿಗಳ ಮನಸ್ಸಿಗೆ ಬಂದಿಲ್ಲವಾದ್ದರಿಂದ ಪ್ರಯೋಜನ ಆಗದೆಂದು ತಿಳಿದಿದ್ದರು. ಊರಿನಿಂದ ಮರಳಿದ ಮೇಲೆ ಆಫೀಸಿಗೆ ಹೋದರು. ಶ್ರೀರಂಗರು ಒಬ್ಬರೇ ಇದ್ದರು ತುಸು ತಡವಾದ ಮೇಲೆ ಕರೆದರು. ಅಲ್ಲೋ ಅವತ್ತೆ ನೀ ಲೆಕ್ಕ ತಪ್ಪಿದಕ್ಕೆ ಡಾಕ್ಟರ್ ಬೈದರಲ್ಲ ಆವಾಗ ನೀನು ಏನು ಉತ್ತರ ಕೊಟ್ಟೆ? ಏನು ಇಲ್ಲ ಸಾರ್ ಅಂದೆ, ಕಾರ್ಯಕಾರಿ ಸಮಿತಿಯ ಸಭೆಯಲ್ಲಿ ಕಮಾಲಾಪುರ ನೀ ಅಂದದ್ದನ್ನು ಹೇಳಿ ಹುಡುಗ ಶ್ಯಾಣ್ಯಾ ಇದ್ದಾನೆ. ಗ್ರಂಥಾಲಯ ಕೆಲಸ ಛಲೋ ನೋಡಿಕೊಂತಾನ ಅಂತ ಹೇಳಿದರಂತೆ. ಪಗಾರವನ್ನು ೪೦ ರೂ. ಏರಿಸಲು ಅವರೇ ಶಿಫಾರಸ್ಸು ಮಾಡಿದರಂತೆ ಎಂದರು”. ಈ ಮಾತನ್ನು ಗಮನಿಸಿ ಹಾವನೂರ ತಮ್ಮ ಕೆಲಸವನ್ನು ಮುಂದುವರಿದರು.

ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಯಥಾ ಪ್ರಕಾರ ವಶೀಲಿ, ಪಕ್ಷಪಾತ, ಚಿಲ್ಲರೆ ರಾಜಕಾರಣ ಇದ್ದವು. ಹಾವನೂರ ಅವರು ಯೋಗ್ಯತೆಯ ಆಧಾರದ ಮೇಲೆ ಪ್ರಧಾನ ಗ್ರಂಥಪಾಲಕರಾಗಬಹುದಿತ್ತು. ಆದರೆ ಒಡೆಯರು ಮೇಲಾಧಿಕಾರಿಗಳ ಒಲುಮೆ ಇನ್ನೊಬ್ಬ ಅಭ್ಯರ್ಥಿಗಳ ಮೇಲೆ ಇತ್ತೆಂದು ಸೂಚ್ಯವಾಗಿ ಹೇಳಿದರು. ಪರಿಸ್ಥಿತಿ ಹೀಗಿರುವಾಗ ಅಲ್ಲಿ ಮುಂದುವರೆದರೆ ಬದುಕಿಗೆ ದಾರಿ ಕಂಡುಕೊಳ್ಳುವುದು ಸಾಧ್ಯವಿರಲಿಲ್ಲವೆಂದು ಪರ್ಯಾಯ ದಾರಿ ಹುಡುಕಲು ಪ್ರಯತ್ನಿಸಿದರು. ಒಂದು ರೀತಿಯಿಂದ ಅದೇ ಅವರಿಗೆ ಸುವರ್ಣಾವಕಾಶವಾಯಿತು. ಮುಂಬಯಿಯಲ್ಲಿ ಅವರ ಮಾನಸಿಕ ಮತ್ತು ಬೌದ್ಧಿಕ ದೃಷ್ಟಿ ಕೋನಗಳೆರಡು ವ್ಯಾಪಕವಾಗಿ ಬೆಳೆದವು.

ಈ ಸಂದರ್ಭಕ್ಕೆ ಬಿ.ಎ. ಪದವಿ ಮುಗಿದ ಮೇಲೆ ಮುಂದೆ ಏನು? ಎನ್ನುವ ಪ್ರಶ್ನೆ ಅವರಲ್ಲಿ ಕಾಡಿತು. ಆ ಕಾಲಕ್ಕೆ ಬಿ.ಎ. ಪದವಿ ಪಡೆದವರು ಅಧ್ಯಾಪಕರಾಗಬಹುದಿತ್ತು. ಕನ್ನಡ ಪ್ರಾಧ್ಯಾಪಕರಾಗಿ ಹಳೆನೋಟ್ಸ್ ಬಳಸಿಕೊಂಡು ಹೇಳಬಹುದು. ಇದರಿಂದ ಏನು ಪ್ರಯೋಜನ? ವೃತ್ತಿ ಪರವಾಗಿ ಏನಾದರೊಂದು ಹೊಸದನ್ನು ಕೊಡಬೇಕು ಎನ್ನುವುದು ಅವರ ಹಂಬಲವಾಗಿತ್ತು. ಕರ್ನಾಟಕ ವಿಶ್ವವಿದ್ಯಾಲಯ ಮತ್ತು ವಿಲ್ಲಿಂಗ್ಟನ್ ಕಾಲೇಜು ಗ್ರಂಥಾಲಯ ನೋಡಿದ ಅನುಭವ ಅವರನ್ನು ಹೊಸ ದಾರಿಯ ಕಡೆಗೆ ನಡೆಸಿತು. ಈ ಕ್ಷೇತ್ರದಲ್ಲಿ ಪರಿಣಿತಿ ಪಡೆದು, ಖ್ಯಾತಿ ಹೊಂದಿದ್ದ ರಂಗನಾಥರಂತೆಯೇ ವೃತ್ತಿಗೆ ಮತ್ತು ಸಮಾಜಕ್ಕೆ ಹೊಸದನ್ನು ಕೊಡಲು ಸಾಧ್ಯ ಎಂದು ನಂಬಿದ್ದರು. ಆದರೆ ಈ ನಂಬಿಕೆ

ಅವರಲ್ಲಿ ಬಹಳ ದಿವಸ ಇರಲಿಲ್ಲ. ಏಕೆಂದರೆ ಒಂದು ದಿವಸ ರಂಗನಾಥ ಬಳಿಗೆ ಹೋಗಲು ನಿರ್ಧರಿಸಿದರು. ಇದಕ್ಕಿಂತ ಪೂರ್ವದಲ್ಲಿ ರಂ.ಶ್ರೀ ಮುಗಳಿಯವರಂತೆ ಎಲ್ಲರೂ ಸಹಾಯ ಮಾಡುತ್ತಾರೆ ಅಂತ ತಿಳಿದಿದ್ದರು. ದೆಹಲಿಯಲ್ಲಿರುವ ರಂಗನಾಥರ ಬಳಿಗೆ ಹೋಗಿ ಅವರಲ್ಲಿ ವಿಷಯವನ್ನು ಹೇಳಿಕೊಂಡರು. ಆದರೆ ಅವರು ಹಾವನೂರರಿಗೆ ಸ್ಪಂದಿಸಲಿಲ್ಲ. ಆಗ ಅವರಲ್ಲಿ ಗ್ರಂಥಾಲಯ ಕ್ಷೇತ್ರದ ಬಗ್ಗೆ ಆಸಕ್ತಿ ಇಲ್ಲವಾಗಿದ್ದು ಅರಿತು ಮುಂಬಯಿಗೆ ಮರಳಿ ಬಂದರು.

**ಇತರೆ ಸಂಸ್ಥೆಗಳಲ್ಲಿ ಸೇವೆ**

ಹಾವನೂರ ಅವರು ಕನ್ನಡ ಶಾಲೆಯ ಶಿಕ್ಷಕರಾಗಿ, ರಾತ್ರಿ ಶಾಲೆಯ ಶಿಕ್ಷಕರಾಗಿ ಮುಂಬಯಿಯಲ್ಲಿ ಆಕಾಶವಾಣಿ ಕಾರ್ಯಕ್ರಮದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಸೇಲ್ಸ್ ಟ್ಯಾಕ್ಸ್ ಇನ್ಸ್‌ಪೆಕ್ಟರ್‌ರಾಗಿ, ಫ್ರೀ ಪ್ರೆಸ್‌ನ ಕನ್ನಡ ಪತ್ರಿಕೋದ್ಯಮದಲ್ಲಿ, ಕೇಂದ್ರ ಸರ್ಕಾರದ ಮುಂಬಯಿ ಶಾಲೆಯಲ್ಲಿ ಜೂನಿಯರ್ ಆಡಿಟರ್‌ರಾಗಿ ಹಾಗೆಯೇ ಗ್ರಂಥಾಲಯದಲ್ಲಿ ಸಹಾಯಕ ಗ್ರಂಥಪಾಲಕ ಮತ್ತು ಪ್ರಧಾನ ಗ್ರಂಥಪಾಲಕರಾಗಿ ಕಾರ್ಯನಿರ್ವಹಿಸಿದರು.

ಮುಂಬಯಿಯ ಎಸ್.ಕೆ.ಇ.ಎಸ್. ಹೈಸ್ಕೂಲ್‌ನಲ್ಲಿ ಕನ್ನಡ ಶಿಕ್ಷಕರ ಹುದ್ದೆಯು ಖಾಲಿ ಇತ್ತು. ಬಿ.ಎ. ಪ್ರಥಮ ಶ್ರೇಣಿಯಲ್ಲಿ ಪಾಸಾಗಿದ್ದೆ ಅನ್ನುವುದಕ್ಕಿಂತ ಮಾಹೂಲಿ ಗೋಪಾಲಾಚಾರ್ಯರ ಶಿಫಾರಸ್ಸು ಅವರಿಗೆ ಅವಕಾಶ ಕಲ್ಪಿಸಿಕೊಟ್ಟಿತು. ಶಾಲಾ ಆಡಳಿತ ಮಂಡಳಿಯವರು ಅವರನ್ನು ಗೌರವಿಸುತ್ತಿದ್ದರು ಎನ್ನುವ ಕಾರಣಕ್ಕೆ ಅಲ್ಲಿ ಒಂದು ವರ್ಷ ಆರು ತಿಂಗಳ ಕಾಲ ಕೆಲಸ ಮಾಡಿದರು. ಉಳಿದ ಶಿಕ್ಷಕರಿಗಿಂತ ಪಠ್ಯ ಮತ್ತು ಪಠ್ಯೇತರ ಚಟುವಟಿಕೆಗಳಲ್ಲಿ ಹೆಚ್ಚು ತೊಡಗಿದ್ದರಿಂದ ವಿದ್ಯಾರ್ಥಿಗಳ ಮೆಚ್ಚಿನ ಶಿಕ್ಷಕರಾಗಿದ್ದರು.

ಮುಂಬಯಿ ಹೋದಾಗಿನಿಂದ ಹಿಡಿದು ಐದಾರು ವರ್ಷ ಅಲ್ಪಾವಧಿಯ ನೌಕರಿ ಮಾಡುವ ಪರಿಸ್ಥಿತಿ ಅವರಿಗೆ ಬಂದೊದಗಿತು. ೧೯೬೧ರ ಅವಧಿಯಲ್ಲಿ ಕೆಲಸ ಇಲ್ಲದ ಪರಿಸ್ಥಿತಿಯೂ ಇದ್ದಿತು. ಆ ಸಮಯದಲ್ಲಿ ಶಾಲೆಯಲ್ಲಿ ಅಲ್ಲದೆ ಮುಂಬಯಿ ರಾತ್ರಿ ಶಾಲೆಯೊಂದರಲ್ಲಿ ಶಿಕ್ಷಕರಾಗಿ ಕೆಲಸ ಮಾಡಿದರು. ಆ ಕಾಲಕ್ಕೆ ರಾತ್ರಿ ಶಾಲೆಯಲ್ಲಿ ಪಾಠ ಹೇಳುವವರಿಗೆ ಸಂಬಳವಿರುತ್ತಿರಲಿಲ್ಲ. ಆದರೆ ಕಷ್ಟದಲ್ಲಿ ಇರುವ ಶಿಕ್ಷಕರಿಗೆ ಗೌರವಧನ ಕೊಡುತ್ತಿದ್ದರು. ಆಗ ಬಾಂಬೆ ಪೋರ್ಟ್ ಫೀನೈಟ್ ಹೈಸ್ಕೂಲ್‌ನಲ್ಲಿ ಉಚಿತವಾಗಿ ಕನ್ನಡ ಪಾಠ ಹೇಳುತ್ತಿದ್ದ ಉಚ್ಚಿಲರು ನನಗೆ ಕೆಲಸವಿದೆ. ಅದಕ್ಕಾಗಿ ನನ್ನ ಬದಲಾಗಿ ಬಿ.ಎ. ಪ್ರಥಮ ದರ್ಜೆಯಲ್ಲಿ ಉತ್ತೀರ್ಣನಾಗಿದ್ದ ಹಾವನೂರರಿಗೆ ಅವಕಾಶ ಮಾಡಿಕೊಡಬೇಕೆಂದು ಶಾಲಾ ಮಂಡಳಿಯವರಲ್ಲಿ ವಿನಂತಿಸಿಕೊಂಡರು. ಉಚ್ಚಿಲರು ಅವರಿಗೆ ಪರೋಕ್ಷವಾಗಿ ಸಹಾಯ ಮಾಡುತ್ತಿದ್ದರು. ನೂರು ರೂಪಾಯಿ ಸಂಬಳ ಕೊಡುವಂತೆ ವಿನಂತಿಸಿಕೊಂಡರು.

ಮುಂಬಯಿ ಆಕಾಶವಾಣಿಯಲ್ಲಿ ಹಳ್ಳಿಗರಿಗಾಗಿ ಕನ್ನಡ ಕಾರ್ಯಕ್ರಮ ನಡೆಸುತ್ತಿದ್ದರು. ಈ ಕಾರ್ಯಕ್ರಮ ಅರ್ಧಗಂಟೆ ಮಾತ್ರ; ಎನ್.ಕೆ. ಕುಲಕರ್ಣಿ ಮತ್ತು ಎನ್.ಆರ್.

ಕುಲಕರ್ಣಿಯವರು ಕಾರ್ಯನಿರ್ವಾಹಕರಾಗಿ ಈ ಕಾರ್ಯಕ್ರಮವನ್ನು ನಡೆಸುತ್ತಿದ್ದರು. ಉತ್ತರ ಕರ್ನಾಟಕದ ಹಳ್ಳಿಗರ ಆಡುನುಡಿ ಗೊತ್ತಿದ್ದವರೇ ಈ ಕಾರ್ಯಕ್ರಮಕ್ಕೆ ಬೇಕಾಗಿತ್ತು. ಹೀಗಾಗಿ ಹಾವನೂರ ಮತ್ತು ಶಾಕುಂತಲ(ಭಾರತೀ ಹಾವನೂರ) ಸೂಕ್ತರು ಎಂದು ಪರಿಗಣಿಸಿ ಆಯ್ಕೆ ಮಾಡಿದರು. ಗಂಡ ಹೆಂಡತಿಯಾಗಿ ಕಾರ್ಯಕ್ರಮದಲ್ಲಿ ಆಗಾಗ ಭಾಗವಹಿಸುತ್ತಿದ್ದರು. 'ನೀವು ಒಳ್ಳೆಯ ಜೋಡಿ' ಎಂಬರ್ಥದಲ್ಲಿ ಎನ್ಕೆ ಅವರು ಅವರಿವರೆದುರಿಗೆ ಹೇಳಿದ್ದನ್ನು (ಭಾರತೀ) ತವರೂರಿನವರು ತಪ್ಪಾಗಿ ಅರ್ಥ ಮಾಡಿಕೊಂಡಿದ್ದರು. ಅವರ ತಂದೆ-ತಾಯಿ ತೀರಿಹೋಗಿದ್ದರಿಂದ ಅವರ ಜವಾಬ್ದಾರಿ ಸೋದರಮಾವನವರೇ ನೋಡಿಕೊಳ್ಳಬೇಕಾಗಿತ್ತು. ೧೯೪೧ರಲ್ಲಿ ಮದುವೆ ಗೊತ್ತಾದಾಗ ಇವರು ಮೆಟ್ರಿಕ್ ಮುಗಿಸಿರಲಿಲ್ಲ. ಅವರ ನೌಕರಿಯೂ ಇರಲಿಲ್ಲ.

ಸೇಲ್ಸ್‌ಟ್ಯಾಕ್ಸ್ ಇನ್ಸ್‌ಪೆಕ್ಟರ್‌ರಾಗಿ ಮುಂಬಯಿಯಲ್ಲಿ ನೇಮಕವಾಗಿ ಅಲ್ಲೇ ಕೆಲಸ ಮಾಡುತ್ತಿದ್ದರು. ಆದರೆ ಅವರ ಕುಟುಂಬದವರು ಹುಬ್ಬಳ್ಳಿಯಲ್ಲಿ ಇದ್ದರು. ಆದ್ದರಿಂದ ಹುಬ್ಬಳ್ಳಿಗೆ ವರ್ಗ ಮಾಡಿಕೊಳ್ಳುವುದಕ್ಕೆ ಆಫೀಸಿನ ಮುಖ್ಯಸ್ಥರಿಗೆ ಲಂಚ ನೀಡಬೇಕಾಗಿತ್ತು. ಲಂಚ ನೀಡಲು ಅವರ ಹತ್ತಿರ ಹಣವಿರಲಿಲ್ಲ. ಆದರೆ ಬೇರೊಂದು ರೀತಿಯಿಂದ ಅವರಿಗೆ ನೇರವಾದರು. ಅಂದರೆ ಆಫೀಸಿನ ಮುಖ್ಯಸ್ಥರು ಮಹತ್ವದ ವರದಿ ಬರೆಯಬೇಕಾಗಿತ್ತು. ಹಾವನೂರ ಅವರು ಲೇಖಕನೆಂಬುದು ಅವರಿಗೆ ಗೊತ್ತಿತ್ತು. ಆ ವರದಿಯನ್ನು ಬರೆದುಕೊಟ್ಟಿದ್ದರಿಂದ ಹುಬ್ಬಳ್ಳಿ ವರ್ಗಾವಣೆಯ ಪಟ್ಟಿಯಲ್ಲಿ ಹಾವನೂರ ಹೆಸರಿತ್ತು. ಹೀಗಾಗಿ ಹುಬ್ಬಳ್ಳಿಯಲ್ಲಿ ಐದು ವರ್ಷ ನೌಕರಿ ಮಾಡಿದರು (೧೯೫೧-೫೬). ಅದೇ ಅವಧಿಯಲ್ಲಿ 'ಲಂಚಗುಳಿ' ಪ್ರಬಂಧ ಬರೆದರು.

ನನ್ನಷ್ಟು ನೌಕರಿ ಬದಲಿ ಮಾಡಿದವರಿಲ್ಲ ಎಂಬುದನ್ನು ಸ್ವತಃ ಹಾವನೂರ ಅವರೇ ಹೇಳುತ್ತಾರೆ. ಹಗಲು ಮತ್ತು ರಾತ್ರಿ ಶಾಲೆಯ ಮಾಸ್ತರಿಕೆ, ಆಕಾಶವಾಣಿ ಕಾರ್ಯಕ್ರಮ, ಫೀ-ಪ್ರೆಸ್‌ನಲ್ಲಿ, ಕನ್ನಡ ಪತ್ರಿಕೋದ್ಯಮ. ಕೇಂದ್ರ ಸರ್ಕಾರದ ಮುಂಬಯಿ ಶಾಲೆಯಲ್ಲಿ ಜೂನಿಯರ್ ಆಡಿಟರ್‌ರಾಗಿ ಕಾರ್ಯನಿರ್ವಹಿಸಿದರು. ಹೀಗೆ ಅಂದರೆ ೧೯೪೪-೬೧ರ ಅವಧಿಯಲ್ಲಿ ವಿವಿಧ ಹುದ್ದೆಗಳನ್ನು ನಿರ್ವಹಿಸಿದ್ದರು ಎನ್ನುವುದು ಅವರು ಅನುಭವಿಸಿದ ಜೀವನದ ಅತಂತ್ರ ಬದುಕಿನ ಸ್ಥಿತಿಗತಿಯನ್ನು ಪ್ರತಿನಿಧಿಸುತ್ತದೆ.

ಮಾರ್ಶಲ್ ಅವರೇ ಟಾಟಾ ಇನ್ಸ್‌ಟಿಟ್ಯೂಟ್ ಆಫ್ ಫಂಡಮೆಂಟಲ್ ರಿಸರ್ಚ್ ಸಂಸ್ಥೆಯಲ್ಲಿ ಸಹಾಯಕ ಗ್ರಂಥಪಾಲಕರ ಹುದ್ದೆ ಖಾಲಿ ಇದೆ ಎಂದು ತಿಳಿಸಿದರು. ಅಲ್ಲದೆ ಟಾಟಾ ಇನ್ಸ್‌ಟ್ಯೂಟ್ ಆಫ್ ಫಂಡಮೆಂಡಲ್ ರಿಸರ್ಚ್ ಸಂಸ್ಥೆಯು ಅಪ್ಪಟ ವಿಜ್ಞಾನ ಕ್ಷೇತ್ರಕ್ಕೆ ಸಂಬಂಧಿಸಿದ್ದು. ಇಲ್ಲಿ ಹುದ್ದೆ ಸಿಗುವುದು ತುಂಬ ಕಷ್ಟ; ಆದರೆ ರೈಲ್ವೆ ಪ್ರಯಾಣದ ಭತ್ಯೆ ಕೊಡುವುದರಿಂದ ಹೋಗುವುದು ಒಳ್ಳೆಯದೆಂದು ಹೇಳಿ, ಅರ್ಜಿಯನ್ನು ಸಲ್ಲಿಸಿದ್ದರು. ಆ ಕಾಲಕ್ಕೆ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಸದಾಶಿವ ಒಡೆಯರ ಅವರು

ಕುಲಸಚಿವರಾಗಿದ್ದರು. ಅವರಿಗೆ ಅರ್ಜಿ ಹಾಕಿದ ವಿಷಯ ತಿಳಿಸಿದರು. ಲೈಬ್ರರಿಗೆ ಆ ಭಾಗದ ಜನರು ಬರಲಿ ಬಿಡು ಎಂದು ಕುಲಸಚಿವರು ಹೇಳಿದರು.

ಟಾಟಾ ಸಂಸ್ಥೆಯು ಲೈಬ್ರರಿಯ ಪರಿಸರ ಮತ್ತು ಆಧುನಿಕತೆಯ ಜೊತೆಗೆ ಅಚ್ಚುಕಟ್ಟುತನಕ್ಕೆ ಹೆಸರುವಾಸಿಯಾಗಿತ್ತು. ಅದನ್ನು ವಿಕ್ಷೀಸಿದ ಹಾವನೂರ ತಾವು ಇಲ್ಲಿಗೆ ಬರುವ ಪೂರ್ವದಲ್ಲಿ ವಿಜ್ಞಾನಕ್ಕೆ ಸಂಬಂಧಿಸಿದ ವಿಷಯ ಅಧ್ಯಯನ ಮಾಡಿದರೆ ಬಹಳ ಚೆನ್ನಾಗಿರುತ್ತಿತ್ತು ಅಂದುಕೊಂಡರು. ಧಾರವಾಡದ ಜೋಶಿಯವರು ಆಕಸ್ಮಿಕವಾಗಿ ಲೈಬ್ರರಿಯಲ್ಲಿ ಭೇಟಿಯಾದರು. ಇಬ್ಬರು ಕ್ಯಾಂಟಿನ್‌ನಲ್ಲಿ ಕುಳಿತು ಬೇರೆ ಬೇರೆ ವಿಷಯ ಚರ್ಚಿಸಿದರು. ನಂತರ ಕೆಲವು ಸಲಹೆ ಕೊಟ್ಟರು. "ಸಂದರ್ಶನದಲ್ಲಿ ಎರಡೇ ಎರಡು ವಿಷಯಗಳಿಗೆ ಗಮನಕೊಡುತ್ತಾರೆ. ಈ ಹಿಂದೆ ನೀವೇನಾದರೂ ಒಳ್ಳೆಯ ಉಪಯುಕ್ತ ಕೆಲಸ ಮಾಡಿದರೆ ನೀವು ಗ್ರಂಥಾಲಯದಲ್ಲಿ ಯಾವ ರೀತಿ ಉಪಯೋಗಕ್ಕೆ ಬೀಳುವಿರಿ ಎಂಬುದನ್ನು ತಿಳಿದುಕೊಳ್ಳುತ್ತಾರೆ."[೧೫] ತಮ್ಮದೇಯಾದ ಗ್ರಂಥಾಲಯದ ಕೆಲವು ಅನುಭವಗಳನ್ನು ಹಂಚಿಕೊಂಡರು. ನಮ್ಮ ಗ್ರಂಥಪಾಲಕರಾದ ದೇಶಪಾಂಡೆಯವರ ಈ ಯುನಿಟ್ ಕಾರ್ಡಿನ ವಿಚಾರವನ್ನು ಹೇಳಿದ್ದರು. ಅದನ್ನು ನಾನು ಅನುಷ್ಠಾನಕ್ಕೆ ತಂದಿದ್ದೆ ಎಂದು ಹೇಳಿದರು. ಇನ್ನು ಹಲವು ಪ್ರಶ್ನೆಗಳಿಗೆ ಗೊತ್ತಿಲ್ಲವೆಂದು ನೇರವಾಗಿ ಹೇಳಿದರು. ಈ ನೇರವಾದ ಉತ್ತರಗಳಿಂದ ನನ್ನ ನೇಮಕವಾಯಿತೆಂದು ಮನವರಿಕೆ ಮಾಡಿಕೊಂಡರು.

**ಗ್ರಂಥಪಾಲಕ ಹಾವನೂರ**

ಹಾವನೂರ ಸಹಾಯಕ ಗ್ರಂಥಪಾಲಕರಾಗಿ ನೇಮಕಗೊಂಡರು. ಅಲ್ಲಿ ಎಂಟು ವರ್ಷಗಳ ಕಾಲ ಕಾರ್ಯನಿರ್ವಹಿಸಿದರು. ಈ ಸಂದರ್ಭದಲ್ಲಿ ಎಂ.ಎ. ಮುಗಿಸಿ ಪಿಎಚ್.ಡಿ ಸಂಶೋಧನೆಯಲ್ಲಿ ತೊಡಗಿದ್ದರಿಂದ ಅಲ್ಲಿ ವಿದ್ಯಾರ್ಥಿಗಳ ಮನಸ್ಥಿತಿಯನ್ನು ಅರಿಯಲು ಸುಲಭವಾಯಿತು. ಗ್ರಂಥಾಲಯದ ಮುಖ್ಯಸ್ಥರಾಗಿದ್ದ ವಜೀಪ್‌ದಾರ ೧೯೬೯ರಲ್ಲಿ ಆಕಸ್ಮಿಕವಾಗಿ ಹೃದಯಾಘಾತದಿಂದ ನಿಧನ ಹೊಂದಿದರು. ಆಗ ಹಾವನೂರರನ್ನು ಗ್ರಂಥಪಾಲಕರೆಂದು ನೇಮಕ ಮಾಡಲಾಯಿತು.

ಹಾವನೂರ ನೇಮಕದ ಸಂಗತಿ ತಿಳಿದ ಮೆನನ್ ಕೋಪಗೊಂಡು ಗ್ರಂಥಾಲಯದ ಆರಂಭದಿಂದ ಹೆಡ್‌ಕ್ಲಾರ್ಕ್ ಆಗಿ ಕಾರ್ಯನಿರ್ವಹಿಸಿದ್ದು, ೨೫ ವರ್ಷ ಸೇವಾ ಜೇಷ್ಠತೆ ಇದ್ದರೂ ನನಗೆ ಮುಂಬಡ್ತಿಯನ್ನು ಯಾವ ಕಾರಣಕ್ಕೆ ಕೊಡಲಿಲ್ಲವೆಂದು ಸಂಸ್ಥೆಯ ನಿರ್ದೇಶಕರ ಬಳಿ ತಮ್ಮ ಆತಂಕ ಹೇಳಿಕೊಂಡರು. ಈ ಮಾತಿಗೆ ಪ್ರತಿಯಾಗಿ ನಿರ್ದೇಶಕರು ಈ ರೀತಿ ಹೇಳಿದರು. "ನಿಮಗಿಂತಲೂ ಎರಡು ವರ್ಷ ಹೆಚ್ಚಿಗೆ ಸೇವೆ ಮಾಡಿರುವವರಿದ್ದಾರೆ. ನಿಮ್ಮ ಸೇವಾ ಅವಧಿಯನ್ನು ಪರಿಗಣಿಸಿ ಮುಂಬಡ್ತಿ ನೀಡಿದರೆ ಅವರು ಸಹ ನಿಮ್ಮ ರೀತಿಯಲ್ಲಿ ಪ್ರಶ್ನೆ ಮಾಡುತ್ತಾರೆ. ಆಗ ಅವರಿಗೂ ಕೂಡ ಗ್ರಂಥಪಾಲಕ ಹುದ್ದೆಗೆ ನೇಮಕ

ಮಾಡಬಹುದಾ ಎಂದು ಪ್ರಶ್ನಿಸಿದರು. ಈ ಎಲ್ಲಾ ಕಾರಣದಿಂದ ನಿಮ್ಮ ಅವಧಿಯನ್ನು ಪರಿಗಣಿಸದೆ ಶ್ರೀನಿವಾಸ ಹಾವನೂರರಿಗೆ ಮುಂಬಡ್ತಿ ಕೊಡಲಾಗಿದೆ"[೧೬] ಎಂದರು.

ಹಾವನೂರರಿಗೆ ಮುಂಬಡ್ತಿ ಕೊಟ್ಟಾಗ ಮೆನನ್ ಅಸಹಕಾರದಿಂದ ವರ್ತಿಸಿದರು. ಆದರೆ ಸಂಸ್ಥೆಯಲ್ಲಿ ೨೫ ವರ್ಷ ಸೇವೆಯಲ್ಲಿದ್ದವರಿಗೆ ವಾರ್ಷಿಕ ಸಮಾರಂಭದಲ್ಲಿ ಹೆಚ್ಚುವರಿ ಸಂಬಳ ಪ್ರಶಸ್ತಿ ಕೊಡಬೇಕೆಂದರೆ ವಿಭಾಗದ ಮುಖ್ಯಸ್ಥರಿಂದ ಗೌಪ್ಯ ಶಿಫಾರಸ್ಸು ಮಾಡಬೇಕು ಅಂಥವರಿಗೆ ಹೆಚ್ಚುವರಿ ಸಂಬಳ ಮತ್ತು ಪ್ರಶಸ್ತಿ ಸಿಗುತ್ತದೆ. ಆದರೆ ಮೆನನ್‌ರವರು ಹಾವನೂರರಿಗೆ ಹಿಂದೆ ವಿರೋಧಿಸಿದ್ದರು. ಇದನ್ನು ಗಮನಿಸಿ ನನಗೆ ಗೌಪ್ಯ ಶಿಫಾರಸ್ಸು ಮಾಡುವುದಿಲ್ಲವೆಂದು ತಿಳಿದಿದ್ದರು. ವಾರ್ಷಿಕ ಸಮಾರಂಭದಲ್ಲಿ ಹೆಚ್ಚುವರಿ ಸಂಬಳ ಪ್ರಶಸ್ತಿ ಸಿಕ್ಕ ಹಿನ್ನೆಲೆಯಲ್ಲಿ ಹಾವನೂರ ಬಗ್ಗೆ ಇದ್ದ ವಿರೋಧವನ್ನು ಕಟ್ಟಿಕೊಂಡಿದಕ್ಕಾಗಿ ಹಾವನೂರನ್ನು ಕಂಡು ಮೆನನ್ ನೊಂದುಕೊಂಡರು.

ವಜೀಪದಾರರು ತೀರಿಕೊಂಡ ಸಂದರ್ಭದಲ್ಲಿ ಲೈಬ್ರರಿಯ ಜೆ.ಎಂ. ಕುಲಕರ್ಣಿಯವರು ಕಂಪ್ಯೂಟರಿನ ಹೆಚ್ಚಿನ ಅಧ್ಯಯನಕ್ಕಾಗಿ ಅಮೇರಿಕಾಕ್ಕೆ ತೆರಳಿದ್ದರು. ಅವರು ಎರಡು ವರ್ಷದ ಬಳಿಕ ಮರಳಿ ಭಾರತಕ್ಕೆ ಬಂದರು. ಗ್ರಂಥಾಲಯದ ಗ್ರಂಥಪಾಲಕರ ಹುದ್ದೆ ಪಡೆದು ನಂತರ ಕಂಪ್ಯೂಟರ್ ವಿಭಾಗಕ್ಕೆ ವರ್ಗವಾಗಬೇಕು ಎನ್ನುವ ಯೋಜನೆ ಅವರದಾಗಿತ್ತು. ಆ ಸಂದರ್ಭದಲ್ಲಿ ಗ್ರಂಥಪಾಲಕರಾಗಿ ಹಾವನೂರ ಕಾರ್ಯ ನಿರ್ವಹಿಸುತ್ತಿದ್ದರು. ಆದರೆ ಆ ಹುದ್ದೆಯನ್ನು ಬಿಟ್ಟುಕೊಡಲು ಹಾವನೂರ ತಯಾರಿದ್ದರು. ಆದರೆ ಪಿಎಚ್.ಡಿ. ಪ್ರಗತಿ ಇಲ್ಲದ ಕಾರಣ ಆ ಹುದ್ದೆಗೆ ಅನರ್ಹರಾದರು. ಈ ಹಿನ್ನೆಲೆಯಲ್ಲಿ ಹಾವನೂರ ಅವರು ಗ್ರಂಥಪಾಲಕರಾಗಿಯೇ ಮುಂದುವರಿದರು. ಪ್ರಾಮಾಣಿಕತೆ ಅನ್ನುವುದು ಎಲ್ಲಾ ಕಾಲಕ್ಕೂ ಕಾಯ್ದುಕೊಳ್ಳುತ್ತದೆ ಎನ್ನುವ ಮಾತು ನಿಜವಾಯಿತು.

ಹಾವನೂರ ಗ್ರಂಥಪಾಲಕರಾದ ನಂತರದಲ್ಲಿ ಟಾಟಾ ಇನ್ಸ್‌ಟ್ಯೂಟ್ ಆಫ್ ಫಂಡಮೆಂಟಲ್ ರಿಸರ್ಚ್ ಸಂಸ್ಥೆಯ ಗ್ರಂಥಾಲಯವನ್ನು ಬಹಳ ಮಟ್ಟಿಗೆ ಸುಧಾರಣೆ ಮಾಡಿದರು. ಈ ಗ್ರಂಥಾಲಯಕ್ಕೆ ವಿಜ್ಞಾನಿಗಳು ಬರುವುದು ಸಾಮಾನ್ಯವಾಗಿತ್ತು. ಒಮ್ಮೆ ಆಕ್ಸ್‌ಫರ್ಡ್‌ದಿಂದ ಒಬ್ಬ ವಿದ್ವಾಂಸರು ಬಂದಿದ್ದರು. ಅವರನ್ನು ಕ್ಯಾಂಟಿನ್ನಿನಲ್ಲೇ ಪರಿಚಯಿಸಿಕೊಂಡ ಹಾವನೂರ ಗ್ರಂಥಾಲಯದ ಸುಧಾರಣೆಯ ಪ್ರಸ್ತಾಪವನ್ನು ಅವರ ಮುಂದೆ ವಿವರಿಸಿದರು. ಆಗ "Look hero I am not Interested, in those things, Whenever I go to the Library I should get what I want and without delay ಎಂದು ತಿಳಿಸಿದರು. ಆ ಮಾತು ನಿಜಕ್ಕೂ ಹಾವನೂರ ಕಣ್ಣು ತೆರೆಸಿತು. ಇನ್ನೊಂದು ಅಂಶವನ್ನು ಗಮನಿಸಬೇಕಾಗಿ ಬಂತು. ಅದೇನೆಂದರೆ What They want should be made abailable without delay"[೧೭] ನಮ್ಮ ಲೈಬ್ರರಿಯ ಸೂತ್ರವೇ ಆಗಿತ್ತು.

ಗ್ರಂಥಾಲಯದ ಓದುಗರನ್ನು ದೃಷ್ಟಿಯಾಗಿಟ್ಟುಕೊಂಡು ಹಲವಾರು ಅನುಕೂಲ ಕಲ್ಪಿಸಿಕೊಟ್ಟರು. ಲಂಡನ್ನಿನಿಂದ ಹೊರಡುವ 'Times' ದಿನ ಪತ್ರಿಕೆಯನ್ನು ಏರ್‌ಮೇಲ್ ಮೂಲಕ ತರಿಸುತ್ತಿದ್ದರು. ಅದರಲ್ಲಿ ಪ್ರತಿನಿತ್ಯ ಹೊಸ ವಿಜ್ಞಾನದ ಆವಿಷ್ಕಾರ ಕುರಿತು ಟಿಪ್ಪಣಿ ಇರುತ್ತಿದ್ದವು. ೩೬ ಪುಟಗಳ ಆ ಟಿಪ್ಪಣಿಗಳಲ್ಲಿ ವಿಜ್ಞಾನ ವಿಷಯವು ಅಗತ್ಯವಿಲ್ಲದಿದ್ದರೂ ಆ ಸಮಯ ವ್ಯರ್ಥವಾಗಬಾರದೆಂದು ಕೆಲವು ಮಾರ್ಪಡುಗಳನ್ನು ಮಾಡಿದರು. ಸೂಚನಾ ಫಲಕದಲ್ಲಿ ಓದುಗರಿಗೆ ಸರಿಯಾದ ರೀತಿ ಬಳಕೆ ಮಾಡಿಕೊಳ್ಳಲಿಕ್ಕೆ ಹೇಳಿದರು. ಸೂಚನಾ ಫಲಕದ ಮೇಲೆ ವಿಷಯ, ದಿನಾಂಕ ಮತ್ತು ಪುಟ ಸಂಖ್ಯೆಗಳನ್ನು ಒಂದು ವಾಕ್ಯದಲ್ಲಿ ಟೈಪ್ ಮಾಡಿ ಸೂಚನಾ ಫಲಕಕ್ಕೆ ಹಾಕುತ್ತಿದ್ದರು. ಇದನ್ನು ಗಮನಿಸಿದ ಓದುಗರು ತುಂಬಾ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು. ಗ್ರಂಥಾಲಯ ಎಂದರೆ ಗೃಹಿಣಿಯಂತೆ ಎಂಬ ಮಾತು ಸೂಕ್ತ. ಏಕೆಂದರೆ ಗೃಹಿಣಿಯು ತನ್ನ ಮನೆಯ ಸಣ್ಣಪುಟ್ಟ ವಿಷಯಗಳಿಗೂ ಗಮನಕೊಟ್ಟಾಗ ಕುಟುಂಬ ಉತ್ತಮ ರೀತಿಯ ಪ್ರಗತಿಯಾಗಲಿಕ್ಕೆ ಸಾಧ್ಯವಾಗುತ್ತದೆ. ಹಾಗೆಯೇ ಓದುಗರ ಇಚ್ಛೆಯನ್ನು ಅರಿತು ಕಾರ್ಯ ನಿರ್ವಹಿಸಿದರೆ ಗ್ರಂಥಾಲಯ ಪ್ರಗತಿಯಾಗಲು ಸಾಧ್ಯ ಎಂದು ಅವರು ಮನಗಂಡಿದ್ದರು.

ಹಾವನೂರರ ಕರ್ತವ್ಯ ಪ್ರಜ್ಞೆ ಹಾಗೂ ಅವರು ಕೈಗೊಳ್ಳುವ ಕಾರ್ಯಕ್ಷೇತ್ರದ ಅಭಿರುಚಿ, ನಿಷ್ಠೆ ಮತ್ತು ಅಲ್ಲಿಯ ವ್ಯಕ್ತಿಗಳೊಡನೆ ಪ್ರೀತಿಯ ಒಡನಾಟದಿಂದಾಗಿ ಅವರು ಉನ್ನತ ಸ್ಥಾನಕ್ಕೇರಿದರು. ಈ ಮಾತು ಸರ್ವಕಾಲಕ್ಕೂ ಸತ್ಯ. ಲೈಬ್ರರಿ ಕೆಲಸಕ್ಕೆಂದೇ ಲೈಬ್ರರಿಯಲ್ಲಿರುವ ಪ್ರಮುಖ ಪುಸ್ತಕಗಳ ಬೈಂಡ್ ಹಾಗೂ ಗ್ರಂಥಾಲಯದ ಇತರೆ ಕಾರ್ಯಗಳಿಗಾಗಿ ಸ್ಕೂಟರ್ ಮತ್ತು ಸಹಾಯಕನೊಬ್ಬನ್ನನ್ನು ನೇಮಿಸುವ ಕುರಿತು, ಆಡಳಿತ ಮಂಡಳಿಯಲ್ಲಿ ಚರ್ಚೆ ಮಾಡಿದಾಗ ಅಲ್ಲಿ ವಿರೋಧ ಬಂತು. ಅದನ್ನು ಲೆಕ್ಕಿಸದೇ ಕಾರ್ಯ ಪೂರೈಸಿದರು.

ಒಟ್ಟಾರೆಯಾಗಿ ಶ್ರೀನಿವಾಸ ಹಾವನೂರ ಅವರು ಗ್ರಂಥಾಲಯಗಳಲ್ಲಿ ಉತ್ತಮವಾಗಿ, ಶ್ರೇಷ್ಠರಾಗಿ ಕಾರ್ಯನಿರ್ವಹಿಸಿರುವುದು ತಿಳಿದುಬರುತ್ತದೆ. ಸಂಶೋಧನಾತ್ಮಕ ಸಂಸ್ಥೆಗಳ ಗ್ರಂಥಾಲಯಗಳಲ್ಲಿ ಸೇವೆ ಸಲ್ಲಿಸಿದ್ದು, ಅಲ್ಲಿನ ವಿದ್ಯಾರ್ಥಿಗಳಿಗೆ ಎಲ್ಲ ರೀತಿಯ ಸಹಾಯ, ಸೌಲಭ್ಯಗಳನ್ನು ಮಾಡಿಕೊಟ್ಟಿರುವುದು ಶ್ರೀನಿವಾಸ ಹಾವನೂರ ಅವರ ಕರ್ತವ್ಯನಿಷ್ಠೆಯನ್ನು ಪರಿಚಯಿಸುತ್ತದೆ. ಹಾಗೆಯೇ ವಿಜ್ಞಾನ ಸಂಶೋಧನ ಗ್ರಂಥಾಲಯ ಸಾಕ್ಷಿಯಾಗಿದೆ.

**ಕನ್ನಡ ಪ್ರಾಧ್ಯಾಪಕ ಹಾವನೂರ**

ಮೈಸೂರು ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ಕೇಂದ್ರ ಮಂಗಳೂರಿನಲ್ಲಿ ಪ್ರಾರಂಭವಾಯಿತು. ಅದರಲ್ಲಿ ಏಳು ವಿಭಾಗಗಳಿದ್ದವು. ಆ ವಿಭಾಗಗಳಲ್ಲಿ ಕನ್ನಡ ವಿಭಾಗವು ಒಂದು. ವಿಭಾಗದ ಸಂಸ್ಥಾಪಕರಾಗಿ ಎಸ್.ವಿ. ಪರಮೇಶ್ವರ ಭಟ್ಟ, ೨ನೆಯವರಾಗಿ ವರದರಾಜರು ಕಾರ್ಯನಿರ್ವಹಿಸಿದರು. ಆ ನಂತರದಲ್ಲಿ ಅಧ್ಯಾಪಕರ ನೇಮಕವಾಗಿರಲಿಲ್ಲ.

೧೯೮೦ರಲ್ಲಿ ಮಂಗಳೂರಲ್ಲಿ ಸ್ನಾತಕೋತ್ತರ ಕೇಂದ್ರವು ಸ್ವತಂತ್ರ ವಿಶ್ವವಿದ್ಯಾಲಯವಾಗಿ ರೂಪುಗೊಂಡಿತು. ಸುಪ್ರಸಿದ್ಧ ಇತಿಹಾಸ ತಜ್ಞ ಪ್ರೊ. ಬಿ. ಷೇಕ್ ಅಲಿಯವರು ಕುಲಪತಿಗಳಾದರು. ಆ ಕಾಲಕ್ಕೆ ವಿಶ್ವವಿದ್ಯಾನಿಲಯದಲ್ಲಿ ಏಳು ವಿಭಾಗಗಳು ಮಾತ್ರ ಕಾರ್ಯ ನಿರ್ವಹಿಸುತ್ತಿದ್ದವು. ಆಯಾ ವಿಭಾಗಗಳಲ್ಲಿ ಖಾಯಂ ಪ್ರಾಧ್ಯಾಪಕರು ಇರಲಿಲ್ಲ. ಅದರಲ್ಲಿ ಕನ್ನಡ ವಿಭಾಗವೂ ಒಂದು; ವಿಶ್ವವಿದ್ಯಾನಿಲಯದ ಪ್ರಾರಂಭದ ಅವಧಿಯ ಒಪ್ಪಂದದ ಪ್ರಕಾರ ತಜ್ಞರೊಬ್ಬರನ್ನು ಪ್ರಾಧ್ಯಾಪಕರನ್ನಾಗಿ ನಿರ್ದಿಷ್ಟ ಅವಧಿಗೆ ಆಹ್ವಾನಿಸುವ ಅವಕಾಶವಿತ್ತು. ಕುಲಪತಿಗಳಾದ ಪ್ರೊ. ಬಿ. ಷೇಕ್ ಅಲಿಯವರು ಒಂದು ದಿನ ಕನ್ನಡ ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಬಿ.ಎ.ವಿವೇಕ ರೈ ಅವರ ಬಳಿ ಈ ವಿಷಯದ ಬಗ್ಗೆ ಚರ್ಚಿಸಿದರು.

ಯಾರಾದರೂ ಒಬ್ಬ ಹಿರಿಯ ವಿದ್ವಾಂಸರನ್ನು ಆಹ್ವಾನಿಸುವ ವಿಚಾರವನ್ನು ಹೇಳಿದರು. ಕರ್ನಾಟಕದ ನಾನಾ ವಿಶ್ವವಿದ್ಯಾನಿಲಯಗಳಲ್ಲಿ ಪ್ರಾಧ್ಯಾಪಕರಾಗಿ ಕಾರ್ಯನಿರ್ವಹಿಸುತ್ತಿರುವ ಯಾರೊಬ್ಬರೂ ಮಂಗಳೂರು ಕೊಣಾಜೆಗೆ ಬರಲು ಸಿದ್ಧವಿರಲಿಲ್ಲ. ಈ ಸಂಗತಿಯನ್ನು ಗಮನಿಸಿದ ವಿವೇಕ ರೈಯವರು ಅವರ ಗುರುಗಳಾದ ಹಾ. ಮಾ. ನಾಯಕರಲ್ಲಿ ಈ ಸಂಗತಿಯನ್ನು ತಿಳಿಸಿದರು. ಅವರು ಹಾವನೂರ ಹೆಸರನ್ನು ಸೂಚಿಸಿ ಅವರ ವೈಯಕ್ತಿಕ ಮಾಹಿತಿಯನ್ನು ಕಳುಹಿಸಿಕೊಟ್ಟರು.

ವಿವೇಕ ರೈ ಅವರು ಹಾವನೂರ ಅವರನ್ನು ಸಂಪರ್ಕಿಸಿ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರ ಹುದ್ದೆಯ ಅವಕಾಶದ ಬಗ್ಗೆ ತಿಳಿಸಿ, ನಿಮ್ಮ ವೈಯಕ್ತಿಕ ವಿವರವನ್ನು ಕಳುಹಿಸಿಕೊಡಿ. ಹಾಗೆಯೇ ಒಂದು ದಿನ ಮಂಗಳೂರಿಗೆ ಬಂದು ಹೋಗಿರಿ ಎಂದು ತಿಳಿಸಿದರು. ಹಾವನೂರ ಒಂದು ದಿನ ಬಿಡುವು ಮಾಡಿಕೊಂಡು ಮುಂಬಯಿಯಿಂದ ಮಂಗಳೂರಿಗೆ ಬಂದು ಬಿ.ಎ. ವಿವೇಕ ರೈಯವರನ್ನು ಭೇಟಿಯಾದರು. ಆಗ ಹಾವನೂರರನ್ನು ಕುಲಪತಿಗಳಿಗೆ ಪರಿಚಯಿಸಿದರು. ಹಿಂದಿನದ್ದನ್ನೆಲ್ಲ ನೆನಪಿಸಿಕೊಂಡು ಲಂಡನ್ನಿನ ಇಂಡಿಯಾ ಆಫೀಸ್ ಗ್ರಂಥಾಲಯದಲ್ಲಿ ಇಬ್ಬರು ಇತಿಹಾಸಕ್ಕೆ ಸಂಬಂಧಿಸಿದಂತೆ ಚರ್ಚಿಸಿದ ವಿಷಯವನ್ನು ನೆನಪು ಮಾಡಿಕೊಂಡು ಮೆಲುಕು ಹಾಕಿದರು; ಹುದ್ದೆಗೆ ಸಂಬಂಧಿಸಿದ ವಿಷಯ ಚರ್ಚಿಸಿದರು. ಆಮೇಲೆ ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದ ಮುಖ್ಯಸ್ಥರಾಗಿ ಕಾರ್ಯನಿರ್ವಹಿಸಲು ಒಪ್ಪಿಕೊಂಡರು.

೧೯೮೨ರಲ್ಲಿ ಹಾವನೂರ ನೇಮಕಗೊಂಡ ವಿಚಾರ ತಿಳಿದ ಕೆಲವರು ವಿರೋಧವನ್ನು ವ್ಯಕ್ತಪಡಿಸಿದರು. ಈ ಸಂಗತಿ ಗಮನಿಸಿದ ಕುಲಪತಿಗಳು ಆ ವಿಷಯವನ್ನು ಸಮರ್ಥಿಸಿಕೊಂಡ ರೀತಿ ಹೀಗಿತ್ತು. ಅವರನ್ನು ಉದ್ದೇಶಪೂರ್ವಕವಾಗಿ ಕರೆಯಿಸಿ ಆ ಹುದ್ದೆಗೆ ಅವರು ಅರ್ಹ ವ್ಯಕ್ತಿಯಾಗಿದ್ದಾರೆಂದು ತಿಳಿಸಿದರು ಹಾಗೂ ವಿಶ್ವವಿದ್ಯಾನಿಲಯವು ನನಗೆ ಒಂದಷ್ಟು ದತ್ತ ಅಧಿಕಾರವನ್ನು ಕೊಟ್ಟಿದೆ. ಅದನ್ನು ಬಳಸಿಕೊಂಡು ಸೂಕ್ತ ವ್ಯಕ್ತಿಯನ್ನು ಆಯ್ಕೆ

ಮಾಡಿದ್ದೇನೆಂದರು. ಅವರ ಬಗ್ಗೆ ಅಪಸ್ವರ ಏನೇ ಬಂದರೂ ಅದನ್ನು ಲೆಕ್ಕಿಸಲಿಲ್ಲ. ವಿಶ್ವವಿದ್ಯಾನಿಲಯದ ಬೋಧನ ಅನುಭವ ಇಲ್ಲದಿರುವುದನ್ನು ಬಿಟ್ಟರೆ ಅವರಿಗೆ ನಾನಾ ಅನುಭವಗಳಿವೆ. ಆ ಕಾರಣಕ್ಕೆ ಕನ್ನಡ ವಿಭಾಗದ ಕೆಲಸ ಮಾಡಲಿಕ್ಕೆ ಅನುಕೂಲ ಕಲ್ಪಿಸಿದರು. ಹಾವನೂರ ೧೯೮೨-೮೪ರವರೆಗೆ ಎರಡು ವರ್ಷ ಕನ್ನಡ ವಿಭಾಗದ ಅಭಿವೃದ್ಧಿಗೆ ತಮ್ಮನ್ನು ತಾವು ತೊಡಗಿಸಿಕೊಂಡರು.

ವಿಶ್ವವಿದ್ಯಾನಿಲಯದ ತಮ್ಮ ವಿಭಾಗದ ಕಾರ್ಯವನ್ನು ಆರಂಭಿಸಿದ ಹಾವನೂರ ನಂತರದ ದಿನಗಳಲ್ಲಿ ಸ್ನೇಹಿತರಾದ ಕು.ಶಿ ಹರಿದಾಸ ಭಟ್ಟರಲ್ಲಿಗೆ ಹೋಗಿ ದಕ್ಷಿಣ ಕನ್ನಡ ಜಿಲ್ಲೆಯ ಸಾಹಿತಿಗಳು, ವಿದ್ವಾಂಸರು, ಅಧ್ಯಾಪಕರುಗಳ ಬಗ್ಗೆ ಚರ್ಚಿಸಿದರು. ಸಾಹಿತಿ ಮುದ್ದಣನಿಂದ ಆರಂಭಿಸಿ ಹಿರಿಯ ಸಾಧಕರ ಕೃತಿಗಳನ್ನು ಪ್ರಕಟಪಡಿಸುವುದು ಅವರ ಉದ್ದೇಶವಾಗಿತ್ತು. ಆದ್ದರಿಂದ ಆಕರ ಸಾಮಗ್ರಿಗಳ ಸಂಗ್ರಹಕ್ಕಾಗಿ ದಕ್ಷಿಣ ಕನ್ನಡ ಜಿಲ್ಲೆಯ ನಾನಾ ಕಡೆಗಳಿಂದ ಹಸ್ತಪ್ರತಿಗಳು, ಹಳೆಯ ಪುಸ್ತಕ, ಹಳೆಯ ಪತ್ರಿಕೆಯ ಕಡತಗಳು, ವಾರ್ಷಿಕ ಮತ್ತು ಮಾಸಿಕ ಸಂಚಿಕೆಯ ಸಂಪುಟಗಳು ಹೀಗೆ ಹಲವು ರೀತಿ ಅಪೂರ್ವ ಪಳೆಯುಳಿಕೆಯ ಸಾಮಗ್ರಿಗಳ ಭಂಡಾರವನ್ನೇ ಕನ್ನಡ ವಿಭಾಗದಲ್ಲಿ ಕ್ರೋಢೀಕರಿಸಿದರು.

ಕನ್ನಡ ವಿಭಾಗದಲ್ಲಿ ಮಾಹಿತಿ ಕೇಂದ್ರವನ್ನು ಪ್ರಾರಂಭಿಸಿದರು. ಕನ್ನಡ ಸಾಹಿತ್ಯ ವಿಷಯಕ್ಕೆ ಪ್ರತ್ಯೇಕವಾದ ಕಡತಗಳನ್ನು ಮಾಡಿದರು. ದಕ್ಷಿಣ ಕನ್ನಡ ಜಿಲ್ಲೆ ಹಾಗೂ ಕೊಡಗು ಜಿಲ್ಲೆಗೆ ಸಂಬಂಧಿಸಿದಂತೆ ಸ್ಥಳೀಯ ಸಾಹಿತ್ಯ ಸಂಸ್ಕೃತಿ ಸಾಮಗ್ರಿಗಳನ್ನು ಆ ಪ್ರದೇಶದ ಎಲ್ಲಾ ಭಾಗಗಳಿಂದಲೂ ಸಂಗ್ರಹಿಸುವಲ್ಲಿ ಮಹತ್ವದ ಪಾತ್ರವನ್ನು ನಿರ್ವಹಿಸಿದರು. ಸಾಕಷ್ಟು ಸಾಮಗ್ರಿಗಳನ್ನು ಕ್ರೋಢೀಕರಿಸಿದರು. ಸ್ವದೇಶಾಭಿಮಾನಿ, ನವಯುಗ, ರಾಷ್ಟ್ರಮತ, ರಾಷ್ಟ್ರಬಂಧು, ಕಂಠೀರವ ಮುಂತಾದ ಪ್ರಾಚೀನ ಪತ್ರಿಕೆಗಳಿಂದ ಮೌಲ್ಯಧಾರಿತ ಸಾಮಗ್ರಿಗಳನ್ನು ಸಂಗ್ರಹಿಸಿದರು. ಈ ಸಂಗ್ರಹವು ಸಂಶೋಧಕರಿಗೆ ಆಕರಗಳ ಕಣಜವಾಯಿತು.

ವೆಂಕಟರಾಯರು ಪುಣೆಯ 'ತುಳು ಭಾಗವತ' ಎಂಬ ತುಳು ಹಸ್ತಪ್ರತಿ ಗೊತ್ತುಮಾಡಿ ಅದರ ಬಿಡುಗಡೆಗಾಗಿ ಕೇಂದ್ರ ಸರ್ಕಾರದ ಹಸ್ತಪ್ರತಿ ಸಂಪನ್ಮೂಲ ಇಲಾಖೆಯಿಂದ ಧನಸಹಾಯ ಪಡೆದರು. ಪ್ರಕಟಣ ಕೆಲಸವನ್ನು ಪ್ರಾರಂಭಿಸಿದರು. ಸಮುದ್ರದಾಚೆಯ ಕನ್ನಡ ಭಂಡಾರದ ಪ್ರತಿಮಾಡಿ ಕನ್ನಡ ವಿಭಾಗವನ್ನು ಸಮೃದ್ಧಿಗೊಳಿಸಿದರು. ಇದಲ್ಲದೆ 'ಕನ್ನಡ-ಸಂಸ್ಕೃತ ಸಂಬಂಧ' ಎಂಬ ಪತ್ರಿಕೆಯನ್ನು ಎಂ.ಎ. ಪಠ್ಯಕ್ರಮದಲ್ಲಿ ಅಳವಡಿಸಿದರು. ಇದರಿಂದ 'ಶ್ರೀನಿವಾಸ ಹಾವನೂರ ಅವರು ಕನ್ನಡ ವಿರೋಧಿ; ಸಂಸ್ಕೃತ ಭಾಷೆಯ ಪರ' ಎಂಬ ವಿವಾದ ಅಥವಾ ಗಾಳಿಸುದ್ದಿ ಹರಡಿತು. ಮೂಲತಃ ಇವೆಲ್ಲ ತಪ್ಪು ಕಲ್ಪನೆಯಾಗಿದ್ದವು. ಕನ್ನಡ ವಿರೋಧಿ ಎಂಬ ಹಣೆಪಟ್ಟಿ ಕಟ್ಟಿರುವುದಕ್ಕೆ ಶ್ರೀನಿವಾಸ ಹಾವನೂರ ಅವರು ಬಹಳ ನೊಂದುಕೊಂಡಿದ್ದರು. ಆದರೂ ನಿರಂತರ ಕೆಲಸ-ಕಾರ್ಯಗಳಲ್ಲಿ ತೊಡಗಿಸಿಕೊಂಡಿದ್ದ

ಅವರು ಈ ವಿವಾದದಿಂದ ಎದೆಗುಂದಲಿಲ್ಲ. ತನ್ನ ಸತ್ಯಾಸತ್ಯತೆಯನ್ನು ಕೆಲಸ ಕಾರ್ಯಗಳಲ್ಲಿ ತೋರಿಸಿದರು.

ಈ ವಿಷಯದಲ್ಲಿ ಹಾವನೂರ ಸಂಸ್ಕೃತ ಪರವಾಗಿ ಮತ್ತು ಕನ್ನಡ ವಿರೋಧವಾಗಿ ಪತ್ರಿಕೆಯಲ್ಲಿ ಕೆಲಸ ಮಾಡಿದರು ಎಂದು ಕಪೋಲಕಲ್ಪಿತ ಸುದ್ದಿ ಹಬ್ಬಿಸಿದರು. ಈ ಸುದ್ದಿ ಪತ್ರಿಕೆಗಳಲ್ಲಿ ಸಾಕಷ್ಟು ಚರ್ಚೆಗೆ ಗ್ರಾಸವಾಯಿತು. ಈ ಘಟನೆಯಿಂದ ಹಾವನೂರ ಮಾನಸಿಕವಾಗಿ ಬಹಳ ನೊಂದುಕೊಂಡರು. ಆದರೆ ಈ ಸಂಗತಿ ಅರಗಿಸಿಕೊಂಡು ಎಡೆಬಿಡದೆ ಕನ್ನಡದ ಕೆಲಸ ಮಾಡಿದರು.

ಈ ವಿಭಾಗದಲ್ಲಿರುವಾಗಲೇ ನಾ.ದಾಮೋದರ ಶೆಟ್ಟಿ ಮತ್ತು ವಸಂತ ಕುಮಾರ ತಾಳ್ತಜೆ ಇವರಿಗೆ ಮಾರ್ಗದರ್ಶನ ಮಾಡಿ ಮೌಲ್ಯಧಾರಿತ ಮಹಾಪ್ರಬಂಧಕ್ಕೆ ಕಾರಣೀಭೂತರಾದರು. ಹಾವನೂರ ಅವರು ಎರಡು ವರ್ಷ ಮಾತ್ರ ಅಲ್ಲಿದ್ದರು. ಆ ಸಮಯದಲ್ಲಿ ಸಂಶೋಧನ ಕಾರ್ಯಕ್ಕೆ ಸರಿಯಾದ ಅಡಿಪಾಯ ಹಾಕಿದರು. ದಕ್ಷಿಣ ಕನ್ನಡ ಪರಿಸರದ ಸಾಂಸ್ಕೃತಿಕ ಅವಶೇಷಗಳ ವಸ್ತು ಸಂಗ್ರಹಾಲಯ ಮಾಡಿದ್ದು ಹಾವನೂರ ಅವರ ಸಾಧನೆಯಾಗಿತ್ತು. ಅವರ ಉತ್ತಮ ಕಾರ್ಯಕ್ಕೆ ಪ್ರೋತ್ಸಾಹ, ಹೊಗಳಿಕೆ ಅವರ ನಿರೀಕ್ಷೆಗಿಂತಲೂ ಹೆಚ್ಚು ದೊರಕಿತ್ತು. ಈ ಕಾರಣದಿಂದ ಹಾವನೂರ ಅವರ ಬರವಣಿಗೆಗೆ ಶ್ರೇಯಸ್ಸು ಸಿಕ್ಕಿತು.

ದಕ್ಷಿಣ ಕನ್ನಡ ಭಾಗದ ಅನೇಕರನ್ನು ಸ್ಮರಿಸಿಕೊಂಡಾಗ ಹಾವನೂರ ಅವರ ಮನಸ್ಸು ಸಂಭ್ರಮಗೊಳ್ಳುತ್ತದೆ. ಪರಿಸರದ ಬಹಳ ಮಂದಿ ಹಿರಿಯರನ್ನು ನೋಡಿ ಸಾಂಸ್ಕೃತಿಕ ಹಾಗೂ ಸಾಹಿತ್ಯಿಕವಾಗಿ ವಿಷಯ ಚರ್ಚೆ ಮಾಡುವುದಕ್ಕೆ ಸಮಯ ದೊರಕಿದ್ದು ಹಾವನೂರರು ಸೌಭಾಗ್ಯವೆಂದು ಭಾವಿಸುತ್ತಾರೆ. ಕಯ್ಯಾರ ಕಿಞ್ಞಣ್ಣ ರೈ, ಸೇಡಿಯಾಪು ಕೃಷ್ಣಭಟ್ಟ, ಬನ್ನಂಜೆ ಸೋದರರು, ಎಂ. ಮಹಾಬಲ ಭಟ್ಟರು ಈ ತಲೆಮಾರಿನ ಪಟ್ಟಿಯಲ್ಲಿದ್ದವರು.

ಮಂಗಳೂರು ವಿಶ್ವವಿದ್ಯಾನಿಲಯ ಕನ್ನಡ ವಿಭಾಗದ ಪ್ರಾಧ್ಯಾಪಕ ಸ್ಥಾನದಿಂದ ೧೯೮೪ರಲ್ಲಿ ಶ್ರೀನಿವಾಸ ಹಾವನೂರ ಬಿಡುಗಡೆಗೊಂಡರು.

ನಂತರ ಹಾವನೂರ ಅವರು ಮುಂಬಯಿ ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಮತ್ತು ವಿಭಾಗದ ಮುಖ್ಯಸ್ಥರಾಗಿ ಸೇವೆಗೆ ಸೇರಿಕೊಂಡರು. ಮುಂಬಯಿ ವಿಶ್ವವಿದ್ಯಾಲಯಕ್ಕೆ ಹೋಗಲು ಹಾ.ಮಾ.ನಾಯಕರೇ ಕಾರಣ. "ಈ ವಿಭಾಗವು ಹೊಸದಾಗಿ ಪ್ರಾರಂಭವಾದದ್ದು. ಹಾಗೆಯೇ ಉಳಿಯಬೇಕಾದರೆ ವಿಶ್ವವಿದ್ಯಾಲಯವು ಆರು ಲಕ್ಷಕ್ಕೂ ಹೆಚ್ಚು ಅನುದಾನವನ್ನು ಕೊಡಬೇಕೆಂದು ಕೇಳಿದರು. ಅದಕ್ಕೆ ಮುಂಬಯಿಯ ಕೆಲವು ಗಣ್ಯರು ಆ ಹಣಕ್ಕಾಗಿ ಕರ್ನಾಟಕ ಸರ್ಕಾರವನ್ನು ಕೇಳಬೇಕೆಂದು ಬೆಂಗಳೂರಿಗೆ ಬಂದು ಸರ್ಕಾರದ ಮುಖ್ಯಕಾರ್ಯದರ್ಶಿ ಜೆ.ವಿ.ಕೆ.ರಾವ್ ಅವರನ್ನೇ ಭೇಟಿಯಾದಾಗ ಅವರು ಈ ರೀತಿ ಹೇಳಿದರು. ಕರ್ನಾಟಕ ಸರಕಾರವು ಹಣ ನೀಡಿದರೆ ಮುಂಬೈಯಲ್ಲಿ

ಪ್ರಾರಂಭವಾದ ಕನ್ನಡ ಪೀಠವು ಭದ್ರವಾಗಿ ಉಳಿಯಲಾರದು. ಅದರ ಬದಲಾಗಿ ನಾವು ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಮರಾಠಿ ವಿಭಾಗವನ್ನು ತೆರೆದು ಆರಂಭಿಸೋಣ. ಅವರು ಮುಂಬಯಿ ವಿಶ್ವವಿದ್ಯಾಯದಲ್ಲಿ ಕನ್ನಡ ವಿಭಾಗವನ್ನು ಪ್ರಾರಂಭಿಸಲಿ ಎಂಬ ವ್ಯವಹಾರಿಕ ಸೂಚನೆಯನ್ನು ಮುಂದಿಟ್ಟರು. ಆ ಪ್ರಕಾರ ೧೯೬೮ರಲ್ಲಿ ಮುಂಬಯಿಯಲ್ಲಿ ಕನ್ನಡ ವಿಭಾಗವು ನೆಲೆಗೊಂಡಿತು. ಅದರಂತೆ ಧಾರವಾಡದಲ್ಲಿ ಮರಾಠಿ ವಿಭಾಗ ಆರಂಭಿಸಿತು. ಸಿ.ಕೆ.ದೀಕ್ಷಿತರು ವಿಭಾಗದ ಪ್ರಥಮ ಮುಖ್ಯಸ್ಥರಾಗಿ, ಎರಡನೆಯವರಾಗಿ ಹಾವನೂರ ೧೯೬೪ರಲ್ಲಿ ಕೆಲಸ ಪ್ರಾರಂಭಿಸಿದರು."[೧೮]

ಮುಂಬಯಿ ಕನ್ನಡ ವಿಭಾಗದ ಮೂಲಕ ವಿಚಾರ ಸಂಕಿರಣ ಆಯೋಜಿಸಿದ್ದರು. ಆ ಸಂದರ್ಭದಲ್ಲಿ ಕೆಲವು ಕೃತಿಗಳನ್ನು ಪ್ರಕಟಪಡಿಸಿದರು. ಅದರಲ್ಲಿ ಹೆಚ್ಚಿನ ಕೃತಿ ಮರಾಠಿ ಕನ್ನಡ ಸೌಹಾರ್ದಕ್ಕೆ ಮೀಸಲಾಗಿದ್ದವು. "ಶಿವಾಜಿ-ಮಲ್ಲಮ್ಮಾಜ್ಜಿ ಸಮರೋತ್ಸವ, ಮಹಾರಾಷ್ಟ್ರೀಯರ ದೃಷ್ಟಿಯಲ್ಲಿ ಕಾರಂತರ ಕಾದಂಬರಿಗಳು, ಮಹಾರಾಷ್ಟ್ರದಲ್ಲಿಯ 'ಕನ್ನಡ ಶಾಸನಗಳು' ಮುಂತಾದ ಗ್ರಂಥಗಳನ್ನು ಪ್ರಕಟಿಸಲಾಯಿತು. ಗ್ರಂಥ ಪ್ರಕಟಣೆಗೆ ಪ್ರತಿಯೊಂದು ಭಾಷಾ ವಿಭಾಗಕ್ಕೆ ಹತ್ತು ಸಾವಿರ ಮಾತ್ರ ಮಂಜೂರು ಮಾಡುವುದು ಸಾಮಾನ್ಯ ನಿಯಮ. ಆದರೆ ಒಂದು ವರ್ಷ ಮಾತ್ರ ಕನ್ನಡ ವಿಭಾಗಕ್ಕೆ ೫೪,೦೦೦ ರೂಪಾಯಿ ಮಂಜೂರು ಮಾಡಿದ್ದರು. ಈ ಹಣ ಬಿಡುಗಡೆಯಾದ ಬಳಿಕ ಉಳಿದವರಿಗೆ ಅಸೂಯೆಯಾದದ್ದು ಸ್ವಾಭಾವಿಕ. ಅದನ್ನು ಮಂಜೂರು ಮಾಡುವಾಗ ಪ್ರಭಾರಿ ಕುಲಪತಿಗಳು "I am proud of your Depertment"[೧೯] ಎಂದು ಪ್ರೋತ್ಸಾಹಿಸಿದರು.

ಕನ್ನಡ ವಿಭಾಗದ ಕಾರ್ಯಚಟುವಟಿಕೆಗಳು ಪುಣೆಯವರೆಗೂ ವ್ಯಾಪಿಸಿತು. ಆಗ ಮರಾಠಿಯ ಪ್ರಸಿದ್ಧ ಸಾಹಿತಿ ಹಾಗೂ ಲೇಖಕರಾದ ಪ್ರೊ. ಪು.ಲ. ದೇಶಪಾಂಡೆಯವರಿಗೆ ಸನ್ಮಾನ ಸಮಾರಂಭವನ್ನು ಪುಣೆಯಲ್ಲಿಯ ಮರಾಠಿ ಕನ್ನಡ ಸ್ನೇಹವರ್ಧನ ಕೇಂದ್ರದ ಸಹಯೋಗದೊಂದಿಗೆ ಕಾರ್ಯಕ್ರಮ ಮಾಡಿದರು. (ಕೇಂದ್ರದ ಸಂಸ್ಥಾಪಕರಲ್ಲಿ ಹಾವನೂರ ಒಬ್ಬರಾಗಿದ್ದರು) ಹೀಗಾಗಿ ಈ ಕಾರ್ಯಕ್ರಮ ಮಾಡಲು ಬಹಳ ಸರಳವಾಯಿತು.

ಆ ಸಮಾರಂಭದ ನಿಮಿತ್ತವಾಗಿ ಮುಂಬಯಿ ವಿಶ್ವವಿದ್ಯಾಲಯದ ಕುಲಸಚಿವರಿಗೆ ಆಹ್ವಾನ ಪತ್ರಿಕೆ ಕೊಡಲು ಹೋದಾಗ ಇದು ನಿಮಗೆ ಹೇಗೆ ಸಾಧ್ಯವಾಯಿತೆಂದು ಆಶ್ಚರ್ಯ ಚಕಿತರಾದರು. ಹಾಗೇನೆ ಕುಲಸಚಿವರು ಹಾವನೂರರಿಗೆ ಸಮಾರಂಭದಲ್ಲಿ ಪಾಲ್ಗೊಳ್ಳಲು ಅವಕಾಶ ಮಾಡಿಕೊಡುವಿರಾ ಎಂದು ಕೇಳಿದರು. ಇಂತಹ ಅನೇಕ ಕಾರ್ಯಕ್ರಮಗಳಲ್ಲಿ ಕನ್ನಡೇತರರಿಗೆ ಕನ್ನಡ ಕಲಿಯಲು ವ್ಯವಸ್ಥೆ ಮಾಡಿ ಅನುವು ಮಾಡಿಕೊಟ್ಟಿದ್ದು ವಿಶೇಷವೇ ಸರಿ.

ಮುಂಬಯಿ ಕನ್ನಡ ವಿಭಾಗದಲ್ಲಿ ಅಕಾಡೆಮಿಕ್ ಆಗಿ ಮಾಡಲು ಎಂ.ಫಿಲ್ ತರಗತಿಗಳನ್ನು ಪ್ರಾರಂಭಿಸಿದರು. ಆಸಕ್ತಿ ಹೊಂದಿದವರಿಗೆ ಕಲಿಯಲು ಅನುಕೂಲ ಕಲ್ಪಿಸಿದರು.

ವಿದ್ಯಾರ್ಥಿಗಳಿಗೆ ಪ್ರತಿ ವಾರ ತರಗತಿಗೆ ಬಂದು ಹೋಗಲು ತೊಂದರೆಯಾಗುವುದನ್ನು ಗಮನಿಸಿ, ವರ್ಷದ ರಜೆಗಳ ಅವಧಿಯಲ್ಲಿ ೧೦ ದಿನ ಬಂದು ಕಲಿಯುವ ವ್ಯವಸ್ಥೆ ಮಾಡಿದರು. ಯು.ಜಿ.ಸಿ.ಯ ಧನಸಹಾಯ ಪಡೆದು ವಿಶ್ವವಿದ್ಯಾಲಯದಲ್ಲಿನ ಕನ್ನಡ ವಿಭಾಗದಲ್ಲಿ ವಿಚಾರ ಸಂಕಿರಣಗಳನ್ನು ಏರ್ಪಡಿಸುತ್ತಿದ್ದರು. ಈ ವಿಚಾರ ಸಂಕಿರಣಗಳಲ್ಲಿ ಪ್ರಬಂಧ ಮಂಡಿಸಲು ಸಂಪನ್ಮೂಲ ವ್ಯಕ್ತಿಗಳನ್ನಾಗಿ ಎಂ.ಎಂ.ಕಲಬುರ್ಗಿ ಹಾಗೂ ವೆಂಕಟಾಚಲಶಾಸ್ತ್ರಿ ಮುಂತಾದ ಹಿರಿಯ ವಿದ್ವಾಂಸರನ್ನು ಆಹ್ವಾನಿಸುವ ಮೂಲಕ ಕನ್ನಡದ ಕೆಲಸಕ್ಕಾಗಿ ಶ್ರಮಿಸಿದರು.

ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರ ಮಾರ್ಗದರ್ಶನ ಸಮಿತಿಯ ಅಧ್ಯಕ್ಷ ಸ್ಥಾನದ ಚುನಾವಣೆಗೆ ಪ್ರಕ್ರಿಯೆ ಆರಂಭವಾಯಿತು. ನೀವೇ ಅಭ್ಯರ್ಥಿಯಾಗಬೇಕೆಂದು ಸಹೋದ್ಯೋಗಿಗಳು ಹಾವನೂರರನ್ನು ಕೇಳಿದರು. ಅದಕ್ಕೆ ಪ್ರತಿಯಾಗಿ ನೀವು ಜೋಕ್ಸ್ ಮಾಡುತ್ತಿರೊ? ಎಂದರು. ಕನ್ನಡ ವಿಭಾಗದಲ್ಲಿ ನೀವು ಒಬ್ಬರೆ ಮೇಲಾಗಿ ಬಂದು ಎರಡು ವರ್ಷ ಆಗಿದೆ ಎಂದು ಹೇಳಿದರು. ಅಲ್ಲದೆ ಪ್ರತಿ ವರ್ಷವೂ ವಿಜ್ಞಾನದವರೇ ಚುನಾವಣೆಗೆ ಆಯ್ಕೆಯಾಗುತ್ತಾರೆ. ಈ ಸಾರಿ ಕಲಾ ವಿಭಾಗದಿಂದ ಅಧ್ಯಕ್ಷರಾಗಬೇಕು. ಈ ಕಾರಣದಿಂದಾಗಿ ವಿಷಯಕ್ಕೆ ಸಂಬಂಧಿಸಿದಂತೆ ನಾವೆಲ್ಲರೂ ಒಂದು ನಿರ್ಧಾರ ತೆಗೆದುಕೊಂಡಿದ್ದೇವೆ. ಅದಕ್ಕೆ ನೀವು ಈ ವಿಷಯದ ಬಗ್ಗೆ ಚರ್ಚೆ ಮಾಡುವುದು ಬೇಡ ಎಂದು ಕೇಳಿಕೊಂಡರು. ಸಹೋದ್ಯೋಗಿಗಳ ಮಾತಿಗೆ ಹಾವನೂರ ಅವರು ಒಪ್ಪಿಕೊಂಡರು. ಆದರೆ ಮತದಾನ ಕೆಲಸ ಕಾರ್ಯಗಳು ಅಂತಿಮಗೊಳ್ಳುವ ಸಮಯದವರೆಗೆ ಅವರು ಇರಲಿಲ್ಲ. ಮತದಾನ ಪೂರ್ಣಗೊಂಡ ನಂತರ ಫಲಿತಾಂಶ ಪ್ರಕಟವಾಯಿತು. ಆಗ ಅವರ ಸಹೋದ್ಯೋಗಿಗಳು ಹಾವನೂರ ಮನೆಗೆ ಹೋಗಿ ಬೆಲ್ ಬಾರಿಸಿ ಎಬ್ಬಿಸಿದರು. ನೀವು ಚುನಾವಣೆಯಲ್ಲಿ ಆಯ್ಕೆಗೊಂಡಿದ್ದೀರಿ ಎಂಬ ಸುದ್ದಿಯನ್ನು ತಿಳಿಸಿದರು. ಕೆಲವು ದಿನಗಳ ನಂತರ ಒಂದಷ್ಟು ವಾಸ್ತವಿಕ ಅಂಶ ಗೊತ್ತಾಯಿತು. ಪ್ರಾಧ್ಯಾಪಕರ ಪರವಾಗಿ ಇಂಗ್ಲಿಷ್‌ನಲ್ಲಿ ಸರಳವಾಗಿ ಮಾತನಾಡುವವರು ಕಲಾ ವಿಭಾಗದಲ್ಲಿ ಇರಲಿಲ್ಲ. ಈ ಕಾರಣದಿಂದ ತನಗೆ ಸ್ಪರ್ಧಿಸಲು ಅವಕಾಶ ಸಿಕ್ಕಿತೆಂದು ಹಾವನೂರರಿಗೆ ಮನವರಿಕೆಯಾಯಿತು.

ಕರ್ನಾಟಕದ ಶಾಲಾ ಮಕ್ಕಳಿಗಾಗಿ ಕನ್ನಡ ಭಾರತಿ ಪಠ್ಯಗಳಿದ್ದ ಹಾಗೆ, ಮಹಾರಾಷ್ಟ್ರದಲ್ಲಿರುವ ಕನ್ನಡ ಶಾಲಾ ಮಕ್ಕಳಿಗಾಗಿ ವಾಚನ ಪುಸ್ತಕಗಳನ್ನು ತಯಾರಿಸುವ ಸರ್ಕಾರಿ ಸಂಸ್ಥೆ ಇದೆ. ಅದರಲ್ಲಿ ವಿಶ್ವವಿದ್ಯಾಲಯ, ಕಾಲೇಜು, ಪ್ರೌಢಶಾಲೆ ಹಾಗೂ ಪ್ರಾಥಮಿಕ ಶಾಲೆಯ ಶಿಕ್ಷಕರು ಸದಸ್ಯರಾಗಿರುತ್ತಿದ್ದರು. ವಿಶ್ವವಿದ್ಯಾಲಯದ ಪ್ರಾಧ್ಯಾಪಕರನ್ನು ಅದರ ಅಧ್ಯಕ್ಷರನ್ನಾಗಿ ನೇಮಿಸುವುದು ವಾಡಿಕೆ. ಆ ಕಾರಣದಿಂದ ಹಾವನೂರರನ್ನು ಗೌರವ ಅಧ್ಯಕ್ಷರನ್ನಾಗಿ ಮಾಡಿದರು. ಕೃ.ಶಿ. ಹೆಗಡೆಯವರು ಅಧಿಕೃತ ಕಾರ್ಯದರ್ಶಿಗಳು; ಸಭೆಯಲ್ಲಿ ಅವರು ಪಾಠಗಳನ್ನು ಆಯ್ದು ತರಬೇಕು. ಆ ಕುರಿತು ಚರ್ಚೆ ಮಾಡಿ ಒಪ್ಪಿತವಾದರೆ ಸೇರಿಸಿಕೊಳ್ಳಬೇಕು ಎಂದರು. ಹಾವನೂರ ಅವರು ತಂದ ಕೆಲವು ಪಾಠಗಳನ್ನು

ಚರ್ಚೆ ಇಲ್ಲದೆ ಸ್ವೀಕರಿಸಿದ್ದು ಉಂಟು. "ಆ ಪಾಠಗಳನ್ನು ಮಕ್ಕಳು ಹೇಗೆ ಉಪಯೋಗ ಮಾಡಿಕೊಳ್ಳಬೇಕು. ಹಾಗೆಯೇ ಹಾಸ್ಯ ಅಂಶ ಇರಲಿ ಎಂದು ಯೋಚಿಸಿ ಒಮ್ಮೆ ಅಂಥದೊಂದು ಪಾಠವನ್ನು ಮುಂದಿಟ್ಟರು. 'Out Right Rejectionl' ಈ ವಿಷಯ ಚರ್ಚೆ ಇಲ್ಲದೆ ಸಮಿತಿಯಲ್ಲಿ ಆಯ್ಕೆ ಮಾಡಿದರು. ಪ್ರಾಥಮಿಕ ಶಿಕ್ಷಕ ಸದಸ್ಯರದೇ ಅಂತಿಮ ತೀರ್ಮಾನ. ಸಮಿತಿಯ ಕೆಲಸವು ಅತ್ಯಂತ ವಿವೇಚನೆಯಿಂದ ಅಷ್ಟೇ ನಿಷ್ಠೆಯಿಂದ ನಡೆಯುತ್ತಿತ್ತು. ಇಂಥ ಒಂದು ಪಠ್ಯವನ್ನು ನಮ್ಮ ವಿಧಾನಸಭೆಯಲ್ಲಿ ಓರ್ವ ಸದಸ್ಯರು ಚರ್ಚೆಯ ಸಮಯದಲ್ಲಿ ಎತ್ತಿ ಹಿಡಿದರು. ಕರ್ನಾಟಕದ ಸಮಿತಿಯವರು ಇದರಿಂದ ಕಲಿಯಬೇಕು ಎಂದು ಹೇಳಿದರು".[೨೦]

ಯಾವುದೇ ಸಂಘ ಸಂಸ್ಥೆಗಳಲ್ಲಿ ಮೂರು ವರ್ಷಕ್ಕಿಂತ ಹೆಚ್ಚಿನ ಅಧಿಕಾರ ಸ್ಥಾನದಲ್ಲಿ ಮುಂದುವರೆಯಬಾರದು ಎಂಬ ನಿಯಮವನ್ನು ಹಾವನೂರ ಅವರು ಹಾಕಿಕೊಂಡಿದ್ದರು. ಹಾಗೆಯೇ ಈ ಪಠ್ಯ ಸಮಿತಿ ಅಧ್ಯಕ್ಷ ಸ್ಥಾನದಲ್ಲಿ ಮೂರು ವರ್ಷದ ನಂತರ ರಾಜೀನಾಮೆಯ ಪತ್ರವನ್ನು ಸಮಿತಿಯ ಮುಂದೆ ಇಟ್ಟರೂ ಸಮಿತಿಯಲ್ಲಿ ನಾನು ಸದಸ್ಯರಾಗಿ ಮುಂದುವರೆಯುತ್ತೇನೆ. ನಿಮ್ಮಲ್ಲಿ ಒಬ್ಬರು ಅಧ್ಯಕ್ಷರಾಗಿರೆಂದು ಹಾವನೂರ ಅವರು ಸಹಸದಸ್ಯರಿಗೆ ಹೇಳಿದರು.

೧೯೮೯ರಲ್ಲಿ ನಿವೃತ್ತಿ ಹೊಂದಿದ ನಂತರ ಯಾವ ಸ್ಥಳದಲ್ಲಿರಬೇಕು ಎನ್ನುವ ಪ್ರಶ್ನೆ ಹಾವನೂರರನ್ನು ಕಾಡಿತ್ತು. ಧಾರವಾಡದಲ್ಲಿದ್ದರೆ ಜಾತಿಯ ಗೊಂದಲದಿಂದಾಗಿ ಒಳ್ಳೆಯ ಪರಿಸರವಿಲ್ಲ. ಈ ಕಾರಣದಿಂದ ಹೊರ ಪ್ರದೇಶದಲ್ಲಿದ್ದುಕೊಂಡೇ ಯಾವುದಾದರೂ ಉತ್ತಮ ಕೆಲಸ ಮಾಡಬಹುದೆಂದು ಭಾವಿಸಿದರು. ಹೀಗಾಗಿ ಅವರು ಪುಣೆಗೆ ವರ್ಗಾವಣೆಗೊಳ್ಳುವ ನಿರ್ಧಾರ ಮಾಡಿದರು. ಮುಂದೆ ಕನ್ನಡ ಮರಾಠಿ ಸ್ನೇಹವರ್ಧಕ ಕೇಂದ್ರವನ್ನು ಸ್ಥಾಪಿಸಿ ಅದರ ಮೂಲಕ ಕನ್ನಡದ ಸೇವೆ ಮಾಡಬಹುದೆಂದು ಅಂದುಕೊಂಡರು.

ಆರೋಯಿರಾ ಹೂತುರೊ ಸೊಲ್ಲಾಪುರ, ಪ್ರಶಾಂತ ಕೊಲ್ಲಾಪುರ ಇವರು ಕನ್ನಡ ಮರಾಠಿ ಭಾಷೆಯಲ್ಲಿ ಕೆಲಸ ಮಾಡಿದರು. ಪುಣೆಯಲ್ಲಿ ಹಾವನೂರ ತೊಡಗಿಸಿಕೊಂಡ ರೀತಿ ಹೀಗಿತ್ತು ಎಂದು ವಸಂತಕುಮಾರ ತಾಳ್ತಜೆ ಹೇಳುತ್ತಾರೆ. "ಪುಣೆಯಲ್ಲಿ ಕೊ.ಕ.ಮ(ಕೊಂಕಣಿ, ಕನ್ನಡ, ಮರಾಠಿ) ಸಮ್ಮೇಳನ ನಡೆಸಲು ನಿರ್ಧರಿಸಿದರು. ಮೂರು ಭಾಷೆಗಳ ಸಾಮರಸ್ಯಕ್ಕೆ ಇದು ವೇದಿಕೆಯಾಗಿತ್ತು. ಮುಂಬಯಿಯ ಪುಣೆಯ ಠಾಣ ಎಂಬ ಸ್ಥಳದಲ್ಲಿ ಸಮ್ಮೇಳನ ನಡೆಸಿದರು. ಹೀಗೆ ವಿವಿಧ ರೀತಿಯಲ್ಲಿ ಭಾಷಾ ಸೌಹಾರ್ದತೆಗಾಗಿ ತಮ್ಮನ್ನು ತೊಡಗಿಸಿಕೊಂಡರು. ಕೊ.ಕ.ಮ. ಎನ್ನುವ ವಿಶೇಷ ಹಣ್ಣು ಇದನ್ನು ಪುನಃ ನಾಶ ಪುಳಿ ಅಥವಾ ಉಪ್ಪಾಳಿ ಮಾಡಲು ಬಳಸುತ್ತಾರೆ. ನಮ್ಮಲ್ಲಿ ಹಣ್ಣಿನ ರಸ ಎಂದು ಕರೆಯುತ್ತೇವೆ".[೨೧] ನಂತರದಲ್ಲಿ ಬೆಂಗಳೂರಿಗೆ ಬಂದು ನೆಲೆಸಿದರು.

**ಪ್ರವೃತ್ತಿ ಜೀವನ**

ಮಂಗಳೂರಿನ ಕರ್ನಾಟಕ ಥಿಯೋಲಾಜಿಕಲ್ ಕಾಲೇಜು ಮತ್ತು ಸಂಶೋಧನ ಕೇಂದ್ರ ಇವು ಬಾಸಿಲ್ ಮಿಶನ್ನಿನ ಟಿಸಿಲುಗಳು; ಹರ್ಮನ್ ಮೊಗ್ಲಿಂಗ್. ಕಿಟೆಲ್ ಮುಂತಾದ

ಮಿಶನರಿಗಳ ಸಂಪೋಷಣೆಯಲ್ಲಿ ನಡೆದ ಸಂಸ್ಥೆಗಳು. ಈ ಸಂಸ್ಥೆಗಳಿಗೂ ಹಾವನೂರ ಅವರಿಗೂ ಎಲ್ಲಿಲ್ಲದ ನಂಟು. ಆಧುನಿಕ ಕಾಲದಲ್ಲಿಯೂ ಬಾಸೆಲ್‌ಗೂ ಮತ್ತು ಥಿಯೋಲಾಜಿಕಲ್ ಸಂಸ್ಥೆಗಳಿಗೂ ನಡುವೆ ವಿದ್ವತ್ ಸೇತುವೆಯಾಗಿ ಕಾರ್ಯನಿರ್ವಹಿಸಲು ಶ್ರೀನಿವಾಸ ಹಾವನೂರ ಪಾತ್ರ ಹಿರಿದಾದುದಾಗಿದೆ.

ಬೆಂಗಳೂರಿನ ಮಿಥಿಕ್ ಸೊಸೈಟಿಯಲ್ಲಿ ಜಿ.ಎಸ್.ಸದಾನಂದ ಮತ್ತು ಹಾವನೂರ ಅವರು ಆಕಸ್ಮಿಕವಾಗಿ ಭೇಟಿಯಾದರು. ಆಗ ಮಿಶನರಿಗಳ ಕಾರ್ಯವೈಖರಿ ಬಗ್ಗೆ ಅವರು ಚರ್ಚಿಸಿದರು. ಮಂಗಳೂರಿನ ಸಂಶೋಧನ ಕೇಂದ್ರಕ್ಕೆ ಬರಲು ಹಾವನೂರ ಅವರು ಇಚ್ಛಿಸಿದರು. ೧೯೯೬ರಲ್ಲಿ ಕರ್ನಾಟಕ ಥಿಯೋಲಾಜಿಕಲ್ ಕಾಲೇಜು ಗ್ರಂಥಾಲಯಕ್ಕೆ ಗೌರವ ಸಂಶೋಧಕರಾಗಿ ಬಂದು ತಮ್ಮ ಕಾರ್ಯವನ್ನು ಆರಂಭಿಸಿದರು.

ಬಾಸೆಲ್ ಮಿಶನ್ ಪ್ರೆಸ್‌ನಲ್ಲಿ ಮುದ್ರಣಗೊಂಡ ಹಾಗೂ ಆ ಸಂಸ್ಥೆಯ ಎಲ್ಲಾ ಪುಸ್ತಕಗಳು ಈ ಪತ್ರಾಗಾರದಲ್ಲಿ ಲಭ್ಯವಿರದ ಅನೇಕ ಅಪೂರ್ವ ಕೃತಿಗಳು ಬಾಸೆಲ್‌ನಲ್ಲಿದ್ದವು. ಈ ಎಲ್ಲಾ ಕೃತಿಗಳು ಮಂಗಳೂರಿನ ಥಿಯೋಲಾಜಿಕಲ್ ಗ್ರಂಥಾಲಯದಲ್ಲಿ ದೊರೆಯುವಂತೆ ಮಾಡುವುದು ಇವರ ಉದ್ದೇಶವಾಗತ್ತು. ಬಾಸೆಲ್ ಮಿಶನ್ ಹೆರಿಟೇಜ್ ಯೋಜನೆಯ ಸಂಗ್ರಹದಲ್ಲಿದ್ದ ಹಳೆಯ ಮತ್ತು ಅಮೂಲ್ಯ ಕೃತಿಗಳನ್ನು ಮೈಕ್ರೋಫಿಲ್ಮ್ ರೂಪದಲ್ಲಿ ಸಂರಕ್ಷಣೆ ಮಾಡುವ ಯೋಜನೆ ಕರ್ನಾಟಕ ಥಿಯೋಲಾಜಿಕಲ್ ಕಾಲೇಜು ಕಾರ್ಯರೂಪಕ್ಕೆ ತಂದಿತು. ಕನ್ನಡ, ತುಳು ಮತ್ತು ಮಲಯಾಳಂ ಪ್ರಕಟಣೆಗಳಲ್ಲಿ ಹಳೆಯ ಹಾಗೂ ಅಮೂಲ್ಯವೆನಿಸಿದ ಸುಮಾರು ಮೂರು ಸಾವಿರ ಪುಸ್ತಕಗಳು ಹಾಗೂ ೧೯೬ ಮೈಕ್ರೋಫಿಲ್ಮ್‌ಗಳನ್ನು ಮಂಗಳೂರು ಕೇಂದ್ರಕ್ಕೆ ತಂದರು.

ಓದುಗರನ್ನು ಗಮನದಲ್ಲಿಟ್ಟುಕೊಂಡು ಮೈಕ್ರೋಫಿಲ್ಮ್ ರೀಡರ್‌ನಂತಹ ಸಾಧನವನ್ನು ಪುನರ್‌ರೂಪಿಸಿ ಓದಲಿಕ್ಕೆ ಅನುಕೂಲ ಕಲ್ಪಿಸಿದರು. ಅಲ್ಲದೆ ಮೈಕ್ರೋಫಿಲ್ಮ್‌ಗಳಲ್ಲಿ ಒಂದೊಂದು ಕೃತಿಯ ಬೇರೆ ಬೇರೆ ಆವೃತ್ತಿಗಳಿದ್ದವು. ಬಾಸೆಲ್‌ನಿಂದ ತಂದ ಈ ಪತ್ರಾಗಾರದಲ್ಲಿದ್ದ ಎಲ್ಲಾ ಕನ್ನಡ, ತುಳು ಭಾಷೆಯ ೧೯, ೨೦ನೇ ಶತಮಾನದ ಮೊದಲ ಅರ್ಧದ ಎಲ್ಲಾ ಬಾಸೆಲ್ ಮಿಶನ್ ಪ್ರಕಟನೆಗಳನ್ನು ವೈಜ್ಞಾನಿಕವಾಗಿ ವರ್ಗೀಕರಿಸಿ ಒಂದು ಕ್ಯಾಟ್‌ಲಾಗನ್ನು ಸಿದ್ಧಪಡಿಸಿಕೊಟ್ಟರು. ಮುಂದಿನ ಯುವ ಪೀಳಿಗೆಯ ಸಂಶೋಧಕರಿಗೆ ಅಪಾರ ಜ್ಞಾನ ನಿಧಿ ದೊರೆತಂತಾಯಿತು. ಅಲ್ಲದೆ ವಿದ್ಯಾರ್ಥಿಗಳಿಗೆ ಪರಿಚಯಾತ್ಮಕವಾದ ಪಾಠಗಳನ್ನು ಬೋಧಿಸುತ್ತಿದ್ದರು. ಅವರ ಬಳಿ ಹೋದ ಸಂಶೋಧಕರಿಗೆ ತುಂಬ ಸಹಾಯ ಮಾಡುತ್ತಿದ್ದರು.

**ಆಕರಗಳ ಸಂಗ್ರಹ :**

ಶ್ರೀನಿವಾಸ ಹಾವನೂರ ಪ್ರಾಧ್ಯಾಪಕರಾಗಿ ಮಂಗಳೂರಿನ ವಿಶ್ವವಿದ್ಯಾಲಯದಲ್ಲಿ ಕಾರ್ಯನಿರ್ವಹಿಸುವ ಸಂದರ್ಭದಲ್ಲಿ ಪ್ರಾಚೀನ ಕುರುಹುಗಳನ್ನು ಹುಡುಕಿಕೊಂಡು ಹಳ್ಳಿ ಹಳ್ಳಿಗೆ ಹೋಗಿ ಸಂಗ್ರಹಿಸುತ್ತಿದ್ದರು. ದಕ್ಷಿಣ ಕನ್ನಡ ಜಿಲ್ಲೆಯ ಎರಡು ದೀರ್ಘಕಾಲದ

ಪತ್ರಿಕಾ ಸಂಪುಟಗಳನ್ನು ವಿಶೇಷವಾಗಿ ಸ್ಮರಿಸಿಕೊಳ್ಳಬೇಕು. ಸ್ವದೇಶಾಭಿಮಾನ, ಹಾಗೂ ಉಡುಪಿಯ 'ನವಯುಗ' ಪತ್ರಿಕೆ ಸಂಪುಟಗಳನ್ನು ಸಂಗ್ರಹಿಸಿದರು. ಯಕ್ಷಗಾನ ಹಾಗೂ ಭೂತಾರಾಧನೆಗೆ ಸಂಬಂಧಿಸಿದ ಪರಿಕರ ಮತ್ತು ವಸ್ತುಗಳು ಅವರ ಶ್ರಮದಿಂದ ಸಂಗ್ರಹಾಲಯಕ್ಕೆ ಸೇರ್ಪಡೆಯಾದವು. ಈ ಅವಧಿಯಲ್ಲಿ ಎರಡು ಮಹತ್ವ ಕಾರ್ಯಗಳನ್ನು ಮಾಡಿದರು. ೧. ಸಂಶೋಧನ ವಸ್ತಸಂಗ್ರಹಾಲಯವನ್ನು ನಿರ್ಮಿಸಿದ್ದು ಸ್ಮರಣಾರ್ಹ. ೨. ಮಿಶನರಿಗಳ ದಿನಚರಿ, ಪತ್ರ ವ್ಯವಹಾರ, ಕ್ರೈಸ್ತ ಸಭಾಕ್ಕೆ ಸಂಬಂಧಿಸಿದ ದಾಖಲೆಗಳು, ಮಿಶನರಿಗಳು ರಚಿಸಿದ ಪಠ್ಯಪುಸ್ತಕ, ಕ್ರೈಸ್ತ ಸಂಗೀತ ರಚನೆಗಳ ಸಂಗ್ರಹಕ್ಕಾಗಿ ಬಾಸೆಲ್ ಮಿಶನರಿ ಪತ್ರಾಗಾರಕ್ಕೆ ೫-೬ ಬಾರಿ ಹೋಗಿ ಬಂದಿದ್ದರು. ಇದಲ್ಲದೆ ಪತ್ರಾಗಾರದ ಆರ್‌ಕೈವಿಸ್ಟ ಪೂಪಾಲ್ ಚಮ್ರಕ್ಕೆಸ್ ನಿಕಟ ಸಂಪರ್ಕವನ್ನು ಇಟ್ಟುಕೊಂಡಿದ್ದರು. ಚರಿತ್ರೆ, ಕನ್ನಡ ಸಾಹಿತ್ಯ, ಅಭಿನಂದನ ಗ್ರಂಥ, ಧಾರ್ಮಿಕ ಗ್ರಂಥ ಮತ್ತು ಸಮಗ್ರ ಸಾಹಿತ್ಯ ವಿಮರ್ಶೆ ಹೀಗೆ ಅವರ ಬಳಿ ಅಪೂರ್ವ ಸಂಗ್ರಹವಿತ್ತು. ಈ ಸಂಗ್ರಹದ ಪುಸ್ತಕಗಳನ್ನು ಸಂತ ಅಲೋಷಿಯಸ್ ಕಾಲೇಜು ಮಂಗಳೂರು, ಮಂಗಳೂರು ವಿಶ್ವವಿದ್ಯಾಲಯದ ಗ್ರಂಥಾಲಯ, ಉಡುಪಿ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಬೆಂಗಳೂರಿನ ಬಿ.ಎಂ.ಶ್ರೀ ಪ್ರತಿಷ್ಠಾನ ಮತ್ತು ಮಿಥಿಕ್ ಸೊಸೈಟಿ ಬೆಂಗಳೂರು ಈ ಸಂಸ್ಥೆ ಮತ್ತು ಗ್ರಂಥಾಲಯಗಳಿಗೆ ತಮ್ಮ ಸಂಗ್ರಹದಲ್ಲಿದ್ದ ಪುಸ್ತಕಗಳನ್ನು ದಾನವಾಗಿ ಕೊಟ್ಟಿದ್ದರು.

ಶ್ರೀನಿವಾಸ ಹಾವನೂರ ದಕ್ಷಿಣ ಕನ್ನಡ ಸಾಹಿತ್ಯ ಬಳಗ ಕಟ್ಟಿಕೊಳ್ಳುವುದರ ಮೂಲಕ ಸಾಹಿತ್ಯಿಕ ಹಾಗೂ ಸಾಂಸ್ಕೃತಿಕವಾಗಿ ಚರ್ಚಿಸುವ ಪರಿಸರ ಸೃಷ್ಟಿಸಿದರು. ಸಾಹಿತ್ಯ ಬಳಗದ ಸದಸ್ಯರು ಸುವರ್ಣ ಜಲಜಾಕ್ಷಿ, ಶ್ರೀ ಕಲಾ ಉಡುಪ, ಮನೋರಮಾ ಭಟ್ಟ, ಅಮ್ಮೆನ್, ಬಿ.ಎಂ.ರೋಹಿಣಿದೇವಿ, ನಾಗೇಶ ಹಾವನೂರ, ಪ್ರಭಾಕರ ಜೋಷಿ, ನಾ. ದಾಮೋದರ ಶೆಟ್ಟಿ; ಈ ಬಳಗದ ವತಿಯಿಂದ ಸಾಹಿತ್ಯ ಹಾಗೂ ಸಂಸ್ಕೃತಿ ಕೃಷಿ ಕುರಿತು ಮಾತನಾಡುವ ಮನೋಸ್ಥೈರ್ಯವನ್ನು ತುಂಬುವ ಕೆಲಸ ಮಾಡಿದರು.

ಒಬ್ಬರಿಗೊಂದು ವಿಷಯವನ್ನು ಕೊಟ್ಟು ಬರೆಯಲು ಹಾಗೂ ಮಾತನಾಡಲು ಅವಕಾಶವನ್ನು ಕಲ್ಪಿಸಿಕೊಡುತ್ತಿದ್ದರು. ಹೀಗಾಗಿ ಸಾಹಿತ್ಯಿಕ, ಸಾಂಸ್ಕೃತಿಕ ಹಾಗೂ ಸಾಮಾಜಿಕವಾಗಿ ಈ ಬಳಗವು ಆ ನಾಡಿನ ಪ್ರಾದೇಶಿಕ ಅಸ್ಮಿತೆಯನ್ನು ಉಳಿಸಿಕೊಟ್ಟಿತು. ಹಾಗೆಯೇ ದಾಸ ಸಾಹಿತ್ಯ ಮತ್ತು ಕವನಗಳ ಕುರಿತು ೨೦೦೩ರಲ್ಲಿ ಪ್ರತ್ಯೇಕವಾಗಿ ಬರೆಯುವಂತೆ ಪ್ರೇರೇಪಿಸಿದರು. ಅಲ್ಲದೆ ಹಳೆಗನ್ನಡ ಸಾಹಿತ್ಯ, ಶಾಸ್ತ್ರ ಸಾಹಿತ್ಯ, ವೈದ್ಯಶಾಸ್ತ್ರ, ಗಣಿತಶಾಸ್ತ್ರ, ಮಾಟ-ಮಂತ್ರ, ಶಿಲ್ಪಶಾಸ್ತ್ರ, ಅದ್ಭುತ ಕಥೆ, ಹಾಸ್ಯ ಲೇಖನ, ಗಂಭೀರ ಲೇಖನ, ಭಾಷೆ, ಸಂಶೋಧನೆಗಳಿಗೆ ಸಂಬಂಧಿಸಿದ ಅನೇಕ ಲೇಖನಗಳನ್ನು ಪ್ರಕಟಿಸಿದರು.

ಹಾಗೆಯೇ ಜೋಷಿಯವರು ಯಕ್ಷಗಾನ ವಿಷಯದ ಮೇಲೆ ಪ್ರಭುತ್ವ ಹೊಂದಿದ್ದರು. ಅವರು ಯಕ್ಷಗಾನದ ವಿಷಯದ ಕೃತಿಗಳನ್ನು ಪ್ರಕಟಿಸಿದರು. ಹೀಗೆ ಮಂಗಳೂರು ಸಾಹಿತ್ಯ ಬಳಗದ ಮೂಲಕ ಸಾಹಿತ್ಯ ಕೃಷಿಯು ವ್ಯಕ್ತಿ, ಪ್ರಾದೇಶಿಕ ಮತ್ತು ಸಾಂಸ್ಕೃತಿಕ ಅನನ್ಯತೆಗೆ ದಾರಿ ತೋರಿಸುವುದು ಶ್ರೀನಿವಾಸ ಹಾವನೂರ ಅವರ ಮುಖ್ಯ ಉದ್ದೇಶವಾಗಿತ್ತು.

ಶ್ರೀನಿವಾಸ ಹಾವನೂರ ಕಾರ್ಯವೈಖರಿ ಗಮನಿಸಿದ ಅವರ ಒಡನಾಡಿಗಳು ತಮ್ಮ ಅಭಿಪ್ರಾಯಗಳನ್ನು ಹಂಚಿಕೊಂಡಿದ್ದಾರೆ. ವಸಂತಕುಮಾರ ತಾಳ್ತಜೆ ಅವರು "ಹಾವನೂರ ಅವರ ವ್ಯಕ್ತಿತ್ವ ಪಾದರಸ, ಕೋಳಿನಿದ್ದೆ ಸ್ವಭಾವದವರು. ಆತ್ಮೀಯತೆ, ಭಾವನಾತ್ಮಕ ಸಂಬಂಧ, ಶಿಸ್ತು, ಸೌಮ್ಯ, ವಿಷಯ ಗಂಭೀರವಾಗಿದ್ದರೂ ಅದನ್ನು ಅಷ್ಟೇ ತಿಳಿಹಾಸ್ಯವಾಗಿ ಹೇಳುವ ಶೈಲಿಯನ್ನು ಮೈಗೂಡಿಸಿಕೊಂಡಿದ್ದರು. ಪ್ರತಿಯೊಬ್ಬ ಕವಿಯ ಹಸ್ತಪ್ರತಿ ಸಂಕ್ಷಿಪ್ತ ಮಾಹಿತಿ ಕೋಶ ರಚಿಸಿದರು. ಅವರ ಕಾಯಕ ಬಹಳ ಶಿಸ್ತಿನಿಂದ ಕೂಡಿತ್ತೆಂದು"[೨೨] ತಮ್ಮ ಅನುಭವಗಳನ್ನು ಹಂಚಿಕೊಂಡಿದ್ದಾರೆ.

ಹಾವನೂರ ಅವರು ಸದಾ ಕಾಯಕಜೀವಿ. ಇರುವೆಯಂತೆ ಸದಾ ಚಲಿಸುತ್ತಾ, ಕೆಲಸ ಮಾಡುತ್ತಾ, ಕೂಡಿಹಾಕುತ್ತಾ, ಬೇರೆಯವರಿಗಾಗಿ ದುಡಿಯುತ್ತಾ ಸಂತೃಪ್ತಿಪಡುವ ಸಂತ 'ಚಂಚುಪ್ರವೇಶ್' ಎನ್ನುವುದು ಅವರಿಗೆ ಪ್ರಿಯವಾದ ಪದ ಯಾರಿಂದಲಾದರೂ ಸಾಮಗ್ರಿ ನೆರವು ಬೇಕಾಗಿದ್ದರೆ ಮೊದಲು ತಮ್ಮಿಂದ ಆಗುವಷ್ಟು ಸಾಮಗ್ರಿ ಹಾಗೂ ನೆರವನ್ನು ಕೊಟ್ಟು ಬಳಿಕ ಅವರಿಂದ ಪಡೆಯಬೇಕಾದದ್ದನ್ನು ಪಡೆಯುತ್ತಿದ್ದರು. ಹಾವನೂರ ಅವರ ಕಾರ್ಯಶೈಲಿ, ಜಾಣತನ, ಕನ್ನಡದ ಅಪೂರ್ವ ಸಂಪತ್ತುಳ್ಳ ಸ್ವಿಟ್ಜರ್ಲೆಂಡಿನ ಬಾಸೆಲ್‌ಗೆ ಸಾಕಷ್ಟು ಬಾರಿ ಹೋಗಿ ಕನ್ನಡ, ತುಳು, ಸಾಮಗ್ರಿಗಳನ್ನು ಹೊತ್ತು ತಂದಿರುವ ಹಾವನೂರ ಅವರನ್ನು ನಾನು ಬಾಸೆಲ್‌ನಲ್ಲಿ ಭೇಟಿಮಾಡಿ ಅವರು ಮಾಡುವ ಕೆಲಸವನ್ನು ಕಣ್ಣಾರೆ ಕಾಣುವ ಸುಯೋಗ ದೊರಕಿತು.

ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಹಾವನೂರ ಕುರಿತು ಹೇಳಿದ್ದು ಹೀಗೆ "ಉತ್ತರ ಕರ್ನಾಟಕದ ಅಸಂಖ್ಯ ಲೇಖಕರನ್ನು ಮತ್ತು ಅವರ ಕೃತಿಗಳನ್ನು ಸಾಹಿತ್ಯ ಚರಿತ್ರೆ ಕಕ್ಷೆಯಲ್ಲಿ ತಂದ ಮೊದಲ ಸಂಶೋಧಕರು. ಶ್ರೀನಿವಾಸ ಹಾವನೂರ ಸಾಹಿತ್ಯ ಚರಿತ್ರೆ ಹಾಗೂ ಕನ್ನಡ ಭಾಷೆ ಇತಿಹಾಸಕ್ಕೆ ದೊಡ್ಡ ಕೊಡುಗೆಯಾದರು. ಹಾ.ಮಾ.ನಾಯಕರ ಪ್ರೋತ್ಸಾಹದಿಂದ ಹಾವನೂರ ವ್ಯಕ್ತಿತ್ವದ ಗ್ರಂಥಾಲಯದಿಂದ ಗ್ರಂಥರಂಗಕ್ಕೆ ಸಾಹಿತ್ಯ ವಲಯಕ್ಕೆ ಅಧ್ಯಾಪಕ ವರ್ಗಕ್ಕೆ ವಿಸ್ತರಿಸಿತು"[೨೩] ಎಂದು ತಮ್ಮ ಅನುಭವದ ಮಾತನ್ನು ಅಭಿವ್ಯಕ್ತಪಡಿಸಿದರು.

ಎಸ್.ಎಲ್. ಶ್ರೀನಿವಾಸಮೂರ್ತಿಯವರು ಶ್ರೀನಿವಾಸ ಹಾವನೂರ ಒಡನಾಟದ ಅನುಭವದ ಮಾತುಗಳನ್ನು ಹೀಗೆ ಹಂಚಿಕೊಂಡರು. ಎಂ.ಎಂ.ಕಲಬುರ್ಗಿಯವರ ಅಭಿನಂದನ ಗ್ರಂಥ ಮಹಾಮಾರ್ಗವನ್ನು ಕುರಿತು ವಿಮರ್ಶೆ ಮಾಡಲೆಂದು, 'ಪ್ರಜಾವಾಣಿ'ಯವರು ಹಾವನೂರರಿಗೆ ಕಳುಹಿಸಿದ್ದರು. "ಕೇವಲ ಕುತೂಹಲದಿಂದಷ್ಟೇ ಅದನ್ನು ಓದಲು ಮನೆಗೆ ಒಯ್ದು ಶ್ರೀನಿವಾಸರಿಗಿಂತ ಮೊದಲು ಅಷ್ಟೆ ದೊಡ್ಡ ಗ್ರಂಥವನ್ನು ಓದಿ ಟಿಪ್ಪಣಿ ಮಾಡಿಟ್ಟುಕೊಂಡಿದ್ದರು. ಇವರು ಗಮನಿಸಿದ ಗುಣದೋಷಗಳನ್ನು ಕೇಳಿದರು. ಆದಾದ ಕೆಲವು ದಿನಗಳ ನಂತರ ಪತ್ರಿಕೆಯಲ್ಲಿ ವಿಮರ್ಶೆ ಪ್ರಕಟವಾಯಿತು. ಬರೆದವರ ಹೆಸರು ಶ್ರೀನಿವಾಸಮೂರ್ತಿ ಮತ್ತು ಹಾವನೂರ ಎಂದಿತ್ತು. ಏಕೆ ಸರ್ ಹೀಗೆ ಮಾಡಿದಿರಿ ಎಂದರೆ,

ನೀವು ಗಮನಿಸಿದ ಕೆಲವು ಸಂಗತಿಗಳು ಈ ಲೇಖನದಲ್ಲಿ ಪ್ರಸ್ತಾಪಗೊಂಡಿದೆ. ಅದಕ್ಕಾಗಿ ಹೀಗೆ ಎಂಬ ಉತ್ತರ ಬಂತು"[೨೫] ಹೀಗೆ ಹಾವನೂರ ತಮ್ಮ ಶಿಷ್ಯ ಸಮುದಾಯಕ್ಕೆ ಪ್ರೋತ್ಸಾಹಿಸುತ್ತಿದ್ದರು. ಶ್ರೀನಿವಾಸಮೂರ್ತಿಯವರಿಗೆ ಸಭೆ-ಸಮಾರಂಭಗಳಲ್ಲಿ ಅವಕಾಶ ಕಲ್ಪಿಸಿ ಮತ್ತು ಬರವಣಿಯ ವಿಕಾಸದ ದಾರಿಯನ್ನು ತೋರಿಸಿ ಕೊಟ್ಟವರಲ್ಲಿ ಹಾವನೂರ ಅವರು ಒಬ್ಬರಾಗಿದ್ದರು ಎಂದು ಹೇಳಿದರು.

ನಿವೇದಿತಾ ಹೊನ್ನತ್ತಿಯವರು ತಮ್ಮ ತಂದೆಯವರನ್ನು ಈ ಮುಂದಿನಂತೆ ನೆನಪಿಸಿಕೊಳ್ಳುತ್ತಾರೆ. "ನಮ್ಮ ಅಪ್ಪ ನಾಳೆ ಪರೀಕ್ಷೆ ಅನ್ನುವ ರೀತಿಯಲ್ಲಿ ಪ್ರತಿದಿನವೂ ಅಧ್ಯಯನದಲ್ಲಿ ತೊಡಗಿರುತ್ತಿದ್ದರು. ಆದ್ರೆ ಇವರ ತಕರಾರು ಇಷ್ಟೆ: ಹಿಂದೆ ಆದದ್ದು ಆಗಿ ಹೋಗಿದೆ. ಇನ್ನು ಮುಂದಾದರೂ ಕೆಲಸದ ಯೋಜನೆ ಮಾಡಲಿ. ಆದರೆ ಅದಕ್ಕಾಗಿ ಈಗ ಶ್ರಮವಹಿಸುವುದು ಬೇಡವೆಂದು"[೨೬] ಹೇಳುತ್ತಿದ್ದರು ಎಂದು ಹಾವನೂರ ಒಡನಾಟದ ವ್ಯಕ್ತಿತ್ವವನ್ನು ಸ್ಮರಿಸಿಕೊಂಡರು. ಇಂತಹ ಶ್ರೇಷ್ಠ ಸಾಹಿತಿಯಾದ ಹಾವನೂರ ಅವರು ೬ ಏಪ್ರಿಲ್ ೨೦೧೦ರಂದು ವಿಧಿವಶರಾದರು; ಕನ್ನಡ ಸಾಹಿತ್ಯ ಲೋಕವು ಒಬ್ಬ ವಿಶಿಷ್ಟ ಸಂಶೋಧಕನನ್ನು ಕಳೆದುಕೊಂಡಂತಾಯಿತು.

**ಸಂದ ಪ್ರಶಸ್ತಿಗಳು**

ಶ್ರೀನಿವಾಸ ಹಾವನೂರ ಅವರ ಸಾಹಿತ್ಯ, ಸಂಸ್ಕೃತಿ ಮತ್ತು ಸಮಾಜ ಸೇವೆಯನ್ನು ಪರಿಗಣಿಸಿ ಸರಕಾರಿ ಮತ್ತು ಸರಕಾರೇತರ ಸಂಸ್ಥೆಗಳು ಪ್ರಶಸ್ತಿ-ಪುರಸ್ಕಾರಗಳನ್ನು ನೀಡಿ ತಮ್ಮ ಸಂಸ್ಥೆಯ ಗೌರವವನ್ನು ಹೆಚ್ಚಿಸಿಕೊಂಡಿವೆ. ಅವುಗಳಲ್ಲಿ ಮುಖ್ಯವಾದವುಗಳನ್ನು ಈ ಮುಂದೆ ಉಲ್ಲೇಖಿಸಲಾಗಿದೆ. ೧. ೧೯೯೩ರಲ್ಲಿ ಕರ್ನಾಟಕ ಸರ್ಕಾರದ ರಾಜ್ಯೋತ್ಸವ ಪುರಸ್ಕಾರ ೨. ೧೯೯೦ರಲ್ಲಿ ಕನ್ನಡ ಅಕಾಡೆಮಿಯಿಂದ ಹಿರಿಯ ಬರಹಗಾರ ಪ್ರಶಸ್ತಿ ೩. ಕನ್ನಡ ಅಧ್ಯಯನಕ್ಕಾಗಿ ಕಂಪ್ಯೂಟರ್ ಹೇಗೆ ಬಳಸಬೇಕೆಂದು ತೋರಿಸಿದ್ದಾಗಿ ಕನ್ನಡ ಸಾಹಿತ್ಯ ಗೌರವ ಪುರಸ್ಕಾರ. ೪. ೨೦೦೮ರಲ್ಲಿ ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ನಾಡೋಜ ಗೌರವ ಪ್ರಶಸ್ತಿ. ೫. ೨೦೦೮ರಲ್ಲಿ ಚಿದಾನಂದ ಪ್ರಶಸ್ತಿ ಹೀಗೆ ಇನ್ನೂ ಅನೇಕ ಪ್ರಶಸ್ತಿಗಳಿಗೆ ಭಾಜನರಾಗಿದ್ದಾರೆ. ಹಲವಾರು ಸಮ್ಮೇಳಗಳನ್ನು ಆಯೋಜಿಸಿ ನಡೆಸಿದ್ದಾರೆ. ಆ ಮೂಲಕ ಕನ್ನಡದ ಸಾಂಸ್ಕೃತಿಕ ಪರಂಪರೆಯ ಮಹತ್ವ ಪರಿಚಯಿಸಲು ಅವರು ಶ್ರಮಿಸಿದ್ದಾರೆ. ಉದಾಹರಣೆಗಾಗಿ ಕೆಲವನ್ನು ಇಲ್ಲಿ ಉಲ್ಲೇಖಿಸಲಾಗಿದೆ. ೧. ೧೯೯೯ರಲ್ಲಿ ೧೩ನೇ ಕರ್ನಾಟಕ ಇತಿಹಾಸ ಸಮ್ಮೇಳನ ಕಾಂಗ್ರೆಸ್ ನಡೆಸಿಕೊಟ್ಟರು. ೨. ೨೦೦೫ರಲ್ಲಿ ಮೈಸೂರು ಕರ್ನಾಟಕ ಐತಿಹಾಸಿಕ ಕಾಂಗ್ರೆಸ್ ಸಮ್ಮೇಳನ ನಡೆಸಿಕೊಟ್ಟರು. ೩. ೨೦೦೮ರಲ್ಲಿ ಹರಿದಾಸ ಸಾಹಿತ್ಯ ಸಮ್ಮೇಳನವನ್ನು ನಡೆಸಿಕೊಟ್ಟರು. ಹೀಗೆ ಕನ್ನಡ ಭಾಷೆ, ಸಾಹಿತ್ಯ ಮತ್ತ ಸಮಾಜಕ್ಕೆ ಅವರ ಕೊಡುಗೆ ಅಪಾರವಾಗಿದೆ. ಮುಂದಿನ ಅಧ್ಯಯನಗಳಲ್ಲಿ ಹಾವನೂರ ಅವರ ಸಮಗ್ರ ಸಾಹಿತ್ಯವನ್ನು ಅವಲೋಕಿಸುವ ಪ್ರಯತ್ನ ಮಾಡಲಾಗಿದೆ.

**ಕೊನೆ ಟಿಪ್ಪಣಿಗಳು**

೧. ಸಂಕಥನ, ನಾ ದಾಮೋದರ ಶೆಟ್ಟಿ, ಪು.ಸಂ. ೭೩೬
೨. ಅದೇ, ಪುಟ ಸಂ. ೬೬೧
೩. ಅದೇ, ಪುಟ ಸಂ. ೬೬೫
೪. ಅದೇ, ಪುಟ ಸಂ. ೬೬೬
೫. ಅದೇ, ಪುಟ ಸಂ. ೬೬೬
೬. ಅದೇ, ಪುಟ ಸಂ. ೬೬೬
೭. ಅದೇ, ಪುಟ ಸಂ. ೬೬೭
೮. ಅದೇ, ಪುಟ ಸಂ. ೬೭೯
೯. ಅದೇ, ಪುಟ ಸಂ. ೬೭೯
೧೦. ಅದೇ, ಪುಟ ಸಂ. ೬೭೯
೧೧. ಅದೇ, ಪುಟ ಸಂ. ೬೭೯
೧೨. ಅದೇ, ಪುಟ ಸಂ. ೬೬೩
೧೩. ಅದೇ, ಪುಟ ಸಂ. ೬೬೩
೧೪. ಅದೇ, ಪುಟ ಸಂ. ೬೬೩–೬೪
೧೫. ಅದೇ, ಪುಟ ಸಂ. ೬೭೭
೧೬. ಅದೇ, ಪುಟ ಸಂ. ೬೭೭–೭೮
೧೭. ಅದೇ, ಪುಟ ಸಂ. ೬೮೦
೧೮. ಅದೇ, ಪುಟ ಸಂ. ೬೮೫
೧೯. ಅದೇ, ಪುಟ ಸಂ. ೬೮೫
೨೦. ಅದೇ, ಪುಟ ಸಂ. ೬೮೬–೮೭
೨೧. ವಸಂತಕುಮಾರ ತಾಳ್ತಜೆ ಅವರ ಅಭಿಪ್ರಾಯ
೨೨. ವಸಂತಕುಮಾರ ತಾಳ್ತಜೆ ಅವರ ಅಭಿಪ್ರಾಯ
೨೩. ವಿವೇಕ ರೈ ಅವರ ಅಭಿಪ್ರಾಯ
೨೪. ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಅಭಿಪ್ರಾಯ
೨೫. ಶ್ರೀನಿವಾಸಮೂರ್ತಿಯರ ಅಭಿಪ್ರಾಯ
೨೬. ನಿವೇದಿತ ಹೊನ್ನತ್ತಿ ಅವರ ಅಭಿಪ್ರಾಯ

## ಅಧ್ಯಾಯ ಮೂರು

## ಶ್ರೀನಿವಾಸ ಹಾವನೂರ ಅವರ ಸಮಗ್ರ ಸಾಹಿತ್ಯದ ವ್ಯಾಪ್ತಿ

ಶ್ರೀನಿವಾಸ ಹಾವನೂರ ಅವರ ಸಾಹಿತ್ಯ ರಚನೆ ಪ್ರಾರಂಭಗೊಂಡಿದ್ದು ಸೃಜನ ಸಾಹಿತ್ಯದಿಂದ; ಸಣ್ಣಕಥೆ, ಲಲಿತ ಪ್ರಬಂಧ, ವಿಚಾರ ಸಾಹಿತ್ಯ, ಜೀವನ ಚರಿತ್ರೆ, ವಿಮರ್ಶೆ, ಸಂಶೋಧನೆ, ಸಂಪಾದನೆ, ಅನುವಾದ ಮತ್ತು ಇತರ ಸಾಹಿತ್ಯ (ಪತ್ರಿಕಾಸಾಹಿತ್ಯ ನಿಘಂಟು) ಹೀಗೆ ಅವರ ಸಾಹಿತ್ಯ ಬರವಣಿಗೆ ವಿಸ್ತರಿಸಿಕೊಂಡಿದೆ.

ಬದುಕಿನ ಅನೇಕ ಮಗ್ಗಲುಗಳಾದ ಕೌಟುಂಬಿಕ, ಸಾಮಾಜಿಕ, ಧಾರ್ಮಿಕ, ರಾಜಕೀಯ ವಿವಿಧ ಸಂಗತಿಗಳು ಇಲ್ಲಿ ಅನಾವರಣಗೊಂಡಿವೆ. ಭೂತ ಮತ್ತು ವರ್ತಮಾನ ವಿಷಯಗಳನ್ನು ಸಂಯೋಜನೆಗೊಳಿಸಿ, ವ್ಯಕ್ತಿಯ ಅಭಿರುಚಿಗೆ ತಕ್ಕಂತೆ ವಿಷಯವನ್ನು ಪರಿಚಯಿಸುವ ಪ್ರಯತ್ನ ಮಾಡಿದ್ದಾರೆ. ಸಾಮಾನ್ಯ ವಿಷಯವನ್ನು ಸಾಹಿತ್ಯ ರೂಪದಲ್ಲಿ ಸಾರ್ವತ್ರಿಕವಾಗಿ ಓದುವಂತಹ ಅವಕಾಶವನ್ನು ಈ ಸೃಜನ ಸಾಹಿತ್ಯದ ಮೂಲಕ ಅವರು ಕಟ್ಟಿಕೊಟ್ಟಿದ್ದಾರೆ.

ಸೃಜನ ಸಾಹಿತ್ಯದ ಪ್ರಕಾರಗಳಾದ ೧. ಸಣ್ಣ ಕಥೆ. ೨. ಕುಚೋದ್ಯ ಕಥೆ. ೩. ಲಲಿತ ಪ್ರಬಂಧಗಳು ಶ್ರೀನಿವಾಸ ಹಾವನೂರ ಅವರ ಸಾಹಿತ್ಯದ ಮೂಲಕ ಅನಾವರಣಗೊಂಡಿವೆ. ಬಾಲರಿಂದ ಹಿಡಿದು ವಯೋವೃದ್ಧವರೆಗೆ ಹಿಡಿಸಬಹುದಾದ ಅಭಿರುಚಿಯನ್ನು ಕೌಟುಂಬಿಕ, ಸಾಮಾಜಿಕ, ಧಾರ್ಮಿಕ, ವ್ಯಕ್ತಿಗತ ಮತ್ತು ಸಾರ್ವತ್ರಿಕ ವಿಷಯಗಳು ನಿರೂಪಿತವಾಗಿದೆ. ಹೀಗೆ ಕನ್ನಡ ಸಾಹಿತ್ಯ ಕೃಷಿಯನ್ನು ಜನಮುಖಿಗೊಳಿಸುವುದು ಅವರ ಉದ್ದೇಶವಾಗಿತ್ತು.

ಹತ್ತು ಹಲವು ಸಂಗತಿಗಳನ್ನು ಅಧ್ಯಯನ ಮಾಡಿ ನಮ್ಮ ನಾಡು ನುಡಿ, ಸಂಸ್ಕೃತಿ, ಭಾಷೆ ಜನ ಬದುಕಿನ ಸಮಗ್ರ ಚಿತ್ರಣವನ್ನು ಹಾವನೂರ ಸಾಹಿತ್ಯದಲ್ಲಿ ಕಾಣಬಹುದು. ಕನ್ನಡ ಸಾಹಿತ್ಯದ ಅಸ್ಮಿತೆಯನ್ನು ಉಳಿಸುವಲ್ಲಿ ಹಾವನೂರ ಅವರ ಪ್ರಯತ್ನ ಶ್ಲಾಘನೀಯ. ಕನ್ನಡ ಸಾಹಿತ್ಯಕ್ಕೆ ಸತ್ವಯುತವಾದ ಶಕ್ತಿ ತುಂಬುವಲ್ಲಿ ಶ್ರೀನಿವಾಸ ಹಾವನೂರ ಅವರ ಜಾಣ್ಮೆ ಮೆಚ್ಚುವಂತಹದ್ದು. ಅವರ ಸೃಜನ ಸಾಹಿತ್ಯವು ಸಂಖ್ಯಾದೃಷ್ಟಿಯಿಂದ ವಿರಳವಾಗಿದ್ದರೂ ಸತ್ವದ ದೃಷ್ಟಿಯಿಂದ ಮಹತ್ವದ್ದಾಗಿದೆ. ಭೂತ ಮತ್ತು ವರ್ತಮಾನ ಕಾಲದ ಸಂಗತಿಯನ್ನು ಸಮೀಕರಿಸಿ ಭವಿಷ್ಯತ್ತಿನ ದಿನಗಳ ವಿಷಯಗಳಿಗೆ ಹೊಸ ಸ್ವರೂಪ ಕೊಟ್ಟರು.

### ೩.೧. ಸಣ್ಣಕಥೆ

೨೦ನೇ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಸಣ್ಣಕಥೆಯು ಪ್ರಮುಖ ಸಾಹಿತ್ಯ ಪ್ರಕಾರವಾಗಿ ಬಿಂಬಿತವಾಗಿದೆ. ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ, ಪೌರಾಣಿಕ, ಮತ್ತು ಧಾರ್ಮಿಕ ಹೀಗೆ ಯಾವ ವಸ್ತುಗಳನ್ನೊಳಗೊಂಡರೂ ನಾನಾ ರೀತಿಯ ತಂತ್ರ, ಪ್ರಯೋಗಶೀಲತೆ, ವಸ್ತು, ಭಾಷೆಗಳಿಂದ ಸಣ್ಣ ಕಥೆಗಳು ವಿಭಿನ್ನತೆಯನ್ನು ಪಡೆದುಕೊಂಡವು.

ಸಮಗ್ರ ವಿಷಯವನ್ನು ಒಂದು ಪರಿಮಿತಿಯೊಳಗೆ ಸಂಕ್ಷಿಪ್ತಗೊಳಿಸಿ ಅಚ್ಚುಕಟ್ಟಾಗಿ ಭಾವನೆಗಳನ್ನು ನಿರೂಪಿಸುತ್ತ ವಿಷಯವನ್ನು ಓದುಗರ ಗಮನಕ್ಕೆ ತರುವುದು ಸಣ್ಣ ಕಥೆಗಳ ಉದ್ದೇಶವಾಗಿದೆ. ೧೯೦೦ರಲ್ಲಿ ರಚಿತವಾದ ಪಂಜೆ ಮಂಗೇಶರಾಯರ ನನ್ನ ಚಿಕ್ಕಪ್ಪ ಕಥೆಯೇ ಆಧುನಿಕ ಕನ್ನಡದ ಮೊದಲ ಸಣ್ಣಕಥೆಯೆಂದು ಹೆಸರಾಗಿದೆ. ಜೈನ ಧಾರ್ಮಿಕ ಕಥೆಗಳು ೯ನೇ ಶತಮಾನದ ವಡ್ಡಾರಾಧನೆಯಲ್ಲಿಯೇ ದೊರೆಯುತ್ತದೆ ಎನ್ನುವುದು ಕಥೆಗಳ ಇತಿಹಾಸವನ್ನು ತಿಳಿಸುತ್ತದೆ.

ಇಂದಿನ ಸಣ್ಣ ಕಥೆಗಳ ಮುಖ್ಯ ಕೇಂದ್ರಬಿಂದು ಮನುಷ್ಯನ ಬದುಕು. ಮಾಸ್ತಿ (ವಸಂಕಟಗನ ಹೆಂಡತಿ), ಕುವೆಂಪು (ಧನ್ವಂತರಿ ಚಿಕಿತ್ಸೆ) ನಿರಂಜನ (ಕೊನೆಯ ಗಿರಾಕಿ) ಮತ್ತು ಕಾರಂತರ ಕಥೆಗಳು ಮನುಷ್ಯ ಅನುಭವಿಸುವ ನೋವು, ನಲಿವು, ಶೋಷಣೆ ಹಾಗೂ ಸಾಮಾಜಿಕ ನೆಲೆಯ ಕುತೂಹಲಕಾರಿ ಸಂಗತಿಗಳಿಗೆ ಎಡೆಮಾಡಿಕೊಟ್ಟಿವೆ. ಮೂಢನಂಬಿಕೆ ಮತ್ತು ನೈತಿಕತೆಗೆ ಸಂಬಂಧಿಸಿದ ಪ್ರಶ್ನೆಗಳಿಗೆ ಸಾಮಾಜಿಕ ನೆಲೆಗಟ್ಟಿನೊಳಗೆ ಉತ್ತರಿಸುವ ದೃಢತೆ ಅಂದಿನ ಕಥೆಗಾರರಲ್ಲಿ ಇತ್ತು.

ಆದರ್ಶ ವ್ಯಕ್ತಿತ್ವ ಹಾಗೂ ನವಸಮಾಜ ನಿರ್ಮಾಣದ ಉದ್ದೇಶ ನವೋದಯ ಕಥೆಗಾರರಲ್ಲಿ ಎದ್ದು ಕಾಣುತ್ತವೆ. ಪ್ರಗತಿಶೀಲರ ಪಾರಂಪರಿಕವಾದ ಮೌಲ್ಯಗಳನ್ನು ಪ್ರಶ್ನಿಸುತ್ತ ಸಮಾಜದ ಅಸಮಾನತೆಯ ವಿರುದ್ಧ ಧ್ವನಿ ಎತ್ತಿದ ಪ್ರಸಂಗಗಳ ಕಥೆಗಳನ್ನು ಬರೆದರು. ಭಾರತೀಪ್ರಿಯ, ಆನಂದಕಂದ, ಕಡೆಂಗೋಡ್ಲು ಶಂಕರ ಭಟ್ಟ ಇವರಲ್ಲಿ ಪ್ರಮುಖರು. ಅ.ನ.ಕೃ. ಕಟ್ಟಿಮನಿ, ವ್ಯಾಸರಾಯ ಬಲ್ಲಾಳರು ಪ್ರಗತಿಪರ ಧೋರಣೆಯಿಂದ ಅಭಿವೃದ್ಧಿ ಪಥದತ್ತ ಸಾಗುವ ಸಮಾಜ ನಿರ್ಮಾಣಕ್ಕಾಗಿ ಅಡ್ಡಿಯಾಗುತ್ತಿರುವ ಸಮಸ್ಯೆಗಳನ್ನು ಕಥೆಗಳಲ್ಲಿ ಬಿಂಬಿಸಿದರು.

ನವ್ಯ ಕಥೆಗಾರರು ಸಣ್ಣಕಥಾ ಸಾಹಿತ್ಯಕ್ಕೆ ವಿಶಿಷ್ಟ ಭಾಷೆ ಹಾಗೂ ರಚನೆಯ ವಿಧಾನಗಳನ್ನು ಪರಿಚಯಿಸಿದರು. ಮಾನವನ ತೀವ್ರವಾದ ಅನುಭವಗಳ ಸಂಕೀರ್ಣತೆ, ತಲ್ಲಣ, ಅವಮಾನ, ಒತ್ತಡಗಳು ಅವರ ಕಥೆಯಲ್ಲಿ ಅಭಿವ್ಯಕ್ತವಾಗಿವೆ. ಹಾಗೆಯೇ ಅನಂತಮೂರ್ತಿ, ಚಿತ್ತಾಲ, ಲಂಕೇಶ, ತೇಜಸ್ವಿ ತಮ್ಮದೇ ಆದ ವಿಶಿಷ್ಟ ರೀತಿಯ ಕಥೆಗಳಿಂದ ಪ್ರಸಿದ್ಧರಾಗಿದ್ದಾರೆ.

ಹಾವನೂರ ಅವರು ಎರಡು ಕಥಾಸಂಕಲನಗಳನ್ನು ಹೊರತಂದಿದ್ದಾರೆ. 'ಗಂಧ ಮತ್ತು ಕಲ್ಲು' ಕುಚೋದ್ಯದ ಕಥೆಗಳು

**'ಗಂಧ ಮತ್ತು ಕಲ್ಲು'** ಕಥಾಸಂಕಲನವು ಒಂಬತ್ತು ಕಥೆಗಳನ್ನೊಳಗೊಂಡಿದೆ. ಹೆಣ್ಣಿನ ಜೀವನದ ಏಳು-ಬೀಳುಗಳನ್ನು ಆಧರಿಸಿದ ಕಥೆಗಳಿವೆ. ಆಯಾ ಹಂತದಲ್ಲಿ ಹೆಣ್ಣಿನ ಮನೋಸ್ಥಿತಿ, ದೌರ್ಬಲ್ಯ ಮತ್ತು ಉತ್ತಮ ಸ್ವಭಾವಗಳ ಸ್ವರೂಪಗಳು ಈ ಕಥೆಗಳಲ್ಲಿ ಅನಾವರಣಗೊಂಡಿವೆ. ಸಾಮಾಜಿಕವಾಗಿ ನೋಡುವ ದೃಷ್ಟಿಕೋನ ಹೆಣ್ಣನ್ನು, ಅದರಿಂದ ಆಕೆಗೆ ವೈಯಕ್ತಿಕ ಮತ್ತು ಸಾರ್ವತ್ರಿಕವಾಗಿ ಸಿಗುವ ಸ್ಥಾನಮಾನ, ವೈವಾಹಿಕ ಬದುಕು, ಬಂಧುತ್ವ ಹಾಗೂ ಕೌಟುಂಬಿಕ ಸಂಕಷ್ಟಗಳನ್ನು ಸಹಿಸಿಕೊಂಡು ತನ್ನ ಹಕ್ಕನ್ನು ಪ್ರತಿಪಾದಿಸುವ ವಿಷಯಗಳು ನೈಜವಾಗಿ ಚಿತ್ರಿತಗೊಂಡಿವೆ.

ಹಾವನೂರ ಅವರ ಕಥೆಗಳಲ್ಲಿ ಚರ್ಚಿತ ವಿಷಯಗಳೆಂದರೆ ಮಹಿಳೆ. ಹೆಣ್ಣಿನ ವಿವಾಹಪೂರ್ವದ ಉದ್ವೇಗ, ವಿವಾಹ ಕುರಿತ ಸುಂದರ ಸ್ವಪ್ನಲೋಕ, ವಿವಾಹದ ನಂತರ ತಾಯ್ತನದ ಆತಂಕ ಮತ್ತು ಸಂಭ್ರಮ, ಗಂಡಿನ ಚಿತ್ತ ಚಾಂಚಲ್ಯ, ಸಂಸಾರದಲ್ಲಿನ ವಿರಸ, ಆಕೆ ಜೀವನದಲ್ಲಿ ಅನುಭವಿಸುವ ತಲ್ಲಣಗಳು, ಮಾನಸಿಕ ಖಿನ್ನತೆ ಇತ್ಯಾದಿ ವಿವಿಧ ರೀತಿಯ ಸ್ವಭಾವಗಳು ವ್ಯಕ್ತವಾಗಿವೆ. ಹೊಸ ಹೊಳಹುಗಳನ್ನು ಕಂಡುಕೊಳ್ಳುತ್ತ ಮನುಕುಲಕ್ಕೆ ಸಂದೇಶವನ್ನು ತಲುಪಿಸುವಲ್ಲಿ ಹಾವನೂರ ಅವರು ಯಶಸ್ವಿಯಾಗಿದ್ದಾರೆ.

'ಲೇಪಾಕ್ಷಿಯೂ ಲೇಡಿಸ್ ಹಾಸ್ಟೇಲೂ ಎಂಬ ಲೇಖನದಲ್ಲಿ ಹದಿಹರೆಯದ ತಲ್ಲಣಗಳನ್ನು ಶ್ರೀನಿವಾಸ ಹಾವನೂರ ಅವರು ಸವಿವರವಾಗಿ ಕಥಾರೂಪದಲ್ಲಿ ದಾಖಲಿಸಿದ್ದಾರೆ. ಹರೆಯದ ಹುಡುಗ-ಹುಡುಗಿಯರಿಗೆ ವಯೋಸಹಜ ಬಯಕೆಗಳು ಸಹಜ. ಅದರಿಂದ ದುಡುಕಿಕೊಳ್ಳುವ, ಎಲ್ಲವೂ ಮುಗಿದೋಯಿತು ಎನ್ನುವ ಅವಸರ ಬೇಡ ಎನ್ನುವ ಆಶಯವನ್ನು ಕಥೆಗಾರರು ನೀಡಿದ್ದಾರೆ. "ಹೆಣ್ಣು ಗಂಡಿನ ಸಂಬಂಧದ ಬಗ್ಗೆ ಸಂಶಯದ ಆಳ ಒಮ್ಮೆ ಹೊಕ್ಕಿತೆಂದ್ರೆ ಏನೆನಲ್ಲಾ ವಿಚಾರ ಬರತಾವ ಅಂತನೇ ಮುಗ್ಧ ಸ್ವಭಾವದ ನಮ್ಮ ವಿಮಾ ಇಷ್ಟು ಗಂಭೀರವಾಗಿ ತಂಗೀ ವಿಷಯದಲ್ಲಿ ಯೋಚಿಸುವಂತಾಯಿತಲ್ಲಾ"...[7] ಸಂಸಾರದೊಳಗೆ ಹದಿಹರೆಯದವರ ನಡವಳಿಕೆಯಿಂದ ಪೋಷಕರು ಎಷ್ಟೇ ಮುಗ್ಧರಾಗಿದ್ದರೂ ಗಂಭೀರವಾಗಬೇಕಾದ ಅನಿವಾರ್ಯ ಸಂದರ್ಭವನ್ನು ಪ್ರತಿಬಿಂಬಿಸುತ್ತದೆ.

ಪೋಷಕರಾದವರು ತಮ್ಮ ಹದಿವಯಸ್ಸಿನಲ್ಲಿ ಮಾಡಿದ್ದನ್ನು ತಮ್ಮ ಮನೆಯ ಇತರರು ಮಾಡುವಾಗ ಸುಮ್ಮನಿರಲು ಸಾಧ್ಯವಾಗುವುದಿಲ್ಲ ಎಂಬ ಚಿಂತನೆ ಈ ಕಥೆಯಲ್ಲಿದೆ. ಹದಿಹರೆಯದ ತಲ್ಲಣಗಳನ್ನು ಬೇರೆಯವರ ಮುಂದೆ ಹೇಳಲು ಹಿಂಜರಿದರೂ ಅನಾಯಾಸವಾಗಿ ಸತ್ಯ ಹೊರಬರುವುದನ್ನು ಭೀಮೇಶನ ಪಾತ್ರ ತಿಳಿಸುತ್ತದೆ. ಲೇಪಾಕ್ಷಿ ಮಾಡಬಾರದ್ದೇನೂ ಮಾಡಿಲ್ಲ ಸಹಜ ಗುಣವೆಂದು ಮರಿಯಮ್ಮ ಅನುಭವದ ಮಾತನ್ನಾಡುತ್ತಾಳೆ. ಕಥೆಗಾರರು ಅತ್ಯಂತ ನವಿರಾದ ಕಥಾಹಂದರದ ಮೂಲಕ ವಾಸ್ತವತೆಯನ್ನು ಬಿಚ್ಚಿಟ್ಟಿದ್ದಾರೆ.

**‘ವಾತ್ಸಲ್ಯ’** ಕಥೆಯಲ್ಲಿ ತಾಯಿ ಪಾತ್ರವನ್ನು ಕೇಂದ್ರೀಕರಿಸಿಕೊಂಡು ಇತರ ಪಾತ್ರಗಳ ಸ್ವಭಾವ, ಪತಿ ಪತ್ನಿಯರ ಕಲಹದ ಸ್ವರೂಪವು ಚಿತ್ರಿತಗೊಂಡಿದೆ. ಹಾಗೆಯೇ ಮಗುವಿನ ರಕ್ಷಣೆ ಕುರಿತ ಚರ್ಚೆಯನ್ನು ಈ ಕಥೆಯಲ್ಲಿ ಕಾಣಬಹುದಾಗಿದೆ. ಗಂಡು ಮತ್ತು ಹೆಣ್ಣಿನ ವೈವಾಹಿಕ ಬದುಕಿನ ಸ್ವರೂಪ, ಹೂವಿನ ಸೌಂದರ್ಯವು ಪರರನ್ನು ಆಕರ್ಷಿಸುವುದು. ವಿಜಯೇಂದ್ರ ಮತ್ತು ಕಿಟ್ಟಿಯ ಪಾತ್ರಗಳಲ್ಲಿ ಪ್ರಧಾನ ಸೌಂದರ್ಯ ಗಮನಿಸದೇ ಇರುವುದು ಅವರ ಬುದ್ಧಿಯ ಪಕ್ವತೆಯನ್ನು ಪ್ರತಿನಿಧಿಸುತ್ತದೆ.

**‘ಗಂಧ ಮತ್ತು ಕಲ್ಲು’** ಇದರ ಚರ್ಚಿತ ವಿಷಯ ಕೌಟುಂಬಿಕ ಕಲಹ. ಪತಿ ಪತ್ನಿಯ ಪಾತ್ರಗಳು ಕಥೆಯ ಕೇಂದ್ರಬಿಂದು. ಸಂದರ್ಭ ಸನ್ನಿವೇಶಕ್ಕೆ ಅನುಗುಣವಾಗಿ ಬದಲಾಗುತ್ತ ಹೋಗುತ್ತದೆ ಎಂಬುದನ್ನು ಸದರಿ ಕಥೆಯಲ್ಲಿ ಕಾಣಬಹುದು. ‘ಕಾಗೆಗೆ ಹೇಳಿದ ಕಥೆ’ ಕೌಟುಂಬಿಕ ಬದುಕಿನ ವಸ್ತುವನ್ನೊಳಗೊಂಡಿದೆ. ಪತಿ ಪತ್ನಿ ಕೇಂದ್ರಿತವಾದ ಪಾತ್ರ, ತನ್ನ ಸಹೋದರನು ವಿದ್ಯೆ ಕಲಿತು ಕುಟುಂಬದ ಆಧಾರ ಸ್ತಂಭವಾಗುತ್ತಾನೆ ಎನ್ನುವ ಹಂಬಲಿಕೆ ಸುಳ್ಳಾಗುವುದು, ಮಗುವಿನ ಹುಟ್ಟಿನ ಕುರಿತು ಸಂಶಯ; ತನಗೆ ವ್ಯಭಿಚಾರ ಪಟ್ಟ ಬರುವ ಸಂಭವ ಗೊತ್ತಾದಾಗ ಅವಳು ಯಾವ ಹಂತಕ್ಕೆ ಬೇಕಾದರೂ ತಲುಪುತ್ತಾಳೆ ಎನ್ನುವುದಕ್ಕೆ ಈ ಪಾತ್ರ ನಿದರ್ಶನವಾಗಿದೆ.

### ೩.೨. ಕುಚೋದ್ಯದ ಕಥೆಗಳು

ಈ ಕಥಾಸಂಕಲನವು ಒಂಬತ್ತು ಬಿಡಿ ಕಥೆಗಳನ್ನು ಒಳಗೊಂಡಿದೆ. ದುರುಳ ಅಥವಾ ಕೆಟ್ಟ ಸ್ವಭಾವಗಳ ಚಿತ್ರಣ ಇಲ್ಲಿದೆ. ಹಾಗೆಯೇ ಇತರ ಪಾತ್ರಗಳು ಸಹಕಾರಿಯಾಗಿ ನಿಲ್ಲುತ್ತವೆ. ವ್ಯಕ್ತಿಯು ತನ್ನತನವನ್ನು ಉಳಿಸಿಕೊಳ್ಳಲು ಏನು ಬೇಕಾದರೂ ಮಾಡುವ ಹಂತವನ್ನು ತಲುಪುತ್ತಾನೆ. ಮಾನವೀಯ ಸಂಬಂಧಗಳ ಪರಿಜ್ಞಾನ ಇಲ್ಲದಿರುವ ಸಂದರ್ಭಗಳನ್ನು ಕಥೆಯಲ್ಲಿ ನಿರೂಪಿಸಿದ್ದಾರೆ. ಈ ಪಾತ್ರಗಳು ತಂತ್ರ ಮತ್ತು ಪ್ರತಿತಂತ್ರಗಳನ್ನು ಮಾಡುವಲ್ಲಿ, ಸ್ವಭಾವಗಳ ಚಾಣಾಕ್ಷತೆಯನ್ನು ಕಥೆಗಳಲ್ಲಿ ಗುರುತಿಸಬಹುದು.

“ಕುಚೋದ್ಯ–ಅಪಹಾಸ್ಯ–ಕಿಡಿಗೇಡಿತನ (ದುರ್ಮತಗಳಿವದರ ಕುಚೇಷ್ಟೆಯ ನಿಮ್ಮ ನೀಕ್ಷಿಸಿ ಮಜೆದು ಕಳೆ( (ಕುಮಾರವ್ಯಾಸ–೧೫೪೮) ಕುಚೋದ್ಯ–ಕುಚೇಷ್ಟೆ ಅಪಹಾಸ್ಯ ಗೇಲಿ–ಸಿಪಾಯಿಗಳು ಕೌಸರ್ ಸ್ತ್ರೀಯರನ್ನು ಕುಚೋದ್ಯ ಮಾಡಿ ಹಾಸ್ಯ ಮಾಡುತ್ತಿದ್ದರು.

ಕುಚೋದ್ಯ ಅರ್ಥ: ಕೀಡುಗೇಡಿತನ, ಕಿಲಾಡತನ, ಚಾಡಿ ಹೇಳುವಿಕೆ, ದೂಷಿಸುವಿಕೆ, ಕೆಟ್ಟ ಯೋಚನೆ, ಅಸಂಗತವಾದ ಹೇಳಿಕೆ.”[೨]

ಮನುಷ್ಯನ ಸ್ವರೂಪವನ್ನು ನಿರ್ಣಯಿಸುವುದು ಹೇಗೆ? ಬಾಹ್ಯ ಸ್ವರೂಪ ನೋಡಿಯೋ ಹಾಗೆಯೇ ಅಂತರಂಗ ಸ್ವಾಭಾವವನ್ನು ತಿಳಿದೋ? ಎನ್ನುವ ಅಂಶ ಈ ಸಂಕಲನದಲ್ಲಿ ಪ್ರಸ್ತಾಪಗೊಂಡಿದೆ. ಒಟ್ಟಾರೆಯಾಗಿ ಮನುಷ್ಯನ ಸಜ್ಜನ ಸ್ವಭಾವಗಳು ಗೌಣವಾಗಿ ದುರುಳ ಸ್ವಭಾವಗಳು ಪಾರುಪತ್ಯ ಮೆರೆದಿದೆ. ಈ ಕಥೆಯು ಓದುಗನ ಮನೋಸ್ಥಿತಿಯನ್ನು ಪರಿವರ್ತನೆ

ಮಾಡುತ್ತದೆ. ಹಾಗೆಯೇ ಸಾಮಾಜಿಕ, ಧಾರ್ಮಿಕ, ರಾಜಕೀಯ, ಕೌಟುಂಬಿಕವಾಗಿ ಈ ಎಲ್ಲಾ ವಲಯಗಳ ವಿಚಾರಧಾರೆ ಪ್ರತಿನಿಧಿಸುವುದರ ಮೂಲಕ ಕಥೆಯು ಸುಖಾಂತ್ಯವನ್ನು ಕಾಣುತ್ತದೆ.

**'ಪ್ರತಿಬಿಂಬ'** ಕಥೆಯ ವಸ್ತು ರಾಜಕೀಯ ಮತ್ತು ಕೌಟುಂಬಿಕ ವಿಷಯ. ಮನುಷ್ಯ ಬದುಕಿನ ಸ್ವರೂಪ ಒಂದೇ ನಾಣ್ಯದ ಎರಡು ಮುಖಗಳು; ಒಂದು ಮುಖ ಭೋಗವಾದರೆ, ಮತ್ತೊಂದು ತ್ಯಾಗ. ಪ್ರಸ್ತುತ ಕಥೆಯಲ್ಲಿ ರಾಜ ಮತ್ತು ದಂಡನಾಯಕ ಪಾತ್ರಗಳು ರಾಜಕೀಯ ಸ್ವರೂಪ ಪಡೆದಿರುವುದು ಗಮನಾರ್ಹ. ಹಾಗೆಯೇ ದಂಡನಾಯಕನ ಎರಡು ಮಕ್ಕಳ ಪಾತ್ರಗಳು ಒಂದು ದುರುಳ ಮತ್ತೊಂದು ಸಜ್ಜನ ಪಾತ್ರಗಳಾಗಿವೆ. ಅಕ್ಕನ ಪಾತ್ರ ಹಣ ಸಂಪಾದನೆ ಮಾಡಿ ಜನಪ್ರಿಯತೆ ಪಡೆದರೆ, ತಂಗಿಯ ಪಾತ್ರ ಶೋಷಣೆಗೆ ಒಳಗಾದ ವ್ಯಕ್ತಿಗಳ ಸೇವೆ ಮಾಡುವುದು.

'ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂಭವತಿ' ಕಥೆಯಲ್ಲಿ 'ಪ್ರೀತಿ ಮತ್ತು ಸಂಬಂಧ; ಮೋಹದ ಬಂಧನಕ್ಕೆ ಸಿಲುಕಿದ ಮಗನ ಚಿತ್ರಣವಿದೆ. ತಂದೆ-ತಾಯಿ ಮತ್ತು ಹೆಂಡತಿ ಅವರ ಪ್ರೀತಿ ವಾತ್ಸಲ್ಯದ ಗಟ್ಟಿತನವನ್ನು ಕುರಿತು ಸ್ವಾಮಿಯು ನಿದರ್ಶನದ ಮೂಲಕ ಪ್ರೀತಿ ಮತ್ತು ಸಂಬಂಧ ಸಾಂಕೇತಿಕ ಎನ್ನುವುದು ವೇದ್ಯವಾಗುವಂತೆ ಮಾಡುತ್ತಾನೆ. ಮಗನಿಗೆ ಸ್ವಾಮಿ ಮೂಲಕ ಹೊರ ಬರುವ ನಿದರ್ಶನ ಪರಿಚಯಿಸುತ್ತಾನೆ. ಹೀಗಾಗಿ ಮಗನಿಗೆ ಸಾಂಕೇತಿಕ ಎನ್ನುವುದು ವೇದ್ಯವಾಗುವಂತೆ ಮಾಡುತ್ತಾನೆ. ಪ್ರತಿಯೊಬ್ಬರೂ ಅವರವರ ಸ್ವಾರ್ಥಕ್ಕಾಗಿಯೇ ಬದುಕುತ್ತಿದ್ದಾರೆಯೇ ವಿನಃ ಬೇರೆಯವರಿಗಾಗಿ ಅಲ್ಲ ಎಂಬುದನ್ನು ಪ್ರಾಯೋಗಿಕವಾಗಿ ಸ್ವಾಮಿ ಧನಿಕನ ಮಗನಿಗೆ ಮನವರಿಕೆ ಮಾಡಿಕೊಡುತ್ತಾನೆ. ಮನೆಯವರ ಪ್ರೀತಿಗೆ ಹೆದರಿದ ಮಗ ಸ್ವಾಮಿಯ ಪ್ರಯೋಗದಿಂದ ಎಚ್ಚೆತ್ತು ಮನೆಯಿಂದ ದೂರವಾಗುತ್ತಾನೆ. 'ಪ್ರತಿಭಾಶಾಲಿ' ಕಥೆಯಲ್ಲಿ ಸುಧಾಮಶಾಸ್ತ್ರಿಗಳ ಸಾಹಿತ್ಯ ಕೃಷಿ ಕಳಪೆಯಾಗಿದ್ದು ಅಲ್ಲದೆ ಸಮಾಜದ ಸ್ವಾಸ್ಥ್ಯವನ್ನು ತಿಳಿಗೊಳಿಸುವ ಸಾಹಿತ್ಯವಲ್ಲವೆಂದು ಪ್ರಕಾಶಕರು ತಿರಸ್ಕಾರ ಮಾಡುತ್ತಿದ್ದರು. ಹೀಗಾಗಿ ಅವರ ಬದುಕು ಕಷ್ಟಕರವಾಗಿತ್ತು. ಆದರೂ ಸ್ವಾಭಿಮಾನದಿಂದ ಬದುಕುವ ಛಲವಿದ್ದುದು ಮಾತ್ರ ಸತ್ಯ. ಚಲನಚಿತ್ರ ಕಥೆ ಸಂಭಾಷಣೆಗಳೆಲ್ಲವೂ ಸಾಹಿತ್ಯವೇ ಅಲ್ಲ ಎಂದು ಅಭಿಪ್ರಾಯಪಡುವ ಶಾಸ್ತ್ರಿ ಒಂದು ಸಿನಿಮಾಕ್ಕೆ ಬರೆದ ವಿಡಂಬನೆಯೇ ಅತ್ಯುತ್ತಮ ಸಿನಿಮಾ ಆಗುತ್ತದೆ ಎಂದಾಗ ಮಾತ್ರ ಹತ್ತು ಸಾವಿರದ ಚೆಕ್ ಕೊಟ್ಟಾಗ ಅವರ ಸಿನಿಮಾದ ಪ್ರೀತಿ ತಿಳಿಯಿತು.

'ನಿಃಸಂತಾನ' ಕಥೆಯ ಕೇಂದ್ರ ವಸ್ತು ತಂದೆಯ ಆಸೆಗೆ ತಣ್ಣೀರೆರೆದ ಮಗನ ಬದುಕಿನ ಚಿತ್ರಣ. ಚಳುವಳಿಯಲ್ಲಿ ಭಾಗವಹಿಸಿದ ಕಾರಣಕ್ಕಾಗಿ ಕೌಟುಂಬಿಕ ಸಂಬಂಧ ಕಳೆದುಕೊಂಡ ಮಗನ ಬದುಕಿನ ಸ್ವರೂಪ; ದೂರದ ಮುಂಬಯಿಯಲ್ಲಿ ಬ್ಯಾಂಕ್ ಉದ್ಯೋಗ ಪಡೆದುಕೊಂಡು ಬದುಕಿನ ಅಸ್ತಿತ್ವವನ್ನು ಕಂಡುಕೊಂಡ ಚಿತ್ರಣ. ನಂತರದ ವೈವಾಹಿಕ ಬದುಕು ೧೨ ವರ್ಷಗಳ ಕಾಲ ಚೆನ್ನಾಗಿ ನಡೆದಿತ್ತು. ಆಕಸ್ಮಿಕವಾಗಿ ಮಡದಿಯ ತವರಿಗೆ

ಹೋದ ಸಂದರ್ಭದಲ್ಲಿ ಅವಳ ಕೋಣೆಯಲ್ಲಿ ಪತ್ರಗಳ ಕಟ್ಟು ಆತನ ದೃಷ್ಟಿಗೆ ಬೀಳುತ್ತದೆ. ಆ ಕಟ್ಟುಗಳನ್ನೆಲ್ಲ ಬಿಚ್ಚಿ ನೋಡಿದಾಗ ವಿವಾಹಪೂರ್ವದ ರಹಸ್ಯ ಬಹಿರಂಗಗೊಳ್ಳುತ್ತದೆ. ಇದರ ಪ್ರತಿಫಲವಾಗಿ ಅವನ ಸಂಸಾರವೆಂಬ ದೋಣಿ ಬಿರುಗಾಳಿಗೆ ಸಿಲುಕುವ ಸನ್ನಿವೇಶ ಅನಾವರಣಗೊಂಡಿದೆ.

'ವಿಷಾರಿ' ಕಥೆಯಲ್ಲಿ ರಾಸಾಯನಿಕ ವಸ್ತುಗಳ ಬಳಕೆಯಿಂದ ಸಮಾಜದ ಮೇಲೆ ಆಗುವ ಪರಿಣಾಮ ನಿರೂಪಿತಗೊಂಡಿದೆ. ಹಾಗೆಯೇ ಔಷಧ ಅಂಗಡಿಯಲ್ಲಿ ನಡೆಯುವ ಅವ್ಯವಹಾರವನ್ನು ಬಯಲಿಗೆಳೆಯುತ್ತದೆ. 'ತನಿಖೆಯ ನಾಯಿ' ಕಥೆಯ ಚರ್ಚಿತ ವಿಷಯ ಶ್ವಾನ; ಇದನ್ನು ಕೇಂದ್ರೀಕರಿಸಿಕೊಂಡು ಬಳಸಿಕೊಂಡ ರೀತಿ, ಮತ್ತು ಈಶ್ವಾನ ಅಪರಾಧಿಗಳು ಗುರುತಿಸುವ ಸೂಕ್ಷ್ಮ ಶಕ್ತಿಯನ್ನು ಹೊಂದಿರುವ ಕಾರಣ ಅಪರಾಧ ಲೋಕದಲ್ಲಿ ಹೆಚ್ಚು ಮೌಲ್ಯ ಪಡೆದುಕೊಳ್ಳುತ್ತದೆ.

'ಕಾಮದಹನ' ಕಥೆಯ ವಸ್ತು ಬೌದ್ಧ ಚೈತ್ರಾಯದಲ್ಲಿರುವ ಭಿಕ್ಷುಣಿಯರು ಪುರುಷನೊಬ್ಬನೊಂದಿಗೆ ನಡೆಸಿದ ಲೈಂಗಿಕ ಚಟುವಟಿಕೆಗಳನ್ನು ಮತ್ತು ಅದರಿಂದ ಅವರು ಪಡುವ ಪಾಡನ್ನು ಒಳಗೊಂಡಿದೆ. ಚೈತ್ರಾಲಯದಲ್ಲಿರುವ ಭಿಕ್ಷುಣಿಯರು ಸರ್ವಸಂಗ ಪರಿತ್ಯಾಗ ಮಾಡಿದವರು. ಕಥೆಯಲ್ಲಿ ಬರುವ ಭಿಕ್ಷುಣಿಯರು ಅಪರೂಪಕ್ಕೆ ಸಿಕ್ಕ ವಿಟನೊಂದಿಗೆ ತಮ್ಮ ಕಾಮಕೇಳಿಯನ್ನು ಆರಂಭಿಸುತ್ತಾರೆ. ಅಲ್ಲಿಯವರೆಗೆ ತಮ್ಮ ಕಾಮ ತಡೆಹಿಡಿದಿದ್ದವರು ವಿಟನೊಂದಿಗೆ ಅವಿರತವಾಗಿ ತೊಡಗಿಸಿಕೊಳ್ಳುತ್ತಾರೆ. ವಿಟ ತನ್ನ ಮನೆಗೆ ಹೋಗುತ್ತೇನೆಂದರೂ ಬಿಡದೆ ಆತನನ್ನು ತಮ್ಮ ಕಾಮತೃಷೆಗೆ ಬಳಸಿಕೊಳ್ಳುತ್ತಾರೆ. ಕೊನೆಗೆ ವಿಟನೇ ಸಾಯುತ್ತಾನೆ. ಆತನ ಶವವನ್ನು ಹೂಳುತ್ತಾರೆ. ಕೊನೆಗೊಂದು ದಿನ ಎಲ್ಲಾ ಪ್ರಕರಣಗಳು ಬಯಲಿಗೆ ಬಂದು ಶಿಕ್ಷೆ ಅನುಭವಿಸುತ್ತಾರೆ. ಪ್ರಸ್ತುತ ಕಥೆಯಲ್ಲಿ ಕಥೆಗಾರರು ಅತ್ಯಂತ ವಾಸ್ತವ ಸ್ಥಿತಿಯಲ್ಲಿ ಜರುಗುವಂತಹ ಘಟನೆಯನ್ನೇ ಮೀರಿಸುವ ಹಾಗೆ ಕಥೆ ಪೋಣಿಸಿರುವುದು ಕಂಡುಬರುತ್ತದೆ. ಚೀನಾದಲ್ಲಿ ನಡೆದ ಘಟನೆ ಎಂಬುದಾಗಿಯೂ ಕಥಾ ಆರಂಭದಲ್ಲಿ ಹೇಳಿದ್ದಾರೆ.

ಶ್ರೀನಿವಾಸ ಹಾವನೂರ ಅವರು ಕಥೆ, ಸಂಶೋಧನೆ, ಲಲಿತ ಸಾಹಿತ್ಯ ಹೀಗೆ ಎಲ್ಲಾ ಸಾಹಿತ್ಯ ಪ್ರಕಾರಗಳಲ್ಲೂ ಸಾಹಿತ್ಯ ಕೃಷಿ ಮಾಡಿದವರು. ಗಂಭೀರವಾದ, ಚಾರಿತ್ರಿಕ ಸಂಶೋಧನೆಗೆ ಹೆಸರಾದ ಹಾವನೂರ ಅವರ ಕಥೆ, ಕುಚೋದ್ಯದ ಕಥೆಗಳೆಲ್ಲವೂ ಸಾಂದರ್ಭಿಕ ಉದ್ದೇಶಗಳನ್ನು ಸಮಾಜಕ್ಕೆ ಬೇಕಾದ ಆಶಯಗಳನ್ನು ನೀಡುವುದರಲ್ಲಿ ಸಫಲವಾಗಿದೆ ಎಂದು ಹೇಳಬೇಕು. ಕೆಲವು ಕಥೆಗಳು ವಿದೇಶಿ ಮೂಲವಾಗಿದ್ದರೂ ನಮ್ಮ ಸಮಾಜಕ್ಕೆ ನಮ್ಮ ಸಾಂಪ್ರದಾಯಿಕ ಭಾರತೀಯ ಸಮಾಜಕ್ಕೆ ಒಗ್ಗಿಸಿಕೊಳ್ಳುವಂತೆ ನಿರೂಪಿಸಿರುವುದು ಮಹತ್ವದ ಸಂಗತಿ. ಇಲ್ಲಿ ಶ್ರೀನಿವಾಸ ಹಾವನೂರ ಅವರ ವಿದ್ವತ್ತು, ಜಾಣ್ಮೆ, ಹಾಸ್ಯ ವಿಡಂಬನೆ, ಉದ್ದೇಶಗಳೆಲ್ಲವೂ ಅನಾವರಣಗೊಂಡಿವೆ.

## ೩.೩. ಲಲಿತ ಪ್ರಬಂಧ

ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಲಲಿತ ಪ್ರಬಂಧಗಳು ತನ್ನದೇಯಾದ ಛಾಪನ್ನು ಮೂಡಿಸಿವೆ. ಹಾಗೆಯೇ ತನ್ನದೇಯಾದ ಓದುಗ ಸಮುದಾಯವನ್ನು ಹೊಂದಿದೆ. ಗಂಭೀರ ಹಾಗೂ ಸಾಮಾನ್ಯ ಸಂಗತಿಯನ್ನು ವಿಡಂಬನೆಗಳನ್ನೊಳಗೊಂಡ ಸಾಹಿತ್ಯದ ಚೌಕಟ್ಟನ್ನು ಹಾಕಿಕೊಂಡು, ಮನಸ್ಸು ಪ್ರಪುಲ್ಲಗೊಳ್ಳುವಂತೆ ಸಂಭ್ರಮವನ್ನು ಅನುಭವಿಸುವ ಚಿತ್ರಣ ಲಲಿತ ಪ್ರಬಂಧಗಳಲ್ಲಿ ಕಾಣಬಹುದು. ವೈವಿಧ್ಯಮಯ ಬದುಕಿನ ಸ್ವರೂಪವನ್ನು ಈ ಪ್ರಕಾರವು ನಿರೂಪಿಸುತ್ತದೆ.

ಇಂಗ್ಲಿಷ್ 'Essay' ಎಂಬುದಕ್ಕೆ ಸಂವಾದಿಯಾಗಿ ಪ್ರಬಂಧ ಎಂಬ ಪದವನ್ನು ಬಳಸಿದೆ. ಲಲಿತ ಪ್ರಬಂಧದ ಲಕ್ಷಣ ಕುರಿತು ಹೇಳುವುದಾದರೆ ಒಂದು ವಿಷಯ ಕುರಿತು ಮಿತವಾದ, ಸರಳವಾದ ಸುಂದರವಾದ ಶೈಲಿಯನ್ನೊಳಗೊಂಡಿರುವ ಸಂಪೂರ್ಣತೆಯ ರಚನೆಯನ್ನೇ ಲಲಿತ ಪ್ರಬಂಧ ಎನ್ನಬಹುದು. ಇದರಲ್ಲಿ ಸುಸಂಸ್ಕೃತ ಚಿಂತನೆ, ನಾಗರಿಕ ಸಂವೇದನೆ, ಉತ್ತಮ ಅಭಿರುಚಿಯುಳ್ಳ, ವ್ಯಾಪಕ ಅನುಭವಗಳಿಂದ ಪುಷ್ಟಿಗೊಂಡು ನಾನಾ ಅನುಭವಗಳಿಗೆ ಪ್ರತಿಕ್ರಿಯಿಸುತ್ತ ನಡೆದಿದೆ.

ಲಲಿತ ಪ್ರಬಂಧ, ಹಾಸ್ಯ ಬರಹಗಳ ಮೂಲಕ ಸತ್ಯದ ಕಹಿ ಮಾತ್ರೆಗಳನ್ನು ಸಮಾಜಕ್ಕೆ ನುಂಗಿಸಿ ತಪ್ಪು ಮಾಡಿದವರಿಗೆ ಎಚ್ಚರಿಕೆ ಕೊಡುತ್ತದೆ. ತನ್ನ ತಪ್ಪನ್ನು ಆತ್ಮಸಾಕ್ಷಿಯಾಗಿ ಅರಿತು ಮನೋಸ್ಥಿತಿಯನ್ನು ತಿದ್ದಿಕೊಳ್ಳುವಂತೆ ಮಾಡುವುದು ಹಾವನೂರ ಅವರ ಸೃಜನ ಶೀಲ ಸಾಹಿತ್ಯದ ಉದ್ದೇಶವಾಗಿದೆ. ಭಾಷೆ, ವಸ್ತುವಿನ ದೃಷ್ಟಿಯಿಂದ ಸರಳ ಮತ್ತು ಸಾಮಾನ್ಯವಾದ ಲಲಿತ ಪ್ರಬಂಧಗಳು ಗಂಭೀರವಾದ ಚಿಂತನೆ ವಾಸ್ತವಿಕ ಆಲೋಚನೆ ಮತ್ತು ಗಮನಸೆಳೆಯುವ ಉದ್ದೇಶಗಳನ್ನು ಹೊಂದಿದೆ.

ಎ.ಎನ್. ಮೂರ್ತಿರಾಯರ 'ಹಗಲುಗನಸುಗಳ' ಅಲೆಯುವ ಮನ, ಮಿನುಗುವ ಮಿಂಚು, ರಾಕು ಅವರ ಗಾಳಿಪಟ ಹೀಗೆ ಉತ್ತಮವಾದ ಪ್ರಬಂಧ ಸಂಕಲನಗಳು ಕನ್ನಡ ಸಾಹಿತ್ಯದಲ್ಲಿ ಬಂದಿವೆ. ಈ ಕ್ಷೇತ್ರದಲ್ಲಿ ಹೆಸರು ಮಾಡಿರುವ ಪ್ರಮುಖ ಲೇಖಕರೆಂದರೆ ತೀ.ನಂ.ಶ್ರೀಕಂಠಯ್ಯ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಕುವೆಂಪು, ಅ.ರಾ.ಮಿತ್ರ, ಚಂದ್ರಶೇಖರ ಆಲೂರು, ಕೃಷ್ಣಮೂರ್ತಿ, ಬೀಳಿಗಿಯವರು ಲಲಿತ ಪ್ರಬಂಧ ಪ್ರಕಾರವನ್ನು ಕನ್ನಡ ಸಾಹಿತ್ಯದಲ್ಲಿ ಶ್ರೀಮಂತಗೊಳಿಸಿದರು.

ಶ್ರೀನಿವಾಸ ಹಾವನೂರ ಅವರು ತಮ್ಮ ಸಾಹಿತ್ಯ ರಚನೆ 'ಒಂದಷ್ಟು ಲಘು ಒಂದಷ್ಟು ಗಂಭೀರ' ಎಂಬ ಪ್ರಬಂಧ ಸಂಕಲನದ ಮೂಲಕ ತನ್ನದೇಯಾದ ಛಾಪು ಮೂಡಿಸಿದ್ದಾರೆ. ಸಾಮಾಜಿಕ, ಕೌಟುಂಬಿಕ, ಧಾರ್ಮಿಕ ವಲಯಗಳ ವಿಚಾರವನ್ನು ಔಚಿತ್ಯ ಪೂರ್ಣವಾಗಿ ಬಳಸಿಕೊಂಡಿದ್ದಾರೆ. ಈ ಲಲಿತ ಪ್ರಬಂಧ ಸಂಕಲನವು ವಾಚಕರಿಗೆ

ಮನೋರಂಜನೆ ಹಾಗೂ ನೀತಿಯನ್ನು ಹೇಳುವುದರ ಮೂಲಕ ಮನಸ್ಸನ್ನು ಸೂಕ್ಷ್ಮವಾದ ಗ್ರಹಿಕೆಯ ಕಡೆ ಹೇಗೆ ಕೊಂಡೊಯ್ಯುತ್ತದೆ. ವಾಸ್ತವಿಕ ಬದುಕನ್ನು ಅರಿಯುವ ಸೂಕ್ಷ್ಮತೆಯ ವಿಚಾರವನ್ನು ವೈಚಾರಿಕ ಮತ್ತು ವೈಜ್ಞಾನಿಕ ನೆಲೆಗಟ್ಟಿನ ಮೇಲೆ ನೋಡುವ ಜಾಣ್ಮೆಯು ಈ ಪ್ರಬಂಧ ಸಂಕಲನಕ್ಕಿದೆ.

**"ಒಂದಷ್ಟು ಲಘು, ಒಂದಷ್ಟು ಗಂಭೀರ"** ಈ ಸಂಕಲನವು ಹದಿನೆಂಟು ಪ್ರಬಂಧಗಳನ್ನು ಒಳಗೊಂಡಿದೆ. ವಸ್ತು ತುಂಬ ವೈವಿಧ್ಯಮಯವಾಗಿದೆ. "ಈತ ಸತ್ಯನಾರಾಯಣ" ಈ ಪ್ರಬಂಧ ಪ್ರಮುಖ ವಿಷಯ ದೈವತ್ವದ ಸ್ವರೂಪ. ಉತ್ತರ ಭಾರತದಲ್ಲಿ ದೈವತ್ವದ ಹುಟ್ಟು ಪಡೆದುಕೊಂಡು ಪಶ್ಚಿಮ ಭಾರತ ಅಂದರೆ ಮಹಾರಾಷ್ಟ್ರ ಭಾಗದಲ್ಲಿ ಚಾಲ್ತಿ ಪಡೆದುಕೊಂಡು ನಂತರ ಕರ್ನಾಟಕದಲ್ಲಿ ಸಾಮಾಜಿಕವಾಗಿ ಅಸ್ತಿತ್ವ ಪಡೆದುಕೊಂಡಿತು.

**'ನೆಂಟಸ್ತಿಕೆ ಹೆಸರು'** ಇದರ ವಸ್ತು ಸಂಬಂಧ ವಾಚಕ ಮತ್ತು ಪರಿಭಾಷೆಗಳು ಮೂವತ್ನಾಲ್ಕಕ್ಕಿಂತ ಹೆಚ್ಚು ಸಂಬಂಧ ವಾಚಕಗಳು ಚಾಲ್ತಿಯಲ್ಲಿವೆ. ವ್ಯಕ್ತಿಯ ಸಂಬಂಧವನ್ನು ಸೂಚಿಸಲಿಕ್ಕೆ ಈ ತೆರನಾದ ಪರಿಭಾಷೆ ಬಳಸಿಕೊಂಡಿರುವುದನ್ನು ಕಾಣಬಹುದು. ಹೀಗಾಗಿ ಆಯಾ ಕಾಲಘಟ್ಟದಲ್ಲಿ ಮತ್ತು ಭೌಗೋಳಿಕ ಪರಿಭಾಷೆಗಳ ವ್ಯತ್ಯಾಸವನ್ನು ಮನಗಾಣ ಬಹುದಾಗಿದೆ. 'ಒಕ್ಕಲಗಿತ್ತಿ' ಬಾಡಿಗೆದಾರರು ಅಥವಾ ನೌಕರರು ವರ್ಗವಾದಾಗ ಹೊಸ ಪರಿಸರಕ್ಕೆ ಹೊಂದಿಕೊಂಡ ಸ್ವರೂಪ ಮತ್ತು ಒಕ್ಕಲಗಿತ್ತಿ ಮತ್ತು ಒಡತಿ ಹೊಂದಿಕೊಂಡ ಚಿತ್ರಣ ನಿರೂಪಿಸಲಾಗಿದೆ.

**'ಹೆಸರು ಮತ್ತು ಅಡ್ಡ ಹೆಸರು ಅಡ್ನಾಡಿ ಹೆಸರು'** ಇದರ ವಸ್ತು ವ್ಯಕ್ತಿಯ ನಾಮಧೇಯವನ್ನು ಗುರುತಿಸುವ ಪರಿಭಾಷೆ ಬಳಕೆ. ಅಂದರೆ ಮನುಷ್ಯ ತನ್ನ ಪ್ರತಿನಿತ್ಯ ವ್ಯವಹಾರ ಮಾಡಲು ಬಳಸಬಹುದಾದ ಪರಿಭಾಷೆಯ ಕುರಿತು ಪ್ರಬಂಧ ರಚನೆಯಾಗಿದೆ. ವ್ಯಕ್ತಿ, ಪ್ರಾಣಿ ಇಲ್ಲವೆ ಸಂಸ್ಥೆ ಮತ್ತು ಮನೆತನ ಈ ತೆರನಾದ ನಾಮಪದಗಳು ಪ್ರಸ್ತಾಪಗೊಂಡಿವೆ.

**'ಮನಃಶಾಂತಿಯ ಸಪ್ತಸೂತ್ರ'**ದಲ್ಲಿ ಉತ್ತಮ ಜೀವನಕ್ಕೆ, ಉತ್ತಮ ಬದುಕಿಗೆ ಒಂದಷ್ಟು ಸೂತ್ರಗಳನ್ನು ಅಳವಡಿಸಿಕೊಂಡರೆ ಒಳಿತು. ಅದರಿಂದ ಶಾಂತಿ, ನೆಮ್ಮದಿಯನ್ನು ಕಂಡುಕೊಳ್ಳಲು ಸಾಧ್ಯ ಎಂಬುದಾಗಿ ಶ್ರೀನಿವಾಸ ಹಾವನೂರ ಅವರು ವಿವರಿಸಿದ್ದಾರೆ. ತಮ್ಮ ಮನಸ್ಸಿನ ಅಶಾಂತಿಯನ್ನು ಬೀಜಮಂತ್ರದಿಂದ ನೀಗಿಸಬಹುದು. ಬದುಕಿನ ಬಗ್ಗೆ ಪರಿಚಿತ ಜನರ ಬಗ್ಗೆ ನಮ್ಮ ನಿಲುವನ್ನು ಬದಲಿಸಿಕೊಳ್ಳುವ ಮೂಲಕ ಅಶಾಂತಿಯನ್ನು ಹೋಗಲಾಡಿಸಬಹುದು ಎಂದು ಹಾವನೂರ ಅವರು ಸೂತ್ರಗಳನ್ನು ರೂಪಿಸಿ ನಮ್ಮ ಮುಂದಿಟ್ಟಿದ್ದಾರೆ.

**'ನನ್ನಷ್ಟಕ್ಕೆ ನಾನು'** ಇದರ ಪ್ರಮುಖ ವಿಷಯ ಏಕಾಂಗಿತನ. ವ್ಯಕ್ತಿ ಕೇಂದ್ರವಾಗಿಟ್ಟುಕೊಂಡು ಅದರ ಜೊತೆಗೆ ಸಮಸ್ಯೆ ನಿರೂಪಿತಗೊಂಡಿದೆ. ಮನುಷ್ಯ ಸಂಘಜೀವಿ. ಆದರೆ ಏಕೆ ಒಂಟಿತನ ಬಯಸುತ್ತಾನೆ? ಅಂದರೆ ವ್ಯಕ್ತಿ ತನ್ನ ಗೌರವಕ್ಕೆ ಚ್ಯುತಿ ಬಂದಾಗ ಸ್ನೇಹ

ಸಂಬಂಧ ಅಥವಾ ಬಂಧುತ್ವ ಸಂಬಂಧದಿಂದ ದೂರ ಉಳಿಯುತ್ತಾನೆ. 'ವಿದೇಶಿಗಳಲ್ಲಿ ನಾ ಕಂಡ ನಾರಿಯರು' ಇದರ ವಸ್ತು ಮಹಿಳೆ; ಇದು ಪ್ರವಾಸ ಕಥನದಂತೆ ಕಂಡರೂ ಸಂಶೋಧನಾತ್ಮಕ ದೃಷ್ಟಿಕೋನವನ್ನು ಕಾಣಬಹುದು. ಭಾರತೀಯ ಮಹಿಳೆ ಮತ್ತು ಪಾಶ್ಚಿಮಾತ್ಯ ಮಹಿಳೆಯರ ತೌಲನಿಕ ದೃಷ್ಟಿಕೋನ ಇಲ್ಲಿ ನಿರೂಪಿತಗೊಂಡಿದೆ. ಮಹಿಳೆಯರ ಉದ್ಯೋಗ, ಕೌಟುಂಬಿಕ ಬದುಕಿನ ಸ್ವರೂಪ ಕಾಯಕದ ಶಿಸ್ತು-ದಕ್ಷತೆ ಈ ತೆರನಾದ ಅಂಶಗಳು ತೌಲನಿಕವಾಗಿ ನಿರೂಪಿತಗೊಂಡಿದೆ. 

**'ಪುಣೆ ಮತ್ತು ಪುಣೇರಿ'** ಇದರ ವಸ್ತು ಎರಡು ಪ್ರಮುಖ ನಗರಗಳು. ಈ ನಗರಗಳನ್ನು ಕೇಂದ್ರವಾಗಿಟ್ಟುಕೊಂಡು ಇದರ ಜೊತೆಗೆ ಸಾಂಸ್ಕೃತಿಕ ಅಸ್ಮಿತೆಯ ಕುರಿತು ಚರ್ಚೆ. ಈ ನಗರಗಳಾದ ಮುಂಬಯಿ, ಬೆಂಗಳೂರು ಆಡಳಿತಾತ್ಮಕವಾಗಿ ಅಸ್ತಿತ್ವ ಕಂಡುಕೊಂಡರೆ ಸಾಂಸ್ಕೃತಿಕವಾಗಿ ಅಸ್ತಿತ್ವವನ್ನು ಪಡೆಯದಿರುವುದು ವಿಷಾದನೀಯ. ಈ ನಗರಗಳ ಕುರಿತು ತೌಲನಿಕ ಚರ್ಚೆ, ಹಾಗೆಯೇ ಮುಂಬಯಿಗೆ ವಲಸೆ ಬಂದವರಲ್ಲಿ ಕರ್ನಾಟಕದವರ ಸಂಖ್ಯೆ ಹೆಚ್ಚು. ಹೀಗಾಗಿ ಇತರ ರಾಜ್ಯದ ಎಲ್ಲಾ ಜನರು ಧಾರ್ಮಿಕವಾಗಿ ಅಸ್ತಿತ್ವ ಪಡೆದುಕೊಂಡರೆ ಕರ್ನಾಟಕದವರು ಪಡೆದುಕೊಳ್ಳದಿರುವುದು ಖೇದದ ಸಂಗತಿ. ಮುಂಬಯಿ ಪಾತಕ ಲೋಕದ ದೃಶ್ಯಗಳು ಮೈನವಿರೇಳುವಂತೆ ಮಾಡುತ್ತದೆ.

**'ಜಲಬಾಧೆ'** ಇದರ ಚರ್ಚಿತ ವಿಷಯ ಪ್ರಯಾಣ. ಇದನ್ನು ಕೇಂದ್ರವಾಗಿಟ್ಟುಕೊಂಡು ಅದರ ಜೊತೆಗೆ ಸಮಸ್ಯೆಗಳು ಉಲ್ಬಣಗೊಂಡ ರೀತಿ. ಹಾಗೆಯೇ ಬಾಧೆ ನರಳಾಟದ ಅನುಭವವೂ ವ್ಯಕ್ತಗೊಂಡಿದೆ. ಅದು ವಿಮಾನ ಪ್ರಯಾಣ ಸಂದರ್ಭ ಎಂದರೆ ತುಂಬ ಕಷ್ಟಕರವಾದ ಕೆಲಸ. 'ಸನ್ಯಾಸಿ ಮತ್ತು ಸಂಸಾರ' ಇದರ ವಸ್ತು ಒಂದು ನಾಣ್ಯದ ಎರಡು ಮುಖಗಳು. ಒಂದು ಸುಖವಾದರೆ ಮತ್ತೊಂದು ತ್ಯಾಗ. ಇವುಗಳ ಸ್ವರೂಪ ಅನಾವರಣಗೊಂಡಿದೆ. ಸನ್ಯಾಸಿ ಏಕಾಂಗಿಯಾದರೆ ಸಂಸಾರಿ ಸಂಘಜೀವಿ. 'ದೊಡ್ಡವರ ಜಗಳ' ವಸ್ತು ವ್ಯಕ್ತಿಗಳ ವ್ಯಕ್ತಿತ್ವದ ಗುಣ. ಎರಡು ವ್ಯಕ್ತಿಗಳ ವ್ಯಕ್ತಿತ್ವದ ಸ್ವರೂಪ. ಬೇಂದ್ರೆ ಮತ್ತು ಶಂಬಾಜೋಶಿಯವರು ಮಾತಿನ ಸ್ಥಿಮಿತ ಕಳೆದುಕೊಂಡು ಇಬ್ಬರು ಕೈಕೈ ಮಿಲಾಯಿಸುವ ಹಂತಕ್ಕೆ ಹೋಗುತ್ತದೆ. ಇದರಿಂದಾಗಿ ಧಾರವಾಡದ ಅಭಿಮಾನಿಗಳು ಮುಜುಗರ ಪಡುವ ದೃಶ್ಯ ನಿರೂಪಿತಗೊಂಡಿದೆ. ಈ ಸೃಜನ ಸಾಹಿತ್ಯದಲ್ಲಿ ಜನರ ಬದುಕಿನ ಚಿತ್ರಣ ಅನಾವರಣಗೊಂಡಿದೆ.

**೩.೪. ವಿಚಾರ ಸಾಹಿತ್ಯ**

ಹಾವನೂರ ಅವರ ವಿಚಾರ ಸಾಹಿತ್ಯದಲ್ಲಿ ಮಹಿಳೆಯ ಬದುಕಿನ ಸ್ವರೂಪದ ಮೂರು ಕಾಲಘಟ್ಟಗಳು ಪರಿಚಿತಗೊಂಡಿದೆ. ೧. ಅವಿವಾಹಿತೆ ೨. ಪರಿತ್ಯಕ್ತ ೩. ವಿಧವೆ, ಇವುಗಳ ವ್ಯಾಪ್ತಿಗೆ ಒಳಗಾದ ಹೆಣ್ಣು ವೇದನೆಪಡುವ ದೃಶ್ಯಗಳು ಅನಾವರಣಗೊಂಡಿವೆ.

ಅವಿವಾಹಿತೆಯಾಗಿ ಉಳಿಯಲು ಕಾರಣ ಏನು? ಏಕೆ? ಹೇಗೆ? ಅದರ ಹಿನ್ನೆಲೆ ಮತ್ತು ಅದಕ್ಕೆ ಹೊಣೆಗಾರರ್‍ಯಾರು? ನಂತರ 'ಪರಿತ್ಯಕ್ತೆ'ಯಾಗಿ ಉಳಿಯಲು ಕಾರಣ ಅದಕ್ಕೆ ಅವಳ ಪರಿಸರವೇ, ಅವಳ ಅಜ್ಞಾನವೋ, ಇಲ್ಲವೋ, ಪರರ ಕುತಂತ್ರಕ್ಕೆ ಬಲಿಯಾದಳೋ, ಹೀಗೆ ಅವಳ ಮುಂದೆ ಅನೇಕ ಪ್ರಶ್ನೆಗಳೇಳುತ್ತವೆ. ಹೀಗೆ ಅವಳ ಬದುಕು ಚಿದ್ರಗೊಂಡ ಚಿತ್ರಣದ ಅನೇಕ ಮಗ್ಗುಲುಗಳು ಚರ್ಚೆಗೊಂಡಿವೆ. ಹಾಗೆಯೇ ವೇದನೆ, ನೋವು, ಆತಂಕ ಈ ತೆರನಾದ ವಿಷಯಗಳನ್ನು ಗಂಭೀರ ಚರ್ಚೆಗೆ ಒಳಪಡಿಸಿದ್ದು ಜೊತೆಗೆ ಮಹಿಳೆಯರ ಪ್ರಗತಿಗೆ ಕೆಲವು ಸಲಹೆಗಳನ್ನು ನೀಡಿದ್ದಾರೆ. ಅವಳಿಗೆ ಪ್ರತ್ಯೇಕ ಶಿಕ್ಷಣ ಕೊಡಬೇಕು, ಗೃಹಣಿಯಾಗುವುದಕ್ಕೆ ಉತ್ತಮ ಪರಿಸರವನ್ನು ಸೃಷ್ಟಿಸಬೇಕು. ಅವಳಿಗೆ ಆತಂಕ ಪಡೆಯದೆ ಆನಂದವನ್ನು ಅನುಭವಿಸುವ ಸಂದರ್ಭವನ್ನು ಕಲ್ಪಿಸಿಕೊಡಬೇಕು. ಈ ತೆರನಾದ ವಿಷಯಗಳು ಹಾವನೂರ ಅವರ ವಿಚಾರ ಸಾಹಿತ್ಯದಲ್ಲಿ ಚರ್ಚಿತಗೊಂಡಿವೆ.

**೩.೫. ಜೀವನ ಚರಿತ್ರೆ**

ಕನ್ನಡ ನಾಡು, ನುಡಿ, ಭಾಷೆ, ಸಾಹಿತ್ಯ, ಸಂಸ್ಕೃತಿ ಹೀಗೆ ಹತ್ತು ಹಲವು ಕ್ಷೇತ್ರಗಳಲ್ಲಿ ಸೇವೆ ಮಾಡಿದ ಸಾಧಕರ ಸಾಧನೆಯನ್ನು ಚರಿತ್ರೆಯ ರೂಪದಲ್ಲಿ ಕಟ್ಟುವ ಕೆಲಸದಲ್ಲಿ ಶ್ರೀನಿವಾಸ ಹಾವನೂರ ಅವರು ತೊಡಗಿಸಿಕೊಂಡದ್ದು ತುಂಬ ಔಚಿತ್ಯಪೂರ್ಣವಾಗಿದೆ. ಯುವ ಪೀಳಿಗೆಗೆ ಚರಿತ್ರೆಯ ಮಹತ್ವ ಅರಿಯಲು ಈ ಚಿಕ್ಕ ಕೃತಿಯು ಸಹಕಾರಿಯಾಗಿದೆ. ಹಿರಿಯ ತಲೆಮಾರಿನವರಾದ ಗಳಗನಾಥ, ಚಿಮ್ಮಲಗಿ, ಫರ್ಡಿನಾಂಡ್ ಕಿಟೆಲ್ ಅವರು ಮಾಡಿದ ಸೇವೆಯ ಮಹತ್ವದ ಸಂಗತಿಗಳನ್ನು ಯುವ ಪೀಳಿಗೆಗೆ ಪರಿಚಯಿಸುವುದು ಅವರ ಉದ್ದೇಶವಾಗಿದೆ. ಹೀಗಾಗಿ ಯುವ ಪೀಳಿಗೆಯಲ್ಲಿ ಹೊಸ ಆಲೋಚನೆ ಹುಟ್ಟಿಕೊಳ್ಳಲು ಮತ್ತು ಈ ನಾಡು ಪ್ರಗತಿಯಾಗಲು ಈ ರೀತಿಯ ಕೃತಿಗಳು ಸಹಕಾರಿಯಾಗುತ್ತವೆ.

**'ಗಳಗನಾಥ ಮಾಸ್ತರ್'** ಹಾವನೂರ ಅವರು ಗಳಗನಾಥರ ಕುರಿತು ಚಿಕ್ಕ ಕೃತಿರೂಪದಲ್ಲಿ ಪರಿಚಯಿಸಿದ್ದಾರೆ. ಅದರಲ್ಲಿ ಅವರ ಬದುಕಿನ ಸಮಗ್ರ ಚಿತ್ರಣವಿದೆ. ಈ ನಾಡಿಗಾಗಿ ಅವರು ಮಾಡಿದ ಸಮಾಜ ಸೇವೆ ಸ್ವರೂಪವನ್ನು ವಿಶ್ಲೇಷಿಸಿದ್ದಾರೆ. ಆದರ್ಶ ಮೌಲ್ಯಗಳನ್ನು ಮೈಗೂಡಿಸಿಕೊಳ್ಳುವುದರ ಮೂಲಕ ಇತರರಿಗೂ ಆ ಮೌಲ್ಯಗಳನ್ನು ಮೈಗೂಡಿಸಿಕೊಳ್ಳುವಂತೆ ಮಾಡಿದ ಅನನ್ಯ ವ್ಯಕ್ತಿತ್ವ ಗಳಗನಾಥರದು.

ಅವರು ಆದರ್ಶ ಶಿಕ್ಷಕನ ಸ್ಥಾನ ತುಂಬುವುದರ ಜೊತೆಗೆ ಶೈಕ್ಷಣಿಕ ಪರಿಸರಕ್ಕೆ ಹೊಸ ಸ್ವರೂಪವನ್ನು ಕೊಟ್ಟರು. ಅವರು ಕೆಲಸ ಮಾಡಿದ ಶಾಲೆಗೆ ತನ್ನದೇಯಾದ ಕಾಯಕಲ್ಪವನ್ನು ಕೊಟ್ಟರು. ಶೈಕ್ಷಣಿಕ ಪ್ರಗತಿಯ ಜೊತೆಗೆ ಸಾಮಾಜಿಕವಾಗಿ ತಮ್ಮನ್ನು ಗುರುತಿಸಿಕೊಂಡರು. ಅವರು ಆದರ್ಶ ಶಿಕ್ಷಕರಾಗಿ, ಗ್ರಂಥಗಳ ಉದ್ಯಮಿಯಾಗಿ, ಸಂಚಾರ ಮಾರಾಟಗಾರರಾಗಿ ಅನೇಕ ಏಳು–ಬೀಳುಗಳ ನಡುವೆ ಬದುಕನ್ನು ರೂಪಿಸಿಕೊಂಡವರು. ಕನ್ನಡ ಭಾಷೆಗೆ ಅಸ್ತಿತ್ವವಿಲ್ಲದ ಕಾಲದಲ್ಲಿ ಕನ್ನಡ ಸಂಘವನ್ನು ಕಟ್ಟಿ ಬೆಳೆಸುವಲ್ಲಿ ಅವರ

ಪಾತ್ರ ಬಹಳ ಮಹತ್ವದ್ದು. ಹಾಗೆಯೇ ಪತ್ರಿಕೆಯ ಮೂಲಕ ಈ ನಾಡಿನ ಜನರಿಗೆ ರಾಜಕೀಯ ಪ್ರಜ್ಞೆಯನ್ನು ಮೂಡಿಸಿದರು.

**ಬಿ.ಜಿ.ಚಿಮ್ಮಲಗಿಯವರು**

ಆಂಧ್ರದ ಪ್ರಮುಖ ನಗರವಾದ ಹೈದ್ರಾಬಾದ್ ಪರಿಸರದ ಸುತ್ತಮುತ್ತ ಕನ್ನಡ ಭಾಷೆ, ಸಂಸ್ಕೃತಿ ಅಸ್ತಿತ್ವವಿಲ್ಲದ ಕಾಲದಲ್ಲಿ ಬಿ.ಜಿ.ಚಿಮ್ಮಲಗಿಯವರು ಹೋರಾಟ ಮಾಡುವುದರ ಮೂಲಕ ಯುವ ಪೀಳಿಗೆಗೆ ಚಳುವಳಿಯ ರೂಪುರೇಷೆಯನ್ನು ಹಾಕಿಕೊಟ್ಟರು. ಕನ್ನಡ ಜನರ ಬದುಕು ಉಸಿರು ಕಟ್ಟುವಂಥ ಪರಿಸರವಿತ್ತು. ಆ ಪರಿಸರದಲ್ಲಿ ವಾಸಿಸುವ ಎಲ್ಲಾ ಕನ್ನಡ ಮನಸ್ಸುಗಳಿಗೆ ಆತ್ಮಸ್ಥೈರ್ಯ ತುಂಬುವ ಕೆಲಸ ಮಾಡಿದರು. ನೃಪತುಂಗ ಶಾಲೆಯನ್ನು ಕನ್ನಡ ಪ್ರಗತಿಗಾಗಿ ಕನ್ನಡದ ಕಾರ್ಯಚಟುವಟಿಕೆಯ ವೇದಿಕೆ ಮಾಡಿಕೊಂಡರು. ಹಾಗೆಯೇ ಗಣೇಶೋತ್ಸವ ಹಾಗೂ ವಿವಿಧ ಕಾರ್ಯಚಟುವಟಿಕೆಗಳನ್ನು ನೆರವೇರಿಸಿದರು. ಹೀಗಾಗಿ ಗಡಿನಾಡಿನಲ್ಲಿ ಇರುವ ಕನ್ನಡ ಜನರ ಅಸ್ತಿತ್ವ ಉಳಿಯುವಂತೆ ಮಾಡಿದ ಚಿಮ್ಮಲಗಿಯವರ ಹೋರಾಟದ ಸ್ವರೂಪವನ್ನು ಹಾವನೂರ ಅವರು ಯುವ ಸಮುದಾಯಕ್ಕೆ ಪರಿಚಯಿಸಿದ್ದಾರೆ.

**ಫರ್ಡಿನಾಂಡ್ ಕಿಟೆಲ್**

ಶ್ರೀನಿವಾಸ ಹಾವನೂರ ಅವರು ಪಾಶ್ಚಿಮಾತ್ಯರ ಕಾರ್ಯವೈಖರಿಯವನ್ನು ಸಾರ್ವತ್ರಿಕವಾಗಿ ಪರಿಚಯಿಸುವ ದೃಷ್ಟಿಯಿಂದ ಈ ಕಿರು ಹೊತ್ತಿಗೆ ಮೂಲಕ ಫರ್ಡಿನಾಂಡ್ ಕಿಟೆಲ್‌ರನ್ನು ಪರಿಚಯಿಸಿದ್ದಾರೆ. ಫರ್ಡಿನಾಂಡ್ ಕಿಟೆಲ್ ಅವರ ಶಿಕ್ಷಣ ಕ್ಷೇತ್ರದ ಸಾಧನೆ ಅಪಾರವಾದುದು. ಗ್ರಂಥ ಸಂಪಾದನೆ, ಹಳಗನ್ನಡ ಸಂಪಾದನೆ, ಕನ್ನಡ–ಇಂಗ್ಲಿಷ್ ನಿಘಂಟುಗಳ ರಚನೆ, ಮುದ್ರಣ, ಭಾರತೀಯ ತತ್ವಜ್ಞಾನದ ಆಳವಾದ ಅಧ್ಯಯನ, ಹಿಂದೂ ಧರ್ಮದ ವಿವೇಚನೆ, ಕ್ರೈಸ್ತ ಗದ್ಯ ಬರವಣಿಗೆ ಹಾಗೂ ಕನ್ನಡ ಸಾಹಿತ್ಯ ಚರಿತ್ರೆಯನ್ನು ಪ್ರಥಮ ಬಾರಿಗೆ ಸಂಪಾದನೆ ಮಾಡಿದರು. ಪೌರ್ವಾತ್ಯ ಭಾಷೆ, ಸಾಹಿತ್ಯ, ಸಂಸ್ಕೃತಿ ಸಂಪಾದನೆ ಮಾಡುವಲ್ಲಿ ಅವರ ಶ್ರಮ ಅಪಾರವಾದುದು; ಅಲ್ಲದೆ ಈ ನಾಡಿಗೆ ಹೊಸ ಸ್ವರೂಪವನ್ನು ಒದಗಿಸಿಕೊಟ್ಟರು.

**೩.೬. ವಿಮರ್ಶೆ**

**'ಕನ್ನಡ ಸಾಹಿತ್ಯ ದರ್ಶನ'** ಕೃತಿಯು ಕನ್ನಡ ಸಾಹಿತ್ಯ ಸ್ವರೂಪವನ್ನು ಪರಿಚಯಿಸುತ್ತದೆ. ಆ ಕಾಲಘಟ್ಟದ ಕೃತಿಗಳ ವಿವರವಾದ ಅಂಕಿಅಂಶಗಳೊಂದಿಗೆ ಪರಿಚಯಿಸುತ್ತದೆ. ಸಾಹಿತ್ಯದ ಕೃತಿಗಳನ್ನು ಅಕಾರಾದಿಯಾಗಿ ವರ್ಗೀಕರಿಸಿ ಪುನರ್‌ಮುದ್ರಣಗೊಂಡ ಸಣ್ಣ ಪುಸ್ತಕವಾಗಿದೆ. ಅಂದರೆ ಕ್ರಿ.ಶ. ೧೯೫೬ರಲ್ಲಿ ೪೫೦ ಕೃತಿಗಳು ಪ್ರಕಟವಾದವು. ಅವುಗಳಲ್ಲಿ ಕನ್ನಡದ ಮೌಲ್ಯಯುತವಾದ ಕೃತಿಗಳು ೩೦೦. ಈ ಎಲ್ಲಾ ಕೃತಿಗಳ ವಿವರಗಳನ್ನು ಒಳಗೊಂಡಿದೆ ಈ ಪುಸ್ತಕ.

**'ವಾದಿರಾಜ ತೀರ್ಥರು'** ಉಡುಪಿಯ ಅಷ್ಟಮಠಗಳಲ್ಲಿ ಒಂದರ ಪೀಠಾಧಿಪತಿಗಳಾಗಿದ್ದ ಶ್ರೀವಾದಿರಾಜರು ಹದಿನಾರನೆಯ ಶತಮಾನದವರು (೧೪೮೦–೧೬೦೦). ದಾಸವರೇಣ್ಯರಾದ

ಪುರಂದರದಾಸ, ಕನಕದಾಸ ಮತ್ತು ಶ್ರೀವ್ಯಾಸರಾಯರ ಸಮಕಾಲೀನರು ಶ್ರೀನಿವಾಸ ಹಾವನೂರ ಅವರು ಶ್ರೀವಾದಿರಾಜರ ಕಾವ್ಯ ಸೌಂದರ್ಯವನ್ನು ಪರಿಚಯಿಸುವ ಉದ್ದೇಶದಿಂದ ಶ್ರೀವಾದಿರಾಜರ ತೀರ್ಥಪ್ರಬಂಧ ಎಂಬ ಉಪನ್ಯಾಸವನ್ನು ಗುಲಬರ್ಗಾ ವಿಶ್ವವಿದ್ಯಾಲಯ ಪ್ರಕಟಿಸಿದೆ. ಶ್ರೀವಾದಿರಾಜರ ತೀರ್ಥ ಪ್ರಬಂಧ ಕೃತಿ ಭರತಖಂಡದ ನದಿ–ಸರೋವರಗಳನ್ನು ತೀರ್ಥಕ್ಷೇತ್ರಗಳನ್ನು ಹಾಗೂ ಅಲ್ಲಿ ಕಂಡುಬರುವ ದೇವ–ದೇವತೆಗಳನ್ನು ವರ್ಣಿಸುತ್ತದೆ.

ಕೃತಿಯಲ್ಲಿ ಭರತಖಂಡದ ಸುಮಾರು ಮೂವತ್ತು ನದಿಗಳ ಬಗ್ಗೆ ವರ್ಣಿಸಿದ್ದಾರೆ. ಹಾಗೆಯೇ ತೀರ್ಥಕ್ಷೇತ್ರಗಳನ್ನು ಮತ್ತು ಅಲ್ಲಿರುವ ದೇವ–ದೇವತೆಯರನ್ನು ಅವರ ಶಕ್ತಿ, ಭಕ್ತಿಗಳಿಗೆ ಸಂಬಂಧಿಸಿದಂತೆ ವರ್ಣಿಸಿದ್ದಾರೆ. ಇಲ್ಲಿ ಉಲ್ಲೇಖಗೊಂಡ ತೀರ್ಥಕ್ಷೇತ್ರಗಳು ಬಹುತೇಕ ದಕ್ಷಿಣ ಕನ್ನಡ ಜಿಲ್ಲೆಯವು.

ಶಿವಕ್ಷೇತ್ರಗಳನ್ನು, ಶಿವನ ಮಹಿಮೆಯನ್ನು ವರ್ಣಿಸಿರುವುದು ಈ ಕೃತಿಯ ವೈಶಿಷ್ಟ್ಯವಾಗಿದೆ. ಹಾವನೂರ ಅವರ ಪ್ರಕಾರ "ಶ್ರೀವಾದಿರಾಜರು ಕಂಡ ಶಿವನು ಲಯಕಾರಿಯಲ್ಲ; ಅತ್ಯಂತ ಮಂಗಳಕರನಾಗಿ ಅವರಿಗೆ ತೋರಿ ಬಂದಿದ್ದಾನೆ. ಅವನ ರೂಪ–ಗುಣಗಳನ್ನು ಅವರು ವಿವರಿಸಿದ ರೀತಿಯಲ್ಲಿ ಈ ಅಂಶ ಎದ್ದುಕಾಣುತ್ತದೆ."[೩]

**'ವಾಙ್ಮಯ ದರ್ಶನ'** ಈ ಕೃತಿಯಲ್ಲಿ ಗೋವಿಂದ ಪೈಯವರ ಸಾಹಿತ್ಯ ಕುರಿತ ಚರ್ಚೆ ಅನಾವರಣಗೊಂಡಿದೆ. ಗೋವಿಂದ ಪೈ ಅವರ ಉಪನ್ಯಾಸಗಳನ್ನು ಶ್ರೀನಿವಾಸ ಹಾವನೂರ ಅವರು ವಿಶ್ಲೇಷಿಸಿದ್ದಾರೆ. ಮೌಲ್ಯಯುತ ಬರಹಗಳನ್ನು ರಾಷ್ಟ್ರಕವಿ ಗೋವಿಂದ ಪೈಯವರು ಸಾಹಿತ್ಯ, ಸಂಸ್ಕೃತಿ, ಧಾರ್ಮಿಕ ವೈಚಾರಿಕ ಹೀಗೆ ಎಲ್ಲ ಪ್ರಕಾರಗಳಲ್ಲಿ ಸಾಹಿತ್ಯ ಕೃಷಿ ಮಾಡಿದವರು. ಇತಿಹಾಸ, ಧರ್ಮ, ತತ್ವಜ್ಞಾನ, ಹಳೆಗನ್ನಡ ಕಾವ್ಯ, ಹೊಸಗನ್ನಡ ಕಾವ್ಯ, ವಿಚಾರ, ನಾಟಕ, ಕವಿತೆ ಇವುಗಳ ವರ್ಗೀಕರಣ ಅಕಾರಾದಿಯಾಗಿದೆ.

ಹೊಸ ಕನ್ನಡ ಸಾಹಿತ್ಯದ ಹಿರಿಯ ತಲೆಮಾರಿನ ಕವಿಗಳಲ್ಲಿ ಗೋವಿಂದ ಪೈಯವರು ಅಗ್ರಗಣ್ಯರು. ಅವರು ಆರು ದಶಕಗಳು ಅಂದರೆ ೬೦ ವರ್ಷಗಳು ಕನ್ನಡ ಸಾಹಿತ್ಯದ ಬಗ್ಗೆ ಬರವಣಿಗೆ ಮಾಡಿದರು. ತಮಿಳು ಭಾಷೆ, ಕನ್ನಡ ನಾಡು, ಶೋಧನೆ ಮತ್ತು ತಮಿಳುನಾಡು ಗ್ರೀಕ್ ಸಂಬಂಧ, ಭರತ ಬಾಹುಬಲಿಯ ಮೂರ್ತಿಗಳನ್ನು ಪ್ರತಿಷ್ಠಾಪಿಸುವ ಕುರಿತ ಚರ್ಚೆ, ವಚನಕಾರರಾದ ಬಸವೇಶ್ವರ, ದಾಸಿಮಯ್ಯ ಕವಿ, ಕಾಲ, ದೇಶ ಮತ ಈ ಅಂಶಗಳನ್ನು ಪ್ರಸ್ತಾಪ ಮಾಡಲಾಗಿದೆ. ಅಲ್ಲದೆ ವೀರಶೈವದ ಅನೇಕ ಮಹತ್ವದ ಸಂಗತಿಗಳ ಮೇಲೆ ಬೆಳಕು ಚೆಲ್ಲಿದೆ.

**೩.೭. ಸಂಶೋಧನೆ**

ಶ್ರೀನಿವಾಸ ಹಾವನೂರ ಅವರು ಈ ನಾಡು ಕಂಡ ಶ್ರೇಷ್ಠ ಸಂಶೋಧಕರಲ್ಲಿ ಒಬ್ಬರು. ಆಂಗ್ಲ ಮಿಶನರಿ ಮತ್ತು ಅಧಿಕಾರಿಗಳು ತಮ್ಮ ವೃತ್ತಿಯ ಜೊತೆಗೆ ಪ್ರವೃತ್ತಿಯಿಂದ ಈ ನಾಡಿಗಾಗಿ ಪರಿಶ್ರಮ ಪಟ್ಟಿದ್ದಾರೆ. ಹಸ್ತಪ್ರತಿಗಳ ಸಂಗ್ರಹ, ಸಂಪಾದನೆ, ಪರಿಷ್ಕರಣೆ

ಶೋಧನೆ ಮಾಡಿ ಈ ನಾಡಿನ ಪ್ರಗತಿಗೆ ಭಾಜನರಾಗಿದ್ದಾರೆ. ಮೊದಲ ತಲೆಮಾರಿನವರಾದ ಕರ್ನಲ್ ಮೆಕೆಂಜಿ, ಹರ್ಮನ್ ಮೊಗ್ಲಿಂಗ್ ಮುಂತಾದವರು. ಎರಡನೆಯ ತಲೆಮಾರಿನವರಾದ ಆರ್.ನರಸಿಂಹಾಚಾರ್, ಡಿ.ಎಲ್.ನರಸಿಂಹಾಚಾರ್, ಫ.ಗು.ಹಳಕಟ್ಟಿ ಮುಂತಾದವರು; ಮೂರನೆಯ ತಲೆಮಾರಿನವರಾದ ಎಂ.ಎಂ. ಕಲಬುರ್ಗಿ, ಎಂ. ಚಿದಾನಂದಮೂರ್ತಿ ಮುಂತಾದವರ ಸಾಲಿಗೆ ಶ್ರೀನಿವಾಸ ಹಾವನೂರ ಸೇರುತ್ತಾರೆ.

ಸಂಶೋಧನ ಕ್ಷೇತ್ರದಲ್ಲಿ ತಮ್ಮ ಜೀವನದ ಬಹುಭಾಗವನ್ನು ಕಳೆದರು. ಕನ್ನಡ ನಾಡಿನ ಭಾಷೆ, ಸಂಸ್ಕೃತಿ, ಕಲೆ, ಪ್ರಾಚೀನ ಕಾವ್ಯ, ಶಾಸ್ತ್ರ ಹೀಗೆ ಹತ್ತು ಹಲವು ವಿಷಯಗಳನ್ನು ಬೇರೆ ಬೇರೆ ಮಗ್ಗುಲುಗಳಲ್ಲಿ ಶೋಧನೆ ಮಾಡಿದ್ದಾರೆ. ಪಾಶ್ಚಿಮಾತ್ಯ ರಾಷ್ಟ್ರ ಮತ್ತು ಪತ್ರಾಗಾರಗಳಿಂದ ಮಹತ್ವದ ಸಂಗತಿಗಳನ್ನು ಸಂಗ್ರಹಿಸಿ ಅವುಗಳನ್ನು ಪರಿಷ್ಕರಿಸಿ ಬರೆದಿದ್ದಾರೆ.

**ಯುವ ಪೀಳಿಗೆಯ ಕುರಿತ ಸಂಶೋಧನೆ ಸಲಹೆ**

ಹಾವನೂರ ಅವರ ಪ್ರಕಾರ ಸಂಶೋಧನೆಗೆ ಆಯ್ಕೆ ಮಾಡಿಕೊಳ್ಳುವ ಪೂರ್ವದ ನಿಲುವುಗಳು ಹೀಗಿವೆ. ಆ ಕಾಲಘಟ್ಟದ ಪರಿಚಯ, ಪ್ರಾಚೀನ ಕಾವ್ಯ, ಶಾಸ್ತ್ರ, ಜಾನಪದ, ಸಂಸ್ಕೃತಿಗಳ ಪರಿಚಯವಿರಬೇಕು. ಕುಮಾರವ್ಯಾಸ ಭಾರತ, ಜೈನ ಧರ್ಮ ಈ ತೆರನಾದ ಕಾವ್ಯಧರ್ಮಗಳ ಕುರಿತು ಜ್ಞಾನವನ್ನು ಹೊಂದಿರಬೇಕು.

ಸಂಶೋಧನೆಗೆ ಉತ್ತಮವಾದ ನಿದರ್ಶನ ಹಾವನೂರ ಅವರ 'ಹೊಸಗನ್ನಡ ಅರುಣೋದಯ'. ಕನ್ನಡ ಸಾಹಿತ್ಯ ಚರಿತ್ರೆ ಅವಲೋಕಿಸಿದಾಗ ಕಾಲಘಟ್ಟ ಅವಸ್ಥಾಭೇದ ಮಾಡುವುದು ಔಚಿತ್ಯ. ಹಳೆಗನ್ನಡ, ನಡುಗನ್ನಡ, ಹೊಸಗನ್ನಡ ಅಧ್ಯಯನದ ದೃಷ್ಟಿಯಿಂದ ವಿಭಾಗಿಸಿ ಕನ್ನಡ ಸಾಹಿತ್ಯ ಚರಿತ್ರೆಗೆ ಹೊಸ ಸ್ವರೂಪ ಕೊಡುವಲ್ಲಿ ಹಾವನೂರ ಅವರ ವಿದ್ವತ್ತು ಅನಾವರಣಗೊಂಡಿದೆ.

ಪಾಶ್ಚಿಮಾತ್ಯರ ಕನ್ನಡ ಕಾರ್ಯವು ಶ್ಲಾಘನೀಯವಾದದ್ದು. ಮುದ್ರಣ, ಶಾಸನಗಳ ಶೋಧ ಹೀಗೆ ಈ ನಾಡಿನ ಚರಿತ್ರೆ ರೂಪಿಸುವಲ್ಲಿ ಅವರ ಪಾತ್ರ ಹಿರಿದಾದುದು. ಪ್ರಾಚೀನ ಕೃತಿಗಳನ್ನು ಶಾಸ್ತ್ರೀಯ ನೆಲೆಯಲ್ಲಿ ಸಂಪಾದನೆ ಮಾಡಿದರು. ಸ್ವಧರ್ಮ ಪ್ರಚಾರಕ್ಕಾಗಿ ಬಂದ ಮಿಶನರಿಗಳು ವೃತ್ತಿಯ ಜೊತೆಗೆ ಸಂಶೋಧನೆಯನ್ನು ಪ್ರವೃತ್ತಿಯಾಗಿಸಿಕೊಂಡಿದ್ದವು. ಅಧಿಕಾರ ವರ್ಗದವರು ಸಂಸ್ಥೆಗಳನ್ನು ತೆರೆಯುವುದರ ಜೊತೆಗೆ ಅನೇಕ ಅನುಕೂಲಗಳನ್ನು ಕಲ್ಪಿಸಿದರು. ಹೊಸಗನ್ನಡ ಬೆಳವಣಿಗೆಗೆ ಸ್ವತಂತ್ರ ಪ್ರೇರಣೆ ನೀಡಿದರು. ಆಧುನಿಕ ಪತ್ರಿಕೆಗಳ ಮೂಲಕ ಶರಣರ ಮತ್ತು ದಾಸರ ಮೂಲಕ ಶಿಕ್ಷಣವೇ ಮುಖ್ಯ ಎಂದರು.

ಹೀಗಾಗಿ ಆ ಕಾಲಘಟ್ಟದಲ್ಲಿ ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ಧಾರ್ಮಿಕವಾಗಿ ಈ ನಾಡು ಪ್ರಗತಿಯಾಗಲು ಸಾಧ್ಯವಾಯಿತು. ರಾಮಕೃಷ್ಣ ಪರಮಹಂಸರು. ಸ್ವಾಮಿ

ವಿವೇಕಾನಂದರು, ದಯಾನಂದ ಸರಸ್ವತಿ, ಲೋಕಮಾನ್ಯ ತಿಲಕ್, ರವೀಂದ್ರನಾಥ ಟ್ಯಾಗೋರ್, ಮಹಾತ್ಮ ಗಾಂಧಿ ಇವರೆಲ್ಲರ ಶ್ರಮದ ಪ್ರತಿಫಲವಾಗಿ ಸಮಾಜ ಪ್ರಗತಿಯಾಗಲು ಸಾಧ್ಯವಾಯಿತು.

ಹಾವನೂರ ಅವರು ಶೋಧನಾತ್ಮಕ ಅನೇಕ ಬಿಡಿ ಲೇಖನಗಳನ್ನು ಬರೆದಿದ್ದಾರೆ. ಈ ನಾಡಿನ ಚರಿತ್ರೆಗೆ ಹೊಸ ಸ್ವರೂಪ ಕೊಡುವಲ್ಲಿ ಈ ಬಿಡಿ ಲೇಖನಗಳು ಮಹತ್ವದ ಸಂಗತಿಯನ್ನು ಹೊತ್ತು ತಂದವು. ಸಾಮಾಜಿಕ, ಧಾರ್ಮಿಕ, ರಾಜಕೀಯ ಹಾಗೂ ಶೈಕ್ಷಣಿಕವಾಗಿ ವಿಜ್ಞಾನ ಕಂಪ್ಯೂಟರ್ ಇನ್ನು ಮುಂತಾದ ಬಿಡಿಲೇಖನಗಳಲ್ಲಿ ಮಹತ್ವದ ಸಂಗತಿಗಳು ಪರಿಚಿತಗೊಂಡಿವೆ.

**೩.೮. ಸಂಪಾದನೆ ಮತ್ತು ಅನುವಾದ**

ಶ್ರೀನಿವಾಸ ಹಾವನೂರ ಅವರು ಹತ್ತು ಹಲವು ವಿಷಯಗಳ ಸಂಪಾದನೆ ಮಾಡಿದ್ದಾರೆ. ಹಾಗೆಯೇ ಕೆಲವು ಕೃತಿಗಳ ಅನುವಾದ ಮಾಡಿದ್ದಾರೆ. ಈ ನಾಡಿನ ಪ್ರಗತಿಗೆ ಶ್ರಮಿಸಿದ ಸಾಧಕರ ಕಾರ್ಯತತ್ಪರತೆಯು ಚರಿತ್ರೆಯಲ್ಲಿ ಉಳಿಯುವಂತೆ ಮಾಡಿದ್ದಾರೆ. ಹಟ್ಟಿಯಂಗಡಿ ನಾರಾಯಣರಾಯರು, ರಂ.ಶ್ರೀ.ಮುಗಳಿ, ಜಿ.ಎಸ್. ದೀಕ್ಷಿತರು, ಪಾ.ವೆಂ. ಆಚಾರ್ಯರ ಸಮಗ್ರ ಸಾಹಿತ್ಯ, ಬೆಂಗೇರಿಯವರ ಬರಹ, ಪುರಂದರದಾಸರು, ಹರಿದಾಸರು ದಾಸಸಾಹಿತ್ಯ ಮತ್ತು ಹಸ್ತಪ್ರತಿಗಳು ಈ ನಾಡಿನ ಚರಿತ್ರೆಯ ಮೇಲೆ ಬೆಳಕು ಚೆಲ್ಲಿವೆ. ಇದಕ್ಕೆಲ್ಲ ಕಾರಣಕರ್ತರು ಹಾವನೂರರು.

**ಅನುವಾದ ಸಾಹಿತ್ಯ**

ಹಾವನೂರ ಅವರು ಸಂಸ್ಕೃತ, ಇಂಗ್ಲಿಷ್ ಮತ್ತು ಮರಾಠಿ ಭಾಷೆಗಳ ಕೃತಿಗಳನ್ನು ಹಾಗೂ ಬಿಡಿಲೇಖನಗಳನ್ನು ಅನುವಾದ ಮಾಡಿದ್ದಾರೆ. ಪಾ.ವೆಂ.ಆಚಾರ್ಯರ ಸುಭಾಷಿತ ಚಮತ್ಕಾರಗಳ ಕೃತಿಯನ್ನು ಸಂಸ್ಕೃತದಿಂದ ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಕಿಟೆಲ್ ಕುರಿತು ಇಂಗ್ಲಿಷ್ ಕೃತಿಯನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಕನ್ನಡ ಭಾಷೆಯ ವೈಶಿಷ್ಟ್ಯತೆಯನ್ನು, ಇತರೆ ಭಾಷೆಗಳ ಮಹತ್ವವನ್ನು ಸ್ಥಳೀಯರಿಗೆ ತಿಳಿಯುವಂತೆ ಮಾಡುವುದು ಈ ಅನುವಾದಗಳ ಉದ್ದೇಶವಾಗಿತ್ತು.

**೩.೯. ಇತರ ಸಾಹಿತ್ಯ**

ಕೃತಿ ಮತ್ತು ಲೇಖನ ರೂಪದಲ್ಲಿ ಪತ್ರಿಕೆಯಲ್ಲಿ ಪ್ರಕಟಗೊಂಡ ಹತ್ತು ಹಲವು ಸಂಗತಿಗಳನ್ನು (ಲೇಖನ, ಅಂಕಣ, ಮಹತ್ವ, ವಿಷಯ) ಸಂಗ್ರಹಿಸಿ, ಸಂಪಾದಿಸಿ, ಪರಿಷ್ಕರಿಸಿ ಕೃತಿರೂಪದಲ್ಲಿ ಸಂಪಾದಿಸಿಕೊಟ್ಟರು. ಈ ಎಲ್ಲಾ ಸಂಪಾದನೆಯ ಹಿಂದಿನ ಉದ್ದೇಶ ಯುವ ಪೀಳಿಗೆಗೆ ಅಧಿಕೃತ ದಾಖಲೆಗಳ ಮಹತ್ವ ತಿಳಿಸುವುದಾಗಿತ್ತು. ಭೂತದ ವಿಷಯವನ್ನು ವರ್ತಮಾನದೊಂದಿಗೆ ಸಮೀಕರಿಸಿ ಭವಿಷತ್ತಿಗೆ ಪುರಾವೆಯಾಗುವಂತೆ ಹಾವನೂರ ಅವರು ಶ್ರಮಿಸಿದ್ದಾರೆ.

**ಪತ್ರಗಳ ಚಿತ್ರಿಸಿದ ಗೋವಿಂದ ಪೈ**

ಕನ್ನಡ ಸಾಹಿತ್ಯದಲ್ಲಿ ಪತ್ರ ಸಾಹಿತ್ಯದ ಪ್ರಯೋಜನ ಕುರಿತು ಗೋವಿಂದ ಪೈ ಅವರ ಪತ್ರ ಲೇಖನಗಳ ಸಂಕಲನ ಪರಿಚಯಗೊಂಡಿದೆ. ಪೈಯವರ ಅಭಿಮಾನಿಗಳು, ಸಾಹಿತಿಗಳು ಪತ್ರಗಳನ್ನು ಜಿ.ಪಿ.ರಾಜರತ್ನಂ ಸಂಪಾದಿಸಿ ಸಂಕಲನ ಮಾಡಿದರು. ನಂತರ ಹಾವನೂರ ಮುಂಬಯಿ ಕನ್ನಡ ವಿಭಾಗದಿಂದ ಪತ್ರ ಸಂಕಲನ ಪ್ರಕಟಿಸಿದರು. ೧೯೬೨ರಲ್ಲಿ ಕು.ಶಿ.ಹರಿದಾಸ ಭಟ್ಟರ ಬಳಿ ಪೈಯವರ ೫೦ ಪತ್ರಗಳ ಸಂಗ್ರಹವಿತ್ತು. ಪತ್ರ ಸಾಹಿತ್ಯಕ್ಕೂ ರಾಜರತ್ನಂ ಅವರಿಗೂ ಅವಿನಾಭಾವ ಸಂಬಂಧವಿತ್ತು. ಅವರು ಮೂವತ್ತು ವರ್ಷಗಳ ಕಾಲ ನಡೆಸಿದ ಪತ್ರ ವ್ಯವಹಾರ ಕುರಿತ ಕೃತಿ ೧೯೭೭ರಲ್ಲಿ ಪ್ರಕಟಿಸಿದರು.

**ಎಂ.ಗೋವಿಂದರಾವ್ ಶ್ರೇಷ್ಠ ಪುಸ್ತಕೋದ್ಯಮಿ**

ಹಾವನೂರ ಅವರು ಗೋವಿಂದರಾವ್ ಅವರ ಬದುಕು ಮತ್ತು ಪುಸ್ತಕೋದ್ಯಮ ಬೆಳೆದು ಬಂದ ದಾರಿಯ ಬಗ್ಗೆ ಬರೆದಿದ್ದಾರೆ. ಎಂ. ಗೋವಿಂದರಾವ್ ಅವರಲ್ಲಿ ಬದುಕು ಮತ್ತು ಉದ್ಯಮ ಏಕಮುಖವಾಗಿ ವಿಕಾಸಗೊಂಡಿದೆ. ಆ ಕಾಲಘಟ್ಟದಲ್ಲಿ ಅವರ ಪರಿಶ್ರಮ, ಪ್ರತಿಫಲವಾಗಿ ಕನ್ನಡ ಚರಿತ್ರೆಯ ಅಸ್ಮಿತೆ ಉಳಿದಿದೆ ಎಂದು ಹೇಳಬೇಕು.

**ಕನ್ನಡ ಪತ್ರಿಕಾ ಸೂಚಿ**

ಹಾವನೂರ ಅವರು ಪತ್ರಿಕಾ ಕ್ಷೇತ್ರದಲ್ಲಿ ಸಾಧನೆ ಮಾಡಲು ಅವರ ಸಂಪಾದನೆ ಕಾರ್ಯ ಮತ್ತು ನಿರಂತರ ಅಧ್ಯಯನ ಸಹಕಾರಿಯಾಗಿತ್ತು. ಚದುರಿ ಹೋಗಿದ್ದ ಆಕರಗಳನ್ನು ಕ್ರೋಢೀಕರಿಸುವಲ್ಲಿ ಹಾವನೂರರ ಪರಿಶ್ರಮ ಬಹಳ ಹಿರಿದಾದುದು. ಕನ್ನಡದ ಮೊದಲ ಪತ್ರಿಕೆಗಳ ಹುಟ್ಟು, ವಿಕಾಸ, ಕುರಿತ ಚರ್ಚೆ ಇಲ್ಲಿ ನಿರೂಪಿತಗೊಂಡಿದೆ. ಪತ್ರಿಕಾ ಸಂಸ್ಥೆ ಅಸ್ತಿತ್ವಕ್ಕೆ ಬಂದ ಬಗೆ, ಮೋಹನ ಹೆಗಡೆ, ಪಂಜಾರಿ ಚಲ್ಲಪ್ಪನ್, ಶ್ಯಾಮ್ ಸುಂದರ, ಶ್ರೀನಿವಾಸ ಹಾವನೂರ ಇವರೆಲ್ಲರೂ ಸೇರಿ ಪತ್ರಿಕಾ ಸಂಗ್ರಹ ಮತ್ತು ಮಾಹಿತಿ ಸಂಗ್ರಹಿಸುವ ಕೆಲಸ ಮಾಡಿದರು.

**ಕನಕದಾಸರ ಕೀರ್ತನೆಗಳ ಶಬ್ದಪ್ರಯೋಗ**

ವಿ.ಕೃಷ್ಣ ಮತ್ತು ಹಾವನೂರ ಅವರು ನಿರಂತರ ಅಧ್ಯಯನದ ಮೂಲಕ 'ಕನ್ನಡ ಶಬ್ದ ಪ್ರಯೋಗ' ಕೋಶವನ್ನು ಸರಳ ಕೈಪಿಡಿಯಂತೆ ಮಾಡಿದರು. ಶಬ್ದಗಳ ಪಟ್ಟಿ ಮಾಡಿದರೆ ಅದನ್ನು ಶಬ್ದಸೂಚಿ ಎಂದು ಕರೆಯುತ್ತಾರೆ. ವಾಕ್ಯಸಹಿತ ಶಬ್ದ ಪ್ರಯೋಗ ಮಾಡಿದರೆ ಶಬ್ದ ಪ್ರಯೋಗ ಕೋಶ ಎಂದು ಕರೆಯುತ್ತಾರೆ. ಕಿಟೆಲ್‌ರವರು (ಹಿಬ್ರೂ ಭಾಷೆಯ ಬೈಬಲ್ ೧೦ ವರ್ಷಗಳವರೆಗೆ) ಕೃತಿಯ ಅಧ್ಯಯನ ಮಾಡಿ ಶಬ್ದಪ್ರಯೋಗ ಮಾಡಿದರು. ಕಿಟೆಲ್, ಜೈರಾಸ್ ಸಮಗ್ರ ಪದ್ಯಗಳ ಶಬ್ದಕೋಶವನ್ನು ರಚಿಸಿದರು.

ಭಾರತದ ಬ್ಲೂಮ್ ಫೀಲ್ಡ್ ಸಂಸ್ಕೃತ ವಿದ್ವಾಂಸರ ಪ್ರಯೋಗ ಕೋಶವನ್ನು ರಚಿಸಿದರು. ಎಸ್.ಆರ್.ಗುಂಜಾಳ ಅವರು ಬಸವಣ್ಣನವರ ವಚನಗಳ ಪಟ್ಟಿಕೆಗಳನ್ನು ಮಾಡುತ್ತ ತುಂಬಾ ಶ್ರಮವಹಿಸಿ ಸಿದ್ಧಪಡಿಸಿದರು. ಹಾಗೆಯೇ ಇದನ್ನೇ ಮುಂದುವರಿಸಿದ ಕೃಷ್ಣ ಮತ್ತು ಹಾವನೂರ ಅವರು ಕನಕದಾಸರ ಶಬ್ದ ಪ್ರಯೋಗ ಕೋಶವನ್ನು ರಚಿಸಿದರು.

**ಗಂಗಾಧರ ಮಡಿವಾಳೇಶ್ವರ ತುರಿಮರಿ ಅವರ ಶಬ್ದ ಮಂಜರಿ ಕೋಶ**

ಶಬ್ದಕೋಶ ಮತ್ತು ನಿಘಂಟುಗಳಲ್ಲಿ ಹಲವು ಪ್ರಕಾರಗಳಿವೆ. ಬಹುಭಾಷೆ ಶಬ್ದಕೋಶಗಳನ್ನು ಮಿಶನರಿಗಳು ಶಬ್ದಗಳನ್ನು ರೂಢಿಸಿಕೊಳ್ಳುವಲ್ಲಿ ಸಿದ್ಧರಾದರು. ನಂತರ ಕನ್ನಡ ಇಂಗ್ಲಿಷ್ ನಿಘಂಟುಗಳನ್ನು ಸಿದ್ಧಪಡಿಸಿ ಪ್ರಕಟಿಸಿದರು. ಹಳೆಗನ್ನಡ ಸಂಸ್ಕೃತ ನಿಘಂಟುಗಳಿದ್ದವು. ಅದರೆ ನೇರವಾದ ಅರ್ಥ ಹೇಳುವಂಥ ಶಬ್ದಾರ್ಥ ಕೋಶಗಳು ಇರಲಿಲ್ಲ. ಆ ಪರಂಪರೆಗೆ ತುರುಮರಿಯವರು ಶಬ್ದಮಂಜರಿ ಶಬ್ದಕೋಶ ಸೇರುತ್ತದೆ. ಅದನ್ನು ಪರಿಷ್ಕರಿಸಿ ಮತ್ತು ಸಂಪಾದನೆ ಮಾಡುವಲ್ಲಿ ಹಾವನೂರ ಅವರು ಸಮರ್ಪಕವಾಗಿ ಕಾರ್ಯನಿರ್ವಹಿಸಿದರು.

ಹೀಗೆ ಹಾವನೂರ ಅವರು ಸೃಜನ-ಸೃಜನೇತರ ಪ್ರಕಾರಗಳನ್ನು ಅನೇಕ ಕೃತಿಗಳನ್ನು ಪ್ರಕಟಿಸುವುದರ ಮೂಲಕ ಕನ್ನಡ ಸಾಹಿತ್ಯಕ್ಕೆ ತಮ್ಮದೇ ಆದ ವಿಶಿಷ್ಟ ಕೊಡುಗೆಯನ್ನು ನೀಡಿದ್ದಾರೆ. ಈ ಹಿನ್ನೆಲೆಯಲ್ಲಿ ಹಾವನೂರ ಅವರ ಸಮಗ್ರ ಸಾಹಿತ್ಯವನ್ನು ವಿಷಯನುಸಾರ ವರ್ಗೀಕರಣ ಮಾಡಿಕೊಂಡು ಮುಂದಿನ ಅಧ್ಯಾಯಗಳಲ್ಲಿ ವಿಶ್ಲೇಷಣೆ ಮಾಡಲಾಗಿದೆ.

**ಕೊನೆ ಟಿಪ್ಪಣಿ**

೧. ಗಂಧ ಮತ್ತು ಕಲ್ಲು, ಶ್ರೀನಿವಾಸ ಹಾವನೂರ, ಪು.ಸಂ. ೦೫

೨. ಕನ್ನಡ ಸಾಹಿತ್ಯ ಪರಿಷತ್ತು, ಸಂಪುಟ-೨, ಪು.ಸಂ. ೧೯೦೦

೩. ವಾದಿರಾಜ ತೀರ್ಥರು, ಶ್ರೀನಿವಾಸ ಹಾವನೂರ, ಪು.ಸಂ. ೩೮

## ಅಧ್ಯಾಯ ನಾಲ್ಕು

## ಸಂಶೋಧನೆ

ಕನ್ನಡ ಸಂಶೋಧನೆಗೆ ಸುಮಾರು ಎರಡು ನೂರು ವರ್ಷಗಳ ಇತಿಹಾಸವಿದೆ. ಈ ಅವಧಿಯಲ್ಲಿ ಸಾಹಿತ್ಯ, ಸಂಸ್ಕೃತಿ, ಚರಿತ್ರೆ, ಜಾನಪದ, ಕಲೆ, ಸಾಮಾಜಿಕ ಆಚಾರ-ವಿಚಾರಗಳ ಬಗೆಗೆ ವೈವಿಧ್ಯಮಯವಾದ ಸಂಶೋಧನೆಗಳು ನಡೆಯುತ್ತಿವೆ. ಕರ್ನಲ್ ಮೆಕೆಂಜಿ, ಫರ್ಮನ್ ಮೊಗ್ಲಿಂಗ್, ಬಿ.ಎಲ್.ರೈಸ್, ಕಿಟೆಲ್ ಮೊದಲಾದ ಪಾಶ್ಚಾತ್ಯ ವಿದ್ವಾಂಸರು ಪ್ರಾಚೀನ ಕನ್ನಡ ಕೃತಿಗಳ ಶೋಧ, ಸಂಗ್ರಹ, (ಶಾಸನಗಳ)ಸಂಪಾದನೆ, ಜನಪದ ಸಂಗ್ರಹ ಹೀಗೆ ಅನೇಕ ಸಂಶೋಧನ ಕಾರ್ಯಗಳನ್ನು ಕೈಗೊಂಡರು. ಇದರ ಫಲವಾಗಿ ಕನ್ನಡ ಸಾಹಿತ್ಯ ಸಂಸ್ಕೃತಿ ಸಂಶೋಧನೆ ಕೈಗೊಳ್ಳಲು ಬೇಕಾದ ಆಕರ ಸಾಮಗ್ರಿಗಳು ಸಂಗ್ರಹವಾಗತೊಡಗಿದವು.

ಅವರ ಮುಂದುವರಿಕೆಯಾಗಿ ಆರ್.ನರಸಿಂಹಾಚಾರ್, ಡಿ.ಎಲ್.ನರಸಿಂಹಾಚಾರ್, ಫ.ಗು.ಹಳಕಟ್ಟಿ, ಶಂಬಾ ಜೋಶಿ, ಶಿ.ಶಿ.ಬಸವನಾಳ ಮೊದಲಾದ ದೇಶಿಯ ವಿದ್ವಾಂಸರು ಈ ಕಾರ್ಯವನ್ನು ವ್ಯಾಪಕವಾಗಿ ಕೈಗೊಂಡರು. ಇವರ ಪರಿಶ್ರಮ ಮತ್ತು ಪ್ರಯತ್ನದ ಫಲವಾಗಿ ಕನ್ನಡ ಕಾವ್ಯ, ಪುರಾಣಗಳು, ಶಾಸನಗಳು ಹಾಗೂ ಇತರೆ ದಾಖಲೆಗಳು ಪುಸ್ತಕ ರೂಪದಲ್ಲಿ ಪ್ರಕಟಗೊಂಡವು. ಮೊದಲು ಪ್ರವೃತ್ತಿಯಾಗಿದ್ದ ಸಂಶೋಧನ ಕಾರ್ಯಚಟುವಟಿಕೆಗಳು ನಂತರ ಅವಧಿಯಲ್ಲಿ ವೃತ್ತಿಯಾಗಿ ಪರಿವರ್ತನೆಯಾದವು. ಅಂದರೆ ವಿಶ್ವವಿದ್ಯಾಲಯದಲ್ಲಿನ ಅಧ್ಯಾಪಕ ವರ್ಗದವರು ಬೋಧನೆಯೊಂದಿಗೆ ಸಂಶೋಧನ ಕಾರ್ಯಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ನಂತರದ ಅವಧಿಯಲ್ಲಿ ಆರ್.ಸಿ. ಹಿರೇಮಠ, ವೆಂಕಟಾಚಲಶಾಸ್ತ್ರಿ, ಎಂ.ಎಂ.ಕಲಬುರ್ಗಿ, ಎಂ.ಚಿದಾನಂದಮೂರ್ತಿ ಮುಂತಾದ ಸಂಶೋಧಕರು ಸಂಸ್ಕೃತಿ ಶೋಧಕ್ಕೆ ಹೆಚ್ಚು ಒತ್ತುಕೊಟ್ಟರು. ಈ ಪರಂಪರೆಯಲ್ಲಿ ಶ್ರೀನಿವಾಸ ಹಾವನೂರ ಅವರು ಬಹುಮುಖ್ಯರಾಗುತ್ತಾರೆ.

ಶ್ರೀನಿವಾಸ ಹಾವನೂರ ಅವರ ಗ್ರಂಥಾಲಯ ಮತ್ತು ಬೋಧನಾ ಕೆಲಸ ನಿರ್ವಹಣೆಯ ಸಂದರ್ಭದಲ್ಲಿ ಕೈಗೊಂಡ ಕೆಲಸ ಕಾರ್ಯಗಳು ಸಂಶೋಧನೆಗೆ ಪ್ರೇರಣೆಯಾದವು. ಅವರ

ಆಳವಾದ ಓದು ಹಾಗೂ ಕ್ಷೇತ್ರಕಾರ್ಯದಿಂದ ಸಂಗ್ರಹಿಸಿದ ಅಕರ ಸಾಮಗ್ರಿಗಳನ್ನು ಆಧರಿಸಿ ಸಂಶೋಧನೆಯಲ್ಲಿ ತೊಡಗಿಸಿಕೊಂಡರು. ಕನ್ನಡ ಸಾಹಿತ್ಯ ಚಟುವಟಿಕೆಗಳಿಗೆ ಸಂಬಂಧಿಸಿದ ಮಾಹಿತಿಗಳನ್ನು ದೇಶ-ವಿದೇಶಗಳ ಪತ್ರಾಗಾರಗಳಿಂದ ಮತ್ತು ಗ್ರಂಥಾಲಯಗಳಿಂದ ಸಂಗ್ರಹಿಸಿ ಮೊದಲ ಬಾರಿಗೆ ಅಧಿಕೃತವಾಗಿ ದಾಖಲಿಸಿದರು. ಪೂರ್ಣ ನಿಷ್ಠೆ ಮತ್ತು ಪ್ರೀತಿಯಿಂದ ಕೆಲಸ ಮಾಡುವುದು ಅವರ ವ್ಯಕ್ತಿತ್ವದ ಸಹಜ ಗುಣ. ೧೯ನೇ ಶತಮಾನ ಎನ್ನುವುದು ನಮ್ಮ ರಾಷ್ಟ್ರದಲ್ಲಿ ಎಂತೋ, ಅಂತೆಯೇ ಕರ್ನಾಟಕದ ಸಾಂಸ್ಕೃತಿಕ ಭೂಮಿಕೆಯಲ್ಲಿ ಬಹಳ ಮಹತ್ವಪೂರ್ಣವಾದ ಕಾಲಘಟ್ಟ, ಹೊಸತು-ಹಳೆಯದರ ಸಂಘರ್ಷದ ಮೂಲಕ ರೂಪುಗೊಂಡ ಹೊಸ ತಿಳುವಳಿಕೆ, ವಿದೇಶಿ ಮಿಶನರಿಗಳು ಸ್ಥಳೀಯ ಭಾಷೆ ಸಾಹಿತ್ಯ ಅಧ್ಯಯನಕ್ಕೆ ನೀಡಿದ ಹೊಸ ತಿರುವು. ಎಲ್ಲವನ್ನು ತಲಸ್ಪರ್ಶಿಯಾಗಿ ಪರಿಶೀಲಿಸಿ ಕತ್ತಲೆಯಿಂದ ಬೆಳಕಿನೆಡೆಗೆ ಅಪಾರ ಸಾಮಗ್ರಿಗಳನ್ನು ಹಾವನೂರ ಅವರು ಹೊರತಂದರು.

೧೯ನೇ ಶತಮಾನದಲ್ಲಿ ಭಾರತಕ್ಕೆ ಬಂದ ವಿದೇಶಿ ಮಿಶನರಿಗಳ ಉದ್ದೇಶ ಹಲವು. ಆದರೆ ಅವರ ಸಾಹಿತ್ಯ ಮತ್ತು ಸಂಸ್ಕೃತಿ ಶೋಧಕ್ಕೆ ಅರ್ಪಿತ ಮನೋಧರ್ಮ, ಅವರು ನಿರ್ವಹಿಸಿದ ಇತರೆ ಕಾರ್ಯದ ಬಗೆ, ಈಗಾಗಲೇ ಚರಿತ್ರೆಯಲ್ಲಿ ದಾಖಲಾದ ವಿಷಯ, ಧರ್ಮದ ಪ್ರಚಾರ ಅವರ ಪ್ರಧಾನ ಉದ್ದೇಶವಾಗಿದ್ದವು. ಹೀಗಿದ್ದರೂ ನೆಲದ ಭಾಷೆ, ಸಾಹಿತ್ಯ, ಸಂಸ್ಕೃತಿಯನ್ನು ಗಾಢವಾಗಿ ಪ್ರೀತಿಸಿದವರು. ಸಂಶೋಧನ ಕ್ಷೇತ್ರದಲ್ಲಿ ಅವರ ದಣಿವರಿಯದ ಮನಸ್ಸು, ಸೇವಾ ಮನೋಧರ್ಮ ಶ್ರೀನಿವಾಸ ಹಾವನೂರ ಅವರಿಗೆ ಪ್ರೇರಣೆಯಾದವು. ಅಂತೆಯೇ ಅವರು ಆ ಕಾಲದಲ್ಲಿ ಕನ್ನಡ ನಾಡು ನುಡಿಯ ಅನನ್ಯತೆಗಾಗಿ ಶ್ರಮಿಸಿದರು.

ಹಾವನೂರ ಅವರು ಸಂಶೋಧನೆ ಆರಂಭಿಸಿದ ದಿನದಿಂದ ತಮ್ಮ ಎಂಬತ್ತರ ವಯಸ್ಸಿನವರೆಗೆ ತಮ್ಮನ್ನು ಪೂರ್ಣವಾಗಿ ಅರ್ಪಿಸಿಕೊಂಡಿದ್ದರು. ಅವರು ಕೈಗೊಂಡ ಅಧ್ಯಯನ ಅಥವಾ ಸಂಶೋಧನೆಗೆ ಆನುಷಂಗಿಕವಾಗಿ ಆಕರಗಳನ್ನು ಎಂದೂ ಬಳಸಿದವರಲ್ಲ. ಮೂಲ ಆಕರ ಸಾಮಗ್ರಿಗಳನ್ನು ಆರಿಸಿಕೊಂಡು ಶೋಧಿಸಿದವರು. ಕೇಂದ್ರ ಸಾಹಿತ್ಯ ಅಕಾಡೆಮಿಗಾಗಿ ಅವರು ಸಿದ್ಧಪಡಿಸಿದ ಕಿಟೆಲ್ ಅವರ ಕುರಿತ ಗ್ರಂಥ ರಚನೆಯ ಸಲುವಾಗಿ ಮಂಗಳೂರಿನ ಕರ್ನಾಟಕ ಥಿಯೋಲಾಜಿಕಲ್ ಸಂಶೋಧನ ಕೇಂದ್ರದ ಪತ್ರಾಗಾರಕ್ಕೆ ಎರಡು ಬಾರಿ ಹೋಗಿರುವುದು ಇದಕ್ಕೆ ನಿದರ್ಶನವಾಗಿದೆ. ಅವರು ಅಧ್ಯಯನಕ್ಕಾಗಿ ಅನುಸರಿದ ಮಾರ್ಗ ಮತ್ತು ಕರ್ತವ್ಯ ಕಂಡಾಗ ಅವರಿಗಿದ್ದ ಶಿಸ್ತು ಹಾಗೂ ಪ್ರಜ್ಞೆ ನಮಗೆ ಅರಿವಾಗುತ್ತದೆ.

ಭಾರತದಲ್ಲಿ ಸ್ಥಾಪಿತವಾದ ವಸಾಹತುಶಾಹಿ ಆಡಳಿತವು ಸಾರ್ವತ್ರಿಕ ಶಿಕ್ಷಣ ವ್ಯವಸ್ಥೆಯನ್ನು ಜಾರಿಗೊಳಿಸಿತು. ಇದರಿಂದಾಗಿ ಶೈಕ್ಷಣಿಕ ವ್ಯವಸ್ಥೆಯಲ್ಲಿ ಹಲವಾರು ಬದಲಾವಣೆಗಳಾದವು. ವಿದೇಶಿ ವಿದ್ವಾಂಸರು ಮತ್ತು ಆರಂಭದಲ್ಲಿ ಇಂಗ್ಲಿಷ್ ಶಿಕ್ಷಣ ಪಡೆದ ದೇಸಿ ವಿದ್ಯಾವಂತ ವರ್ಗವು ಇಲ್ಲಿನ ಶಾಸನ, ಹಸ್ತಪ್ರತಿ, ಕಡತ ಮುಂತಾದ

ಹಳೆಯ ದಾಖಲೆಗಳನ್ನು ಮುದ್ರಣರೂಪಕ್ಕೆ ತರಲು ಪ್ರಯತ್ನಿಸಿತು. ಈ ಕಾರ್ಯಚಟುವಟಿಕೆಯ ಭಾಗವಾಗಿ ಸಂಗ್ರಹ, ಸಂಪಾದನೆ ಮತ್ತು ಸಂಶೋಧನೆಗೆ ಹೆಚ್ಚಿನ ಮಹತ್ವ ಪ್ರಾಪ್ತವಾಯಿತು. ಅಲ್ಲದೆ ಸಂಶೋಧನೆಯು ಒಂದು ಶೈಕ್ಷಣಿಕ ಶಿಸ್ತಾಗಿ ರೂಪುಗೊಳ್ಳತೊಡಗಿತು.

**ಪದನಿಷ್ಪತ್ತಿ**

ಇಂಗ್ಲಿಷ್‌ನ 'RESEARCH' ಎಂಬ ಪದಕ್ಕೆ ಕನ್ನಡದಲ್ಲಿ ಸಂಶೋಧನೆ ಎನ್ನುವ ಸಂವಾದಿ ಪದ ಬಳಸಲಾಗುತ್ತದೆ. 'RE' ಎಂದರೆ ಚೆನ್ನಾಗಿ, ಸರಿಯಾಗಿ ಎನ್ನುವ ಅರ್ಥ; 'SEARCH' ಎಂದರೆ ಹುಡುಕು ಎಂದರ್ಥ. 'RESEARCH' ಎಂದರೆ ಚೆನ್ನಾಗಿ, ಸರಿಯಾಗಿ ಹುಡುಕು ಎನ್ನುವ ಅರ್ಥ ಸ್ಫುಟಿತವಾಗುತ್ತದೆ. ಹಾವನೂರ ಅವರ ಪ್ರಕಾರ ಸಂಶೋಧನೆ ಎಂದರೆ ಹೊಸದನ್ನೇ ಕಂಡು ಹಿಡಿಯುವುದೇ ಹೊರತು ಹುಡುಕುವುದಲ್ಲ. ಇದ್ದದ್ದನ್ನು ಹುಡುಕುವುದರಲ್ಲಿ ಹೊಸತನವಿಲ್ಲ– ಅಂದರೆ ಅದು ಶೋಧನೆ ಹೊರತು ಸಂಶೋಧನೆಯಲ್ಲ. ತಿಳಿಯದೇ ಇರುವುದನ್ನು, ಕಾಣದೇ ಇರುವುದರಲ್ಲಿನ ಹೊಸತನ ಕಂಡುಕೊಳ್ಳುವುದು ಸಂಶೋಧನೆ ಎನಿಸಿಕೊಳ್ಳುತ್ತದೆ ಎಂದು ಅಭಿಪ್ರಾಯಪಡುತ್ತಾರೆ. ಸಂಶೋಧಕನಿಗೆ ಹೊಸದನ್ನು ಕಾಣುವ ಕುತೂಹಲ ಬಹಳ ಮುಖ್ಯವಾದದ್ದು ಎಂಬುದು ಅವರ ಅಭಿಪ್ರಾಯ.

ಜಿ.ಎಸ್.ದೀಕ್ಷಿತರು ಸಂಶೋಧನೆ ಮತ್ತು ಸಂಶೋಧಕರನ್ನು ಕುರಿತು ಹಾವನೂರ ಅವರಿಗೆ ಈ ರೀತಿ ಹೇಳಿದರು. "ಸಂಶೋಧಕ ಸಂಶಯ ಶೋಧನಾಗಿರಬೇಕು, ಪತ್ತೇದಾರನಾಗಿರಬೇಕು, ಕೊನೆಯಲ್ಲಿ ನ್ಯಾಯಾಧೀಶನಂತೆ ನಿರ್ಣಯ ಕೈಗೊಳ್ಳಬೇಕು ಎಂದು ಹೇಳಿ, ಅದಕ್ಕೆ ಇನ್ನೆರಡು ಅಂಶಗಳನ್ನು ಸೇರಿಸಬೇಕು. ಆಯ್ದುಕೊಂಡ ವಿಷಯದ ಬಗ್ಗೆ ಒಂದು ಬಗೆಯ ನಂಟು, ಅದನ್ನು ಮುಗಿಸಲೇಬೇಕೆನ್ನುವ ಛಲ."[3] ಈ ಐದು ಅಂಶಗಳನ್ನು ಸ್ಫುಟಿತಗೊಳಿಸುವುದು ಒಂದು ಶೋಧ ಕಾರ್ಯ ಎನ್ನಬಹುದು.

**ಸಂಶೋಧನೆಯ ಯುವ ಪೀಳಿಗೆಗೆ ಕೊಡುವ ಸಲಹೆ**

ಸಾಹಿತ್ಯ ಕ್ಷೇತ್ರದಲ್ಲಿ ಸಂಶೋಧನೆ ಮಾಡುವವರಿಗೆ ಕನ್ನಡ ಭಾಷಾ ಪ್ರಭೇದಗಳ ಪರಿಚಯ ಇರಬೇಕು. ವಿವಿಧ ಕಾಲಘಟ್ಟಗಳಲ್ಲಿ ಬೆಳೆದುಬಂದ ಭಾಷಾ ಭೇದಗಳಾದ ಹಳೆಗನ್ನಡ, ನಡುಗನ್ನಡ, ಹೊಸಗನ್ನಡ ಹೀಗೆ ಆಯಾ ಪ್ರಭೇದಗಳ ಹಿನ್ನೆಲೆಯೂ ತಿಳಿದಿರಬೇಕು. ಉದಾಹರಣೆಗೆ ಹಳೆಗನ್ನಡ ಭಾಷೆ ಕಾವ್ಯಗಳ ಧೋರಣೆ ಪರಿಚಯವಿದ್ದಾಗ ಅದರ ಬಗ್ಗೆ ಮಾತನಾಡಲು ಸಾಧ್ಯ. ಹಳೆಗನ್ನಡ ಕಾವ್ಯಶಾಸ್ತ್ರ ಮತ್ತು ಜಾನಪದ ಸಾಂಸ್ಕೃತಿಕ ವಲಯದ ಮಹತ್ವವನ್ನು ಅರಿತಿರಬೇಕು. ಪೌರಾಣಿಕ ಕೃತಿಗಳು, ಕಾವ್ಯಗಳ ಅಧ್ಯಯನ ಮಾಡಬೇಕು, ಮೂಲ ಆಕರಗಳ ಕಡೆಗೆ ದೃಷ್ಟಿ ಹರಿಸಬೇಕು. ಉದಾ: ಪಂಪಭಾರತ, ರಾಜಶೇಖರ ವಿಳಾಸ, ಕುಮಾರವ್ಯಾಸ ಭಾರತ ಈ ಕೃತಿಗಳ ಅಳವಾದ ಅಧ್ಯಯನ ಮತ್ತು ಜೈನ ಧರ್ಮದ ಕೃತಿಗಳಲ್ಲಿ ಇರುವ ಪಾರಿಭಾಷಿಕ ಶಬ್ದಗಳ ಅರ್ಥ ತಿಳಿದಿರಬೇಕು.

ನಡುಗನ್ನಡ ಸಾಹಿತ್ಯದ ಅಳವನ್ನು ಅರಿಯಬೇಕಾದರೆ, ವೀರಶೈವ ಧರ್ಮವನ್ನು ತಿಳಿಯಬೇಕಾದರೆ ವೀರಶೈವ ಪಾರಿಭಾಷಿಕ ಶಬ್ದ ಅರ್ಥ ಗೊತ್ತಿರಬೇಕು. ಹಾಗೆಯೇ

ದ್ರಾವಿಡ ಭಾಷೆ ಸ್ವರೂಪ ತಿಳಿದಿರಬೇಕು. ಇನ್ನು ಮುಂದುವರಿದು ಹೇಳಬೇಕಾದರೆ ಪೂರ್ವ ಭಾಗವತವನ್ನು ಚೆನ್ನಾಗಿ ಅಧ್ಯಯನ ಮಾಡಿದರೆ ದಾಸ ಸಾಹಿತ್ಯದ ಹಿನ್ನೆಲೆ ಅರಿಯಬಹುದು. ಅರವತ್ತಮೂರು ಪುರಾತನರ ಹಿನ್ನೆಲೆಯನ್ನು ತಿಳಿದಿದ್ದರೆ ಹರಿಹರನ ರಗಳೆ ಬಹಳ ಸುಲಭವಾಗಿ ತಿಳಿಯಬಹುದು. ಇನ್ನು ಇತರ ವಿಷಯಗಳಾದ ಸಮಾಜ ವಿಜ್ಞಾನಕ್ಕೆ ಸಂಬಂಧಿಸಿದ ಸಂಗತಿ ತಿಳಿದಿದ್ದರೆ ಹೊಸಗನ್ನಡ ಅಧ್ಯಯನ ಮಾಡಲಿಕ್ಕೆ ಸಹಾಯವಾಗುತ್ತದೆ.

ಸಂಶೋಧನೆ ಕೈಗೊಳ್ಳುವ ಯುವ ಸಂಶೋಧಕರು ತಾವು ಅಧ್ಯಯನ ಮಾಡುವ ವಿಷಯ ಆಯ್ಕೆ ಮಾಡಿಕೊಳ್ಳುವ ಪೂರ್ವದಲ್ಲಿ ಈಗಾಗಲೇ ನಡೆದಿರುವ ಅಧ್ಯಯನ ಕುರಿತು ಮತ್ತು ತಾವು ಏನನ್ನು ಕುರಿತು ಅಧ್ಯಯನ ಮಾಡಬೇಕು ಎನ್ನುವ ಬಗ್ಗೆ ತಮ್ಮದೇಯಾದ ಕಲ್ಪನೆ ಕಟ್ಟಿಕೊಂಡಿರಬೇಕು. ಅದರ ಮೂಲ ಆಕರಗಳೇನು? ವ್ಯಾಪ್ತಿ, ಸ್ವರೂಪ ಏನು? ಎನ್ನುವ ಕುರಿತು ಕನಿಷ್ಠ ತಿಳುವಳಿಕೆಯಾದರೂ ಹೊಂದಿರಬೇಕು.

ಕನ್ನಡ ಸಾಹಿತ್ಯ ಸಂಶೋಧನೆಯಲ್ಲಿ ಕಂಪ್ಯೂಟರ್ ಪ್ರಥಮವಾಗಿ ಬಳಸಿದ ಹೆಗ್ಗಳಿಕೆ ಹಾವನೂರರಿಗೆ ಸಲ್ಲುತ್ತದೆ. ಕನ್ನಡ ಸಾಹಿತ್ಯ ಸಂಶೋಧನೆಗೆ ಕಂಪ್ಯೂಟರನ್ನು ಉಪಯೋಗಿಸುವ ಮೂಲಕ ಹಲವು ಸಮಸ್ಯೆಗಳನ್ನು ಸುಲಭವಾಗಿ ಪರಿಹರಿಸಿಕೊಳ್ಳಬಹುದಾದ ಸಾಧ್ಯತೆಯನ್ನು ಅವರು ತೋರಿಸಿಕೊಟ್ಟರು. ಸಾಹಿತ್ಯ ಸಂಶೋಧನೆಗೆ ಕೃತಿ ಮೂಲ ಆಕರವಾಗಿರುವುದರಿಂದ ಪಠ್ಯವನ್ನು ಕಂಪ್ಯೂಟರಿಗೆ ಅಳವಡಿಸಬೇಕು. ಆ ಮೂಲಕ ವಿವಿಧ ಪ್ರಕಾರಗಳನ್ನು ಮಾಡಿಕೊಳ್ಳಬಹುದು, ಶಬ್ದವು ಯಾವ ಕಾರಣದಿಂದ ಬಳಕೆಯಾಗಿದೆ ಎನ್ನುವ ಮುಂತಾದ ಸಂಗತಿಗಳನ್ನು ತಿಳಿಯಬಹುದು. ಪದಗಳ ಮೂಲಕ ಕೃತಿಯನ್ನು ಅಭ್ಯಾಸ ಮಾಡುವ ದೃಷ್ಟಿಯಿಂದ ಕಂಪ್ಯೂಟರ್ ಉಪಯೋಗ ಮಾಡಿಕೊಳ್ಳುವುದು ಔಚಿತ್ಯಪೂರ್ಣ. ಹೀಗೆ ಸಾಹಿತ್ಯ ಸಂಶೋಧನೆಯಲ್ಲಿ ಕಂಪ್ಯೂಟರ್ ಹಲವಾರು ಅನುಕೂಲತೆಗಳನ್ನು ಹೇಗೆ ಒದಗಿಸುತ್ತದೆ ಎಂಬುದನ್ನು ತೋರಿಸಿಕೊಟ್ಟರು.

**ಸಂಶೋಧನಾ ಶೈಲಿ**

ಶ್ರೀನಿವಾಸ ಹಾವನೂರ ಅವರು ಸಂಶೋಧನ ವಲಯದಲ್ಲಿ ತಮ್ಮದೇಯಾದ ಛಾಪು ಮೂಡಿಸಿದರು. ಸಂಶೋಧನ ಲೋಕಕ್ಕೆ ತಮ್ಮನ್ನು ವಿಶಿಷ್ಟ ಪ್ರತಿನಿಧಿಯಂತೆ ಪ್ರತಿನಿಧಿಸಿಕೊಂಡವರು. ಗ್ರಂಥಾಲಯ ವಿಜ್ಞಾನದ ಬಗೆಗೆ ಹಾವನೂರರಿಗಿದ್ದ ಆಸಕ್ತಿಯೇ ಅವರ ಸಂಶೋಧನ ಕಾರ್ಯಕ್ಕೆ ಭದ್ರ ಬುನಾದಿ. ಮುದ್ರಣದ ಕಲೆ, ಪುಸ್ತಕ, ಪತ್ರಿಕೋದ್ಯಮದ ಉಗಮ ಮತ್ತು ವಿಕಾಸ ಕುರಿತು ಅವರಿಗಿದ್ದ ಕುತೂಹಲವೇ ಕಾರಣ.

೧೯ನೇ ಶತಮಾನದಲ್ಲಿ ದೇಸಿ ಮತ್ತು ವಿದೇಶಿ ವಿದ್ವಾಂಸರು ಹಳೆಯ ಕಾಲದ ಬರಹದ ಶೋಧನೆಗೆ ಹೆಚ್ಚಿನ ಮಹತ್ವ ಕೊಟ್ಟರು. ಆ ಸಂದರ್ಭದಲ್ಲಿ ಸಾಹಿತ್ಯ ಶೋಧನೆಯು ಕಾಲಗರ್ಭದ ಚರಿತ್ರೆ ಕುರಿತು ಶೋಧನೆಯಾಗಿತ್ತು. ಗತಕಾಲದ ಆಕರ ಸಾಮಗ್ರಿಗಳ ಅನ್ವೇಷಣೆಯ ಫಲಿತಾಂಶವು ಆಕರ ಪ್ರಮಾಣವನ್ನು ಅವಲಂಬಿಸಿರುತ್ತದೆ. ಆಕರಗಳು

ಹೆಚ್ಚಿಸಿದಷ್ಟು ಫಲಿತಾಂಶವು ಉತ್ತಮವಾಗುತ್ತದೆ. ಶ್ರೀನಿವಾಸ ಹಾವನೂರ ಅವರು ತಾವು ಸಂಶೋಧನೆಗೆ ಆಯ್ಕೆ ಮಾಡಿಕೊಂಡ ವಸ್ತು, ವಿಷಯ, ಯಾವುದೇ ಇರಲಿ ಅದರ ಆಕರ ಸಾಮಗ್ರಿಗಳ ಬೆನ್ನು ಹತ್ತಿ ಹೋಗುವುದರಲ್ಲಿ ಬಹಳ ಸಾಹಸಿಗರು. ಮಹತ್ವದ ಸಂಗತಿ ಎಂದರೆ ಆನುಷಂಗಿಕ ಆಕರಗಳನ್ನು ಎಂದೂ ನಂಬಿದವರಲ್ಲ.

"ಎಲ್.ಡಿ.ಬಾರ್ನ್‌ಟ್ ಎಂಬ ಪಾಶ್ಚಾತ್ಯ ವಿದ್ವಾಂಸರು ಸಂಪಾದಿಸಿದ ಕೃತಿ ೧೯೧೦ ರಲ್ಲಿ ಲಂಡನ್ನಿನ ಬ್ರಿಟಿಷರ ವಸ್ತು ಸಂಗ್ರಹಾಲಯದಿಂದ ಹೊರಬಂದಿದೆ. 'Catalogue of the Kannada Badaga Koorg Book in the Library of the British museum' ಎಂಬ ಕೃತಿ ಹಾವನೂರ ಅವರಿಗೆ ಸಂಶೋಧನೆಯ ಹೊಸ ಮಾರ್ಗವನ್ನು ಹಾಕಿಕೊಟ್ಟಿತು. ಅಜ್ಞಾನ ಕಾಲಖಂಡ 'ಅನುಕರಣೆಯುಗ' ಎಂಬ ಆಪ್ರಥೆಗೆ ಒಳಗಾಗಿದ್ದ ೧೯ನೇ ಶತಮಾನದಲ್ಲಿ ಅಗಾಧವಾದ ಸಾಹಿತ್ಯ ಕೃಷಿ ನಡೆದಿದೆ. ಅವರು ಆ ಕಾಲಘಟ್ಟದ ಸಾಹಿತ್ಯ ಕೃತಿಗಳ ಆಮೂಲಾಗ್ರ ವಿಶ್ಲೇಷಣೆಯನ್ನು ತಮ್ಮ ಅಧ್ಯಯನದ ವಿಷಯವಾಗಿ ಆರಿಸಿಕೊಂಡರು."[೨]

ಶೋಧ ಮತ್ತು ಸಂಶೋಧನೆ ಈ ಪದಗಳ ಅರ್ಥ ಇನ್ನಷ್ಟು ಸ್ಪಷ್ಟಗೊಳಿಸಬೇಕಾದರೆ ಹಳೆಗನ್ನಡದ ಒಂದು ಮಹತ್ವದ ಹಸ್ತಪ್ರತಿಯನ್ನು ಶೋಧಿಸಿ ಅಭ್ಯಾಸ ಮಾಡಿ ಅದಕ್ಕೆ ಪೂರ್ಣವಾದ ಮುನ್ನುಡಿ ಬರೆದರೆ ಅದು ಸಾಹಿತ್ಯ ವಿಮರ್ಶೆ ಎನಿಸಿಕೊಳ್ಳುತ್ತದೆ. ಸಾಹಿತ್ಯ ಶೋಧನೆ ಅಲ್ಲದೇ ಅದೇ ಬಗೆಯ ಪರಿಶ್ರಮ ಇತಿಹಾಸದಲ್ಲಿ ತೋರಿಸಿದ್ದಾರೆ. ಅದು ಶೋಧನೆ ಹೆಜ್ಜೆಯ ದಾಟಿಕೊಂಡು ಪರಿಶೋಧನ ಸದರಿನಲ್ಲಿ ಬರಬಹುದು. ಯಾವುದೇ ಸಂಶೋಧನೆಗೆ ತಳಹದಿಯಾಗಿ ನಮ್ಮಲ್ಲಿ ಮೊದಲ ಆ ಬಗ್ಗೆ ಜಿಜ್ಞಾಸೆ ಮತ್ತು ಸಂದೇಹ ಮೂಡುತ್ತದೆ. ಇದು ಉತ್ಕೃಷ್ಟವಾದಷ್ಟು ಸಂಶೋಧನ ಕಾರ್ಯ ಮೌಲಿಕವೆನಿಸುತ್ತದೆ. ಇತಿಹಾಸ ಸಂಶೋಧನೆಯು ಇದು ಹೇಗೆ ಆಯಿತು. ಏಕೆ ಆಯಿತು ಎಂದು ಸದಾ ಯೋಚಿಸುತ್ತಲೇ ಇರಬೇಕು ಎಂಬುದಾಗಿ ಹಾವನೂರ ಅವರು ತಿಳಿಸುತ್ತಾರೆ.

"ನೆಪೋಲಿಯನ್ ಉದರ ರೋಗದಿಂದ ಸತ್ತ ಎಂದು ಕಳೆದ ೧೫೦ ವರ್ಷಗಳಿಂದ ನಂಬಿಕೊಂಡು ಬಂದಿದ್ದೆವು. ಸ್ವೀಡನ್ನಿನ ಓರ್ವ ದಂತವೈದ್ಯನಿಗೆ ಏನೋ ಒಂದು ಸಂದೇಹ. ಹಲ್ಲಿನ ವಿಷಾಣುಗಳ ರೋಗದ ರೀತಿಯನ್ನು ಬಲ್ಲ. ಹೀಗಾಗಿ ನೆಪೋಲಿಯನ್ ಉದರ ರೋಗದ ರೀತಿಗೂ ಸಾಮ್ಯತೆ ಕಂಡಿತು. ಎರಡು ದಶಕಗಳವರೆಗೂ ಅವ್ಯಾಹತ ಪ್ರಯತ್ನ ಮಾಡಿ ನೆಪೋಲಿಯನ್‌ಗೆ ವಿಷಪ್ರಾಶನ ಮಾಡಿಸಿದ್ದರಿಂದ ಸತ್ತ ಎಂದು ತೋರಿಸಿಕೊಟ್ಟ, ಅವನೇನೂ ಸಂಶೋಧಕ ತಜ್ಞನಲ್ಲ. ಆತನಲ್ಲಿಯ ಕುತೂಹಲವೇ ಅವನ್ನು ಮುಂದಕ್ಕೆ ಸೆಳೆದೊಯಿತು."[೩] ಈ ಎಲ್ಲಾ ಸಂಗತಿಗಳನ್ನು ಗಮನಿಸಿದರೆ ವಿಷಯದ ಮೇಲೆ ಸ್ವಲ್ಪ ಸಂದೇಹ ಬಂದರೂ ಮರು ಪರಿಶೀಲನೆಗೆ ಒಳಪಡಿಸುವುದರಲ್ಲಿ ಹಿಂಜರಿಯಬಾರದು.

**ವಿಷಯ ಗೊತ್ತಿಲ್ಲ ಅನ್ನುವುದರಲ್ಲಿ ಪ್ರಕಾರಗಳಿವೆ.**

ವಿಷಯದ ಕನಿಷ್ಠ ತಿಳುವಳಿಕೆ ಇಲ್ಲದಿರುವುದು.

ವಿಷಯದ ಅಸ್ಪಷ್ಟ ಜ್ಞಾನ ಇರುವುದು.

ವಿಷಯದ ಆಳವಾದ ತಿಳುವಳಿಕೆ ಇಲ್ಲದಿರುವುದು.

ವಿಷಯದ ಬಗ್ಗೆ ತಪ್ಪಾಗಿ ಅರ್ಥೈಸಿಕೊಂಡು ಅದುವೇ ಸರಿಯೆಂದು ಸಮಾಜ ಮುಖಿಯಾಗಿ ಪರಿಚಯಿಸುವುದು.

ಸಂಶೋಧನೆಯಲ್ಲಿ ಈ ಅಂಶಗಳನ್ನು ಗಮನಿಸಿ ಸರಿಯಾದ ಮಾರ್ಗದಲ್ಲಿ ನಡೆದರೆ ಅದು ಮೌಲ್ಯಯುತವಾದ ಶೋಧನೆಯಾಗುತ್ತದೆ. ಇಲ್ಲವಾದರೆ ಆತಂಕಕ್ಕೆ ದಾರಿ ಮಾಡಿಕೊಡುತ್ತದೆ. ನಮ್ಮನ್ನು ನಾವೇ ತಳ್ಳಿಕೊಂಡಂತೆ ಆಗುತ್ತದೆ. ಆದ್ದರಿಂದ ವ್ಯಕ್ತಿ, ವಿಷಯ, ಕಾಲ, ದೇಶ ಈ ಅಂಶಗಳ ಬಗ್ಗೆ ಸ್ಪಷ್ಟ ತಿಳುವಳಿಕೆ ಇರಬೇಕು. ಅಧ್ಯಯನ ಆರಂಭದ ವಿಷಯ ಸ್ಪಷ್ಟತೆ ಇದೆಯೋ ? ಅಥವಾ ಇಲ್ಲವೋ? ಎಂದು ತಿಳಿದುಕೊಳ್ಳುವುದು ಉಚಿತ. ಇಲ್ಲವೆ ಅದರ ಪೂರ್ವ ಸಿದ್ಧತೆಯ ಕುರಿತು ಗಮನಹರಿಸುವುದು ಅಗತ್ಯವೆಂದು ಹಾವನೂರ ಅವರು ಅಭಿಪ್ರಾಯಪಡುತ್ತಾರೆ.

೧೮ನೇ ಶತಮಾನವನ್ನು 'ಕತ್ತಲೆ ಯುಗ' ಎಂದು ಕರೆಯುತ್ತಾರೆ. ಆದರೆ ಶೋಧನೆ ಪ್ರಕಾರ ೨೦೦-೨೫೦ ಮಂದಿ ಕವಿಗಳು ಇದ್ದರೆಂದು ತಿಳಿದು ಬರುತ್ತದೆ. ಇದರ ಅರ್ಥ ಅಧ್ಯಯನ ಅಥವಾ ಶೋಧನೆ ಜ್ಞಾನ ಇಲ್ಲದಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಅಂದರೆ ಈ ತೆರನಾಗಿ ಕಾರ್ಯ ನಿರ್ವಹಿಸಿದರೆ ಇತಿಹಾಸ ಅಥವಾ ಕನ್ನಡ ಸಾಹಿತ್ಯವನ್ನು ದಿಕ್ಕು ತಪ್ಪಿಸುವ ಕಾರ್ಯವಾಗುವುದಿಲ್ಲವೇ? ಎಂದು ಹಾವನೂರ ಅವರು ಪ್ರಶ್ನಿಸುತ್ತಾರೆ.

**ವಿಷಯದ ಬಗ್ಗೆ ಅಸ್ಪಷ್ಟ ತಿಳುವಳಿಕೆಯ ನಿದರ್ಶನ**

೧೦ನೇ ಶತಮಾನದ ಸಾಹಿತ್ಯದ ಬಗ್ಗೆ ಸರಿಯಾದ ಕಲ್ಪನೆ ಇಲ್ಲದಿರುವುದು.

ಆಯ್ಕೆ ವಿಷಯದ ಬಗ್ಗೆ ಅಲ್ಪ ತಿಳುವಳಿಕೆ ಹೊಂದಿರುವುದು.

ವಿಷಯದ ಬಗ್ಗೆ ಅಳವಾದ ಜ್ಞಾನ ಹೊಂದಿರುವುದು.

ವಿಷಯದ ಬಗ್ಗೆ ತಪ್ಪಾಗಿ ಅರ್ಥೈಸಿಕೊಂಡಿರುವುದು.

ಉದಾಹರಣೆ : ಕೊಪರ್ನಿಕಸ್ ಸಿದ್ಧಾಂತಕ್ಕಿಂತ ಮೊದಲು ಭೂಮಿ ಸುತ್ತ ಸೂರ್ಯ ತಿರುಗುತ್ತಾನೆ ಎಂದು ನಂಬಲಾಗಿತ್ತು. ನಂತರ ಅದರ ಬದಲಾಗಿ ಸೂರ್ಯನ ಸುತ್ತಲೂ ಭೂಮಿ ತಿರುಗುತ್ತದೆ ಎನ್ನುವ ಸತ್ಯದ ಇನ್ನೊಂದು ಮುಖ ಪರಿಚಯವಾಗುತ್ತದೆ. ಅಂದರೆ ಸಂಶೋಧನೆ ಎನ್ನುವುದು ಎಲ್ಲಾ ಕಾಲಕ್ಕೂ 'ಸತ್ಯ'ವನ್ನು ಪ್ರತಿಪಾದಿಸುತ್ತದೆ ಎಂದು ಹೇಳಲು ಸಾಧ್ಯವಿಲ್ಲ. ಹೊಸ ಹೊಸ ಆಕರ ಸಾಮಗ್ರಿಗಳು ದೊರೆತಂತೆ ಸತ್ಯ ಬದಲಾಗುತ್ತದೆ. ಹೀಗೆಂದ ಮಾತ್ರಕ್ಕೆ ಮೊದಲು ಕಂಡುಕೊಂಡದ್ದು ಮಿಥ್ಯವಲ್ಲ, ನಂತರ ಬಂದದ್ದು ಅಸತ್ಯ ರೂಪವಲ್ಲ. ಸತ್ಯದ ಇನ್ನೊಂದು ಮುಖವಷ್ಟೆ. ಈ ಮೇಲಿನ ಅಂಶಗಳನ್ನು ಆಧರಿಸಿ ಹೇಳುವುದಾದರೆ ಸಂಶೋಧಕನು ಕುತೂಹಲ ಪ್ರವೃತ್ತಿ, ಜಿಜ್ಞಾಸೆ, ಏನು? ಏಕೆ? ಹೇಗೆ? ಎಲ್ಲಿ? ಯಾವಾಗ? ಯಾರಿಂದ? ಈ ಎಲ್ಲಾ ಅಂಶಗಳು ಶೋಧಕನಲ್ಲಿ ಹಗಲಿರುಳು ಇರಬೇಕಾಗುತ್ತದೆ.

ಸಾಹಿತ್ಯ ಸಂಶೋಧನೆಯಲ್ಲಿ ವ್ಯಕ್ತಿನಿಷ್ಠತೆ ಬಿಟ್ಟು ವಿಷಯ ಅಥವಾ ವಸ್ತು ನಿಷ್ಠತೆಯ ಕಡೆಗೆ ಗಮನಹರಿಸಬೇಕು. ಅಥವಾ ವೈಯಕ್ತಿಕತೆ ಬಿಟ್ಟು ಸಾರ್ವತ್ರಿಕತೆಗೆ ಹೆಚ್ಚು ಪ್ರಾಮುಖ್ಯತೆ

ಕೊಡಬೇಕು. ಇಲ್ಲಿ ಮಹತ್ವದ ಅಂಶ ಗಮನಿಸಿದರೆ ಸಂಶೋಧನ ಕ್ಷೇತ್ರ ಸ್ಪಷ್ಟವಾದದ್ದು ಎಂದು ಕಂಡು ಬರುತ್ತದೆ.

"ಗ್ರಂಥಾಲಯದಲ್ಲಿನ ಪುಸ್ತಕಗಳ ವಾಚನ ಮತ್ತು ಕ್ಷೇತ್ರಕಾರ್ಯ ಸಾಹಿತ್ಯ ಸಂಶೋಧನೆಗೆ ಅತಿ ಅಗತ್ಯ ಎಂದು ಹಾವನೂರ ಅವರು ಒತ್ತಿ ಹೇಳಿದ್ದಾರೆ. ಇದನ್ನು ವ್ಯುತ್ಪತ್ತಿ ಎಂದು ಕರೆಯುತ್ತಾರೆ. 'ಬಹುಜ್ಞಾತ ವ್ಯುತ್ಪತ್ತಿ' ಎಂದು ಕಾವ್ಯ ಮೀಮಾಂಸಕರು ವ್ಯಾಖ್ಯಾನಿಸಿದ್ದಾರೆ. ಸಂಶೋಧಕನಿಗೆ ಇದು ಅಧ್ಯಯನದಂತಹ ಬೌದ್ಧಿಕ ಪರಿಶ್ರಮ, ಕ್ಷೇತ್ರಕಾರ್ಯಗಳಂತಹ ದೈಹಿಕ ಪರಿಶ್ರಮಗಳಿಂದ ಸಾಧ್ಯವಾಗುವ ತಿಳುವಳಿಕೆ ಸಾಮಾಜಿಕ ಸಂಪರ್ಕ, ವಿದ್ವಾಂಸರ ಸಮಾಗಮ, ನಿರಂತರ ಅಧ್ಯಯನ, ಅವಿಶ್ರಾಂತ ಸಂಶೋಧನ ಕ್ರಿಯೆ ಇವುಗಳಿಂದ ಇದು ವರ್ಧಿಸುತ್ತ ಹೋಗುತ್ತದೆ."[೪] ಎಂದು ಎಂ.ಎಂ.ಕಲಬುರ್ಗಿಯವರು ಹೇಳುತ್ತಾರೆ.

**ಸಾಹಿತ್ಯ ಸಂಶೋಧನೆ ಯಾವುದೇ ಇತರೆ ಜ್ಞಾನ ಶಾಸ್ತ್ರಕ್ಕಿಂತ ಭಿನ್ನವಾಗಿರುತ್ತದೆ.**

೧. ವಿಜ್ಞಾನ ಸಂಶೋಧನೆ.

೨. ಸಮಾಜಶಾಸ್ತ್ರ ಸಂಶೋಧನೆ.

೩. ಮಾನವಶಾಸ್ತ್ರ ಸಂಶೋಧನೆ.

ಈ ರೀತಿಯಾಗಿ ವಿಭಾಗಿಸಿ ನೋಡುವುದಾದರೆ ಕೆಲವು ಸ್ಪಷ್ಟತೆ ಪಡೆದುಕೊಳ್ಳಬಹುದು ಎಂದಿದ್ದಾರೆ ಹಾವನೂರ.

**ವಿಜ್ಞಾನ ಸಂಶೋಧನೆ:** "ವಿಜ್ಞಾನದಲ್ಲಿ ಗಣಿತ ಬಿಟ್ಟರೆ, ಮೂಲಭೂತ ಪದಾರ್ಥಗಳ ಶಕ್ತಿ ಇವುಗಳ ಸಾಹಚರ್ಯ ಹಾಗೂ ಜೀವವಿಜ್ಞಾನ ಮುಖ್ಯ ವಿಷಯವಾಗಿ ಬರುತ್ತದೆ. ಇದು ಪೂರ್ಣವಾಗಿ ವಸ್ತುನಿಷ್ಠವಾದುದು.

**ಸಮಾಜ ಶಾಸ್ತ್ರ ಸಂಶೋಧನೆ:** ಇವು ಮನುಷ್ಯನ ಬಾಹ್ಯ ಬದುಕಿಗೆ ಸಂಬಂಧಿಸಿದವು. ಇಲ್ಲಿ ಸಾಮಾಜಿಕ ಬದುಕಿಗೆ ನಿಷ್ಠವಾದುದು. ಇದರಲ್ಲಿ ವ್ಯಕ್ತಿಗತವಾಗಿದ್ದು ಒಂದು ಭಾಗವಾದರೆ, ಇನ್ನೊಂದು ಕೌಟುಂಬಿಕ, ಮತ್ತೊಂದು ನಾಗರಿಕ ಜೀವನಕ್ಕೆ ಅನ್ವಯಿಸುತ್ತದೆ.

**ಮಾನವಿಕ ಶಾಸ್ತ್ರ ಸಂಶೋಧನೆ:** ಧರ್ಮ ಕಲೆ ಮತ್ತು ಸಾಹಿತ್ಯ 'ಮಾನವಿಕ' ಎಂದರೆ ಮನುಷ್ಯನ ಅಂತರಂಗ ಪ್ರತ್ಯಯಗಳು"[೫] ಇಲ್ಲಿ ವಿಷಯವು ಹೆಚ್ಚಾಗಿ ಸ್ಪಷ್ಟವಾಗಿ ಇರುತ್ತದೆ. ಇದಲ್ಲದೆ ಶೋಧಕನಿಗೆ ವೈಚಾರಿಕ ಮತ್ತು ವೈಜ್ಞಾನಿಕ ಪ್ರಜ್ಞೆ ಬೆಳೆಸಿಕೊಳ್ಳುವುದರ ಮೂಲಕ ವಿಷಯವನ್ನು ಆಳವಾದ ಅಧ್ಯಯನಕ್ಕೆ ಒಳಪಡಿಸುವುದರಿಂದ ವಿಷಯವನ್ನು ಬೇರೆ ಬೇರೆ ದೃಷ್ಟಿಕೋನದಿಂದ ನೋಡಲು ಸಾಧ್ಯವಾಗಬಹುದು. ಅಲ್ಲದೆ ವಿಷಯ ಕ್ಲಿಷ್ಟವಿದ್ದರೂ ಅರ್ಥ ಮಾಡಿಕೊಳ್ಳಲು ಸಾಧ್ಯವಾಗಬಹುದು. ಹೀಗಾಗಿ ನಾವು ಆಯ್ಕೆ ಮಾಡಿಕೊಂಡ ಕ್ಷೇತ್ರಕ್ಕೆ ನಮ್ಮದೇಯಾದ ಕೊಡುಗೆಯನ್ನು ಕೊಡಬಹುದು.

**ಸಂಶೋಧನೆಯ ಮಹತ್ವದ ವ್ಯಾಖ್ಯಾನ**

"ಚಾರಿತ್ರಿಕ ಪ್ರಜ್ಞೆಯ ಜಾಗೃತಿಯೇ ಸಂಶೋಧನೆಯ ಅಂತಿಮ ಗುರಿ."[೬] "ವಿದ್ವಾಂಸರ ಗುರಿ(ಇತಿಹಾಸ) ಸಂಶೋಧನೆಗಾಗಿ ಸಂಶೋಧನೆಯಾಗಿರಬಾರದು (ವರ್ತಮಾನ) ಪರಿವರ್ತನೆಗಾಗಿ ಸಂಶೋಧನೆಯಾಗಿರಬೇಕು"[೭]. (ಕ.ಸಂ.ಶಾ ಪುಟ. ೯೯-೧೦೦)

“ಸಂಶೋಧನೆಯಲ್ಲಿ ಎರಡು ಪ್ರಕಾರಗಳು. ೧. ಅನ್ವೇಷಣಾತ್ಮಕ ೨. ಆವಿಷ್ಕಾರಣಾತ್ಮಕವೆಂದು ಗುರುತಿಸಲಾಗಿದೆ.

೧. ಸಾಹಿತ್ಯಕ್ಕೆ ಸಂಬಂಧಪಟ್ಟದ್ದು ಅನ್ವೇಷಣಾತ್ಮಕ ಸಂಶೋಧನೆ. ೨. ಇದು ಆಕರ ಶೋಧ, ಶೋಧಿತ ಆಕರಗಳ ವಿಶ್ಲೇಷಣೆ.”[೮]

“ಸಂಶೋಧನೆ ಸುಖದ ದಾರಿಯಲ್ಲ ಬೌದ್ಧಿಕ ಪರಿಶ್ರಮದೊಂದಿಗೆ ದೈಹಿಕ ಶ್ರಮವನ್ನು ಹೆಚ್ಚಿನದಾಗಿ ಬೆಂಕಿಯಂಥ ಪ್ರಾಮಾಣಿಕತೆಯನ್ನು ಅದು ಬಯಸುತ್ತದೆ.”[೯] “ಸಮಾಜ ಪರಿವರ್ತನೆಗಾಗಿ ಸಂಶೋಧನೆ; ಈ ಧ್ಯೇಯದಿಂದ ಕೈಗೊಂಡ ಸಂಶೋಧನೆಗೆ ಶೈಕ್ಷಣಿಕ ಮಹತ್ವದೊಂದಿಗೆ ಸಾಮಾಜಿಕ ಮನ್ನಣೆಯೂ ಭಾಜನವಾಗುತ್ತದೆ.”[೧೦] (ಪುಟ.೧೧೧–೨೩೦)ವೃತ್ತಿ ಜೀವನದಿಂದ ನಿವೃತ್ತಿಗೊಂಡ ನಂತರವೂ ಶ್ರೀನಿವಾಸ ಹಾವನೂರ ಅವರು ಸಾಹಿತ್ಯ ಸಂಸ್ಕೃತಿಗಳ ಸಂಶೋಧನ ಕಾರ್ಯಚಟುವಟಿಕೆಯನ್ನು ವ್ರತದಂತೆ ನಿರ್ವಹಿಸಿಕೊಂಡು ಬಂದವರು. ಅಪಾರ ಶ್ರದ್ಧೆಯಿಂದ ತಮ್ಮ ಬರವಣಿಗೆಗೆ ಗಟ್ಟಿತನವನ್ನು ತಂದುಕೊಳ್ಳುವುದು ಅವರಿಗೆ ಸಾಧ್ಯವಾಯಿತು. ಅವರ ಸಂಶೋಧನ ಕೃತಿಗಳ ವಿವರಗಳನ್ನು ಈ ಮುಂದಿನಂತೆ ಅವಲೋಕಿಸಬಹುದು. ೧. ಹೊಸಗನ್ನಡ ಅರುಣೋದಯ ೨. ತುಂಗಭದ್ರೆ ನಾಡಿಗೆ ವರವೋ? ಶಾಪವೋ? ೩. ಮರೆಯಲಾಗದ ಮುಂಬಯಿ ಕರ್ನಾಟಕ ೪. ಕನ್ನಡದಲ್ಲಿ ಕ್ರೈಸ್ತ ಸಾಹಿತ್ಯ, ಹನಿಗತೆ, ಕಂಪ್ಯೂಟರ್ ಇತ್ಯಾದಿ ಸಂಶೋಧನ ಕೃತಿಗಳ ಮೂಲಕ ವೈವಿಧ್ಯಮಯವಾದ ವಿಷಯಗಳು ಅನಾವರಣಗೊಂಡಿವೆ.

**ಹೊಸಗನ್ನಡ ಅರುಣೋದಯ**

ಶ್ರೀನಿವಾಸ ಹಾವನೂರ ಅವರು ಸಂಶೋಧನ ಲೋಕಕ್ಕೆ ತಮ್ಮನ್ನು ಅಧಿಕೃತವಾಗಿ ಎಂದು ತೊಡಗಿಸಿಕೊಂಡರೋ ಅಂದಿನಿಂದ ೭ ವರ್ಷಗಳ ಕಾಲವಾದರೂ ಬರವಣಿಗೆ ಮಾಡಿರಲಿಲ್ಲ. ನಂತರ ೧೫೦೦ ಕೃತಿ ಮತ್ತು ಬಿಡಿ ಬರಹಗಳನ್ನು ಕ್ರೋಢೀಕರಿಸಿದರು. ಆ ಅಧ್ಯಯನದ ಪ್ರತಿಫಲವೇ 'ಹೊಸಗನ್ನಡ ಅರುಣೋದಯ'. ಈ ಸಂಶೋಧನ ಮಹಾಪ್ರಬಂಧವನ್ನು ಪುಣೆ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿ, ಪಿಎಚ್.ಡಿ ಪದವಿಯನ್ನು ಪಡೆದುಕೊಂಡರು. ಈ ಸಂಶೋಧಿತ ಮಹಾಪ್ರಬಂಧವು ೧೯ನೇ ಶತಮಾನದ ಕನ್ನಡದ ಸಮಗ್ರ ಚಿತ್ರಣವನ್ನು ಒಳಗೊಂಡ ಕೈಪಿಡಿಯಂತಿದೆ.

ಭಾರತ ಸಮಗ್ರ ಚರಿತ್ರೆಯನ್ನು ಗಮನಿಸಿದರೆ ೧೯ನೇ ಶತಮಾನವು ಪೌರಾತ್ಯದ ಮತ್ತು ದೇಶಿಯ ಸಾಂಪ್ರದಾಯಿಕ ನಂಬಿಕೆಗಳ ನಡುವಿನ ಸಂಘರ್ಷದ ಕ್ರಿಯೆ–ಪ್ರಕ್ರಿಯೆಯ ಕಾಲವಾಗಿತ್ತು. ಈ ಸಂಕ್ರಮಣದ ಸ್ಥಿತಿಯಿಂದ ಮುಕ್ತವಾಗಿರಲಿಲ್ಲ. ಸಾಹಿತ್ಯವು ಪೂರ್ವಕಾಲದ ಮಡಿವಂತಿಕೆ ಬಿಟ್ಟು ನೂತನ ಅವಕಾಶಗಳನ್ನು ಕಲ್ಪಿಸುವ ವ್ಯವಸ್ಥೆಯನ್ನು ಮಾಡಿತು. ಧಾರ್ಮಿಕ ಭಾವನೆಗಳಿಗೆ ಹೆಚ್ಚು ಪ್ರಾಶಸ್ತ್ಯವನ್ನು ಕೊಟ್ಟು ಮನುಷ್ಯ ಅದಕ್ಕೆ ಹೊಂದಿಕೊಳ್ಳುತ್ತಾನೆ. ತನ್ನ ಪ್ರತಿನಿತ್ಯದ ಕಷ್ಟ ಕಾರ್ಪಣ್ಯಗಳನ್ನು ಅಕ್ಷರ ಮೂಲದಿಂದ ತೊಬಗಿಸಬಹುದು. ಇದಕ್ಕೆ ಸರಳವಾಗಿ ಹಾಡುಗಬ್ಬ ಬದಲಾಗಿ ಓದುಗಬ್ಬವಾಗಿ ರೂಪ ಪಡೆದುಕೊಂಡಿತು. ಈ ನಾಡಿಗೆ ಮುದ್ರಣ ಯಂತ್ರ ಚಾಲ್ತಿಗೆ ಬಂತು. ಆ ದಿನದಿಂದಲೇ ಸಾಹಿತ್ಯ ಕೃಷಿ ತೀವ್ರ

ಸ್ವರೂಪ ಪಡೆದುಕೊಂಡಿತು. ಕೃತಿಗಳು ಹಾಗೂ ನಿಯತಕಾಲಿಕೆಗಳು ಪತ್ರಿಕೆ ಆರಂಭವಾದವು. ಹೀಗಾಗಿ ಸಾಮಾನ್ಯರಿಗೆ ಸಾಹಿತ್ಯ ಎಟುಕುವಂತಾಯಿತು. ಕನ್ನಡ ಸಾಹಿತ್ಯದ ದಿಕ್ಕಿಗೆ ಹೊಸ ಅಲೆಯು ಬರಲು ಪ್ರಾರಂಭಿಸಿತು.

ಕನ್ನಡ ಸಾಹಿತ್ಯ ಇತಿಹಾಸವನ್ನು ಅವಲೋಕಿಸಿದಾಗ ಅಧ್ಯಯನದ ಅನುಕೂಲತೆಗಾಗಿ ಅವಸ್ಥಾಭೇದ ಮಾಡುವುದು ಅನಿವಾರ್ಯವಾಗಿತ್ತು. ಹಳೆಗನ್ನಡ, ನಡುಗನ್ನಡ, ಹೊಸಗನ್ನಡ ಎಂಬುದಾಗಿ ವರ್ಗೀಕರಿಸಿ; ನಡುಗನ್ನಡ ಮತ್ತು ಹೊಸಗನ್ನಡ ಮಧ್ಯದ ಅವಧಿಯನ್ನು 'ಅರುಣೋದಯ' ಕಾಲ ಎಂದು ಕರೆಯಬಹುದು. ಅಂದಿನ ಸಾಹಿತ್ಯ, ಇತಿಹಾಸ ಕೃಷಿ ಮಾಡಲು ಮುಂದೆ ಬರಲಿಲ್ಲದ್ದು ವಿಷಾದನೀಯ. ಆ ಶತಮಾನದ ಕಾರ್ಯಚಟುವಟಿಕೆಗಳು ವೈವಿಧ್ಯ ಸ್ಥೂಲವಾದ ಚರಿತ್ರೆ ಕಟ್ಟುವಲ್ಲಿ ಆಕರಗಳ ಕೊರತೆ ಇದೆ ಎನ್ನುವುದು ಎಲ್ಲರಿಗೂ ತಿಳಿದಿದ್ದರೂ; ಕಾರ್ಯಕ್ಕೆ ಯಾರೂ ತೊಡಗಿಕೊಂಡಿರಲಿಲ್ಲ. ಆದರೆ ತೊಡಗಿಕೊಂಡವರಿಗೆ ಬದ್ಧತೆ, ಸಹನೆ ಇರಬೇಕು. ಈ ಕಾರ್ಯದಲ್ಲಿ ತೊಡಗಿಕೊಂಡವರು ಬಹುಬೇಗ ಪ್ರತಿಫಲ ನಿರೀಕ್ಷಿಸುವಂತಿರಲಿಲ್ಲ. ಈ ಹಿನ್ನೆಲೆಯಲ್ಲಿ ವಿಷಯ ಆಯ್ಕೆ ಮಾಡಿಕೊಳ್ಳುವುದು ಕಷ್ಟದ ಮಾತಾಗಿತ್ತು. ಸಂಶೋಧಕನಿಗೆ ಅನುಕೂಲ ಕಲ್ಪಿಸುವ ವ್ಯವಸ್ಥೆ ಈ ನಾಡಿನಲ್ಲಿ ಇರಲಿಲ್ಲ. ಮಹತ್ವದ ಸಂಗತಿಯೆಂದರೆ ಇತಿಹಾಸದ ಪರಿಜ್ಞಾನ ಬೆಳೆದು ಬಂದಿರಲಿಲ್ಲ.

ವ್ಯಕ್ತಿ, ಪ್ರದೇಶ, ಕಾಲ ಇವುಗಳ ಬಗ್ಗೆ ಸರಿಯಾದ ತಿಳುವಳಿಕೆ ಪಡೆದುಕೊಳ್ಳಲಿಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಡಲಿಲ್ಲ. ಎಷ್ಟೋ ಮಹತ್ವದ ಸಂಗತಿಗಳು ಚರಿತ್ರೆಯಲ್ಲಿ ಮರೆಯಾಗಿವೆ. ಈಗಲೂ ಕೂಡ ಪುರಾವೆಗಳ ಬಗ್ಗೆ ಅಲಕ್ಷ್ಯ ಮಾಡುತ್ತಿದ್ದೇವೆ. ಪುರಾವೆಗಳನ್ನು ಕಾಯ್ದುಕೊಳ್ಳದಿರುವುದಕ್ಕೆ ಅಲಕ್ಷ್ಯತನ ಕಾರಣ.

ಆ ಕಾಲದಲ್ಲಿ ಕನ್ನಡ ಸಾಹಿತ್ಯ ಕಟ್ಟುವಲ್ಲಿ ಈ ನಾಡಿಗೆ ನಾನಾ ದಿಕ್ಕಿನಿಂದಲೂ ಸಹಕಾರ ಸಿಕ್ಕಿತು. ಮುಖ್ಯವಾಗಿ ಇಂಗ್ಲಿಷ್, ಸಂಸ್ಕೃತ, ಬಂಗಾಲಿ, ಮರಾಠಿ, ತೆಲುಗು ಈ ಎಲ್ಲಾ ಭಾಷೆಯಿಂದ ಸಹಾಯ ಸಿಕ್ಕಿತು. ಹಾಗೆಯೇ ಸರ್ಕಾರಗಳಿಂದಲೂ ಅದಕ್ಕೆ ಪ್ರೇರಣೆ ದೊರೆಯಿತು.

ಆ ಕಾಲಘಟ್ಟದ ಸಾಹಿತ್ಯ ಕೃಷಿಗೆ ಮಠಾಧೀಶರು, ರಾಜರು, ದಾಸರು, ಶರಣರು, ವಿದೇಶಿಯರು, ಶಿಕ್ಷಕರು ಅಧಿಕಾರಿಗಳು ಮತ್ತು ರಸಿಕರು ಈ ಎಲ್ಲಾ ವರ್ಗಗಳು ಸೇರಿಕೊಂಡರು. ಸಾಹಿತ್ಯ ವಿಸ್ತರದ ಮತ್ತು ಸಮ್ಮಿಶ್ರ ಸ್ವರೂಪ ಪಡೆದಿತ್ತು. ೨೦ನೇ ಶತಮಾನದ ಸಾಹಿತ್ಯದ ಪ್ರಗತಿಗೆ ಈ ನಾಡು ತನ್ನನ್ನು ಪ್ರತಿನಿಧಿಸಿಕೊಳ್ಳುವಂತಾಯಿತು.

೧೯ನೇ ಶತಮಾನದ ಸಾಹಿತ್ಯವು ಹಳೆಯ ಮತ್ತು ನವೀನ ಇವೆರಡರ ಅಂಶವು ತನ್ನಲ್ಲಿ ಲೀನವಾಗಿಸಿಕೊಂಡು, ಪೂರ್ವಸ್ವರೂಪ ಪ್ರಕಾರಗಳಾದ ಚಂಪೂ, ರಗಳೆ, ಸಾಂಗತ್ಯ ಮುಂತಾದವು ನಂತರದ ಶತಮಾನದ ಕೊನೆಯವರೆಗೂ ಉಳಿದವು. ನಡುಗನ್ನಡ ಕಾಲದಲ್ಲಿದ್ದಂತೆ ೧೯ನೇ ಶತಮಾನದಲ್ಲಿ ಕೂಡ ತನ್ನ ಪ್ರಗತಿ ಕಂಡಿದ್ದು; ಷಟ್ಪದಿಯ ಹಿನ್ನೆಲೆಯಾಯಿತು. ಜೈನ ಸಾಹಿತ್ಯದ ಕೃಷಿಯು ಈ ಶತಮಾನದಲ್ಲಿ ಅಂತಿಮವಾಯಿತು. ಸಂಸ್ಕೃತ ಕಾವ್ಯಶಾಸ್ತ್ರ, ಕೃತಿಗಳ ಅಧ್ಯಯನ, ಮಿಶನರಿಗಳ ಸಾಹಿತ್ಯದ ಕೃಷಿ ಪ್ರಗತಿ ಕಾಣಲಿಲ್ಲ.

ಮತ್ತೊಂದು ಅಂಶವೆಂದರೆ ಕ್ರೈಸ್ತ ವಾಙ್ಮಯ ಪ್ರತ್ಯೇಕವಾಗಿ ಉಳಿಯಿತು ಹಾಗೂ ಕ್ರೈಸ್ತ ಸಾಹಿತ್ಯದ ಕೃಷಿಯು ಅಸ್ತಿತ್ವವನ್ನು ಕಳೆದುಕೊಂಡಿತು. ಅದರ ಪ್ರಭಾವ ಈ ನಾಡಿನ ಮೇಲೆ ಬೀರಲಿಲ್ಲ. ಈ ನಾಡಿನ ಭಾಷೆಯೊಂದಿಗೆ ಬೆರೆತುಕೊಳ್ಳಲಿಲ್ಲ.

“ಪಾಶ್ಚಾತ್ಯರು ಕೈಗೊಂಡ ಇತರೆ ಕನ್ನಡ ಕಾರ್ಯವು ಮಾತ್ರ ಸ್ಮರಣೀಯವಾಗಿದೆ. ಮುದ್ರಣ, ಶಾಸನಗಳ ಶೋಧ, ನಾಡಿನ ಇತಿಹಾಸ ನಿರ್ಮಿಸಿ, ಭಾಷಾಭ್ಯಾಸದ ಕೃತಿ ರಚನೆ ಮತ್ತು ಪ್ರಾಚೀನ ಕೃತಿಗಳ ಶಾಸ್ತ್ರೀಯ ಸಂಪಾದನೆ ಕ್ಷೇತ್ರದಲ್ಲಿ ಅವರ ಕಾರ್ಯ ಹೊಸಗನ್ನಡದ ಸಾಹಿತ್ಯ ಚರಿತ್ರೆಯಲ್ಲಿ ತನ್ನದೇಯಾದ ಅಸ್ತಿತ್ವ ಉಳಿಸಿಕೊಂಡಿದೆ. ಅದಕ್ಕಾಗಿ ಕನ್ನಡಿಗರು ಅವರೆಲ್ಲರನ್ನು ಅವಶ್ಯವಾಗಿ ಸ್ಮರಿಸಿಕೊಳ್ಳಬೇಕು. ರೈಸ್, ಪ್ಲೇಟೊ, ಕಿಟೆಲ್‌ರಂತಹ ಕೆಲವರನ್ನು ಬಿಟ್ಟರೆ ಉಳಿದವರು ಸ್ವಂತ ಉದ್ದೇಶ–ಸಾಧನೆಗಾಗಿ ಎಂದರೆ ಸ್ವಮತ ಪ್ರಚಾರಕ್ಕಾಗಿ ಇಲ್ಲವೆ ತಾವು ಸ್ಥಾಪಿಸಿದ ಶಿಕ್ಷಣ ಸಂಸ್ಥೆಗಳಿಗಾಗಿ ಅಧಿಕಾರಿಗಳಾದವರು. ಅಧಿಕಾರ ಸ್ಥಾಪನೆ ಪ್ರಯುಕ್ತ ಕನ್ನಡದಲ್ಲಿ ಕೃಷಿ ಮಾಡಿದರು. ಅವರಿಗೆ ಅವರ ಆಡಳಿತದ ಅನುಕೂಲತೆಯ ಅನುಗುಣವಾಗಿ ಈ ನೆಲವನ್ನು ಸಿದ್ಧಗೊಳಿಸಿದರು, ಮುಂದಿನ ಬೆಳೆಗೆ ಸಜ್ಜುಗೊಳಿಸಿದರು. ಆದರೆ ನೆಲ, ನೀರು, ಬೀಜ ಅರ್ಥಾತ್ ಅದರ ಅಂತಃಸತ್ವ ಕನ್ನಡದ್ದೇ. ಬಿ.ಎಲ್.ರೈಸ್ ಶ್ರವಣಬೆಳಗೊಳದ ಶಾಸನಗಳನ್ನು ಸಂಪಾದಿಸಿ ಪ್ರಕಟಿಸಿದರು. ನರಸಿಂಹಾಚಾರ್ ತಮ್ಮ ಕಾರ್ಯವನ್ನು ನೆನೆಯುತ್ತ; ಅದೇ ಶಾಸನಗಳನ್ನು ಬೇರೊಂದು ಬಗೆಯಲ್ಲಿ ಸಂಪಾದಿಸಿ ಹೊರ ತಂದಿದ್ದನ್ನು ಮೇಲಿನ ಮಾತಿಗೆ ದೃಷ್ಟಾಂತವನ್ನು ಕೊಡಬಯಸುತ್ತಾರೆ.”[illegible]

ಕಳೆದ ಶತಮಾನದ ಕನ್ನಡ ಸಾಹಿತ್ಯದ ಕಾರ್ಯಚಟುವಟಿಕೆಗಳ ಕುರಿತು ಹೇಳುವುದಾದರೆ ತರ್ಜುಮೆ ಅನುಕರಣೆಗಳಿಂದ ಕೂಡಿದೆಂಬುದು ನಿರ್ವಿವಾದದ ಮಾತು. ಈ ಮಾತು ಭಾರತದ ಇತರ ಭಾಷಾ ಸಾಹಿತ್ಯಕ್ಕೆ ಅನ್ವಯಿಸುತ್ತದೆ. ಸಾಹಿತ್ಯದ ಬರವಣಿಗೆಗೆ ಚಟುವಟಿಕೆಯು ಪ್ರಗತಿ ಕುರಿತು, ಪ್ರಾರಂಭದಲ್ಲಿ ಸ್ವರಚನೆ ಮತ್ತು ಮೌಲ್ಯಯುತ ವಿಷಯವಲ್ಲದಿದ್ದರೂ ಅದು ನೈಜವಾದ ಸಂಗತಿಯಾಗಿತ್ತು. ಅದಲ್ಲದೆ ತರ್ಜುಮೆ, ಅನುಕರಣೆ ಗ್ರಂಥಗಳಲ್ಲಿಯೂ ನೂತನ ಸಂಗತಿ ಮತ್ತು ಹೊಸ ಪರಿಕಲ್ಪನೆ ಪ್ರಗತಿ ಪರ ಸಾಹಿತ್ಯ ಕೃಷಿ ಮಾಡಿದ್ದನ್ನು ಈ ಕೃತಿಗಳಲ್ಲಿ ನಿರೂಪಿತಗೊಂಡಿವೆ. ಪ್ರಸ್ತುತ ಕಾಲಮಾನ ಪರಿಚಯಿಸಿದ ಕಾರಣದಿಂದ ತರ್ಜುಮೆ, ಅನುಕರಣೆ ಗ್ರಂಥಗಳು ಕೂಡ ಆ ಘಟ್ಟದ ಸ್ವತಂತ್ರ ಕೃತಿಗಳಾಗಿ ಮತ್ತು ಹೊಸಗನ್ನಡದ ಸಾಹಿತ್ಯ ಪ್ರಗತಿಗೆ ಪ್ರೇರಣೆ ನೀಡಿದವು.

ಪ್ರಸ್ತುತ ಬಹುಸಂಖ್ಯೆಯ ಸಾಹಿತ್ಯ ಕೃಷಿಕರ ಮನೋಧರ್ಮವನ್ನು ಗಮನಿಸಿದರೆ ಇಂದಿನ ಸಾಹಿತ್ಯದ ಕೃಷಿಯ ಉದ್ದೇಶ ಮನೋರಂಜನೆಗೆ ಹೆಚ್ಚಿನ ಪ್ರಾಮುಖ್ಯತೆ ಕೊಟ್ಟಿದೆ. ಆದರೆ ಹಿಂದಿನ ಸಾಹಿತ್ಯ ಕೃಷಿಕರ ಮನೋಧರ್ಮವು ಜನ ಬದುಕಿನ ನೈಜ ಜಗತ್ತನ್ನು ಪರಿಚಯಿಸುವ ಕಡೆಗೆ ಹೆಚ್ಚು ಗಮನ ಕೊಟ್ಟಿದ್ದರು. ಮನುಕುಲದ ಕಲ್ಯಾಣಕ್ಕಾಗಿ ಉತ್ತಮ ಮನೋಧರ್ಮದ ಸಂಗತಿಯನ್ನು ಸಮಾಜಮುಖಿಯಾಗಿ ಪರಿಚಯಿಸುವ ಉದ್ದೇಶವಾಗಬೇಕು. ಇಂಗ್ಲಿಷ್ ಒಡನಾಟದಿಂದ ಬಂದ ಹೊಸ ಹೊಸ ಸಂಗತಿಯ ಜ್ಞಾನವು ಈ ನಾಡಿನ ಜನರ ಮನ ಮುಟ್ಟುವಂತೆ ಸಾಹಿತ್ಯ ಕೃಷಿಗೆ ಪ್ರೇರೇಪಿಸಿತು. ಮತ್ತೊಂದು ಬಗೆಯ

ಪ್ರೇರಣೆಗೊಳ್ಳುವ ಹಲವು ಬಗೆಯ ಗೀತೆಗಳು, ಶತಕಗಳು, ಕೆಲವು ಯಕ್ಷಗಾನ ಸನ್ನಿವೇಶ ಪರಿಷ್ಕರಿಸಿದ ಪದ್ಯಗಳು ಹಾಗೂ ಆ ಕಾಲದ ಹಲವು ಪತ್ರಿಕೆಗಳು ಸಮಾಜದ ಸಾಮಾನ್ಯ ಜನರ ಜೀವನಾಡಿಯಾದವು.

"ಆಧುನಿಕ ವಿಚಾರಗಳನ್ನು ಪ್ರಚಾರ ಮಾಡಲು ಪತ್ರಿಕೆಗಳು ಸಾಧನಗಳಾಗಿದ್ದವು. ಅವುಗಳ ನಾಮಕರಣ ಹಿತಬೋಧಿನಿ, ವಿದ್ಯಾದಾಯಿನಿ, ಜ್ಞಾನಭೋದಕ ಎಂದೆಲ್ಲ ಇದ್ದಿತು. ಭಾಷೆ ಮತ್ತು ಸಾಹಿತ್ಯ ವಾಙ್ಮಯ ಸೇವೆಯ ದೃಷ್ಟಿಯನ್ನಿರಿಸಿಕೊಂಡು ೧೮೯೦ರಲ್ಲಿ ಧಾರವಾಡದಲ್ಲಿ ಸ್ಥಾಪನೆಯಾದ ಸಂಸ್ಥೆಯ ಹೆಸರು 'ವಿದ್ಯಾವರ್ಧಕ ಸಂಘ'ವೆಂಬುದನ್ನು ಗಮನಿಸಬೇಕು. ಶರಣರು, ದಾಸರಿಗಂತೂ ಲೋಕ ಶಿಕ್ಷಣವೇ ಮುಖ್ಯ ಉದ್ದೇಶವಾಗಿದ್ದಿತು. ಅಂದಿನ ಅವ್ಯವಸ್ಥೆಯ ರಾಜಕೀಯ ಸ್ಥಿತಿ ಪರಕೀಯರ ಪ್ರಭಾವಗಳಿಂದ ಸಡಿಲಗೊಳ್ಳುತ್ತಿದ್ದ ಸಮಾಜದಲ್ಲಿ ದಾಸರು ಮತ್ತೊಂದು ಭಕ್ತಿ ಮಾರ್ಗವನ್ನು ಕೈಗೊಂಡರು. ಸದಾಚಾರ ಧೋರಣೆಯಿಂದ ಜನರಿಗೆ ತಮ್ಮ ಸಂಸ್ಕೃತಿ ಪರಂಪರೆಯಲ್ಲಿ ಹೊಸ ಶ್ರದ್ಧೆ ಹಾಗೂ ಜೀವನದ ಹೊಸ ಭರವಸೆ ಮೂಡಿಸಿದರು. ಈ ರೀತಿಯಿಂದ ಉಂಟಾದ ಸಾಮಾಜಿಕ ಹಾಗೂ ಧಾರ್ಮಿಕ ಜಾಗೃತಿಯ ಬಗೆಯನ್ನು ಗುರುತಿಸುವುದು ಅವಶ್ಯಕವಾದ ಕಾರ್ಯವಾಗಿದೆ."[೨]

ಭಾರತದಲ್ಲಿ ೧೮೫೭ರ ಕ್ರಾಂತಿಯಾದ ನಂತರದ ಕಾಲಘಟ್ಟದಲ್ಲಿ ರಾಜಕೀಯ ಸಾಂಸ್ಕೃತಿಕ, ಧಾರ್ಮಿಕ, ಸಾಮಾಜಿಕ ಮತ್ತು ಶೈಕ್ಷಣಿಕ ವಲಯಗಳು ಪ್ರಗತಿಯತ್ತ ಸಾಗಿದ್ದವು. ಈ ನಾಡಿನ ಪ್ರಗತಿಯ ಸ್ವರೂಪವನ್ನು ಬದಲಾವಣೆ ಮಾಡಲು ಮಹಾತ್ಮರು ಪ್ರಯತ್ನಿಸಿದರು. ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ, ದಯಾನಂದ ಸರಸ್ವತಿ, ಲೋಕಮಾನ್ಯ ತಿಲಕ, ರವೀಂದ್ರನಾಥ ಟ್ಯಾಗೋರ್, ಮಹಾತ್ಮ ಗಾಂಧಿ ಮುಂತಾದ ಮಹಾತ್ಮರ ಕಾರ್ಯಶೀಲತೆ ಮತ್ತು ಅವರ ಕಾಳಜಿಯು ಸಾಮಾಜಿಕ ವ್ಯವಸ್ಥೆಯ ಸ್ವರೂಪವನ್ನು ಬದಲಾಯಿಸಿತು. ಈ ಬಗೆಯ ಚಳುವಳಿ ಕನ್ನಡಿಗರಲ್ಲಿ ಸಹಜ. ಆದರೆ ಅಕ್ಷರ ಬಲ್ಲ ಕನ್ನಡಿಗರು ತಮ್ಮ ಪುಸ್ತಕ, ಪತ್ರಿಕೆ ಮೂಲಕ ಜನಸಾಮಾನ್ಯರು ತಿಳಿಯುವಂತೆ ಮತ್ತು ಹೆಚ್ಚು ಒಲವು ಮೂಡುವಂತೆ ಸಾಹಿತ್ಯ ಕೃಷಿ ಮಾಡಿದರು. ಈ ನಾಡಿನ ಚರಿತ್ರೆ, ವ್ಯಕ್ತಿಗಳ ಚರಿತ್ರೆ, ಧಾರ್ಮಿಕಕ್ಕೆ ಸಂಬಂಧಿಸಿದ ಕೃತಿಗಳ ತರ್ಜುಮೆ, ಪರಿಷ್ಕರಿಸಿದ ಕೀರ್ತನೆಗಳು ಸಾಹಿತ್ಯದ ಕೃಷಿಗೆ ಸಹಾಯಕವಾದವು.

ಕನ್ನಡನಾಡಿನ ಅಭಿಮಾನ ಬರುವ ಹಾಗೆ ಪರಿಸರವನ್ನು ಸೃಷ್ಟಿಸಿದರು. ಈ ದೇಶ ಹರಿದು ಹಂಚಿಹೋಗಿದ್ದ ಪ್ರದೇಶವನ್ನು ಆಡಳಿತಾತ್ಮಕ ದೃಷ್ಟಿಯಿಂದ ಎರಡು ಭಾಗ ಮಾಡಿದ್ದರು. ಒಂದು ಮುಂಬಯಿ, ಇನ್ನೊಂದು ಮದ್ರಾಸ್ ಆಡಳಿತ ಕೇಂದ್ರವನ್ನಾಗಿ ಮಾಡಿಕೊಂಡು ಆಡಳಿತ ಮಾಡಿದರು. ಈ ಆಡಳಿತದ ವಿರೋಧದ ಹೋರಾಟದ ಭಾಗವಾಗಿ ಕರ್ನಾಟಕ ಎನ್ನುವ ಪರಿಕಲ್ಪನೆ ಉದಯವಾಯಿತು. ಈ ಪರಿಕಲ್ಪನೆ ಪ್ರಚಾರ ಮಾಡುವ ಸಲುವಾಗಿ 'ಹಿತಬೋಧನೆ' ಎನ್ನುವ ಪತ್ರಿಕೆ ಬೆಂಗಳೂರಿನಲ್ಲಿ ತನ್ನ ಹುಟ್ಟು ಪಡೆದುಕೊಂಡು, ಭಾಷೆ ಮತ್ತು ಸಂಸ್ಕೃತಿ ಗಮನದಲ್ಲಿರಿಸಿಕೊಂಡು, ಈ ನಾಡಿನ ವಿದ್ವಾಂಸರು, ಶಿಕ್ಷಕರು, ವಿದೇಶಿ ಅಧಿಕಾರಿಗಳು ಕನ್ನಡ ಪ್ರಗತಿಗಾಗಿ ಈ ಕಾರ್ಯಚಟುವಟಿಕೆಗಳಲ್ಲಿ ತೊಡಗಿಕೊಂಡರು.

ಅಂದಿನ ಕಾಲದ ಸಾಹಿತ್ಯ ಕೃಷಿ ವರ್ಗವು ಸೌಹಾರ್ದತೆಯನ್ನು ಸ್ಥಾಪಿಸುವಲ್ಲಿ ಯಶಸ್ವಿಯಾಯಿತು.

"೧೯ನೇ ಶತಮಾನವನ್ನು ಕನ್ನಡ ಸಾಹಿತ್ಯದ ಸಂಧಿಕಾಲವೆಂದು ಹೇಳಬಹುದು. ಹಳೆಗನ್ನಡ-ಹೊಸಗನ್ನಡ ಜೊತೆ ಜೊತೆಯಾಗಿ ಹರಿದು ಬಂದವು. ಆ ಶತಮಾನದಲ್ಲಿ ಹೊಸಗನ್ನಡ ಬೆಳವಣಿಗೆಯ ಬೇರೆ ಬೇರೆ ಅವಸ್ಥೆಗಳನ್ನು ಸ್ಪಷ್ಟವಾಗಿ ಗುರುತಿಸುವುದು ಅವಶ್ಯವಾಗಿದೆ. ಆ ಪ್ರಕಾರ ೧೮೧೦-೧೮೪೧ ಮತ್ತು ೧೮೮೧ ಹೀಗೆ ಮೂರು ಭಾಗವಾಗಿ ನಾವು ಮಾಡಿಕೊಂಡಿದ್ದೇವೆ. ಕ್ರಿ.ಶ. ೧೮೪೧ಕ್ಕಿಂತ ಹಿಂದಿನ ಹೊಸ ಬಗೆಯ ಗ್ರಂಥ ರಚನೆಯ ಬಿಡಿ ಬಿಡಿಯಾದ ಯತ್ನಗಳಿಂದ ಮೊದಲುಗೊಂಡು ಹೊಸಗನ್ನಡ ಎಂದು ಗುರುತಿಸುವ ಸಾಹಿತ್ಯದ ನಿರ್ಮಿತಿಯು ೧೮೪೧ರಿಂದ ಆರಂಭವಾಯಿತು. ಅದುವೇ ಹೊಸಗನ್ನಡ ಬೆಳಗು ಸಂಧಿಕಾಲವು ಹೌದು. ೧೮೮೧ರಿಂದ ಹಳೆಗನ್ನಡವು ಕ್ಷೀಣವಾಗಿ ಹೊಸಗನ್ನಡವು ಸ್ಪಷ್ಟವಾದ, ಸ್ಥಿರವಾದ ಅಸ್ತಿತ್ವವನ್ನು ಪಡೆಯಿತು. ಸ್ವತಂತ್ರ ನಾಟಕಗಳು ಕಾದಂಬರಿಗಳು, ಪ್ರಬಂಧಗಳು ಹೊರಬಂದವು. ಹಾಗೂ ಸಮಾಜ ಸುಧಾರಣೆ, ಜಗತ್ತು ಪರಿಚಯ ಮಾಡಿಕೊಡುವ ಮತ್ತು ಹೊಸ ಬಗೆಯ ಆಡಳಿತ ನ್ಯಾಯ ಪದ್ಧತಿಗಳನ್ನು ಪರಾಮರ್ಶಿಸಿದ ಅನೇಕ ಗ್ರಂಥಗಳು ಹೊರಬಂದವು. ಈ ಕಾರ್ಯದಲ್ಲಿ ತಿಳಿಯಾದ ಗದ್ಯವನ್ನು ಬಳಸುವ ಮೂಲಕ ಭಾಷೆಯ ಸರಳತೆಗೆ ವಿಶೇಷ ಗಮನ ಕೊಡಲಾಯಿತು. ಜೊತೆಗೆ ಕನ್ನಡ(ಪ್ರದೇಶ) ಭಾರತವು ಸ್ಫುಟಿತ ಕಲ್ಪನೆ ಮತ್ತು ಜನತೆಯ ಸರ್ವಾಂಗೀಣ ಪ್ರಗತಿಯ ಲವಲವಿಕೆ ಮೂಡಿ ಬಂದು ನಿಜವಾದ ಹೊಂಬೆಳಕು ಹೊರಹೊಮ್ಮಿದವು."[೧೨]

**ತುಂಗಭದ್ರೆ ವರವೊ-ಶಾಪವೊ :**

ತುಂಗಭದ್ರ ನಾಡಿಗೆ ವರವೊ-ಶಾಪವೊ ಎನ್ನುವ ಲೇಖನಗಳ ಸಂಕಲನ ಕೃತಿಯು ೧೬ ಬಿಡಿ ಬರಹಗಳನ್ನು ಹೊಂದಿದೆ. ಈ ಸಂಶೋಧನ ಕೃತಿಯು ಚರಿತ್ರೆಯ ಮರೆಯಲ್ಲಿರುವ ಅನೇಕ ಐತಿಹಾಸಿಕ ಸಂಗತಿಗಳ ಮೇಲೆ ಬೆಳಕು ಚೆಲ್ಲುತ್ತದೆ. ಅವುಗಳನ್ನು ಈ ಮುಂದಿನಂತೆ ನೋಡಬಹುದಾಗಿದೆ.

ಹಲವು ಶತಮಾನಗಳು ಗತಿಸಿದರೂ ಈ ತುಂಗಭದ್ರೆ ಎಲ್ಲಾ ಕಾಲಕ್ಕೂ ಮಹತ್ವ ಪಡೆದುಕೊಂಡ ನದಿ. ಈ ನಾಡಿನಲ್ಲಿ ತನ್ನದೇಯಾದ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಉತ್ತರ ಭಾಗದಲ್ಲಿ ಕೃಷ್ಣ, ದಕ್ಷಿಣ ಭಾಗದಲ್ಲಿ ಕಾವೇರಿ; ಈ ನಾಡಿನ ಮಧ್ಯ ಭಾಗದಲ್ಲಿ ತುಂಗೆ-ಭದ್ರೆ. ಈ ನದಿಯು ಶಿವಮೊಗ್ಗ ಜಿಲ್ಲೆ ಕೂಡಲಿಯಲ್ಲಿ ಸಂಗಮವಾಗಿ ದಕ್ಷಿಣಭಿಮುಖವಾಗಿ ಆಂಧ್ರ ಪ್ರದೇಶದವರೆಗೂ ಹರಿದು ಮುಂದೆ ಸಮುದ್ರವನ್ನು ಸೇರುತ್ತದೆ. ನದಿಯು ಧಾರ್ಮಿಕವಾಗಿ ತನ್ನದೇಯಾದ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಸಂಗಮ ಬಿಟ್ಟು ಸಾಗಿದ ನಂತರ ಹರಿಹರದ ಹರಿಹರೇಶ್ವರ, ಕುರುವತ್ತಿಯ ಮಲ್ಲಿಕಾರ್ಜುನ, ಮೈಲಾರಲಿಂಗೇಶ್ವರ, ಬಿದರಹಳ್ಳಿಯ ಅಶ್ವತ್ಥನಾರಾಯಣ, ಗಳಗನಾಥರ ಗಳಗೇಶ್ವರ ಹೀಗೆ ಮುಂದೆ ವಿರುಪಾಕ್ಷೇಶ್ವರ, ಪುರಂದರ ಮಂಟಪ, ನವ ಬೃಂದಾವನ, ಹೊಸಪೇಟೆ, ಆನೆಗುಂದಿ ಹಾಲ್ವಿ ಮಂತ್ರಾಲಯ ತೀರ್ಥಯಾತ್ರೆ ಸ್ಥಳವಾಗಿ ಧಾರ್ಮಿಕ ಕೇಂದ್ರವಾಗಿ ಈ

ಕಾಲದಲ್ಲಿಯೂ ಮೌಲ್ಯಯುತ ಯಾತ್ರ ಸ್ಥಳಗಳಾಗಿವೆ. ಅನೇಕ ಕವಿಗಳು ಕೂಡ ತುಂಗಭದ್ರೆ ನದಿಯನ್ನು ಹಾಡಿ ಹರಸಿ ಹೊಗಳಿದ್ದಾರೆ. ಎಷ್ಟೊ ಕೃತಿಗಳಲ್ಲಿ ತುಂಗಭದ್ರ ನದಿಯ ಮಹತ್ವವನ್ನು ತಿಳಿಸಿದ್ದಾರೆ.

ಆಡಳಿತಾತ್ಮಕವಾಗಿ ಈ ನದಿಯು ಹೆಚ್ಚು ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಹೊಯ್ಸಳ, ಸೇವುಣರು, ಚಾಲುಕ್ಯ ರಾಜ ವಂಶಗಳ ಆಳ್ವಿಕೆಯ ಕಾಲದಲ್ಲಿ ಈ ನದಿಯ ಪಾತ್ರ ಬಹಳ ಮಹತ್ವ ಪಡೆದಿತ್ತು. ಚೋಳರ ಮತ್ತು ಚಾಲುಕ್ಯರ ಕಾಳಗ ಅಲ್ಲಿ ನಡೆದಿದೆ. ವಿಜಯನಗರ ಅರಸರ ಮತ್ತು ಕಂಪಿಲದ ಕುಮಾರರಾಮನ ವಿಷಯ ಪ್ರಸ್ತಾಪಗೊಂಡಿದೆ. ಇದರಲ್ಲಿ ಹೈದರ್ ಟಿಪ್ಪು ಮರಾಠರು ನಿಜಾಮರು ಮತ್ತು ಬ್ರಿಟಿಷರ ಸಂಗತಿಗಳೂ ಪ್ರಸ್ತಾಪಗೊಂಡಿದೆ.

ಮಹತ್ವದ ಸಂಗತಿ ಎಂದರೆ "ನಿಜಾಮ ಮತ್ತು ಮದ್ರಾಸ್ ಸರಕಾರಗಳ ಸಂಯುಕ್ತ ಯೋಜನೆಯಾಗಿ ಹೊಸಪೇಟೆ ಅಣೆಕಟ್ಟು ಕೆಲಸ ನಡೆದಿತ್ತು. ಅಲ್ಲಿ ಮುಕ್ಕಾಲು ಯೋಜನೆ ಮುಗಿಯುವ ಹಂತಕ್ಕೆ ಬಂದಾಗ ೧೯೫೩ರಲ್ಲಿ ಆಂಧ್ರ ಪ್ರಾಂತ್ಯದ ಹಾಗೂ ಬಳ್ಳಾರಿ ಜಿಲ್ಲೆಯ ಸೇರ್ಪಡೆ ಸಮಸ್ಯೆಯಾಗಿ ತಲೆದೋರಿದ್ದವು. ಈ ಸಂದರ್ಭದಲ್ಲಿ ಬಳ್ಳಾರಿ ಕರ್ನಾಟಕಕ್ಕೆ ಉಳಿದು ತುಂಗಭದ್ರ ಕನ್ನಡಿಗರಿಗೆ ಜೀವಾಳವಾಗಿತ್ತು."[೧೪] [ಎಚ್.ಎಸ್.ಗೋಪಾಲರಾವ್ ಅವರು ಕರ್ನಾಟಕ ಏಕೀಕರಣ ಇತಿಹಾಸ ಕೃತಿಯಲ್ಲಿ ವಿವರವಾಗಿ ತೋರಿಸಿದ್ದಾರೆ.]

ಆ ಸಂದರ್ಭದಲ್ಲಿ ಕರ್ನಾಟಕದ ಏಕೀಕರಣದ ಚಳುವಳಿ ನಡೆದಿತ್ತು. ಆ ವೇಳೆ(೧೯೪೮-೫೬) ಹಳೇ ಮೈಸೂರಿನವರು ಏಕೀಕರಣಕ್ಕೆ ಕಟ್ಟಾ ವಿರೋಧಿಗಳಾಗಿದ್ದರು. ಆದರೆ ಉತ್ತರ ಕರ್ನಾಟಕ ಮುಂಚೂಣಿಯಲ್ಲಿ ಇರುವ ನಾಯಕರಿಗೆ ಸಮಗ್ರ ಕರ್ನಾಟಕದ ಆಸಕ್ತಿ ಇದ್ದರೆ ತುಂಗಭದ್ರೆ ಕೆಳಗಿನ ಜನರಿಗೆ ಮತ್ತು ನಾಯಕರಿಗೆ ಬೇಡವಾಗಿತ್ತು. ಉತ್ತರ ಕರ್ನಾಟಕದವರು ಮೈಸೂರಿನವರನ್ನು ಎಷ್ಟು ಕೇಳಿದರೂ ಅವರು ಒಪ್ಪಲಿಲ್ಲ. ಹೀಗಾಗಿ ನಾವು ಸೇರುವುದು ಬೇಡವಾದರೆ ಈರ್ವರ ಜನಸಂಪರ್ಕ ಕೇಂದ್ರವಾದ ಹರಿಹರ ಬಳಿ ಇರುವ 'ತುಂಗ-ಭದ್ರೆ' ಸೇತುವೆಯನ್ನು ಸಿಡಿಮದ್ದಿನ ಮೂಲಕ ಸ್ಫೋಟಗೊಳಿಸುವ ಸಂಗತಿಯು ಈ ಕಾಲಕ್ಕೂ ಮಹತ್ವ ಪಡೆದುಕೊಂಡಿದೆ. ಆದರೆ ಅಲ್ಲಿರುವ ನಾಯಕರು ಅದಕ್ಕೆ ಅವಕಾಶ ಮಾಡಿಕೊಡಲಿಲ್ಲ. ನಂತರ ಮೈಸೂರು ರಾಜಧಾನಿಯಾಗಿ ಮಾಡಿಕೊಂಡರು. ಕನ್ನಡ ನಾಡು, ನುಡಿ(ಭಾಷೆ), ಅಭಿಮಾನ ಹೊಂದಿದ ಹಾವನೂರ ಅವರು ಭೌಗೋಳಿಕವಾಗಿ ಕರ್ನಾಟಕ ರಾಜಧಾನಿ ದಾವಣಗೆರೆ ಇಲ್ಲವೆ ಮಧ್ಯಭಾಗದ ಹುಬ್ಬಳ್ಳಿ-ಧಾರವಾಡವಾದರೆ ಕನ್ನಡಿಗರ ಸಂಸ್ಕೃತಿ ಹಾಗೂ ಭಾವನಾತ್ಮಕ್ಕೆ ಹೆಚ್ಚು ಪ್ರಾಶಸ್ತ್ಯ ಸಿಕ್ಕುತ್ತದೆ ಎನ್ನುವ ಅಭಿಪ್ರಾಯ ಪಟ್ಟಿದ್ದರು.

**ಆನಂದ ನಿಧಿ ವಿಜಯನಗರ ಕಾಲದ ಬ್ಯಾಂಕ್'**

ಈ ಬಿಡಿ ಬರಹದ ಮೂಲಕ ವಿಜಯನಗರ ಬ್ಯಾಂಕ್ ಸ್ಥಾಪನೆಯ ಕುರಿತು ಹಾವನೂರ ಅವರು ಚರ್ಚಿಸಿದ್ದಾರೆ. ಈ ಬ್ಯಾಂಕನ್ನು ಅಚ್ಯುತದೇವರಾಯ ಕ್ರಿ.ಶ. ೧೫೩೯ರಲ್ಲಿ ಸ್ಥಾಪಿಸಿದನು. ಬ್ಯಾಂಕ್‌ಗೆ 'ಆನಂದ ನಿಧಿ' ಎಂದು ನಾಮಕರಣ ಮಾಡಿದನು. ಇದಕ್ಕೆ ಅನೇಕ ಪುರಾವೆಗಳು ಆಧಾರವಾಗಿವೆ, ಈ ಮಹತ್ವದ ಸಂಗತಿ ಕುರಿತು ಏಳೆಂಟು

ಶಾಸನಗಳಲ್ಲಿ ಉಲೇಖಗೊಂಡಿವೆ. ಬಿ.ಎಲ್. ರೈಸ್ ಅವರು Mysore and Coorg from Inscriptons ಎಂಬ ಅವರ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ. "He (ie Achyutaraya) was profuse in gift to the Brahmans, He established in 1539 a sort of a Bank for the benefit of the Brahmans, called the Ananda nidhi (p19)"[೧೫] ಆನಂದ ನಿಧಿಯ ಸ್ಥಾಪನೆಯ ಕುರಿತು ದಾವಣಗೆರೆ, ಹೊಳಲ್ಕೆರೆ, ಮುಂತಾದ ಊರುಗಳಲ್ಲಿ ಉಲ್ಲೇಖ ಕಂಡು ಬರುತ್ತದೆ.

**ಆದಿಲ್‌ಶಾಹಿಗಳ ಗ್ರಂಥ ಸಂಪದ :**

ಬಿಜಾಪುರದ ಆದಿಲ್‌ಶಾಹಿಗಳ ಸಾಹಿತ್ಯ ಪ್ರೀತಿಯ ಬಗೆಗೆ ಮತ್ತು ಗ್ರಂಥಸಂಗ್ರಹಗಳ ಬಗೆಗೆ ಶ್ರೀನಿವಾಸ ಹಾವನೂರ ಅವರು ದಾಖಲೆಗಳ ಆಧಾರದಲ್ಲಿ 'ಆದಲ್‌ಶಾಹಿಗಳ ಗ್ರಂಥಸಂಪದ' ಲೇಖನವನ್ನು ಬರೆದಿದ್ದಾರೆ. ಕ್ರಿ.ಶ. ೧೪೮೯ರಿಂದ ೧೬೮೬ರವರೆಗೆ ಬಿಜಾಪುರವನ್ನು ಆಳಿದ ಆದಿಲ್‌ಶಾಹಿಗಳು ನಿರ್ಮಿಸಿದ ಗ್ರಂಥಾಲಯ ಬಿಜಾಪುರದ ಅಸರ್‌ಮಹಲ್‌ನಲ್ಲಿದೆ. ಈ ಗ್ರಂಥಾಲಯದಲ್ಲಿ ಹಸ್ತಪ್ರತಿಗಳ ಭಂಡಾರವಿದ್ದುದ್ದಕ್ಕೆ ದಾಖಲೆಗಳಿರುವುದನ್ನು ಲೇಖಕರು ವಿಶ್ಲೇಷಿಸಿದ್ದಾರೆ. ಗ್ರಂಥಾಲಯ, ಗ್ರಂಥಭಂಡಾರಗಳಿಂದ ಆದಿಲ್‌ಶಾಹಿಗಳು ಸಾಹಿತ್ಯಪ್ರಿಯರು ಎಂಬುದನ್ನು ತಿಳಿಯಬಹುದು. ಈ ಹಿನ್ನೆಲೆಯಲ್ಲಿಯೇ ಆ ಕಾಲದಲ್ಲಿ ಬಿಜಾಪುರ ವಿದ್ಯಾನಗರವೆಂಬ ಹೆಸರನ್ನು ಪಡೆದಿದ್ದಿತು.

ಆಲಿ ಆದಿಲ್‌ಶಾಹ ರಾಜ ತನ್ನ ಮೆಚ್ಚುಗೆಯ ಪುಸ್ತಕಗಳನ್ನು ಹೊರಹೋಗುವಾಗ, ಅರಮನೆಯಲ್ಲಿರುವಾಗ ಜೊತೆಗೆ ಇರಿಸಿಕೊಂಡಿದ್ದುದನ್ನು 'ತಾಜ್‌ಕಿರತ್-ಅಲ್-ಮುಲಕ್' ಗ್ರಂಥ ದಾಖಲಿಸಿರುವುದನ್ನು ಲೇಖಕರು ಪ್ರಸ್ತಾಪಿಸಿದ್ದಾರೆ. ಸುಸಜ್ಜಿತ ಗ್ರಂಥಾಲಯವಿದ್ದು ಅಲ್ಲಿ ಗ್ರಂಥಾಧಿಕಾರಿಯಾಗಿ ಶೇಶ್‌ವಾಮನ (ಓರ್ವ ಹಿಂದು) ಕಾರ್ಯನಿರ್ವಹಿಸುತ್ತಿದ್ದನೆಂದೂ ಆತನ ವಾರ್ಷಿಕ ಸಂಬಳ ಇಂದಿನ ರೂ. ೩೫೦೦ರಷ್ಟಿತ್ತು ಎಂಬುದನ್ನು ದಾಖಲೆಗಳು ನಿರೂಪಿಸುತ್ತವೆ.

ಕ್ರಿ.ಶ. ೧೭೬೦ರಲ್ಲಿ ಬಿಜಾಪುರವನ್ನು ನಿಜಾಮನು ಮರಾಠರಿಗೆ ಒಪ್ಪಿಸಿದನು. ಆನಂತರದಲ್ಲಿ ಅಸರ್‌ಮಹಲ್ ಒಳಗೊಂಡಂತೆ ಅನೇಕ ಕಟ್ಟಡಗಳು ನಾಶವಾದವು. ಅದರಲ್ಲಿದ್ದ ಸಾವಿರಾರು ಗ್ರಂಥಗಳು ನಾಶವಾದವು. ಆದರೂ ಕೆಲವು ಅಪೂರ್ವವಾದ ಗ್ರಂಥಗಳು ಉಳಿದಿದ್ದವು. ಕ್ರಿ.ಶ. ೧೮೧೮ರಲ್ಲಿ ಪೇಶ್ವೆಯವರು ಸಾತಾರಾದ ರಾಜನಿಗೆ ಬಿಜಾಪುರವನ್ನು ಒಪ್ಪಿಸಿದರು. ೧೯ನೇ ಶತಮಾನದಲ್ಲಿ ಡಿ. ಒಶೋವಾ ಎಂಬ ಫ್ರೆಂಚ್ ವಿದ್ವಾಂಸ ಬಿಜಾಪುರಕ್ಕೆ ಬಂದು ಗ್ರಂಥಾಲಯದ ಪುಸ್ತಕಗಳನ್ನು ವೀಕ್ಷಿಸಿ, ಸುಸ್ಥಿತಿಯಲ್ಲಿಡಲು ಪ್ರಯತ್ನಿಸಿದ. ಮುಂದೆ ರಾಯಲ್ ಏಶಿಯಾಟಿಕ್ ಸೊಸೈಟಿಯ ಮುಂಬಯಿ ಶಾಖೆಯವರ ಪ್ರವೇಶದಿಂದ ಹಸ್ತಪ್ರತಿಗಳು ಶುಚಿಗೊಂಡು ಸಂರಕ್ಷಣೆಯನ್ನು ಕಾಣುತ್ತವೆ. ಫ್ರೆರೆ ಎಂಬ ಅಧಿಕಾರಿ ಹಸ್ತಪ್ರತಿಗಳಿಗೆ ಸಂಬಂಧಿಸಿದಂತೆ ಮುಂಬಯಿ ಸರ್ಕಾರಕ್ಕೆ ವರದಿಯನ್ನು ನೀಡುತ್ತಾನೆ. "ಈಗ ಸ್ಥಿತಿ ಹೇಗಿದೆಯೆಂದರೆ ಗುರುತು ಹಿಡಿಯಲು ಅಸಾಧ್ಯವಾದ ಅರ್ಧ ತಿಂದುಳಿದ ರಟ್ಟುಗಳು ಮತ್ತು ಚೂರುಚೂರಾದ ಕಾಗದಗಳಿದ್ದು, ಅವುಗಳನ್ನು ಗುರುತಿಸುವುದೂ ಕಷ್ಟದ್ದಾಗಿದೆ.

ನಾಶಗೊಳಿಸಿದ ಗ್ರಂಥಗಳ ಅವಶೇಷಗಳೂ ಅಷ್ಟೇ ಸಂಖ್ಯೆಯಲ್ಲಿವೆ. ಸಣ್ಣ ಪ್ರಮಾಣದ ಗ್ರಂಥಗಳು ಸುಸ್ಥಿತಿಯಲ್ಲಿವೆ. ಗಮನಕ್ಕೆ ಬಂದ ಇನ್ನೊಂದು ವಿಷಯವೆಂದರೆ ಆ ಕಟ್ಟಡದ ಮೇಲುಸ್ತುವಾರಿ ನೋಡುವವರು ಕಳೆದ ೩೦-೪೦ ವರ್ಷಗಳಲ್ಲಿ ಗ್ರಂಥಗಳನ್ನು ಕದ್ದು ಮಾರಿರುವರು. ಇದರಲ್ಲಿ ಶಾಮೀಲಾದ ಸರ್ಕಾರಿ ನೌಕರರು ಮತ್ತಷ್ಟು ಕೊಳ್ಳೆಹೊಡೆದರು. ಅಲಂಕಾರಿಕವಾದ ಕೆಲವು ಮಹತ್ವದ ಕೃತಿಗಳು ಕಾಣೆಯಾಗಿವೆ. ಈ ವಿಷಯವನ್ನು ದುಃಖದಿಂದಲೇ ತಿಳಿಸಬೇಕಾಗುತ್ತದೆ."[೧೬]

ಈ ರೀತಿಯ ದಾಖಲೆಗಳನ್ನು ಲೇಖಕರಾದ ಶ್ರೀನಿವಾಸ ಹಾವನೂರ ಅವರು ಮುಂಬಯಿಯಲ್ಲಿರುವ ಭಾರತ ಸರಕಾರದ ಸಂಗ್ರಹಾಲಯದಿಂದ ಪಡೆದಿರುವುದನ್ನು ತಿಳಿಸಿದ್ದಾರೆ. ಬ್ರಿಟಿಷ್ ಸರಕಾರದ ಮುತುವರ್ಜಿಯಿಂದ ಉಳಿದಿರುವ ಕುರಾನ್, ದೈವಿಕ ಶಾಸ್ತ್ರ, ಕಾಯಿದೆ ಕಾನೂನು, ಸೂಫಿ ತತ್ವಜ್ಞಾನ, ಆತ್ಮಕಥನ, ಸಾಹಿತ್ಯ ಮತ್ತು ವಿಜ್ಞಾನಕ್ಕೆ ಸಂಬಂಧಿಸಿದ ಮಹತ್ವದ ಹಸ್ತಪ್ರತಿಗಳು ಉಳಿದವು. ಅವುಗಳಲ್ಲಿ ಪರ್ಶಿಯನ್ ಹಸ್ತಪ್ರತಿಗಳೂ ಸೇರಿಕೊಂಡಿರುವುದನ್ನು ಲೇಖಕರು ವಿವರಿಸಿದ್ದಾರೆ.

**"ಕೆಳದಿ ಅರಸರ ವಿದೇಶಿ ಸಂಬಂಧ"**

ಕನ್ನಡ ನಾಡನ್ನು ಆಳ್ವಿಕೆ ಮಾಡಿದ ಅರಸರಲ್ಲಿ ವಿದೇಶಿಯರ ಸಂಬಂಧ ಹೆಚ್ಚು ಇರುವ ಅರಸರೆಂದರೆ ಕೆಳದಿಯ ಅರಸರು ಎಂಬುದು ಈ ಲೇಖನದಿಂದ ವೇದ್ಯವಾಗುತ್ತದೆ. ಇವರ ಆಳ್ವಿಕೆಯ ಪ್ರದೇಶದ ಭೌಗೋಳಿಕ ವ್ಯಾಪ್ತಿ ಪಶ್ಚಿಮದ ಕರಾವಳಿಯಿಂದ ಅಂದರೆ ಕೇರಳದ ವಲ್ಲರ ಪಟ್ಟಣದಿಂದ ಕಾರವಾರದವರೆಗೆ. ಸರಿಸುಮಾರು ಐದುನೂರು ಕಿ.ಮೀ. ವ್ಯಾಪ್ತಿಯನ್ನು ಹೊಂದಿದೆ. ಹಾಗೆಯೇ ವಿದೇಶಿಯರಾದ ಅರಬ್ಬರು, ಪೋರ್ಚುಗೀಸರು, ಡಚ್ಚರು, ಪ್ರೆಂಚರು ಮತ್ತು ಸ್ಪೇನರ ಸಂಪರ್ಕ ಈ ಅರಸರಿಗಿತ್ತು. ಹೆಚ್ಚು ಒಡನಾಟ ಇದ್ದವರೆಂದರೆ ಪೋರ್ಚುಗೀಸರದ್ದು. ಏಕೆಂದರೆ ಪೋರ್ಚುಗೀಸರು ಬಂದಿದ್ದು ಮತ್ತು ಕೆಳದಿಯ ಅರಸರು ಸಂಸ್ಥಾನ ಸ್ಥಾಪನೆ ಮಾಡಿದ್ದು ಒಂದೇ ಕಾಲಮಾನವಾದ್ದರಿಂದ; ಅಲ್ಲದೆ ವಿಜಯನಗರದ ಸೇನಾಪತಿ ದಾಳಿ ಮಾಡಿದ ಸಂದರ್ಭದಲ್ಲಿ ಕೆಳದಿಯ ಸಂಕಣ್ಣನಾಯಕ ಪೋರ್ಚುಗೀಸರೊಡನೆ ಕೂಡಿದ್ದರಿಂದ ಇಬ್ಬರ ಸಂಬಂಧ ಗಟ್ಟಿಗೊಳ್ಳಲು ಸಾಧ್ಯವಾಯಿತು.

ಈ ಮಹತ್ವದ ಸಂಗತಿಯನ್ನು ಗಮನಿಸಿ ಹೇಳುವುದಾದರೆ ಕೆಳದಿಯ ಶಿವಪ್ಪ ನಾಯಕ ಡಚ್ಚರ ಸಂಬಂಧ ಗಟ್ಟಿಗೊಂಡಿತ್ತು. ೧೭ನೇ ಶತಮಾನದಲ್ಲಿ ಡಚ್ಚರ ಸಹಾಯದಿಂದ ಪೋರ್ಚುಗೀಸರನ್ನು ಸೋಲಿಸಿ, ಆಡಳಿತದ ದೃಷ್ಟಿಯಿಂದ ವ್ಯಾಪಾರ ಕೇಂದ್ರ ತೆರೆಯಲು ಅವಕಾಶ ಕಲ್ಪಿಸಿಕೊಟ್ಟರು. ಯುದ್ಧ ಸಾಮಗ್ರಿಗಳಾದ ಗನ್ ಪೌಂಡರ್ ಹೆಚ್ಚು ಪೂರೈಸುತ್ತಿದ್ದರು. ಅಲ್ಲದೆ ಪ್ರೆಂಚರು ಮತ್ತು ಸ್ಪೇನರ ವ್ಯಾಪಾರ ಕೇಂದ್ರಗಳು ಕೆಳದಿಯಲ್ಲಿ ಇದ್ದವು. ನಂತರ ವಿದೇಶಿಯವರಾದ ಪೋರ್ಚುಗೀಸರು, ಡಚ್ಚರು, ಪ್ರೆಂಚರ ವ್ಯಾಪಾರದ ಪ್ರಭಾವ ಕ್ಷೀಣಿಸಿ, ಬ್ರಿಟಿಷರ ಪ್ರಭಾವವನ್ನು ಹೆಚ್ಚಿಸಿಕೊಂಡರು. ನಂತರ ವಿದೇಶಿಯರಾದ ಬ್ರಿಟಿಷರೊಡನೆ ಯುದ್ಧ ಮಾಡುವುದು ಅನಿವಾರ್ಯವಾಗಿತ್ತು, ಆದರೂ ದೊಡ್ಡ ಹೋರಾಟವಾಗಿರಲಿಲ್ಲ.

ಕೆಳದಿಯ ಅರಸರ ಸಂಬಂಧ ಹಲವು ತೆರನಾಗಿದೆ. ವ್ಯಾಪಾರ ಅಂದರೆ ಮಲೆನಾಡಿನ ಬೆಳೆಗಳಿಗೆ ಸಂಬಂಧಿಸಿದ (ಸಂಬಾರ ಪದಾರ್ಥ) ವಠಾರಗಳಿಗೆ ಪರವಾನಗಿ ನೀಡಿದ್ದು. ಅಲ್ಲದೆ, ಬೇಕಾದ ಸಾಮಗ್ರಿಗಳನ್ನು ಸರಬರಾಜು ಮಾಡಿದ್ದು, ಶಸ್ತ್ರಾಸ್ತ್ರಗಳನ್ನು ಪೂರೈಕೆ ಮಾಡಿರುವುದು. ಹಾಗೆಯೇ ಯುದ್ಧ ಸಂದರ್ಭ ಅನಿವಾರ್ಯವಾದಾಗ ಯುದ್ಧದಲ್ಲಿ ಪಾಲ್ಗೊಳ್ಳುವುದು ಕೆಳದಿಯ ಅರಸರ ಉದ್ದೇಶ. ಹಣ ಮತ್ತು ವ್ಯಾಪಾರವೇ ಮುಖ್ಯವಾಗಿರಲಿಲ್ಲ. ಅಲ್ಲದೆ ರಾಜ್ಯ ವಿಸ್ತರಣೆ ಮಾಡುವುದು ಅವರ ಪ್ರತಿಜ್ಞೆಯಾಗಿರಲಿಲ್ಲ. ಹಾಗೆಯೇ ವಿದೇಶಿಯರೊಡನೆ ವ್ಯವಹರಿಸುವ ವಿಶೇಷ ಚಾಕಚಕ್ಯತೆ ಇರಬೇಕು. ಹೀಗಾಗಿ ಕೆಳದಿಯ ಅರಸರು ಬಾಬತ್ತಿನಲ್ಲಿ ವಿಶೇಷ ಪರಿಣಿತಿ ಹೊಂದಿದ್ದರು. ಅಲ್ಲದೆ ಈ ನಾಡು ಆರ್ಥಿಕವಾಗಿ ಸದೃಢವಾಗಿರುವಂತೆ ನೋಡಿಕೊಳ್ಳುತ್ತಿದ್ದರು.

**"ಕೆಳದಿ ಅರಸರ ದಾಖಲೆಗಳ ಸ್ವರೂಪ"**

ಕೆಳದಿಗೆ ಸಂಬಂಧಿಸಿದಂತೆ ದಾಖಲೆಗಳ ಸ್ವರೂಪವನ್ನು ಯುವ ಪೀಳಿಗೆಗೆ ಪರಿಚಯಿಸುವುದು ಶ್ರೀನಿವಾಸ ಹಾವನೂರ ಅವರ ಉದ್ದೇಶವಾಗಿತ್ತು. ಅಂದಿನ ದಾಖಲೆಗಳ ಸತ್ಯಾಸತೆಯ ಸ್ವರೂಪ; ಪ್ರಾಕ್ಷಿಮಾತ್ಯರ ದಾಖಲೆಗಳ ವ್ಯಾಪಾರ ವಹಿವಾಟು, ರಾಜಕೀಯ, ನಾಡಿನ ಪ್ರಕೃತಿಯ ಪರಿಚಯ, ಅಂದಿನ ಜನಜೀವನ ಪರಿಚಯಕ್ಕೆ ಸಂಬಂಧಿಸಿದಂತೆ ದಾಖಲೆಗಳ ವರ್ಗೀಕರಣ ಮಾಡಲಾಗಿದೆ. ಸರ್ಕಾರಿ ನಿರೂಪಗಳು ಅಥವಾ ವರದಿಯನ್ನು, ವರಿಷ್ಠರಿಗೆ ಬರೆದ ವ್ಯವಹಾರಿಕ ಪತ್ರಗಳಲ್ಲಿ ಈ ರೀತಿಯ ಮಹತ್ವದ ಅಂಶಗಳು ಪ್ರಸ್ತಾಪಗೊಂಡಿರುವುದನ್ನು ಕಾಣಬಹುದು. ಅಲ್ಲದೆ ಪ್ರವಾಸಿಗರ ವರ್ಣನೆ, ಕೆಳದಿಗೆ ಸಂಬಂಧಿಸಿದ ಮಹತ್ವದ ಸಂಗತಿ 'ಪಿಎತ್ರೊದಲಾವಿತೆ' ಮೊದಲಿಗನು. ಅಲ್ಲದೆ ಅಲೆಕ್ಸಾಂಡರ್ ಹ್ಯಾಮಿಲ್ಟನ್ "A New account of the Indian" ಈ ಕೃತಿಯು ಕರಾವಳಿಗೆ ಸಂಬಂಧಿಸಿದ್ದು. ಅಲ್ಲದೆ ಸರ್ಕಾರಿ ಪತ್ರಗಳು ಹೆಚ್ಚು ಪ್ರಯೋಜನಕಾರಿಯಾದವು.

ಪೋರ್ಚುಗೀಸರ ದಾಖಲೆಗಳ ಮಹತ್ವವನ್ನು ಕಾಣಬಹುದು. ಅಲ್ಲದೆ ಪಣಜಿ, ಲಿಸ್ಬನ್, ತೊಂಬೊ, ಎವೊರಾ ಮುಂತಾದ ಸ್ಥಳಗಳಲ್ಲಿ ಕಾಣಬಹುದು. ಆ ದಾಖಲೆಗಳ ಪರಿಶೀಲಿಸಿದವರ ನಾಲ್ಕು ವ್ಯಕ್ತಿಗಳ ಹೆಸರು ಉಲ್ಲೇಖಗೊಂಡಿವೆ. ಎಫ್. ಸಿ. ಡ್ಯಾನ್ವರ್ಸ್‌ನು, ಲಂಡನ್ನಿನ ಇಂಡಿಯಾ ಆಫೀಸ್‌ನಲ್ಲಿ ಪರಿಶೀಲಿಸಿ ಮೂಲ ದಾಖಲೆಗಳನ್ನು ಸಂಗ್ರಹಿಸಿ ಮತ್ತು ಕೃತಿರೂಪದಲ್ಲಿ ಪ್ರಕಟಿಸಿದರು. ನಂತರ ಅರವೀಡು ಮನೆತನದವರ ಕುರಿತು ಪಾದರ್ ಹೆರಾಸರು ಬರೆದು ಕೃತಿರೂಪದಲ್ಲಿ ಪ್ರಕಟಿಸಿದರು. ಅಲ್ಲದೆ ಇ.ಎಮ್. ಆಳ್ವಾಸರು 'The Nayakas of lkkeri' ಎಂಬ ಸಂಶೋಧನ ಗ್ರಂಥವನ್ನು ಬರೆದರು. ಡಚ್ಚರಿಗೆ ಸಂಬಂಧಿಸಿದ ದಾಖಲೆಗಳು ಅಲ್ಪಪ್ರಮಾಣದಲ್ಲಿ ಲಭ್ಯವಾಗಿವೆ. "ಏಶಿಯಾದ ಕೇಂದ್ರ ಸ್ಥಳವಾದ ಬಟಾವಿಯಾದ ಅವರ ಫ್ಯಾಕ್ಟರಿಯು ಭಾರತದಲ್ಲಿ ಕಾಗದ ಪತ್ರಗಳು 'Journoul of the Bombay Historical society' ಆರಂಭದ ಸಂಪುಟಗಳಲ್ಲಿ ಪ್ರಕಟಗೊಂಡಿವೆ. ಅಲ್ಲದೆ

ಡ್ಯಾನ್ವರ್ಸ್ ಅನೇಕ ಡಚ್ಚರ ದಾಖಲೆಗಳನ್ನು ೧೭ನೇ ಶತಮಾನದಲ್ಲಿ 'The Hague'ದಲ್ಲಿ ಅನುವಾದಿಸಿದರು. ರಾಜಧಾನಿಯ ಈ ಎಲ್ಲಾ ದಾಖಲೆಗಳು Indian Office Libraryಯಲ್ಲಿ ದೊರೆಯುತ್ತವೆ."[೧೭] ಚರಿತ್ರೆ ಅರಿಯಲು ಈ ದಾಖಲೆಗಳ ಮಹತ್ವ ಪಾತ್ರ ನಿರ್ವಹಿಸುತ್ತವೆ.

ಬ್ರಿಟಿಷ್ ದಾಖಲೆ ಹೆಚ್ಚಿನ ಪ್ರಮಾಣದಲ್ಲಿ ದೊರೆಯುತ್ತವೆ. ಅವುಗಳ ಮೂಲ ದಾಖಲೆಗಳು, ಲಂಡನ್ ಮತ್ತು ಮುಂಬೈಯಲ್ಲಿ ಮೂಲ ದಾಖಲೆ ಲಭ್ಯವಾಗುತ್ತವೆ. ಅವುಗಳ ಕೆಲವು ನಿದರ್ಶನ ಕಾಣಬಹುದು. ಲಂಡನ್ನಿನ ಇಂಡಿಯಾ ಆಫೀಸ್ ಲೈಬ್ರರಿಯಲ್ಲಿ ಭಾರತ ಮತ್ತಿತರ ದೇಶಗಳ ಫ್ಯಾಕ್ಟರಿಯಲ್ಲಿ ಸಮಸ್ತ ದಾಖಲೆಗಳನ್ನು ಕ್ರಿ.ಶ. ೧೬೦೨-೧೮೮೮ರವರಿಗೂ ಕಾಯ್ದಿಡಲಾಗಿದೆ. ಅಲ್ಲದೆ ಮೆಕೆಂಜಿಯ ಮದ್ರಾಸ್ ಮತ್ತು ಲಂಡನ್ನಿನ ಸಂಗ್ರಹದಲ್ಲಿ ಇವೆ ಎಂಬುದು ವೇದ್ಯವಾಗುತ್ತದೆ. ಮದ್ರಾಸ್, ಹಳೆಗನ್ನಡ ಕಾವ್ಯ" ಕೈಫಿಯತ್ತುಗಳು ಮೂಲ ರೂಪದಲ್ಲಿ ಲಂಡನ್ನಿನ O.I.L. ಸಂಗ್ರಹದಲ್ಲಿ ಸ್ಥಳ ಪುರಾಣ, ಐತಿಹ್ಯ ಶಾಸನ, ಕಾವ್ಯ ಮುಂತಾದವುಗಳನ್ನು ಕಾಣಬಹುದು. ಹೈದರನು ಬಿದನೂರನ್ನು ತನ್ನ ವಶಕ್ಕೆ ಪಡೆದುಕೊಂಡ. ನಂತರ ಸಂಪತ್ತನ್ನು ದೋಚಿದರು. ಸಂಪತ್ತು ಕಡಿಮೆಯಾಗಲಿಲ್ಲ. ಈ ಹಿನ್ನೆಲೆಯಲ್ಲಿ ವಿಕ್ಸ್‌ನು ಕರಾವಳಿಯು ಅತ್ಯಂತ ಶ್ರೀಮಂತ ನಗರವೆಂದು ವರ್ಣಿಸಿದ್ದಾನೆ. ಇಂಥ ಮಹತ್ವ ಸಂಗತಿಗಳನ್ನು ದಾಖಲೆ ಪರಿಚಯಿಸುತ್ತವೆ.

**'ಮೆಕೆಂಜಿಯ ಅಜ್ಞಾತ ಸಂಗ್ರಹ'**

ಹಾವನೂರ ಅವರು ಬ್ರಿಟಿಷ್ ಅಧಿಕಾರಿಯಾದ ಮೆಕೆಂಜಿಯ ಕಾರ್ಯ ವೈಖರಿ ಮಹತ್ವ ನಿರೂಪಿಗೊಂಡಿದೆ.

ಅವರ ಸಂಗ್ರಹ, ಅನುವಾದ ಮತ್ತು ಗ್ರಂಥಪಾಲಕರ ಕಾರ್ಯದಲ್ಲಿ ಸತತ ಪ್ರಯತ್ನವೇ ಮಹತ್ವ ಸಾಧನೆ ಮಾಡಲು ಸಾಧ್ಯವಾಯಿತು. ಅಲ್ಲದೆ ಸಂಗ್ರಹ ಕಾರ್ಯ, ಅನುವಾದ ಮತ್ತು ಗ್ರಂಥಪಾಲಕ ಈ ಕಾರ್ಯಗಳನ್ನು ನಿರ್ವಹಿಸುವ ವ್ಯಕ್ತಿಗಳ ಕಾರ್ಯ ಬದ್ಧತೆ, ಶ್ರಮ, ನಿಷ್ಠೆ ಹೀಗಿದ್ದಾಗಲೂ ಕೂಡ ದ್ವಿತೀಯ ದರ್ಜೆಯ ಸ್ವರೂಪ ಕಾಣುವುದು ಎಷ್ಟು ಸರಿ? ಹಾಗೆಯೇ ಇವರು ವೃತ್ತಿಯಿಂದ ಅಧಿಕಾರಿಯಾಗಿ ಪ್ರವೃತ್ತಿ ಸಂಗ್ರಹ, ಸಂಪಾದನೆ, ಅನುವಾದ ಕೃತಿಗಳ ರಕ್ಷಣೆ ಈ ತೆರನಾದ ಕೆಲಸ ಕಾರ್ಯಗಳಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡರು. ಅಳಿದ-ಉಳಿದ ವಸ್ತುಗಳ ಸಂಗ್ರಹಿಸುವ ಇಚ್ಛೆ ಶಕ್ತಿಯ ಮತ್ತು ಆತನನ್ನು ಉನ್ನತ ದರ್ಜೆಗೆ ಅವರನ್ನು ಏರಿಸಿತು.

ಮೆಕೆಂಜಿಯು ಎಲ್ಲಿ ಹೋದರೂ ಮಹತ್ವ ಮಾಹಿತಿಯನ್ನು ಸಂಗ್ರಹಿಸುವುದಕ್ಕೆ ಮರೆಯುತ್ತಿರಲಿಲ್ಲ. ಸ್ಥಳ ಪುರಾಣ, ವಂಶಾವಳಿ, ಕಾಗದ ಪತ್ರ, ಊರಿನ ಚರಿತ್ರೆ, ಹಿನ್ನೆಲೆಯಲ್ಲಿ ಅವರು ವಿಷಯ ಸಂಗ್ರಹಿಸುವ ಕುತೂಹಲ ಹಾವನೂರ ಅವರದಾಗಿತ್ತು. ಆ ವಿಷಯ ಕನ್ನಡ, ತೆಲುಗು, ತಮಿಳು ಭಾಷೆಯಲ್ಲಿ ತಿಳಿದುಕೊಂಡು, ಸಹಾಯಕರಾದ ಕಾವಲಿ

ಬೋರಯ್ಯ, ವೆಂಕಟಲಕ್ಷ್ಮಯ್ಯ ಮೂಲಕ ಇಂಗ್ಲಿಷ್‌ಗೆ ಭಾಷಾಂತರಿಸುತ್ತಿದ್ದರು. ಅಲ್ಲದೆ ಗುಡಿ, ಮೂರ್ತಿಗಳ ಮನುಷ್ಯ ಚಿತ್ರ ಮತ್ತು ನಕ್ಷೆಯನ್ನು ಚಿತ್ರಿಸಿಕೊಳ್ಳುತ್ತಿದ್ದರು. ಹಾಗೆಯೇ ಶಾಸನ ಪ್ರತಿ ಮಾಡಿಸಿದ, ಯಥಾರೀತಿ ಪ್ರತಿ ಮಾಡುತ್ತಿದ್ದರು. ಬಖೈರು, ಕೈಫಿಯತ್ತು ಮತ್ತು ಕಾವ್ಯಪ್ರತಿ ಮಾಡಿಕೊಳ್ಳುತ್ತಿದ್ದರು.

"ತೆರಕಣಾಂಬಿಯಲ್ಲಿ ಲಿಂಗಾಯಿತ ಮುದುಕನಿದ್ದ. ಆತ ನೂರು ಸಂವತ್ಸರಗಳ ದಾಟಿದವನಾಗಿದ್ದನು. ಆತನಲ್ಲಿ ನೆನಪಿನ ಶಕ್ತಿ ಚೆನ್ನಾಗಿತ್ತು. ಕ್ರಿ.ಶ. ೧೮೦೪ರಲ್ಲಿ ಮೆಕೆಂಜಿಯು ಆತನನ್ನು ಎರಡು ಬಾರಿ ಕಂಡನಂತೆ. ಪೇಶ್ವೆ ಬಾಜೀರಾಯನು ಕ್ರಿ.ಶ. ೧೬೨೬ರಲ್ಲಿ ಮೈಸೂರು ಪ್ರದೇಶದಲ್ಲಿ ದಾಳಿ ಮಾಡಿದ ಮೇಲೆ ಬಂದಿದ್ದ ಅನೇಕ ವಿವರಗಳನ್ನು ನೆನಪಿಟ್ಟು ಹೇಳಿದನಂತೆ. ಅಲ್ಲದೆ ಅವನ ಪ್ರಕಾರ ಒಡೆಯರ ಆಳ್ವಿಕೆಯಲ್ಲಿ ಸುಖ–ಶಾಂತಿಯಿಂದ ಕೂಡಿತ್ತು. ತೆರಿಗೆಯ ಭಾರ ಇರಲಿಲ್ಲ. ಹೈದರ ಟಿಪ್ಪು ಇವರ ಕಾಲದಲ್ಲಿ ಜನಜೀವನ ಕ್ಲೇಶಕರವಾಗಿದ್ದಿತಂತೆ."[೧೮] ಈ ರೀತಿಯ ಮಹತ್ವದ ಮಾಹಿತಿ ಕ್ರೋಢೀಕರಿಸುತ್ತಿದ್ದರು. ಅಲ್ಲದೆ ಹೆಚ್ಚಿನ ಸಂಗ್ರಹ ಮದ್ರಾಸ್‌ನಲ್ಲಿ ಇತ್ತು ಎಂಬುದು ವೇದ್ಯವಾಗುತ್ತದೆ. ಅದರ ಸೂಚಿಯನ್ನು ವಿಲ್ಸನ್(೧೮೨೮) ಮತ್ತು ಟೇಲರ್(೧೮೬೨) ಸಿದ್ಧ ಮಾಡುವ ಕಾರ್ಯವನ್ನು ಮದ್ರಾಸ್ ವಿಶ್ವವಿದ್ಯಾಲಯ ಮತ್ತು ಓರಿಯಂಟಲ್ ಲೈಬ್ರರಿಯವರು ಮಾಡಿದರು. ಇನ್ನಷ್ಟು ಭಾಗವನ್ನು ಇಂಗ್ಲಿಷ್‌ಗೆ ತರ್ಜುಮೆ ಮಾಡಿ ಇಂಡಿಯಾ ಆಫೀಸ್ ಲೈಬ್ರರಿಯಲ್ಲಿ ಸಂಗ್ರಹವಿಟ್ಟಿರುವುದನ್ನು ಕಾಣಬಹುದು.

ಮೆಕೆಂಜಿಯ ಸಂಗ್ರಹ ೬೫ ಕಟ್ಟುಗಳಿವೆ. ಅದರಲ್ಲಿ ೧೦೦-೪೦೦ ವಿಷಯಗಳಿವೆ. ೧೨ ಸಾವಿರ ಪುಟಗಳ ಕರ್ನಾಟಕಕ್ಕೆ ಸಂಬಂಧಿಸಿದ ಮಾಹಿತಿ. ೧೨ ಕಟ್ಟುಗಳ ಚದುರಿದ ಸುಮಾರು ೧೫ ಪುಟಗಳಷ್ಟು ವಿವರ ಕಾಣಬಹುದು. ೧೬–೧೮ನೇ ಶತಮಾನದ ಮಾಹಿತಿ ಅಳವಡಿಸಲಾಗಿದೆ. ವಿಜಯನಗರ ಪೂರ್ವಚರಿತೆ. ವಿಜಯನಗರ ಸಾಮ್ರಾಜ್ಯ, ವಿಜಯನಗರೋತ್ತರ ಪಾಳೇಗಾರರು, ಮೈಸೂರು ಒಡೆಯರು, ಟಿಪ್ಪು ಈ ರೀತಿಯ ಮಹತ್ವದ ಸಂಗತಿಗಳು ಒಳಗೊಂಡಿದೆ. ವಿಜಯನಗರ ಪೂರ್ವ ಚರಿತ್ರೆ ಕದಂಬ, ಹೊಯ್ಸಳ, ಕೆಲವು ವಂಶಾವಳಿಯ ಕುರಿತು ಪ್ರಸ್ತಾಪಗೊಂಡಿದೆ. ರಾಜವಂಶದವರು, ಚರಿತ್ರೆ, ವಂಶಾವಳಿ ಸಂಗ್ರಹ, ಕೃಷ್ಣದೇವರಾಯ ಮತ್ತು ಇತರ ರಾಜರು, ೧೭–೧೮ನೇ ಶತಮಾನದ ಆಗ್ನೇಯ ಪತ್ರಿಕೆಗಳನ್ನು ಕಾಣಬಹುದು. ಬಖೈರುಗಳಲ್ಲಿ ಅಳಿಯ ರಾಮರಾಯನ ರಾಜ್ಯಭಾರ ಸಂಗತಿ, ರಕ್ಕಸತಂಗಡಿಯ ಯುದ್ಧದ ಕಾರಣ, ಜನಜೀವನ, ಕೃಷ್ಣದೇವರಾಯ ಸಿಂಹಾಸನದ ಆನೆ ಲಾಯ, ದರ್ಬಾರಿನಲ್ಲಿ ಸಾಮಂತರು, ನಾಣ್ಯ ಈ ತೆರನಾದ ಮಹತ್ವದ ಸಂಗತಿಗಳು ನಿರೂಪಿತಗೊಂಡಿವೆ.

**'ವಿಜಯನಗರೋತ್ತರದ ಕಾಲ'** ಆ ಕಾಲದ ಕೈಫಿಯತ್ತುಗಳಿಂದ ಹೆಚ್ಚಿನ ಮಾಹಿತಿ ತಿಳಿಯಬಹುದು. ದರೋಜಿ, ಕಂಪಲಿ ಸುತ್ತಮುತ್ತಲಿನ ಊರುಗಳ ಚಾರಿತ್ರಿಕ ಹಿನ್ನೆಲೆ

ಮೆಕೆಂಜಿಯ ಕೇಳಿ ಬರೆದುಕೊಂಡಿದ್ದು ಅಲ್ಲದೆ ಸಿರಾ, ಪಾವಗಡ, ಬಾಣಾವಾರ, ಕಳಸ, ನಾಯಕನಹಟ್ಟಿಗಳ ಚರಿತ್ರೆಗಳನ್ನು ಸಂಗ್ರಹಿಸಿದ್ದು ಕಾಣಬಹುದು. ಕಳವೆ, ಮಾಗಡಿ, ಉಚ್ಚಂಗಿದುರ್ಗ, ಹರಪನಹಳ್ಳಿ ಪಾಳೇಗಾರರ ಕುರಿತು ಮಾಹಿತಿ ಸಂಗ್ರಹಿಸಿದ್ದು ಚಂದ್ರಗಿರಿಯ ಮಹತ್ವದ ಮಾಹಿತಿಯನ್ನು ಒಳಗೊಂಡಿದೆ.

**'ಕರ್ನಾಟಕ-ಮರಾಠ ಸಂಬಂಧ'** ಕನ್ನಡ-ಮರಾಠ ಸಂಬಂಧ ೧೪ನೇ ಶತಮಾನದಿಂದ ಇತ್ತು ಎನ್ನುವುದು ಮೆಕೆಂಜಿಯ ಸಂಗ್ರಹದಿಂದ ತಿಳಿದು ಬರುತ್ತದೆ. ೨ನೇ ಹರಿಹರನು ಕ್ರಿ.ಶ. ೧೩೯೪ರಲ್ಲಿ ಚಿತ್ರದುರ್ಗ ಜಿಲ್ಲೆಯ ಮಾದನಹಳ್ಳಿ, ಪಟವರ್ಧನ ಕುಟುಂಬ, ವಿಷ್ಣುದೀಕ್ಷಿತ, ಮತ್ತು ಆನಂದ ದೀಕ್ಷಿತ ಬಿಟ್ಟಿದರ ಉಲ್ಲೇಖ ಕಾಣಬಹುದು. ಮೆಕೆಂಜಿಯ(Journal of the Asiatic soa of Bangal) ೧೩ನೇ ಸಂಪುಟದಲ್ಲಿ ಅನುವಾದಿಸಿ ಪ್ರಕಟಿಸಿದರು. ಶಹಾಜಿ-ಶಿವಾಜಿ ಕರ್ನಾಟಕವನ್ನು ಬೆಳಕಿಗೆ ತಂದವನು. ಪೇಶ್ವೆಯವರು ಪುಣೆಯಿಂದ ಹೊರಟ ಉತ್ತರ ಕರ್ನಾಟಕ ಮಾರ್ಗವಾಗಿ ಶ್ರೀರಂಗಪಟ್ಟಣಕ್ಕೆ ದಂಡೆತ್ತಿ ಹೋಗುವ ದಾರಿಯಲ್ಲಿ ಕೋಟೆಗಳು ಮತ್ತು ಸ್ಥಳಗಳು ಮಹತ್ವವಾಗಿ ಕಂಡುಬರುತ್ತದೆ.

ಸಂಡೂರು ಮತ್ತು ಗುತ್ತಿ ಘೋರ್ಪಡೆ ಮನೆತನಕ್ಕೆ ಸೇರಿದ ಪ್ರದೇಶಗಳಾಗಿದ್ದವು. ಅಲ್ಲದೆ ಈ ಸಂಗತಿಯು ಘೋರ್ಪಡೆ ಮಾಂಚೇ, ಕೈಫಿಯತ್ತುಗಳಲ್ಲಿ ಈ ಮಹತ್ವ ಸಂಗತಿ ಒಳಗೊಂಡಿದೆ. 'ಲೋಹಾಚಲ ಮಹಾತ್ಮೆ'ಯಲ್ಲಿ ಮಹಾತ್ಮರ ಕುರಿತು ಪ್ರಸ್ತಾಪಗೊಂಡಿದೆ. ಸಂಡೂರಿನ ಘೋರ್ಪಡೆ ವಶದಲ್ಲಿದ್ದ ಊರು, ಹಿರೇಹಾಳ, ಟಿಪ್ಪು ತೀರಿದ ನಂತರ ರಾಜ್ಯ ಹಂಚಿಕೆಯಾಯಿತು. ಆ ಊರು ನಿಜಾಮನಿಗೆ ಸೇರಿತು. ಇದನ್ನ ಗಮನಿಸಿದ ವೆಂಕಟರಾಯ ಘೋರ್ಪಡೆ ಮರಳಿ ಪಡೆಯಲು ಪ್ರಯತ್ನಿಸಿದರು. ಆದರೆ ನೇರವಾಗಿ ಬ್ರಿಟಿಷರು ಅದನ್ನು ವಶಕ್ಕೆ ತೆಗೆದುಕೊಂಡು ಬಳ್ಳಾರಿ ಜಿಲ್ಲೆಗೆ ಸೇರಿಸಿದರು. ಈ ರೀತಿ ಬಖೈರು, ಕೈಫಿಯತ್ತುಗಳ ಮೂಲಕ ಅನೇಕ ತೆರೆಮರೆಯಲ್ಲಿರುವ ಮಹತ್ವದ ಸಂಗತಿಗಳನ್ನು ಹಾವನೂರ ಅವರು ವಿಶ್ಲೇಷಿಸಿದ್ದಾರೆ.

**'ಹೈದರಾಲಿಯ ದೈತ್ಯ ಸಂಭಾಷಣೆ'**

ಈ ದೇಶದ ಚರಿತ್ರೆ ಹಿನ್ನೆಲೆ ಆಧರಿಸಿ ಹೇಳುವುದಾದರೆ ಸ್ವಾತಂತ್ರ್ಯ ಆಂದೋಲನ ನಡೆದವು. ಅವುಗಳನ್ನು ಹೊರತುಪಡಿಸಿದರೆ, ಕ್ರಿ.ಶ. ೧೮೫೭ರ ದಂಗೆಯನ್ನು ಪ್ರಥಮ ಅಧಿಕೃತ ಯುದ್ಧವೆಂದು ತಿಳಿಯುತ್ತದೆ. ಅಂದರೆ ಅದಕ್ಕೆ ಪೂರ್ವದಲ್ಲಿ ಯುದ್ಧಗಳು ಘಟಿಸಿಲ್ಲವೆಂದಲ್ಲ. ದೊಡ್ಡ ಪ್ರಮಾಣದಲ್ಲಿ ಘಟಿಸಿಲ್ಲವೆಂದು ವೇದ್ಯವಾಗುತ್ತದೆ. ಈ ನಾಡಿನ ರಾಜರುಗಳು ಈ ದೇಶವನ್ನು ಬಿಟ್ಟು ತೊಲಗಿಸಲು ಒಪ್ಪಂದ ಮಾಡಿಕೊಂಡಿದ್ದರು. ಅದುವೇ ಕ್ರಿ.ಶ. ೧೭೮೦ರ ಒಪ್ಪಂದ. ಒಂದು ಭಾಗದಿಂದ ಪೇಶ್ವೆ, ಬೋಸ್ಲೆ ಮತ್ತು ಸಿಂದ್ಯ ಬಂಗಾಲದವರೆಗೆ ಹೊರ ಕಳುಹಿಸುವ ಪ್ರಯತ್ನ ಅಲ್ಲದೆ ನಿಜಾಮರು ಮಧ್ಯಪ್ರದೇಶ, ಉತ್ತರ ಪ್ರದೇಶದಿಂದ ಬ್ರಿಟಿಷರನ್ನು ಹೊರ ಕಳುಹಿಸುವ ಪ್ರಯತ್ನ, ದಕ್ಷಿಣದಲ್ಲಿ ಹೈದರಾಲಿಯು

ಮದ್ರಾಸ್ ಪ್ರಾಂತ್ಯದ ಅಲ್ಲಲ್ಲಿ ನೆಲೆಗೊಂಡಿದ್ದ ಬ್ರಿಟಿಷರನ್ನು ಹೊರಗಟ್ಟುವ ಪ್ರಯತ್ನ ನಡೆದಿತ್ತು. ಈ ಹೋರಾಟದ ಉದ್ದೇಶ ಫಲಿಸಲಿಲ್ಲ. ಈ ಹಿಂದೆ ಆದ ಒಪ್ಪಂದದಂತೆ ಹೈದರನು ಎರಡು ವರ್ಷಗಳ ಹೊರಟ ಕುರಿತು ಸಂಭಾಷಣೆ ಕಾಣಬಹುದು. ಕ್ರಿ.ಶ. ೧೭೮೨ರಲ್ಲಿ ಹೈದರಾಲಿಗೆ ದೊಡ್ಡ ಜಯವಾಗುತ್ತದೆ. ಇದರ ಪ್ರತಿಯಾಗಿ ಆತ್ಮಸ್ಥೈರ್ಯ ಕಳೆದುಕೊಂಡ ಐರ್‌ಕೂಟ್‌ನು ತನ್ನ ದೂತನಾದ ಶ್ರೀನಿವಾಸರಾವ್‌ನನ್ನು ಮಾತನಾಡಲು ಹೈದರಾಲಿಯ ಬಳಿ ಕಳುಹಿಸುತ್ತಾನೆ. ಅದುವೇ ಈ ಸಂಭಾಷಣೆ.

ಮೈಸೂರು ದಳವಾಯಿಗಳ ಆಂತರಿಕ ಕಲಹವನ್ನು ದಮನ ಮಾಡಿ ಅಧಿಕಾರ ಹಿಡಿದುಕೊಂಡು ಅಂದಿನಿಂದ ಇತರ ಪ್ರದೇಶಗಳ ಮೇಲೆ ನಿರಂತರ ಕದನ ಮಾಡುತ್ತಿದ್ದನು. ಹೀಗಾಗಿ ಕ್ರಿ.ಶ. ೧೭೬೦ರ ಹೊತ್ತಿಗೆ ದಕ್ಷಿಣ ಭಾರತದ ಪ್ರಬಲ ನಾಯಕನಾದನು. ಮತ್ತು ಹೈದರ್ ಇಂಗ್ಲಿಷ್‌ರೊಂದಿಗೆ ಮದ್ರಾಸ್ ದಾಳಿ ಮಾಡುತ್ತ ಬಂದಾಗ ಅದನ್ನು ಗಮನಿಸಿದ ಬ್ರಿಟಿಷರು ಈ ಹಿನ್ನೆಲೆಯಲ್ಲಿ ಪರಕೀಯರು ದಾಳಿ ಮಾಡಿದ ಸಂದರ್ಭದಲ್ಲಿ ನೀವು ನೆರವಾಗಬೇಕು ಎಂದು ಒಪ್ಪಂದ ಮಾಡಿಕೊಂಡರು. ಹೀಗಾಗಿ ಪೇಶ್ವೆ ಆಗಾಗ ದಾಳಿ ಮಾಡುತ್ತಿದ್ದರು. ಒಮ್ಮೆಯೂ ಬ್ರಿಟಿಷರು ಸಹಾಯಕ್ಕೆ ಬರಲಿಲ್ಲ. ಕೇಳಿದರೆ ವರಿಷ್ಠರ ಅನುಮತಿ ಇಲ್ಲದೆ ನೆರವಾಗಲು ಸಾಧ್ಯವಿಲ್ಲವೆಂಬ ಉತ್ತರ ನೀಡಿದರು.

ಕ್ರಿ.ಶ. ೧೭೮೦ರ ತ್ರಿಕೋನ ಒಪ್ಪಂದ ಪ್ರಕಾರ ಹೈದರನು ಶ್ರೀರಂಗಪಟ್ಟಣದಿಂದ ಹೊರಟು ಅಲ್ಲಲ್ಲಿ ನಡೆದ ಕದನಗಳಲ್ಲಿ ಶತ್ರುಗಳ ದಮನ ಮಾಡಿದರು. ಗೌರ್ನರ್ ವಾರನ್ ಹೆಸ್ಟಿಂಗ್ಸ್‌ನು ವರ್ಗಾಯಿಸಿದರು. ಉಪಯೋಗ ಬೀಳಲಿಲ್ಲ. ಅಲ್ಲದೆ ಯುದ್ಧ ಪರಿಣಿತಿ ಪಡೆದ ಐರ್‌ಕೂಟ್ ಎಂಬುವನು ಬಂದರು ಸೆದೆಬಡಿಯುವಲ್ಲಿ ವಿಫಲವಾದನು. ಹೀಗಾಗಿ ಇಬ್ಬರ ಸಂಭಾಷಣೆ ಪ್ರತಿನಿಧಿತಗೊಂಡಿದೆ.

**ಟಿಪ್ಪು ಸುಲ್ತಾನನ ಬಗ್ಗೆ ಬ್ರಿಟಿಷ್ ಆಕರಗಳು**

ಈ ಲೇಖನದಲ್ಲಿ ಟಿಪ್ಪುವಿನ ಮಹತ್ವದ ವಿಚಾರಗಳು ಒಳಗೊಂಡಿದೆ. ಅದನ್ನು ಅಧ್ಯಯನದ ದೃಷ್ಟಿಯಿಂದ ವಿಭಾಗಿಸಿಕೊಳ್ಳಬಹುದು. ೧. ಬರಹದ ರೂಪ ೨. ಚಿತ್ರಗಳು ೩. ಭಾರತದಿಂದ ಕೊಂಡೊಯ್ದ ಅವಶೇಷಗಳು ಜನರಲ್ ಬೆಯಾರ್ಡ್‌ನು ಟಿಪ್ಪುವಿನ ಮೃತ ಶರೀರವನ್ನು ಶೋಧಿಸಿದ್ದ ವರ್ಣಚಿತ್ರ, ಅಲ್ಲದೆ ಶ್ರೀರಂಗಪಟ್ಟಣದಲ್ಲಿ ಬ್ರಿಟಿಷ್ ಸೈನಿಕರ ಸೆರೆಸಿಕ್ಕ ಸಂದರ್ಭ ಚಿತ್ರಗಳು, ಸ್ಕಾಟ್‌ಲ್ಯಾಂಡಿನ ರಾಷ್ಟ್ರೀಯ ಲೈಬ್ರರಿಯಲ್ಲಿ ಲಭ್ಯವಿರುವ ಕುರಿತು ಉಲ್ಲೇಖಗೊಂಡಿದೆ. ಅಲ್ಲದೆ ಯುದ್ಧದ ಪ್ರಯಾಣದ ಸಂದರ್ಭದ ಪೂರ್ವಸಿದ್ಧತೆಯ ಭೂಪಟವನ್ನು ಕಾಣಬಹುದು. ಹೋಗುವ ಮಾರ್ಗದ ಮಧ್ಯದಲ್ಲಿರುವ ಬೆಟ್ಟ, ಜಲಾಶಯ, ಅವುಗಳ ಭೂಪಟಗಳ ಲಿಖಿತ ದಾಖಲೆಗಳು, ಮುದ್ರಿಸಿದ ಪುಸ್ತಕ, ಯುದ್ಧಕ್ಕೆ ಸಂಬಂಧಿಸಿದ ಕಾಲಮಾನ ದಾಖಲೆ ೧೭೮೧, ೧೯೯೧, ೧೭೯೯, ಮೈಸೂರು ಯುದ್ಧ ಸಂಬಂಧಿಸಿದ ಚರಿತ್ರೆಯಲ್ಲಿ ದಾಖಲೆ ಮಾಡಿದ್ದಾರೆ. ಕೆಲವು ಲೇಖಕರ ಹೆಸರುಗಳು ಉಲ್ಲೇಖಗೊಂಡಿವೆ.

ವುಡ್, ಫುಲ್ಲರ್‌ಟನ್ ಮತ್ತು ಕರ್ಕ್ ಫ್ಯಾಟ್ರಿಕ್ ಇವರ ಬರಹ ಅರ್ಮಮೆಂಟ್ ಮ್ಯೂಸಿಯಂನಲ್ಲಿ ಈಸ್ಟ್ ಇಂಡಿಯಾ ಕಂಪನಿಯೇ ಪ್ರಕಟಿಸಿದ ಕೃತಿ. ಅಲ್ಲದೆ ೧೭೯೯ ಕೊನೆಯ ಯುದ್ಧದ ಮಹತ್ವದ ವಿಚಾರಧಾರೆಯನ್ನು ಒಳಗೊಂಡಿದೆ. ಇಂಥ ಅನೇಕ ದಾಖಲೆಗಳ ಸಂಗ್ರಹ ಲಂಡನ್ನಿನ ಇಂಡಿಯಾ ಆಫೀಸ್ ಲೈಬ್ರರಿಯಲ್ಲಿ ಇವೆ. ಗವರ್ನರ್ ದೇಶಿಯ ರಾಜರ, ಸಂಸ್ಥಾನಿಕರೊಡನೆ ಮಾಡಿದ ಪತ್ರ ವ್ಯವಹಾರಕ್ಕೆ ಸಂಬಂಧಿಸಿದ ದಾಖಲೆಗಳನ್ನು ಕಾಣಬಹುದು. ಆತನ ಪತ್ರ ಪರ್ಷಿಯನ್ ಬರಹದ ದಾಖಲೆ ಕಾಣಬಹುದು. ಅಧಿಕಾರಿ ಮತ್ತು ಅರೆಸರ್ಕಾರಿ ಅಧಿಕಾರಿಗಳ ಬರಹದ ಬರವಣಿಗೆ ಕಾಣಬಹುದು. ಲಾರ್ಡ್ ಕಾರ್ನ್‌ವಾಲಿಸ್‌ನು ಲಿಚ್‌ಫೀಲ್ಡನ್ ಬಿಶಪ್ಪರಿಗೆ ಬರೆದ ದಾಖಲೆ, ಟಿಪ್ಪುವಿನ ಕುರಿತು ಕ್ರಮ ತೆಗೆದುಕೊಳ್ಳುವ ಸುಳಿವಿನ ವಿಚಾರಗಳನ್ನೊಳಗೊಂಡಿದೆ.

ಬ್ರಿಟಿಷ್ ಅಧಿಕಾರಿಗಳ ಕಾಗದ ಪತ್ರಗಳನ್ನು 'ಇಂಡಿಯನ್ ಆಫೀಸ್ ಲೈಬ್ರರಿ ಸಂಗ್ರಹದಲ್ಲಿ ಕಾಣಬಹುದು. ಅವುಗಳಿಗೆ ಈ ರೀತಿ ಹೆಸರಿಟ್ಟಿದ್ದಾರೆ. ವೆಲ್ಲೆಸ್ಲಿ ಪೇಪರ್, ಮಾರ್ನಿಂಗ್ಟನ್ ಪೇಪರ್, ನೇಪಿಯರ್ ಪೇಪರ್ಸ್ ಎಂದು ಕರೆಯುತ್ತಾರೆ. ಸ್ಕಾಟ್‌ಲ್ಯಾಂಡ್ ಮತ್ತು ಐರ್ಲಂಡ್ ರಾಷ್ಟ್ರೀಯ ಗ್ರಂಥಾಲಯದಲ್ಲಿ ಹಸ್ತಪ್ರತಿಗಳ ಸಂಗ್ರಹವನ್ನು ಕಾಣಬಹುದು. ಮ್ಯಾಂಚಸ್ಟರ್ ವಿಶ್ವವಿದ್ಯಾಲಯ ಲೈಬ್ರರಿಯಲ್ಲಿ ಮಹದಾಜಿ ಸಿಂಧ್ಯ ಮತ್ತು ಟಿಪ್ಪು ಅವರ ಪತ್ರ ವ್ಯವಹಾರ ವಿಷಯ ದಾಖಲೆಯಲ್ಲಿ ಕಾಣಬಹುದು.

ಕೇಂಬ್ರಿಡ್ಜ್ ವಿಶ್ವವಿದ್ಯಾಲಯದಲ್ಲಿ ಪರ್ಷಿಯನ್ ಗ್ರಂಥಗಳ ಸಂಗ್ರಹವಿರುವುದು ತಿಳಿಯುತ್ತದೆ. ಮದ್ರಾಸ್ ಮೆಕಾರ್ಟ್ನಿ ಎಂಬ ಗವರ್ನರ್‌ನ ಕಾಗದ ಪತ್ರಗಳು ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲಿವೆ. ಅಲ್ಲದೇ ಕ್ರಿ.ಶ. ೧೭೮೨ರಲ್ಲಿ ಅಧಿಕಾರ ವಹಿಸಿಕೊಂಡ ನಂತರ ಕರಾವಳಿ ಭಾಗದಲ್ಲಿ ದಾಳಿ ಮಾಡಿದ ಮಂಗಳೂರು, ಬಿದನೂರು, ಕಣ್ಣಾನೂರು ಇವುಗಳ ಮೇಲೆ ದಾಳಿ ಮಾಡಿದ ವಿವರಗಳು ದೊರೆಯುತ್ತವೆ. ಟಿಪ್ಪುವಿನ ಕಂದಾಯ ಮತ್ತು ಆಡಳಿತ ವಿಷಯಕ್ಕೆ ಸಂಬಂಧಿಸಿದ ದಾಖಲೆಗಳನ್ನು ಕಾಣಬಹುದು. ಆತನ ಆಡಳಿತದ ನಿಯಮಾವಳಿಯನ್ನು ಪರ್ಶಿಯನ್ ಭಾಷೆಯಲ್ಲಿ ಬರೆಸಿದ್ದನು. ಅದು ಬ್ರಿಟಿಷರ ಕೈಗೆ ಸಿಕ್ಕು ಗಾಡ್ವಿನ್ ಎಂಬುವವನು ತರ್ಜುಮೆ ಮಾಡಿದನು.

ಟಿಪ್ಪು ಬಳಸುತ್ತಿದ್ದ ವಸ್ತುವನ್ನು ಇಂಗ್ಲೆಂಡಿಗೆ ಕೊಂಡೊಯ್ದರು. ಅಲ್ಲಿಯ ವಿಕ್ಟೋರಿಯಾ ಅಲ್ಬರ್ಟ್ ಮ್ಯೂಸಿಯಂ ಪ್ರದೇಶದಲ್ಲಿ ಇಟ್ಟಿರುವುದನ್ನು ಕಾಣಬಹುದು. "ಸಿಂಹಾಸನ ಮೇಲೆ ಕೂಡಿಸಿದ ಬಂಗಾರದ ಹುಲಿಯ ಮುಖ ಮತ್ತು ಯುದ್ಧ ಕಾಲದಲ್ಲಿ ಬಳಸುತ್ತಿದ್ದ ಜಾಕೇಟ್, ಪೇಟಾ, ರತ್ನಗಂಬಳಿ, ಕಟ್ಟಿಗೆಯ ಯಂತ್ರ, ಹುಲಿ"[೯] ಅವುಗಳ ಪ್ರದರ್ಶನ ಕಾಣಬಹುದು. ಟಿಪ್ಪುವಿನ ಆಡಳಿತ ಅವಧಿಯ ನೂರಾರು ಪರ್ಶಿಯನ್ ಕಾಗದ ಪತ್ರಗಳು ಮತ್ತು ಆತ ಹೊಂದಿದ್ದ ಮಸ್ಕತ್, ಝುದ್ದಾಗಳಲ್ಲಿಯ ಪ್ಯಾಕ್ಟರಿಯಗಳಲ್ಲಿ ಗೌಪ್ಯ ರಾಯಭಾರಕ್ಕೆ ಆತನು ಬಳಸುತ್ತಿದ್ದ ಗುಪ್ತ ಸಂಕೇತ ರಹಸ್ಯ ಮೂಲಕ ಆತನ ಡೈರಿಯು ದಾಖಲಾಗಿದೆ.

**‘ಟಿಪ್ಪುವಿನ ಹುಲಿ’**

ಟಿಪ್ಪುವಿನ ಧೈರ್ಯ, ಶೌರ್ಯಕ್ಕಾಗಿ ‘ಮೈಸೂರು ಹುಲಿ’ ಎಂದು ಕರೆಯುವ ವಾಡಿಕೆಯಿತ್ತು. ಈತನು ಬ್ರಿಟಿಷರಿಗೆ ಸಿಂಹಸ್ವಪ್ನವಾಗಿದ್ದನು. “ಟೀಪೊಸ್ ಟೈಗರ್ ಕಟ್ಟಿಗೆಯಿಂದ ಮಾಡಿದ ಹುಲಿ ಹಾಗೂ ಸೈನಿಕ ಇರುವ ಯಂತ್ರ ಅದು. ಆ ಯಂತ್ರ ಎಂದರೆ ಹುಲಿ(ಕೀಲಿ ಕೊಟ್ಟರೆ) ರೌದ್ರಾವೇಶದಿಂದ ಆರ್ಭಟಿಸುತ್ತದೆ. ಮತ್ತು ಅದೇ ಕಾಲಕ್ಕೆ ಅಡಿಯಲ್ಲಿರುವ ಆಂಗ್ಲ ಸೈನಿಕ ಅಸಹಾಯಕತೆಯಿಂದ ಕೈ ಎತ್ತುತ್ತಾನೆ.”[೨೦] ಆತನ ಸ್ವಭಾವದ ಸ್ವರೂಪವನ್ನು ಕಟ್ಟಿಗೆಯ ಗೊಂಬೆ ಪ್ರದರ್ಶಿಸುತ್ತದೆ. ಎರಡನೆಯ ಮಹಾಯುದ್ಧದ ಸಂದರ್ಭದಲ್ಲಿ ಬಾಂಬ್ ದಾಳಿಯಿಂದ ಸುಟ್ಟು ಹೋಯಿತು. ಅದನ್ನು ರಿಪೇರಿ ಮಾಡಿಸಿ ಪುನಃ ಪ್ರದರ್ಶನಕ್ಕೆ ಇಟ್ಟಿದ್ದರು. ಬುಕಾನನ್ ಎಂಬುವನು ದಕ್ಷಿಣ ಭಾರತದ ಪ್ರವಾಸ ಸಂದರ್ಭದಲ್ಲಿ ಹೀಗೆ ಹೇಳುತ್ತಾನೆ. “ಅರಮನೆ ದಾರಿ ಪಹರೆ ಸೈನಿಕರಂತೆ ಜೀವಂತ ಹುಲಿ–ಚಿರತೆಗಳನ್ನು ಕಟ್ಟಿರುತ್ತಿದ್ದರು.”[೨೧] ಈ ತೆರನಾದ ಮಹತ್ವದ ಸಂಗತಿ ಉಲ್ಲೇಖಗೊಂಡಿದೆ. ಮೈಸೂರು ಇತಿಹಾಸಕಾರ ವಿಲ್ಕ್ಸ್ ತನ್ನ ಕೃತಿಯಲ್ಲಿ ಬ್ರಿಟಿಷರು ಸೋತು ಶರಣಾದರು. ಮತ್ತಿತರ ಅವಹೇಳನ ಸ್ವರೂಪ ಚಿತ್ರಗಳು ಈ ಗೋಡೆಯಲ್ಲಿ ಬಿಡಿಸಿರುವ ಕುರಿತ ಉಲ್ಲೇಖಗಳಿವೆ.

**ಪರ್ಷಿಯಾದ ರಾಯಭಾರಿ ಹಾಗೂ ದಿವಾನ್ ಪೂರ್ಣಯ್ಯ**

ಬ್ರಿಟಿಷರು ಮೈಸೂರು ಸಂಸ್ಥಾನದ ಆಡಳಿತ ವಹಿಸಿಕೊಂಡ ಮೂರು ವರ್ಷದ ನಂತರ ಅದೇ ಅವಧಿಯಲ್ಲಿ ಪೂರ್ಣಯ್ಯನವರು ಮೈಸೂರು ದಿವಾನರಾಗಿಯೂ, ಹಾಗೆಯೇ ಕಲ್ಕತ್ತ ಗವರ್ನರ್ ಜನರಲ್ ಲಾರ್ಡ್ ಮಾರ್ನಿಂಗ್‌ಟನ್ ಅವರು ಕಾರ್ಯನಿರ್ವಹಿಸಿದರು. ಹಾಜಿ ದೌಲತ್ ಖಾನ್‌ನೂ ಪರ್ಷಿಯಾದ ರಾಯಭಾರಿಯಾಗಿ ನೇಮಕಗೊಂಡ ನಂತರ ಕಲ್ಕತ್ತಕ್ಕೆ ಬಂದಿದ್ದನು. ಆ ಸಂದರ್ಭದಲ್ಲಿ ಟಿಪ್ಪು ಶ್ರೀರಂಗಪಟ್ಟಣದಲ್ಲಿ ಆಳ್ವಿಕೆ ಮಾಡುತ್ತಿದ್ದನು. ಆತನನ್ನು ನೋಡುವ ಕುತೂಹಲ. ಹೀಗಾಗಿ ಆತನನ್ನು ನೋಡಲು ಹೋದಾಗ ಆಕಸ್ಮಿಕವಾಗಿ ಸಾವು ಸಂಭವಿಸಿತು. ಈ ಘಟನೆ ಕಂಡು ದಿವಾನ್ ಪೂರ್ಣಯ್ಯ ಆತಂಕಗೊಂಡರು. ಹಾಗೆಯೇ ಸಾವು ಕುರಿತು ಕಲ್ಕತ್ತ ಗೌವರ್ನರ್ ಜನರಲ್ ದೌಲತ್‌ಖಾನ್‌ನೂ ಸಾಮಾನ್ಯ ಸಾವು ಎಂದು ತನ್ನ ವರದಿಯಲ್ಲಿ ಮನವರಿಕೆ ಮಾಡಿದನು. ಈ ಘಟನೆಯ ವರದಿ ಕೇಳಿದ ಮದ್ರಾಸ್ ಗೌವರ್ನರ್ ಕೋಪಗೊಂಡ. ಅದರ ಶಮನಕ್ಕಾಗಿ ದಿವಾನ್ ಪೂರ್ಣಯ್ಯನವರು ರಾಜ್ಯದಲ್ಲಿ ಶೋಕ ಆಚರಿಸಲು ಮುಂದಾದರು. ಈ ಎಲ್ಲ ಮಹತ್ವದ ಮಾಹಿತಿಗಳು ದೆಹಲಿಯ ಪತ್ರಾಗಾರದಲ್ಲಿದೆ. “ಮಹಮ್ಮದಿಯರ ಧಾರ್ಮಿಕ ವಿಧಿಗಳನ್ನು ನಡೆಸಲು ಆ ಕೋಮಿನ ಸಹಾಯ ಬೇಕಾದರೆ ಈ ಸರ್ಕಾರವು ಆಹಾರ ಒದಗಿಸಬೇಕು.”[೨೨] ಎಂದು ದಿವಾನ್ ಪೂರ್ಣಯ್ಯ ಅವರು ಗವರ್ನರ್ ಜನರಲ್ ಮನವೊಲಿಸುವ ದಾಖಲೆ ಶ್ರೀನಿವಾಸ ಹಾವನೂರ ಅವರ ಸಂಗ್ರಹಿತ ದಾಖಲೆಯಲ್ಲಿದೆ.

**ಸುರಪುರ ದುರಂತದ ನಿಜಸಂಗತಿ**

ಲಿಖಿತ ರೂಪದವುಗಳನ್ನು ಇತಿಹಾಸ, ಚರಿತ್ರೆ, ದಾಖಲೆಗಳೆಂದು ಮಹತ್ವದ ಸಂಗತಿಗಳೆಂದೂ ಆಧಾರವಾಗಿ ಬಳಸಲಾಗುತ್ತಿದೆ. ಆದರೆ ಅದರಲ್ಲಿ ಎಲ್ಲವೂ ಸತ್ಯವಾಗಿರಲು ಸಾಧ್ಯವಿಲ್ಲ ಎಂಬುದನ್ನು ಸುರಪುರ ಸಂಸ್ಥಾನವನ್ನು ಉದಾಹರಣೆಯಾಗಿಟ್ಟುಕೊಂಡು ಶ್ರೀನಿವಾಸ ಹಾವನೂರ ಅವರು ವಿಶ್ಲೇಷಿಸಿದ್ದಾರೆ. ಕಲಬುರ್ಗಿ ಜಿಲ್ಲೆಯ ಸುರಪುರ ಒಂದು ಸಣ್ಣ ಸಂಸ್ಥಾನವಾಗಿತ್ತು. ೧೮೭೪ರಲ್ಲಿ ಫಿಲಿಪ್ ಮೆಡೋಸ್ ಟೇಲರ್ ಎಂಬುವವನು `Story of my life' ಎಂಬ ಆತ್ಮಕಥನದಲ್ಲಿ ಸುರಪುರದ ಬಂಡಾಯದ ಸವಿವರಗಳನ್ನು ದಾಖಲಿಸಿದ್ದಾನೆ.

ಮೆಡೋಸ್ ಟೇಲರ್ ಸುರಪುರದಲ್ಲಿ (೧೮೪೨–೧೮೫೩) ಆಡಳಿತದ ಮೇಲಾಧಿಕಾರಿಯಾಗಿ ಜನಸಾಮಾನ್ಯರಿಗೆ ಬೇಕಾದ ಅನೇಕ ಮೂಲಭೂತ ಸೌಲಭ್ಯಗಳನ್ನು ಒದಗಿಸಿಕೊಟ್ಟನು. ಕೃಷ್ಣಪ್ಪ ನಾಯಕನ ಮರಣದ ನಂತರ ಅವನ ತಮ್ಮ ಪಿಡ್ಡನಾಯಕನನ್ನು ಆಡಳಿತಾಧಿಕಾರಿಯಾಗಿ ನೇಮಿಸಲು ಮೆಡೋಸ್ ಟೇಲರ್ ಸಹಕರಿಸಿದನು. ವೆಂಕಟಪ್ಪ ನಾಯಕ ತನ್ನ ೨೪ನೇ ವಯಸ್ಸಿನಲ್ಲಿ ಸಾಯುತ್ತಾನೆ ಎಂಬ ಕುಲಪುರೋಹಿತ ರಾಮಶಾಸ್ತ್ರಿ ಹೇಳಿದಾಗ ಯಾರೂ ಒಪ್ಪಿರಲಿಲ್ಲ. ಕೊನೆಗೆ ಹೈದರಾಬಾದಿನಿಂದ ಹೊರಟ ವೆಂಕಟಪ್ಪ ತನಗೆ ತಾನೇ ಗುಂಡು ಹೊಡೆದುಕೊಂಡು ಸತ್ತನೆಂದು ಸರಕಾರಿ ಅಧಿಕಾರಿಗಳು ಹೇಳಿದರು. ಶಾಸ್ತ್ರಿ 'ನೋಡು ನಿಮಗೆ ನಾನು ಹೇಳಿದ್ದೆ. ನಾನು ಹೇಳಿದಂತೆ ಭವಿಷ್ಯ ಕೊನೆಗೂ ನಿಜವಾಯಿತಲ್ಲವೆ' ಎಂದು ಮೆಡೋಸ್ ಟೇಲರ್‌ನಿಗೆ ಹೇಳಿದ. ಹೀಗೆ ಅನೇಕ ಮಹತ್ವದ ಸಂಗತಿಗಳನ್ನು ತನ್ನ ಆತ್ಮಕಥನದಲ್ಲಿ ಟೇಲರ್ ದಾಖಲಿಸಿದ್ದಾನೆ.

ಶ್ರೀನಿವಾಸ ಹಾವನೂರ ಅವರು ಟೇಲರ್‌ನ ದಾಖಲೆಗಳಲ್ಲಿನ ಸಂಶಯಾಸ್ಪದ ಸತ್ಯಕ್ಕೆ ದೂರವಾದ ಸಂಗತಿಗಳನ್ನು ಪ್ರಸ್ತುತ ಲೇಖನದಲ್ಲಿ ವಿಶ್ಲೇಷಿಸಿದ್ದಾರೆ. ವೆಂಕಟಪ್ಪನ ಸಾವು ಅನುಮಾನಾಸ್ಪದವಾಗಿದೆ ಎಂದು ಲೇಖಕರು ದಾಖಲೆಗಳನ್ನು ಆಧರಿಸಿ ಹೇಳುತ್ತಾರೆ. "ಆಕಸ್ಮಿಕ ಮರಣದ ಕುರಿತು ಮೆಡೋಸ್ ಟೇಲರ್‌ನ ಅಭಿಪ್ರಾಯವೂ ಸಮರ್ಥನೀಯವಲ್ಲ ಅವನು ರಾಜನಾಗಿ ಅದರಲ್ಲೂ ಸೇನಾಸಕ್ತನಾಗಿ ಇದ್ದು ಆವರೆಗೂ ಕೈಕೋವಿಯನ್ನು ಬಳಸಿಲಿಲ್ಲವೆಂದರೆ ಯಾರು ತಾನೆ ನಂಬುವರು?... ಯಾರೋ ಒಬ್ಬರು ಅವನನ್ನು ಗುಂಡಿಕ್ಕಿ ಸಾಯಿಸಿದರೆಂದೇ ತಿಳಿಯಬೇಕಾಗುತ್ತದೆ..."[೨೩]

ರಾಜ ವೆಂಕಟಪ್ಪನ ನಂತರ ಆತನ ಪತ್ನಿಗೆ ಸುರಪುರವನ್ನು ಒಪ್ಪಿಸಬೇಕಾಗಿತ್ತು. ಹಾಗಾಗಲಿಲ್ಲ. ಅನಕ್ಷರಸ್ಥರು ಎಂಬ ನೆಪವೊಡ್ಡಿ ನಿರಾಕರಿಸಿರುವುದರ ಬಗೆಗೆ ಲೇಖಕರು ಸಂಶಯ ವ್ಯಕ್ತಪಡಿಸುತ್ತಾರೆ. ಮೆಡೋಸ್ ಟೇಲರ್‌ನಿಗೆ ಆತ್ಮೀಯನಾಗಿದ್ದ ವೆಂಕಟಪ್ಪ ಅನುಮಾನಸ್ಪದವಾಗಿ ಮರಣ ಹೊಂದಿದ್ದು ಒಂದು ಸಂಶಯವಾದರೆ, ರಾಣಿ ಈಶ್ವರಮ್ಮಳ ವರ್ಣನೆಯಲ್ಲಿ ಸಂಶಯಗಳಿರುವುದನ್ನು ಲೇಖಕರು ತಿಳಿಸುತ್ತಾರೆ. ಎಲ್ಲಾ ಘಟನೆಗಳ ಮಧ್ಯೆಯೂ ಸುರಪುರದ ರಾಜಮನೆತನದವರು ತಮ್ಮ ಹಕ್ಕುಗಳಿಗಾಗಿ ೧೯೪೩ ಜುಲೈ

ತಿಂಗಳವರೆಗೂ ಹೋರಾಟ ನಡೆಸಿದರೂ ಫಲಿತಾಂಶ ಅವರ ಪರವಾಗಿ ಬರಲಿಲ್ಲವೆನ್ನುವುದು ದುರ್ವಿಧಿಯ ಪರಮಾವಧಿ ಎಂದು ಹಾವನೂರ ಅವರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

**ಉತ್ತರ ಕನ್ನಡ ಜಿಲ್ಲೆ ನಿರ್ಮಾಣವಾದದ್ದು ಹೇಗೆ:**

ಉತ್ತರ ಕನ್ನಡ ಜಿಲ್ಲೆ ಉಗಮ ವಿಕಾಸದ ದಾರಿಯು? ರೂಪುರೇಷೆಯು? ಈ ಬಿಡಿ ಲೇಖನದಲ್ಲಿ ಪ್ರಸ್ತುತಗೊಂಡಿದೆ. ಈ ದೇಶಕ್ಕೆ ಬಂದ ಬ್ರಿಟಿಷರು ತಮ್ಮ ಆಳ್ವಿಕೆಯ ಕಾಲದಲ್ಲಿ ಸದರಿ ಸಂಪನ್ಮೂಲ ಬಳಕೆ ಹೇಗೆ ಮಾಡಿದರು. ಜೊತೆಗೆ ತಮ್ಮ ಸ್ವಾರ್ಥಕ್ಕಾಗಿ ಹೇಗೆ ಪರಿಸರವನ್ನು ಬಳಸಿಕೊಂಡರು ಎನ್ನುವುದನ್ನು ಶ್ರೀನಿವಾಸ ಹಾವನೂರ ಈ ಲೇಖನದಲ್ಲಿ ಬಿಚ್ಚಿಟ್ಟಿದ್ದಾರೆ.

ಉತ್ತರ ಕನ್ನಡ ಜಿಲ್ಲೆ ನಿರ್ಮಾಣ ಕಾಲದ ಸತ್ಯ ಸಂಗತಿ ಮೇಲೆ ಬೆಳಕು ಚೆಲ್ಲುವ ಪ್ರಯತ್ನವನ್ನು ಹಾವನೂರ ಮಾಡಿದರು. ಟಿಪ್ಪು ಸುಲ್ತಾನ್‌ನಿಂದ ಈ ಪ್ರದೇಶವನ್ನು ಬ್ರಿಟಿಷರು ವಶಪಡಿಸಿಕೊಂಡಾಗ ಈ ಪ್ರದೇಶವನ್ನು 'ಕೆನರ' ಎಂದು ಕರೆಯುತ್ತಿದ್ದರು. ಭೌಗೋಳಿಕವಾಗಿ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡು, ಹತ್ತಿಯ ಅರಳಿಯ ವಹಿವಾಟಿಗಾಗಿ ಈ ಪ್ರದೇಶವನ್ನು ವಿಭಜಿಸಿಕೊಂಡು, ಕಾರವಾರವನ್ನು ವಹಿವಾಟಿನ ಕೇಂದ್ರವನ್ನಾಗಿ ಮಾಡಬೇಕೆನ್ನುವುದು ಬ್ರಿಟೀಷರ ಉದ್ದೇಶವಾಗಿತ್ತು. ಮುಂಬೈ ಪ್ರಾಂತ್ಯದ ವ್ಯಾಪ್ತಿಗೆ ಬರುವ ಜಿಲ್ಲೆಗಳಾದ ವಿಜಾಪುರ, ಬೆಳಗಾವಿ, ಧಾರವಾಡ ಹತ್ತಿ ಬೆಳೆಗೆ ಫಲವತ್ತಾದ ಭೂಮಿಯಾಗಿತ್ತು. ಮ್ಯಾಂಚೆಸ್ಟರ್ ಮತ್ತು ಬರ್ಮಿಂಗ್‌ಹ್ಯಾಮ್ ನಗರದಲ್ಲಿ ಬಟ್ಟೆ ಗಿರಣಿಗಳು ಹೆಚ್ಚಾಗಿ ಇದ್ದವು. ಈ ಕಾರಣಕ್ಕಾಗಿ ಭಾರತ ದೇಶದ ಕಚ್ಚಾ ಹತ್ತಿಯನ್ನು ಆಮದು ಮಾಡಿಕೊಳ್ಳುವ ಉದ್ದೇಶ ಅವರದಾಗಿತ್ತು. ಮುಂಬಯಿ ಮೂಲಕ ಆಮದು ಮಾಡಿಕೊಳ್ಳುವುದು ಅನಿವಾರ್ಯವಾಗಿತ್ತು. ಸದರಿ ಸಾರಿಗೆ ಸಂಪರ್ಕ ವ್ಯವಸ್ಥೆ ಸರಿಯಾಗಿ ಇಲ್ಲದ ಕಾರಣ ಎತ್ತಿನ ಬಂಡಿಯ ಮೂಲಕ ಕುಮಟಾಕ್ಕೆ ಕಳುಹಿಸಿ. ಅಲ್ಲಿಂದ ನಾಡದೋಣಿಯ ಮೂಲಕ ಮುಂಬಯಿಗೆ ರವಾನೆಯಾಗುತ್ತಿತ್ತು.

ಇಂಗ್ಲೆಂಡ್ ಬಟ್ಟೆಯ ಗಿರಣಿಗಳಿಗೆ ಶೇ. ೭೫ರಷ್ಟು ಅಮೇರಿಕದಿಂದ ಹತ್ತಿ ಆಮದು ಮಾಡಿಕೊಳ್ಳುತ್ತಿದ್ದರು. ಆ ಹತ್ತಿಯ ಎಳೆಯು ಉದ್ದವಾಗಿರುತ್ತಿತ್ತು. ಆದರೆ ಭಾರತದ ಹತ್ತಿ ಅರಳಿಯು ಗುಣಮಟ್ಟವು ಕಡಿಮೆಯಾಗಿತ್ತು. ಭಾರತದ ಅರಳಿಯ ಗುಣಮಟ್ಟದಲ್ಲಿ ಸುಧಾರಿಸಿದರೆ ಹೆಚ್ಚು ಲಾಭ ಮಾಡಿಕೊಳ್ಳಬಹುದೆಂದು ತಿಳಿದು, ಅಮೇರಿಕಾದ ಅರ್ಲಿನ್ಸ್ ಮತ್ತು ಇತರ ಪ್ರದೇಶಗಳಿಂದ ಹತ್ತಿಯ ಬೀಜವನ್ನು ತರಿಸಿ ಅಲ್ಲಿಂದ ಕೃಷಿ ತಜ್ಞರನ್ನು ಕರೆಯಿಸಿ, ಹತ್ತಿಯ ಬೆಳೆಯ ಗುಣಮಟ್ಟವನ್ನು ಸುಧಾರಣೆ ಆಗುವಂತೆ ಮಾಡಿದರು. ಹತ್ತಿಯ ಸಾಗಾಟಕ್ಕೆ ಸಂಪರ್ಕವಿರುತ್ತಿರಲಿಲ್ಲ. ಇದರಿಂದ ಅನೇಕ ಸಮಸ್ಯೆಗಳು ಉದ್ಭವಗೊಂಡವು. ಮತ್ತೊಂದು ಮಹತ್ವದ ಸಂಗತಿ ಎಂದರೆ ಮುಂಬಯಿಯ ದಲ್ಲಾಳಿಗಳಿಗೆ ಹೆಚ್ಚು ಕಮಿಶನ್ ಕೊಡುತ್ತಿರಲಿಲ್ಲ. ನೇರವಾಗಿ ತಮ್ಮದೇಯಾದ ಪ್ರತಿನಿಧಿಯನ್ನು ಹೊಂದಿದ್ದರು. ಹಣ, ಸಮಯ ಎರಡನ್ನು ಉಳಿಸಬಹುದೆಂದು ತಿಳಿದು ಪಶ್ಚಿಮ ಕರಾವಳಿಯ ಸೂಕ್ತ ಬಂದರಿನ ಹುಡುಕಾಟಕ್ಕೆ ತೊಡಗಿಕೊಂಡರು.

ಕುಮಟಾ ಮತ್ತು ಹೊನ್ನಾವರ ಬಂದರು ಸೂಕ್ತ ಸ್ಥಳವೆಂದು ಬ್ರಿಟೀಷರಿಗೆ ಕಂಡಿತು. ಅಲ್ಲಿ ದೊಡ್ಡ ದೊಡ್ಡ ಸರಕಿನ ಹಡಗುಗಳಿಗೆ ಲಂಗರು ಹಾಕಲು ಬೇಕಾದ ಅನುಕೂಲವಿರಲಿಲ್ಲ. ನಂತರ ಕ್ರಿ.ಶ. ೧೮೫೦ರಲ್ಲಿ ಎ.ಟಿ.ಟೇಲರ್ ಎಂಬ ಬ್ರಿಟಿಷ್ ತಜ್ಞರು ಸದಾಶಿವಗಡ ಸೂಕ್ತ ಸ್ಥಳವೆಂದು ಹೇಳಿದರು. ಏಕೆಂದರೆ ಮುಂಬಯಿ ಕೊಲಂಬೊ ಮಧ್ಯದ ಪಶ್ಚಿಮ ತೀರವಾಗಿದ್ದರಿಂದ ನೈಸರ್ಗಿಕವಾಗಿ ಉತ್ತಮ ಸ್ಥಳ ಎನ್ನುವ ತೀರ್ಮಾನಕ್ಕೆ ಬಂದರು.

ಕಾಳಿ ನದಿಯು ಸಮುದ್ರ ಸೇರುವ ಸ್ಥಳವಾಗಿತ್ತು. ಈ ಸ್ಥಳವೇ ಯೋಜನೆಯ ಕೇಂದ್ರಬಿಂದು. ಉತ್ತರಕ್ಕೆ ಸದಾಶಿವಗಡ ದಕ್ಷಿಣಕ್ಕೆ ಬೈತಕೊಲು ಕೊವೆ ಇದ್ದು ಹೆಚ್ಚು ಆಳವನ್ನು ಹೊಂದಿತ್ತು. ಮೂರು ಕಡೆಯಿಂದ ಭೂ ಪ್ರದೇಶ ಬಹಳ ವಿಸ್ತಾರವಾಗಿತ್ತು. ಹಡಗುಗಳಿಗೆ ವರ್ಷದ ಯಾವುದೇ ಕಾಲದಲ್ಲಾದರೂ ಲಂಗರು ಹಾಕಲು ಅನುಕೂಲವಿತ್ತು. ಮಹತ್ವದ ಅಂಶವೆಂದರೆ ನೈರುತ್ಯ ದಿಕ್ಕಿನಿಂದ ಮುಂಗಾರಿನಲ್ಲಿ ೨೫೦ ಮೈಲು ದೂರದಷ್ಟು ಗಾಳಿಗೆ ಎದುರಾಗುವುದರಿಂದ ಮುಂಬಯಿಗಿಂತ ಹೆಚ್ಚು ಈ ಪ್ರದೇಶ ಅನುಕೂಲವಾಗಿತ್ತು. ಅಲ್ಲದೆ ಎಡನ್ ಬಂದರಿಗೆ ಇದು ಸಮೀಪವಾಗಿತ್ತು. ಇಲ್ಲಿಂದ ಪಶ್ಚಿಮದ ಕಡೆಗೆ ವ್ಯಾಪಾರ ವಹಿವಾಟಿಗೆ ಕಾರವಾರ ಯೋಗ್ಯವಾದ ಸ್ಥಳವಾಗಿತ್ತು. ೨೦ ಮೈಲು ಒಳಪ್ರದೇಶ ಸುತ್ತಲೂ ಅನುಕೂಲವಿತ್ತು. ಕಾಳಿ ನದಿಯ ಮೂಲಕ ಮುಂದೆ ಹುಬ್ಬಳ್ಳಿ-ಧಾರವಾಡಕ್ಕೆ ರಸ್ತೆಯ ಸಂಪರ್ಕವಿರುವುದರಿಂದ ಸದಾಶಿವಗಡ ಸೂಕ್ತ ಸ್ಥಳವೆಂದು ತಿಳಿಯುತ್ತದೆ.

ಈ ದೇಶದ ಪಶ್ಚಿಮ ಕರಾವಳಿಯಿಂದ ಹತ್ತಿಯನ್ನು ನೇರವಾಗಿ ಆಮದು ಮಾಡಿಕೊಳ್ಳುವುದು ತ್ವರಿತಗತಿಯಲ್ಲಿ ನಡೆಯಬೇಕಾಗಿತ್ತು. ಈ ಕಾರಣದಿಂದ ಸದಾಶಿವಗಡ (ಕಾರವಾರ)ಬಂದರು ಮತ್ತು ಹುಬ್ಬಳ್ಳಿ, ಕುಮಟಾ ರಸ್ತೆಯ ಅಗಲೀಕರಣಕ್ಕೆ ಎ.ಟಿ.ಟೇಲರ್ ಕ್ರಿ.ಶ. ೧೮೫೫ರಲ್ಲಿ ಬಂದರು ಯೋಜನೆ ಪ್ರಸ್ತಾಪವನ್ನು ಮದ್ರಾಸ್ ಗೌವರ್ನರ್ ಮುಂದಿಟ್ಟರು. ಈ ಯೋಜನೆಯು ಆರ್ಥಿಕ ಕೊರತೆಯಿಂದ ಸ್ಥಗಿತಗೊಂಡಿತು. ಆ ಸಮಯಕ್ಕೆ ಮುಂಬಯಿ ಗೌವರ್ನರ್ ಆಸಕ್ತಿ ತೋರಿ. ಸದಾಶಿವಗಡಕ್ಕೆ ಕಮೀಶನರ್ ಅನ್ನು ನಿಯಮಿಸಿ ವಿಲಿಯಂ ಪಾರ್ಕರ್ ಎಂಬ ತಜ್ಞರನ್ನು ಸ್ಥಳದ ಪರಿಶೀಲನೆ ನಿಯೋಜಿಸಿದರು. ಹೀಗೆ ಹಡಗು ಕಟ್ಟೆ ಕಟ್ಟಲು ಶಿಫಾರಸ್ಸು ಮಾಡಿದರು.

ಅಮೇರಿಕವು ಹತ್ತಿಯನ್ನು ಇಂಗ್ಲೆಡ್‌ಗೆ ರಫ್ತು ಮಾಡುತ್ತಿತ್ತು. ಆ ಸಮಯಕ್ಕೆ ಯಾದವೀ ಯುದ್ಧ(civil war) ಪ್ರಾರಂಭವಾಯಿತು. ಈ ಕಾರಣಕ್ಕೆ ಅಮೇರಿಕದಿಂದ ಬರುವ ಹತ್ತಿ ನಿಂತು ಹೋಯಿತು. ಭಾರತ ದೇಶದ ಕಾರ್ಯದರ್ಶಿಯಾಗಿದ್ದ ಚಾರ್ಲ್ಸ್‌ವುಡ್ ಮೇಲೆ ಸದಾಶಿವಗಡದ ಹಡಗು ಕಟ್ಟೆಯ ನಿರ್ಮಾಣ ಬೇಗ ಮಾಡುವಂತೆ ಒತ್ತಡ ಹೇರಿದರು. ಮುಂಬಯಿ ಗವರ್ನರ್ ಜಾರ್ಜ್‌ಕ್ಲಾರ್ಕ್ ಅದೇ ಸಮಯಕ್ಕೆ ಭೇಟಿ ಕೊಟ್ಟರು. ಇಲ್ಲಿ ಮಹತ್ವದ ಪ್ರಶ್ನೆ ಎಂದರೆ ಈ ಬಂದರು ಮಾಡುವುದಕ್ಕೆ ಯಾರು ಹಣ ವೆಚ್ಚ ಮಾಡಬೇಕು. ಯಾರ ಪ್ರಗತಿಗಾಗಿ ಮಾಡಬೇಕು? ಪಶ್ಚಿಮ ಭಾಗದ ಕರಾವಳಿಯ ಕೊಚ್ಚಿನ್ ಮತ್ತು ಮಂಗಳೂರು ಎರಡು ಬಂದರುಗಳು ಪ್ರಗತಿಯಲ್ಲಿದ್ದುದರಿಂದ ಹಣವನ್ನು ವ್ಯಯ ಮಾಡಲು ಹಿಂದೇಟು ಹಾಕಿತು ಬ್ರಿಟೀಷ್ ಸರ್ಕಾರ.

ಮದ್ರಾಸ್ ಗವರ್ನರ್ ಡೆನಿಸನ್‌ನ ಉದ್ಧಟತನದಿಂದ ಹಡಗು ಕಟ್ಟೆಯು ಕಾರ್ಯಗತವಾಗಲಿಲ್ಲ. ಬ್ರಿಟಿಷ್ ಸರ್ಕಾರಕ್ಕೆ ಒತ್ತಡ ಹೇರಲು ತನ್ನದೇಯಾದ ಸಮಸ್ಯೆಗಳಿದ್ದವು. ಸದಾಶಿವಗಡ ಬಂದರಿಗೆ ಸಂಬಂಧಿಸಿದಂತೆ (ಕಾರವಾರ) ಬ್ರಿಟಿಷ್ ಅಧಿಕಾರಿಗಳಿಗೆ ಉತ್ತರಿಸಲು ಕಷ್ಟವಾಗುತ್ತಿತ್ತು. ಈ ಕಾರಣದಿಂದ(ಕಡವಾಡ ಮತ್ತು ಬಾಡ) ಹೆಸರನ್ನು ಕೂಡಿಸಿ ಕಾರವಾರ ಎನ್ನುವ ಹೆಸರು ಚಾಲ್ತಿಗೆ ಬಂತು. ಈ ಬಂದರಿನ ಯೋಜನೆಗೆ ಮುಂಬಯಿಯವರು ಅಡ್ಡಗಾಲು ಹಾಕಲು ತೊಡಗಿಕೊಂಡರು. ಏಕೆಂದರೆ ಈ ಕಾರವಾರ ಚಾಲ್ತಿಗೆ ಬಂದರೆ ಮುಂಬಯಿ ಬಂದರು ಮಹತ್ವ ಕಳೆದುಕೊಳ್ಳುವ ಕಾರಣದಿಂದ ಮುಖಂಡರು ಸ್ಥಗಿತಗೊಳ್ಳುವಂತೆ ನೋಡಿಕೊಂಡರು. ಉತ್ತರ ಕನ್ನಡ ಜಿಲ್ಲೆ ಮದ್ರಾಸ್-ಮುಂಬಯಿ ಆಡಳಿತ ಕೇಂದ್ರದಿಂದ ದೂರ ಉಳಿದು ಎಲ್ಲಾ ಸರ್ಕಾರಿ ಸೌಲಭ್ಯಗಳಿಂದ ಪ್ರಾರಂಭದಿಂದಲೇ ವಂಚಿತವಾಯಿತು.

**ತಾತಾ ವೆಂಕಟ ಕೃಷ್ಣಯ್ಯ ಪಿಂಚಣಿ ವಿಚಾರ**

ಮೈಸೂರು ಪ್ರಾಂತ್ಯದ ತಾತ ವೆಂಕಟ ಕೃಷ್ಣಯ್ಯರ ಚರಿತ್ರೆಯ ವಿಚಾರವನ್ನು ಈ ಲೇಖನ ಪರಿಚಯಿಸುತ್ತದೆ. ಇವರಿಗೆ ಅನೇಕ ಬಿರುದುಗಳಿದ್ದವು. ತಾತಯ್ಯ, ದಯಾಸಾಗರ, ಭೀಷ್ಮಯ್ಯ ಎಂಬ ಉಪಾಧಿಗಳು ಅವರಿಗಿದ್ದವು. ಮರಿಮಲ್ಲಪ್ಪ ಹೈಸ್ಕೂಲ್ ಮುಖ್ಯೋಪಾಧ್ಯಾಯರಾಗಿ ಕಾರ್ಯನಿರ್ವಹಿಸಿದ್ದರು. ಅಲ್ಲದೆ ಸಮಾಜಸೇವೆ ಮತ್ತು ಪತ್ರಿಕೋದ್ಯಮದ ಕೆಲಸ ಮಾಡುತ್ತಿದ್ದರು. ಅವರು ವಿದ್ಯಾದಾಯಿನಿ, ಮೈಸೂರು ದೇಶಭಕ್ತರು, ಸಾಧ್ವಿ ಮುಂತಾದ ಪತ್ರಿಕೆಗಳನ್ನು ಪ್ರಕಟಿಸಿದರು. ಹೀಗಾಗಿ ಇವರನ್ನು ಕನ್ನಡ ಪತ್ರಿಕೋದ್ಯಮ ಪಿತಾಮಹ ಎಂದು ಕರೆಯಲಾಗುತ್ತದೆ. ಇವರು ಸರ್ವಾಧಿಕಾರ ದುರಾಡಳಿತವನ್ನು ಖಂಡಿಸಿ ಪತ್ರಿಕೆಗಳಲ್ಲಿ ಲೇಖನ ಬರೆಯುತ್ತಿದ್ದರು. ಯಾವ ವ್ಯಕ್ತಿಯ ಚಾರಿತ್ರಹರಣ ಮಾಡಿದವರಲ್ಲ. ಈ ಕಾರಣಗಳಿಂದ ಮೈಸೂರು ಮಹಾರಾಜರ ಗೌರವಕ್ಕೆ ಭಾಜನರಾಗಿದ್ದರು. ಆಡಳಿತದ ದೋಷವಿರಲಿ ಇಲ್ಲವೆ ಬ್ರಿಟಿಷ್ ಅಧಿಕಾರಿಗಳ ದೋಷ ಇರಲಿ. ಅಂಥ ದೋಷಗಳು ಕಂಡುಬಂದರೆ ಎತ್ತಿ ಹಿಡಿಯುತ್ತಿದ್ದರು. ಈ ಪರಿಣಾಮ ೧೯೧೮ರಲ್ಲಿ ವೆಂಕಟ ಕೃಷ್ಣಯ್ಯನವರಿಗೆ ಮರಿಮಲ್ಲಪ್ಪ ಹೈಸ್ಕೂಲ್ ಮುಖ್ಯೋಪಾಧ್ಯಾಯರ ಹುದ್ದೆಯಿಂದ ನಿವೃತ್ತಿ ಹೊಂದುವಂತೆ ಬ್ರಿಟಿಷರು ಒತ್ತಡ ತಂತ್ರವನ್ನು ಬಳಸಿದರು. ಹೀಗಾಗಿ ಕೃಷ್ಣರಾಜೇಂದ್ರ ಮಹಾರಾಜರು ಐವತ್ತು ಸಾವಿರ ಮಾಸಿಕ ವೇತನವನ್ನು ಅರಮನೆ ಬೊಕ್ಕಸದಿಂದ ಮಂಜೂರು ಮಾಡಿದರು.

ವೆಂಕಟ ಕೃಷ್ಣಯ್ಯ ಅವರು ಸರ್ಕಾರದ ನೀತಿ ಖಂಡಿಸಿ 'ಸಂಪದಭ್ಯುದಯ' ಪತ್ರಿಕೆಯಲ್ಲಿ ಲೇಖನ ಬರೆದರು. ಇದರ ಪರಿಣಾಮವಾಗಿ ೧೯೨೨ರಲ್ಲಿ ಸರ್ಕಾರ ಪತ್ರಿಕೆಗೆ ತಡೆಯಾಜ್ಞೆ ನೀಡಿತು. ಕೆಲವು ಸಂದರ್ಭದಲ್ಲಿ ಬ್ರಿಟಿಷ್ ಆಡಳಿತದ ಕುರಿತು ಮೆಚ್ಚುಗೆ ವ್ಯಕ್ತಪಡಿಸಿದರು. ನಂತರ ನ್ಯಾಯಾಂಗ ವಿಚಾರಣೆ ನಡೆಸಿ ಪತ್ರಿಕೆಯು ಪ್ರಚೋದನೆ ಹೇಳಿಕೆಗಳನ್ನು ನೀಡದಂತೆ ನಿರ್ಬಂಧ ಹೇರಿದರು. ಆದರೆ ಪುನಃ ಪತ್ರಿಕೆ ಆರಂಭಿಸಲು ಅವಕಾಶ ನೀಡಲಿಲ್ಲ. ಅಲ್ಲದೆ ಅರಮನೆಯ ಕೋಶಾಧಿಕಾರಿಗೆ ವೆಂಕಟ ಕೃಷ್ಣಯ್ಯ ಅವರಿಗೆ ನಿವೃತ್ತಿ ವೇತನ ನೀಡಬಾರದೆಂದು ಸೂಚಿಸಿದರು. "ರೆಸಿಡೆಂಟ್ ಬರ್ಟನ್ ವೆಂಕಟ ಕೃಷ್ಣಯ್ಯರ ಮೇಲಿನ ಪೂರ್ವಗ್ರಹಪಿಡಿತದಿಂದ ೧೯೨೨ರ ಫೆಬ್ರವರಿಯಲ್ಲಿ ೫೦ ರೂ

ನಿವೃತ್ತಿ ವೇತನ ತಡೆಹಿಡಿಯುವಂತೆ ಮಹಾರಾಜರಿಗೆ ಆದೇಶಿಸಿದರು."[೨೪] ಈ ಸಂಗತಿ ತಿಳಿದ ವೆಂಕಟ ಕೃಷ್ಣಯ್ಯನವರು ಉಗ್ರಲೇಖನ ಬರೆದರು. ಇದರ ಪರಿಣಾಮವಾಗಿ ಅವರ ಕುಟುಂಬ ಆರ್ಥಿಕವಾಗಿ ಬಹಳ ತೊಂದರೆಗೆ ಒಳಗಾಯಿತು. ಸ್ನೇಹಿತ ಮಿರ್ಜಾ ಇಸ್ಮಾಯಿಲ್‌ರರಿಗೂ ಪತ್ರ ಬರೆದರು. ಅದಕ್ಕೂ ಸರಿಯಾದ ಉತ್ತರ ಸಿಗಲಿಲ್ಲ. ನಂತರ ಮಹಾರಾಜರಿಗೆ ಪತ್ರ ಬರೆದು, ಅದಕ್ಕೂ ಸ್ಪಷ್ಟ ಉತ್ತರ ದೊರೆಯಲಿಲ್ಲ. ಮತ್ತೊಮ್ಮೆ ನಿವೃತ್ತಿ ವೇತನ ವಿಚಾರವಾಗಿ ವಿವರಿಸಿಕೊಂಡರು. ಅದು ಕೂಡ ಫಲಕಾರಿಯಾಗಲಿಲ್ಲ. ಈ ಆತಂಕಗಳ ನಡುವೆ ಕ್ರಿ.ಶ. ೧೯೩೩/೧೧/ರಂದು ವಿಧಿವಶವಾದರು.

**ಶಿಕ್ಷಣ ತಜ್ಞ ಶ್ರೀ ಎಚ್.ಜೆ. ಬಾಬಾ**

ಎಚ್.ಜೆ. ಭಾಭಾ ಅವರು ಮೈಸೂರು ಸಂಸ್ಥಾನದ ಉನ್ನತ ಶಿಕ್ಷಣ ಅಧಿಕಾರಿಯಾಗಿ (೧೮೭೬–೧೯೦೯) ಕಾರ್ಯನಿರ್ವಹಿಸಿದರು. ಆ ಸಂದರ್ಭದಲ್ಲಿ ಶೇಷಾದ್ರಿ ಅಯ್ಯರ್‌ರವರು ದಿವಾನರಾಗಿ ಕಾರ್ಯನಿರ್ವಹಿಸುತ್ತಿದ್ದರು. ಎಚ್.ಜೆ.ಭಾಭಾ ಅವರು ೧೮ನೇ ವಯಸ್ಸಿನಲ್ಲಿ ಎಂ.ಎ. ಪದವಿ ಪಡೆದು ಉನ್ನತ ವ್ಯಾಸಂಗಕ್ಕೆ ಇಂಗ್ಲೆಂಡಿಗೆ ಹೋಗಿ ಬಂದಿದ್ದರು. ನಂತರ ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ಉಪಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸಿದರು. ನಾಲ್ಕು ವರ್ಷದ ನಂತರ ಶಿಕ್ಷಣ ಇಲಾಖೆಯ ಕಮಿಷನರ್ ಹುದ್ದೆಗೆ ಸಮಾನವಾದ ಹುದ್ದೆಯನ್ನು ಸೃಷ್ಟಿಸಿ ಮುಂಬಡ್ತಿ ನೀಡಿದರು. ಅವರ ಅಧಿಕಾರ ಅವಧಿಯಲ್ಲಿ ನಾಲ್ಕು ದಿವಾನರನ್ನು ಕಂಡರು. ಶೇಷಾದ್ರಿ ಅಯ್ಯರ್(೧೮೮೩–೧೯೦೧ ಪಿ.ಎನ್.ಕೃಷ್ಣಮೂರ್ತಿ ೧೯೦೧–೦೬) ಶಿಕ್ಷಣ ಇಲಾಖೆಯಲ್ಲಿ ಉತ್ತಮ ಯೋಜನೆಗಳನ್ನು ತಂದರು. ೧. ಶಾಲೆಯಲ್ಲಿ ದೈಹಿಕ ಶಿಕ್ಷಣ ಕಡ್ಡಾಯವಾಗಿ ಇರಬೇಕು. ೨. ಅವಕಾಶಗಳಿಂದ ವಂಚಿತರಾದವರಿಗೆ ವಿದ್ಯಾಭ್ಯಾಸ ಕೊಡಬೇಕು. (ಬ್ರಾಹ್ಮಣ ವಿಧವೆಯರಿಗೆ) ಶಿಕ್ಷಣ ಮುಗಿದ ನಂತರ ಉಪಾಧ್ಯಾಯರಾಗಿ ನೇಮಕ ಮಾಡಿಕೊಳ್ಳಬೇಕು. ಅವರು ಶೋಷಣೆಯಿಂದ ಮುಕ್ತರಾಗಲು ಅವಕಾಶ ಕಲ್ಪಿಸಬೇಕು. ಮತ್ತೊಂದು ಮಹತ್ವದ ಅಂಶವೆಂದರೆ ೧೯೦೫ರಲ್ಲಿ ಸಾರ್ವಜನಿಕ ಶಿಕ್ಷಣ ಸಂಸ್ಥಾನ ಮಟ್ಟದಲ್ಲಿ ಸಮ್ಮೇಳನ ನಡೆಯಿತು. ಆ ಸಭೆಯಲ್ಲಿ ಯಾವ ತರಗತಿಯಿಂದ ಇಂಗ್ಲಿಷ್ ಕಲಿಸಬೇಕು ಎನ್ನುವ ಕುರಿತು ಚರ್ಚೆ ನಡೆಯಿತು. ಆಗ ೩ನೇ ವರ್ಗದಿಂದ ಕಲಿಸುವುದು ಇತ್ತು. ಈ ಸಂಗತಿಗೆ ಎಂ.ಕೃಷ್ಣಯ್ಯನವರು ತಿದ್ದುಪಡಿ ಸೂಚಿಸಿದರು. ೨ನೇ ವರ್ಗದಿಂದ ಪಾಸಾದೊಡನೆ ಇಂಗ್ಲಿಷ್ ಕಲಿಸಬೇಕು. ಹೀಗೆ ಮೆಟ್ರಿಕ್ ಪರೀಕ್ಷೆಯಲ್ಲಿ ೧೧ರ ಬದಲು ೧೦ನೇ ತರಗತಿಗೆ ಸೇರಿಸಬಹುದು.

ಮೈಸೂರು ಸಂಸ್ಥಾನದ ಶಿಕ್ಷಣ ಇಲಾಖೆಯಲ್ಲಿ ನೂತನ ಯೋಜನೆಗಳು ಕಾರ್ಯಗತಗೊಂಡವು. ಪ್ರತಿ ವರ್ಷ ಪ್ರಕಟವಾಗುವ ಪುಸ್ತಕಗಳನ್ನು ಪರಿಶೀಲನೆ ಮಾಡಿ ವರದಿ ಸಲ್ಲಿಸುವುದು. ಈ ಸಮೀಕ್ಷೆಯ ಬಗೆಗೆ ಭಾಭಾ ಅವರು ವಿಶೇಷ ಗಮನ ಕೊಟ್ಟರು. "ಕ್ರಿ.ಶ. ೧೮೯೦ರಲ್ಲಿ ಕನ್ನಡ ಸಾಮಾನ್ಯ ಕೃತಿಗಳು ೧೪೦. ಸಂಸ್ಕೃತ ೪೫, ಪತ್ಯ ಪುಸ್ತಕ ೫೩, ಧಾರ್ಮಿಕ ೪೭, ಯಕ್ಷಗಾನ ಪ್ರಸಂಗ ೩೨, ಎರಡು ಅಶ್ಲೀಲ ಕವಿತೆ ಪುಸ್ತಕಗಳಿದ್ದವು. ಭಾಭಾ ಅವರು ಪ್ರಕಾಶಕರಿಗೆ ಈ ರೀತಿ ಹೇಳಿದರು. ಮಕ್ಕಳ ಮನಸ್ಸು

ಕೆಡಿಸುವ ಪುಸ್ತಕಗಳಿಗೆ ಬಹಿಷ್ಕಾರ ಹಾಕುವುದಲ್ಲದೆ ಶಿಕ್ಷೆ ವಿಧಿಸಲಾಗುವುದೆಂದು ಎಚ್ಚರಿಕೆ ನೀಡಿದರು. ಈ ಪತ್ರದ ಪರಿಣಾಮವಾಗಿ ಒಬ್ಬ ಪ್ರಕಾಶಕರು ಮುದ್ರಿಸಿದ ಪುಸ್ತಕಗಳನ್ನು ಭಾಭಾ ಅವರ ಮುಂದಿರಿಸಿ ಕ್ಷಮೆ ಕೇಳಿದರು. ಅಲ್ಲದೆ ಮಾರಾಟವನ್ನು ನಿಲ್ಲಿಸಿದರು."[೨೫] ಈ ಅಂಶವನ್ನು ಗಮನಿಸಿದರೆ ಭಾಭಾ ಅವರು ನೈತಿಕತೆಗೆ ಹೆಚ್ಚು ಪ್ರಾಮುಖ್ಯತೆ ಕೊಡುತ್ತಿದ್ದರು ಎಂಬುದು ಮನವರಿಕೆಯಾಗುತ್ತದೆ.

ಭಾಭಾ ಸಮಕಾಲೀನರಾದ ಶಾಸನ ತಜ್ಞ ಬಿ.ಎಲ್.ರೈಸ್ ಅವರು ಪ್ರಾರಂಭದಿಂದಲೂ ಭಾಭಾ ಜೊತೆಗೆ ಕೆಲಸ ಮಾಡಿದರು. ಡಿ.ವಿ.ಗುಂಡಪ್ಪ 'ತಮ್ಮ ಸಾಹಿತ್ಯೋಪಾಸಕರು' ಕೃತಿಯಲ್ಲಿ ಭಾಭಾ ಕುರಿತು ಮೆಚ್ಚುಗೆ ಮಾತುಗಳನ್ನು ಬರೆದಿದ್ದರು. ಪ್ರೊ.ಬಿ.ವೆಂಕಟ ನಾರಾಯಣಪ್ಪ ಸೆಂಟ್ರಲ್ ಕಾಲೇಜಿನ ಪ್ರಾಧ್ಯಾಪಕರು ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನ ಸಂಸ್ಥಾಪಕ ಕಾರ್ಯದರ್ಶಿಗಳು. ಆ ಸಂದರ್ಭದಲ್ಲಿ ಸಂಘದ (೧೯೩೨) ಮೊದಲ ಪ್ರಕಟಿತ ಕೃತಿಯ ಬಿಡುಗಡೆಗೆ ಬಂದಿದ್ದ ಸಂದರ್ಭವನ್ನು ಸ್ಮರಿಸಿಕೊಂಡರು. ಹೆಚ್.ಜೆ.ಭಾಭಾ ಅವರ ಕಾಲದಲ್ಲಿ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್ ಸಂಸ್ಥೆ ಆರಂಭಗೊಂಡಿತು. ಅದಕ್ಕೆ ಸಹಾಯಾರ್ಥವಾಗಿ ಕ್ರಿ.ಶ.೧೮೯೮ರಲ್ಲಿ ಜೆಮ್‌ಶೇಡ್.ಜಿ. ಜೀಜೀಭಾಯಿ ೩೦ ಲಕ್ಷ ರೂ ಮತ್ತು ಅದಕ್ಕೆ ಬೇಕಾದ ಸ್ಥಳವನ್ನು ಕೊಟ್ಟಿದ್ದರಿಂದ ಉನ್ನತ ಮಟ್ಟದ ವಿಜ್ಞಾನ ಸಂಶೋಧನ ಕೇಂದ್ರ ಬೆಂಗಳೂರಲ್ಲಿ ಬೆಳೆಯಲು ಸಾಧ್ಯವಾಯಿತು.

**'ಕನಕ ಗೋಪುರ ಉಡುಪಿ'**

ಶ್ರೀನಿವಾಸ ಹಾವನೂರ ಅವರು ಉಡುಪಿಯ ಕನಕ ಗೋಪುರ ಚರಿತ್ರೆಯ ಹಿನ್ನೆಲೆ, ಅದರ ಒಡೆತನಕ್ಕೆ ಸಂಬಂಧಿಸಿದಂತೆ ಬರೆದ ಲೇಖನವಿದು. ಪ್ರಸ್ತುತ ಲೇಖನದಲ್ಲಿ ದೇವಾಲಯದ ಸ್ವರೂಪ, ಲಕ್ಷಣ, ವ್ಯಾಪ್ತಿ, ಯಾವ ದಿಕ್ಕಿನಲ್ಲಿ ಯಾವುದು ಇತ್ತು ಎಂಬುದು ಪ್ರಸ್ತಾಪಗೊಂಡಿದೆ. ಕನಕ ಗೋಪುರಕ್ಕೆ ಚಾರಿತ್ರಿಕ ಹಿನ್ನೆಲೆ ಇದೆಯಾ ಅದು ಯಾವಾಗ ನಿರ್ಮಾಣವಾಯಿತು ಮತ್ತು ಅದರ ಎತ್ತರವೂ ಕೂಡ ಈ ಲೇಖನದಲ್ಲಿ ಪ್ರಸ್ತಾಪಗೊಂಡಿದೆ. ಕನಕ ಗೋಪುರಕ್ಕೆ ಪ್ರೊ.ಸುಧಾಕರ ಚರಿತ್ರೆಯ ಹಿನ್ನೆಲೆ ಆಧಾರ ಕೊಡಲು ಪ್ರಯತ್ನಿಸಿದ್ದಾರೆ. ಹಾವನೂರ ತಾರ್ಕಿಕವಾದ ರೀತಿಯಲ್ಲಿ ಅದನ್ನು ಹೇಳಿ ನಿದರ್ಶನದ ಮೂಲಕ ಸಮರ್ಥಿಸಿಕೊಂಡರು. ರಥಬೀದಿಯ ಚರ್ಚೆ ನಿರೂಪಿತಗೊಂಡಿದೆ. ದೇವಾಲಯಕ್ಕೆ ಸೇರಿದ್ದೊ? ಸಾರ್ವಜನಿಕರಿಗೆ ಸೇರಿದ್ದೊ ಅಥವಾ ಬೋರ್ಡಿನದೋ? ಈ ರೀತಿಯ ಪ್ರಶ್ನೆಗೆ ಜಿಲ್ಲಾ ನ್ಯಾಯಾಧೀಶರಾದ ಎಂ.ಮುಂಡ ಬಂಗೇರಾ ತೀರ್ಪು ನೀಡಿದರು. ಅನಂತೇಶ್ವರ ದೇವಾಲಯಕ್ಕೆ ಸೇರಿದ ಬಾಬ್ತು ಹಾಗೆಯೇ ನಾಲ್ಕು ದಿಕ್ಕಿನ ವಿವರ ಕಾಣಬಹುದು. "ಪೂರ್ವಕ್ಕೆ ಕೃಷ್ಣದೇವರ ಮಠ, ಅರಿಕೋಟ್ಲುಗೋಡೆ, ದಕ್ಷಿಣಕ್ಕೆ ಸೋದೆ ಮಠ, ಪುತ್ತಿಗೆ ಮಠ; ಪಶ್ಚಿಮಕ್ಕೆ ಪೇಜಾವರ ಮಠ, ಉತ್ತಾದ್ರಿ ಮಠ, ಫಲಿಮಾರು ಮಠ, ಉತ್ತರಕ್ಕೆ ಕೃಷ್ಣಾಪುರ ಮಠ, ರಸ್ತೆ, ಶಿರೂರು ಮಠ ವಾಲಗ ಮಂಟಪ"[೨೬] ಆದರೆ ಆ ಸಂದರ್ಭದಲ್ಲಿ ಈ ಯಾವುದೇ ಗೋಪುರದ ಪ್ರಸ್ತಾಪವಿರುವುದಿಲ್ಲವೆಂದು ಹೇಳುತ್ತಾರೆ. ಅಂದರೆ ಕ್ರಿ.ಶ. ೧೮೦೪ರ ಕಾಲಘಟ್ಟದಲ್ಲಿ ಕನಕ

ಗೋಪುರ ಇರಲಿಲ್ಲ. ನಂತರ ಅಂದರೆ ೧೯೧೦ರ ಕಾಲಘಟ್ಟದಲ್ಲಿ ನಿರ್ಮಿತಗೊಂಡಿರಬೇಕು ಎಂದು ದಾಖಲೆಗಳನ್ನು ಒದಗಿಸುತ್ತಾರೆ.

ಈ ಮೇಲಿನ ಮಹತ್ವ ಸಂಗತಿಯ ಕುರಿತು ೨೦೦೪ ಅಕ್ಟೋಬರ್ ೭ರ ಸಂಚಿಕೆಯಲ್ಲಿ ಈ ಲೇಖನ ಚರ್ಚೆಗೊಂಡಿದೆ. ಪ್ರೊ.ಸುಧಾಕರ ಅವರು ಕನಕದಾಸ ಗೋಪುರಕ್ಕೆ ಸಂಬಂಧಿಸಿದ ಐತಿಹಾಸಿಕ ಹಿನ್ನೆಲೆ ಸಂಗತಿ ಚರ್ಚೆ ಕಾಣಬಹುದು. "ವ್ಯಾಸರಾಯರು ದಾಸಕೂಟಕ್ಕೆ ಒಬ್ಬ ದಳವಾಯಿ ನೇಮಿಸಿದ್ದರು ಎಂದು ಸುಧಾಕರ ಹೇಳುತ್ತಾರೆ. ಆದರೆ ದಳವಾಯಿ ನೇಮಿಸಲಿಕ್ಕೆ ಇದು ಯುದ್ಧರಂಗ ಅಲ್ಲ; ದಾಸಕೂಟಕ್ಕೆ ಒಬ್ಬ ಉತ್ತರಾಧಿಕಾರಿ ನೇಮಿಸಿದ್ದರು ಅಂದರೆ ಅದರ ಅರ್ಥವೇನು? ದಾಸ ಪರಂಪರೆ ಬಲ್ಲವರಿಗೆ ಅರ್ಥವಿಲ್ಲದ ವಿಚಾರವೆನಿಸುತ್ತದೆ. ಅದಕ್ಕೆ ಪುರಂದರ ಅಡ್ಡಿ ಮಾಡಿದರು ಎನ್ನುವ ಪ್ರಸ್ತಾಪ."[೨] ಈ ರೀತಿಯ ಚರ್ಚೆ ವಾದ-ವಿವಾದ ಮುಖ್ಯವಲ್ಲ ಚರಿತ್ರೆ ಪೂರಕವಾದ ದಾಖಲೆ ನೀಡಿದರೆ ಪತ್ಯದ ಒಂದು ಮುಖ ಇಲ್ಲವಾದರೆ ಆ ಸತ್ಯವೇ ಇತಿಹಾಸವಾಗಬಹುದು. ಅಲ್ಲದೆ ಅಂಕಿತ ಪಲ್ಲಟಗೊಂಡಿರುವುದರ ಕುರಿತು ಪ್ರೊ.ಸುಧಾಕರ ಅವರು ಪ್ರಸ್ತಾಪ ಮಾಡಿದ್ದಾರೆ. ಹಾವನೂರ ಅವರು ಸುಧಾಕರ ಅವರ ಪ್ರಸ್ತಾಪ ಕುರಿತು ಆಕ್ಷೇಪ ಎತ್ತಿದ್ದಾರೆ. ಈ ಸಂಬಂಧ ಪೂರಕ ದಾಖಲೆಗಳನ್ನು ನೀಡಿ ಸುಧಾಕರ ಅವರ ಆಕ್ಷೇಪಕ್ಕೆ ದಾರಿ ಇಲ್ಲದಂತೆ ಸೋದಾಹರಣವಾಗಿ ವಿವರಿಸಿದ್ದಾರೆ.

**ಇತಿಹಾಸ ಸಮ್ಮೇಳನದ ಅಧ್ಯಕ್ಷ ಭಾಷಣ**

'ಕರ್ನಾಟಕದ ಇತಿಹಾಸದ ಹದಿಮೂರನೆಯ ಸಮ್ಮೇಳನ ಹರಪನಹಳ್ಳಿ' ಎಂಬ ಲೇಖನದ ಮೂಲಕ ಅಧ್ಯಕ್ಷೀಯ ಭಾಷಣದ ವಿಚಾರವನ್ನು ಶ್ರೀನಿವಾಸ ಹಾವನೂರ ಅವರು ಪ್ರಸ್ತಾಪಿಸಿದ್ದಾರೆ. ನನಗಿಂತಲೂ ಹೆಚ್ಚು ಸಾಹಿತ್ಯ-ಇತಿಹಾಸಕ್ಕೆ ಸೇವೆ ಮಾಡಿದವರು ಇದ್ದರೂ ನನ್ನನ್ನು ಈ ರೀತಿ ಗೌರವಿಸುವುದು ಸಂತೋಷವೆನಿಸುತ್ತದೆ. ಇತಿಹಾಸ, ಸಂಶೋಧನೆ ಶಾಸನಗಳ ಈ ವಿಷಯಗಳಿಗೆ ಪ್ರಾಮುಖ್ಯತೆ ಕೊಡುವುದು ತುಂಬ ಉಚಿತವೆನಿಸುತ್ತದೆ. ನಂತರ ಕಾವ್ಯ-ಸಾಹಿತ್ಯಕ್ಕೆ ಎರಡನೆಯ ಸ್ಥಾನ ದೊರೆಯುತ್ತದೆ. ಕನಕದಾಸರ ಮೋಹನ ತರಂಗಿಣಿ, ಸಾಮಾಜಿಕ-ರಾಜಕೀಯ ಹೀಗೆ ಅನೇಕ ಅಂಶಗಳು ಇಲ್ಲಿ ಪ್ರಸ್ತಾಪಗೊಂಡಿವೆ. ಜೊಳವಾಳಿ, ವೇಳವಾಳಿ, ತುರುಗೋಳೂ ಎಂಬ ಶೂರರ ಕವಿಗಳ ಪರಂಪರೆ ಇತ್ತು ಎಂಬುದಾಗಿ ಪ್ರಸ್ತಾಪಿಸಿದ್ದಾರೆ.

**'ಮರೆಯಲಾಗದ ಮುಂಬಯಿ ಕರ್ನಾಟಕ'** ಈ ಕೃತಿಯಲ್ಲಿ ಹತ್ತೊಂಬತ್ತು ಬಿಡಿ ಲೇಖನಗಳಿವೆ. ಸಂಶೋಧನಾತ್ಮಕ ನೆಲೆಯಲ್ಲಿ ನಿರೂಪಿತಗೊಂಡಿವೆ. ಚಾರಿತ್ರಿಕ ಹಿನ್ನೆಲೆ, ಸಂಸ್ಥಾನಗಳ ಮತ್ತು ಸ್ಥಳೀಯ ರಾಜರು, ಪಾಳೇಗಾರರು, ಪೇಶ್ವೆಯರು, ಬ್ರಿಟಿಷ್ ಅಧಿಕಾರಿಗಳ ನಿಜಾಮರು, ಮೈಸೂರು ಒಡೆಯರು, ಶಿಕ್ಷಣ ಅಧಿಕಾರಿಗಳು ಹೀಗೆ ವಿಭಿನ್ನವಾದ ಹುದ್ದೆಗಳ ಮತ್ತು ಅಧಿಕಾರಗಳ ಸ್ವರೂಪ ಇಲ್ಲಿ ಅನಾವರಣಗೊಂಡಿದೆ.

**ಮುಂಬಯಿ ಕರ್ನಾಟಕ ಎಂಬ ಪರಿಕಲ್ಪನೆ**

'ಮುಂಬಯಿ ಕರ್ನಾಟಕ ಎಂಬ ಪರಿಕಲ್ಪನೆ' ಎಂಬ ಲೇಖನದಲ್ಲಿ ಶ್ರೀನಿವಾಸ ಹಾವನೂರ ಅವರು 'ಮುಂಬಯಿ ಕರ್ನಾಟಕ' ಎಂಬ ಹೆಸರು ಬಂದ ಕಾರಣಗಳನ್ನು ಅದರ ಹಿನ್ನೆಲೆಯನ್ನು ಮತ್ತು ಆ ಪ್ರಾಂತೀಯ ಹೆಸರು ತೆರೆಮರೆಗೆ ಸರಿದಿದ್ದನ್ನು ಸೂಕ್ಷ್ಮವಾದ ಒಳನೋಟಗಳಿಂದ ವಿಶ್ಲೇಷಿಸಿದ್ದಾರೆ.

೧೮೧೮ರಲ್ಲಿ ಈಗಿನ ಮಹಾರಾಷ್ಟ್ರದಲ್ಲಿ ಪೇಶ್ವೆಯರ ಸೀಮೆಯೆಲ್ಲ ಬ್ರಿಟೀಷರ ಆಳ್ವಿಕೆಗೆ ಒಳಪಟ್ಟಾಗ 'ಮುಂಬಯಿ-ಕರ್ನಾಟಕ' ಎಂದು ಕರೆಯಲ್ಪಡುವ ಕನ್ನಡ ಪ್ರದೇಶಗಳೂ ಬ್ರಿಟೀಷರ ಆಡಳಿತಕ್ಕೆ ಒಳಪಟ್ಟಿತು. "ಅದಕ್ಕೂ ಮುಂಚೆ ಎಂದರೆ ಪೇಶ್ವೆಯರ ಕಾಲದಲ್ಲಿ ವಿಜಯನಗರದ ಲಾಗಾಯ್ತು ಬಳಕೆಯಲ್ಲಿದ್ದ 'ಕರ್ನಾಟಕ' ಎಂದೇ ದಾಖಲೆಗಳಲ್ಲಿ ಕಾಣಿಸಿಕೊಂಡಿದೆಯಾದರೂ ಅದು ಮದ್ರಾಸ್‌ನ ಭಾಗಗಳು ಮತ್ತು ಮೈಸೂರು ಸೇರಿದ ಸಮಗ್ರ ಕರ್ನಾಟಕವೇನೂ ಅಲ್ಲ"[೨೮] ಎಂದು ಹಾವನೂರ ಅವರು ವಿವರಿಸಿದ್ದಾರೆ. ಅಂದರೆ ೧೮೧೮ರ ಕಾಲಘಟ್ಟದಲ್ಲಿ 'ಕರ್ನಾಟಕ' ಎಂಬ ಪ್ರದೇಶಕ್ಕೆ ಸಂಪೂರ್ಣವಾದ ಮಾನ್ಯತೆ ಇರಲಿಲ್ಲ. ಹೆಸರಿಗಷ್ಟೇ ಕರ್ನಾಟಕ ಎಂದಿದ್ದು ಅಖಂಡ ಕರ್ನಾಟಕದ ಪರಿಕಲ್ಪನೆ ಇರಲಿಲ್ಲ ಎಂದು ಲೇಖಕರು ವಿಶ್ಲೇಷಿಸಿದ್ದಾರೆ.

ಮುಂಬಯಿ ಕರ್ನಾಟಕ ಪ್ರಾಂತ್ಯವನ್ನು ಬ್ರಿಟಿಷರು 'ಸದರ್ನ್ ಮರಾಠಾ ಕಂಟ್ರಿ' ಎಂಬುದಾಗಿ ಕರೆಯಲು ಪ್ರಾರಂಭಿಸಿದರು. ಬಹುಕಾಲದವರೆಗೆ ಈ ಹೆಸರೇ ಚಾಲ್ತಿಯಲ್ಲಿದ್ದುದನ್ನು ಲೇಖಕರು ಉಲ್ಲೇಖಿಸಿದ್ದಾರೆ. "೧೮೬೨ರಲ್ಲಿ 'ಕೆನರಾ' ಎಂಬುದು ಇಬ್ಭಾಗವಾಗಿ ಉತ್ತರ ಕನ್ನಡ ಜಿಲ್ಲೆ ಮುಂಬಯಿ ಪ್ರಾಂತ್ಯಕ್ಕೆ ಸೇರಿತು. ಎರಡನೆಯದು, ಈ ಭಾಗದ ಜನರಲ್ಲಿ ಕನ್ನಡ ಜಾಗೃತಿಯುಂಟಾದದ್ದು. ಆರಂಭಕ್ಕೆ ಮರಾಠೀ ಶಾಲೆಗಳೇ ಇದ್ದು ಕನ್ನಡ ಕಲಿಸುವ, ಕಲಿಯುವ ಅಗತ್ಯವಿಲ್ಲ ಎಂಬ ಸ್ಥಿತಿ ಕ್ರಮೇಣ ಹಿಂತೆಗೆಯಿತು..."[೨೯] ಎಂಬುದಾಗಿ ಶ್ರೀನಿವಾಸ ಹಾವನೂರ ಅವರು ಮುಂಬಯಿ ಕರ್ನಾಟಕ ಪ್ರಾಂತ್ಯದ ಚಾರಿತ್ರಿಕ ನೋಟವನ್ನು ಪ್ರಸ್ತುತ ಲೇಖನದಲ್ಲಿ ನೀಡಿದ್ದಾರೆ. ೧೭೯೩ರಲ್ಲಿ ಮುಂಬಯಿ ಸರಕಾರ ಮಹಾರಾಷ್ಟ್ರದ ದಕ್ಷಿಣ ಭಾಗದ ಗ್ಯಾಜೆಟಿಯರ್‌ನ್ನು ಸಿದ್ಧಪಡಿಸಿತು. ಅದನ್ನು ವೆಂಕಟ ರಂಗೋ ಕಟ್ಟಿಯವರು ಕನ್ನಡದಲ್ಲಿ ಅನುವಾದಿಸಿ ೧೮೯೩ರಲ್ಲಿ ಹೊರತಂದರು. ಗ್ಯಾಝೆಟಿಯರು : ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು ಎಂಬ ಶಿರ್ಷಿಕೆಯಡಿಯಲ್ಲಿ ತೋರಿಸಿದ್ದರಿಂದ ಪ್ರತ್ಯೇಕ ಅಸ್ತಿತ್ವ ದೊರಕಿದಂತಾಯಿತು ಎಂದು ಲೇಖಕರು ವಿವರಿಸಿದ್ದಾರೆ.

**ಮುಂಬಯಿ ಕರ್ನಾಟಕದ ಪೂರ್ವೇತಿಹಾಸ**

ಐತಿಹಾಸಿಕ ಒಳನೋಟಗಳತ್ತ ಬೆಳಕು ಚೆಲ್ಲುವ ಶ್ರೀನಿವಾಸ ಹಾವನೂರ ಅವರ ಮರೆಯಲಾಗದ ಮುಂಬಯಿ ಕರ್ನಾಟಕ ಕೃತಿಯ ಎರಡನೇ ಲೇಖನ ಮುಂಬಯಿ ಕರ್ನಾಟಕದ ಪೂರ್ವೇತಿಹಾಸ. ಸಮೃದ್ಧ ಮುಂಬಯಿ ಕರ್ನಾಟಕ ಪ್ರದೇಶ ಮರಾಠರ.

ಹೈದರಾಲಿ ಟಿಪ್ಪು ಸುಲ್ತಾನ್, ಬ್ರಿಟೀಶರ ದಾಳಿಗಳಿಂದಾಗಿ ಹಿಂದುಳಿದ ಪ್ರದೇಶವಾಗಿ ಮಾರ್ಪಟ್ಟಿರುವುದನ್ನು ಲೇಖಕರು ಸೋದಾಹರಣವಾಗಿ ವಿಶ್ಲೇಷಿಸಿದ್ದಾರೆ.

ದಕ್ಷಿಣ ಭಾರತದ ಮುಂಬಯಿ-ಕರ್ನಾಟಕ ಪ್ರದೇಶ ಸೇರಿದಂತೆ ಬಹುಭಾಗವನ್ನು ಮೊಗಲ್ ದೊರೆ ಔರಂಗಜೇಬ್ ವಶಪಡಿಸಿಕೊಂಡು ಆಳ್ವಿಕೆ ನಡೆಸುತ್ತಿದ್ದ. ಕ್ರಿ.ಶ. ೧೭೦೩ರಲ್ಲಿ ಆತನ ಮರಣಾನಂತರ ಮೊಗಲ್ ದೊರೆಗಳ ಪ್ರಭಾವವೇ ಕುಂಠಿತಗೊಂಡಿತು. ಇದನ್ನು ಸರಿಯಾಗಿಯೇ ಬಳಸಿಕೊಂಡ ಮರಾಠ ಪೇಶ್ವೆಯರು ಲೆಕ್ಕವಿಲ್ಲದಷ್ಟು ಬಾರಿ ಮುಂಬಯಿ-ಕರ್ನಾಟಕ ಪ್ರದೇಶದ ಹಳ್ಳಿಗಳಿಗೆ ದಾಳಿ ಮಾಡಿ ಕೊಳ್ಳೆಹೊಡೆದು ಹೋಗುತ್ತಿದ್ದುದನ್ನು ಲೇಖಕರು ದಾಖಲಿಸಿದ್ದಾರೆ.

"ಇದ್ದುದರಲ್ಲಿ ಸವಣೂರ ನವಾಬನಾದ ಅಬ್ದುಲ್ ಮಜೀದಖಾನನ ಪ್ರದೇಶವು ವಿಸ್ತಾರವಾಗಿದ್ದು ದಾಳಿಗಳನ್ನು ಆತನು ಎದರಿಸುವ ಸಾಮರ್ಥ್ಯ ಹೊಂದಿದ್ದನು. ಆದರೆ ೧೭೪೫ರ ಸುಮಾರಿಗೆ ಅವನ ಪಾಲಿನ ಸೀಮೆಗಳನ್ನು, ಮರಾಠರು ಅವನನ್ನು ಯುದ್ಧದಲ್ಲಿ ಸಂಪೂರ್ಣ ಸೋಲಿಸಿ ವಶಪಡಿಸಿಕೊಂಡರು."[೨೦] ನಂತರದಲ್ಲಿ ಮೈಸೂರಿನ ಹೈದರನ ಜೊತೆಗೆ ಪ್ರವೇಶವಾಗಿ ಸವಣೂರು ನವಾಬನೂ ಸೋಲಿಸಲ್ಪಡುತ್ತಾನೆ. ಹೈದರ್ ಮರಾಠರು ಕ್ರಿ.ಶ. ೧೬೬೭, ೧೭೭೩ ಮತ್ತು ೧೭೭೬ರಿಂದ ೧೭೭೮ರ ವರೆಗೆ ನಡೆದ ಯುದ್ಧಗಳಿಂದಾಗಿ ಪದೇ ಪದೇ ಸೋಲು-ಗೆಲುವುಗಳಿಂದಾಗಿ ಪ್ರಾಕೃತಿಕ ಸಂಪತ್ತು ನಾಶವಾಗಿರುವುದನ್ನು ಲೇಖಕರು ವಿವರಿಸಿದ್ದಾರೆ. ಬ್ರಿಟೀಶ್ ಅಧಿಕಾರಿಗಳ ದಾಖಲೆಗಳಲ್ಲಿದ್ದ ಮಾಹಿತಿಗಳನ್ನು ಕ್ರೋಢೀಕರಿಸಿದ ಲೇಖಕರು ಹಂತ ಹಂತವಾಗಿ ನಡೆದ ದಾಳಿ, ಯುದ್ಧ, ಸುಲಿಗೆಗಳಿಂದಾಗಿ ಮುಂಬಯಿ ಕರ್ನಾಟಕ ಪ್ರದೇಶ ಯುದ್ಧರಂಗವಾಗಿ ಪರಿಣಮಿಸಿರುವುದನ್ನು ವಿಶ್ಲೇಷಿಸಿದ್ದಾರೆ. ಪ್ರತಿ ದಾಳಿ-ಸುಲಿಗೆಯ ಹಿಂದೆ ಸಮೃದ್ಧವಾಗಿ ಬೆಳೆಯುತ್ತಿದ್ದ ದವಸ-ಧಾನ್ಯಗಳನ್ನು ಲೂಟಿ ಹೊಡೆಯುವುದೇ ಆಗಿತ್ತು ಎಂಬ ಅಭಿಪ್ರಾಯವನ್ನು ಲೇಖಕರು ವ್ಯಕ್ತಪಡಿಸಿದ್ದಾರೆ. "ಆಕಸ್ಮಿಕ ದಾಳಿ, ದಬ್ಬಾಳಿಕೆಗಳಿಂದ ಹಳ್ಳಿಗರು ತುಸುವಾದರೂ ಪಾರಾಗಲು ಊರ ಹೊರಗೆ ತುಸು ಎತ್ತರದ ಮೇಲೆ ಚಪ್ಪರವನ್ನು ಕಟ್ಟಿಕೊಂಡು ದೂರದಿಂದ ಕಾಯುತ್ತಿರುವ ಉಪಾಯವನ್ನು ಯೋಚಿಸಿದ್ದರು. ಇತ್ತ ದೊಡ್ಡ ಊರುಗಳು ಎಂದರೆ ದೇಸಾಯಿ ಇಲ್ಲವೇ ಸಂಸ್ಥಾನಿಕರಿರುವಲ್ಲಿ ಭದ್ರವಾದ ಕೋಟೆ-ಬುರುಜು-ಗೋಪುರ ಕೊತ್ತಲಗಳಿರುವಂಥದನ್ನು ಕಟ್ಟಲಾಗಿದ್ದಿತು"[೨೧]

ಕ್ರಿ.ಶ. ೧೮೧೭ ಜೂನ್ ತಿಂಗಳಲ್ಲಿ ಬ್ರಿಟಿಶ್ ಮಿಲಿಟರಿ ಅಧಿಕಾರಿಯಾಗಿ ಬಂದ ಥಾಮಸ್ ಮನ್ರೋ ನವಲಗುಂದ, ಗದಗ, ಡಂಬಳ, ಹುಬ್ಬಳ್ಳಿ, ಮಿಶ್ರಕೋಟೆ, ಬೆಳಗಾವಿ, ವಿಜಾಪುರ ಪ್ರದೇಶಗಳಿಗೆ ಭೇಟಿ ನೀಡಿ ದಾಳಿ-ಸುಲಿಗೆಯನ್ನು ತಪ್ಪಿಸುವುದಕ್ಕೋಸ್ಕರ ಬಂದಿರುವುದಾಗಿ ಹೇಳಿ ಎಲ್ಲ ತುಂಡರಸರನ್ನು ಶರಣಾಗತರನ್ನಾಗಿ ಮಾಡುವಲ್ಲಿ ಯಶಸ್ವಿಯಾಗಿರುವುದನ್ನು ಬ್ರಿಟಿಶ್ ಅಧಿಕಾರಿಯ ದಾಖಲೆಯ ಪ್ರಕಾರ ಉಲ್ಲೇಖಿಸಿದ್ದಾರೆ. ಲೇಖಕರಾದ ಶ್ರೀನಿವಾಸ ಹಾವನೂರ ಅವರು ಬ್ರಿಟೀಶ್ ಅಧಿಕಾರಿಗಳು ಜಾರಿಗೆ ತಂದಂಥ ನಿಶ್ಯಸ್ತ್ರೀಕರಣ ಇನಾಮ್ ಕಮೀಶನ್ ಇತ್ಯಾದಿಗಳ ಬಗೆಗೂ ನಂತರದಲ್ಲಿ

ಅಸಮಾಧಾನಗೊಂಡಿದ್ದ ಸಂಸ್ಥಾನಿಕರು ಸೋಲನ್ನನುಭವಿಸಲು ನಮ್ಮವರೇ ಕಾರಣ ಎಂಬುದಾಗಿ ದಾಖಲೆಗಳು ತಿಳಿಸುತ್ತವೆ.

**ಮೊಂಡಗೈ ಭೀಮರಾಯ**

ಬ್ರಿಟಿಷರ ಆಳ್ವಿಕೆಗಿಂತ ಮೊದಲು ಮುಂಬೈಯಲ್ಲಿ ಪೇಶ್ವೆಯರ ಆಳ್ವಿಕೆಯಿತ್ತು. ೧೮ನೇ ಶತಮಾನದ ಕಾಲಘಟ್ಟದಲ್ಲಿ ಬಂಡುಕೋರರು ಮತ್ತು ಪುಂಡರು ಆ ಭಾಗದ ಜನರನ್ನು ಸುಲಿಗೆ ಮಾಡುತ್ತಿದ್ದರು. ದೊಂಡಿಯಾವಾಘ, ಬಾಪುಗೋಖಲೆ, ನಿಜಾಮ, ಟಿಪ್ಪು, ಸುಭೇದಾರರು ಇವರೆಲ್ಲ ಊರಿನ ಮೇಲೆ ದಾಳಿ ಮಾಡುತ್ತಿದ್ದರು. ಬೆಳೆ ಮತ್ತು ಮನೆ ಹಾಳು ಮಾಡುತ್ತಿದ್ದರು. ಈ ಹಿನ್ನೆಲೆಯಲ್ಲಿ ತಮಗೆ ಬಂದ ವಿಪತ್ತಿನಿಂದ ಪಾರಾಗಲಿಕ್ಕೆ ಇಲ್ಲವೆ ತಮ್ಮ ರಕ್ಷಣೆ ಮಾಡಲಿಕ್ಕೆ ಖಡ್ಗ ವಿದ್ಯೆಯಲ್ಲಿ ಪರಿಣಿತಿ ಪಡೆದುಕೊಳ್ಳುತ್ತಿದ್ದರು. ಅಂಥ ಸಂದರ್ಭ ಬಂದಾಗ ಯುದ್ಧ ಮಾಡಿ ವಿಪತ್ತಿನಿಂದ ಪಾರು ಮಾಡಿಕೊಳ್ಳುತ್ತಿದ್ದರು.

ಪೂರ್ವಕಾಲದಲ್ಲಿ ಪುಂಡರ ದಾಳಿಯನ್ನು ಶಮನ ಮಾಡುವುದಕ್ಕಾಗಿ ತರುಣರನ್ನು ಕೂಡಿಸಿ ಅವರಿಗೆ ಖಡ್ಗ ವಿದ್ಯೆಯನ್ನು ಕಲಿಸುತ್ತಿದ್ದರು. ಹೀಗೆ ಪೂರ್ವಸಿದ್ಧತೆ ಮಾಡಿಕೊಂಡಿರುತ್ತಿದ್ದರು. ಬಲಶಾಲಿಯಾದವರು ದಾಳಿ ಮಾಡಲಿಕ್ಕೆ ಬಂದವರಿಗೆ ಕಪ್ಪ-ಕಾಣಿಕೆ ಕೊಟ್ಟು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುತ್ತಿದ್ದರು. ಅಂಥವರಲ್ಲಿ ಸ್ಥಳೀಯ ಪಾಲಿಗೆ ಮೊಂಡಗೈ ಭೀಮರಾಯ. ಇನ್ನೊಬ್ಬ ಭೀಮರಾಯ (ಮುಂಡರಗಿ) ಚರಿತ್ರೆಯ ಹಿನ್ನೆಲೆ ಹೊಂದಿದ್ದರು. ಮೊಂಡಗೈ ಭೀಮರಾಯ ಕುರಿತು ದಂತಕಥೆಯು ಇದೆ. ಮೊಂಡಗೈ ಭೀಮರಾಯನ ಮಗ ರಂಗರಾಯನಿಂದ ಆತನ ತಂದೆಯ ವೈಯಕ್ತಿಕ ವಿಷಯ ಕೇಳಿ ಎಲಿಯಟ್ ತನ್ನ ಡೈರಿಯಲ್ಲಿ ಬರೆದುಕೊಂಡಿದ್ದ ಮಹತ್ವದ ಸಂಗತಿಯನ್ನು ಈ ಲೇಖನದಲ್ಲಿ ಕಾಣಬಹುದು. ರಂಗರಾಯನನ್ನು ಎಲಿಯಟ್ ತನ್ನ ಮುಖ್ಯ ಕಾರಕೂನನೆಂದು ನೇಮಕ ಮಾಡಿಕೊಂಡನು. ತಂದೆಯ ಕಾಲಕ್ಕೆ ಖಡ್ಗವನ್ನು ಹಿಡಿದ ಕೈ ಮಗನ ಕಾಲಕ್ಕೆ ಪೆನ್ನು ಹಿಡಿದುಕೊಂಡ ಸ್ವರೂಪವನ್ನು ಶ್ರೀನಿವಾಸ ಹಾವನೂರ ಅವರು ಸವಿವರವಾಗಿ ಈ ಲೇಖನದಲ್ಲಿ ನೀಡಿದ್ದಾರೆ.

ಭೀಮರಾಯ ಕಲಕೇರಿಯವನು ಅಲ್ಲದೆ ತಂದೆ-ತಾಯಿಯನ್ನು ಕಳೆದುಕೊಂಡಿದ್ದನು. ಈತನು ಪಂಢರಾಪುರಕ್ಕೆ ಹೋಗಿ ವಿಠೋಬನಿಗೆ ಪ್ರದಕ್ಷಿಣೆ ಹಾಕುತ್ತಿದ್ದ ಸಂದರ್ಭದಲ್ಲಿ ಬಾಲಕನ ಮೇಲೆ ಕೃಷ್ಣಪ್ಪ ನಾಯಕ ಮತ್ತು ಹೆಂಡತಿಯ ದೃಷ್ಟಿ ಬಿತ್ತು. ಅವರಿಗೆ ಮಕ್ಕಳಿಲ್ಲದ್ದರಿಂದ ಬಾಲಕನನ್ನು ತಮ್ಮ ಮನೆಗೆ ಕರೆದೊಯ್ದರು. ಹೀಗೆ ಕೆಲವು ವರ್ಷ ಕಳೆದ ನಂತರ ಆತನ ಸಂಬಂಧಿಕ ನರಸಿಂಹಾಚಾರ್ಯನು ಪಂಢರಾಪುರಕ್ಕೆ ಬಂದು ಭೀಮರಾಯನನ್ನು ನಮ್ಮ ಊರಿಗೆ ಕಳುಹಿಸುವಂತೆ ವಿನಂತಿಸಿಕೊಂಡನು. ಇದಕ್ಕೆ ಕೃಷ್ಣಪ್ಪನಾಯಕ ಒಪ್ಪಿಗೆ ನೀಡಿದನು.

ಕ್ರಿ.ಶ. ೧೭೮೦ರ ಕಾಲಘಟ್ಟದ ಅವಧಿಯಲ್ಲಿ ಟಿಪ್ಪುಸುಲ್ತಾನನು ಬಳ್ಳಾರಿಯ ಭಾಗವನ್ನು ವಶಪಡಿಸಿಕೊಂಡನು. ನಂತರ ಹರಪನಹಳ್ಳಿ ಪಾಳೇಗಾರರನ್ನು ಉಚ್ಚಾಟನೆ ಮಾಡಿ ನಂತರ ಮರಾಠರ ಆಳ್ವಿಕೆಯ ಪ್ರದೇಶವನ್ನು ದಾಳಿ ಮಾಡಿದ ಸಂದರ್ಭದಲ್ಲಿ ಪಾಳೇಗಾರರು ತಾವು ಕಳೆದುಕೊಂಡ ಪ್ರದೇಶವನ್ನು ಮರಳಿ ಪಡೆಯುವಾಗ ಡಂಬಳದ ದೇಸಾಯಿ ಮತ್ತು

ಇತರರ ಸಹಾಯ ಪಡೆದುಕೊಳ್ಳುವ ಸುದ್ದಿ ಭೀಮರಾಯ ತಿಳಿದು, ಈ ಪರಿಸ್ಥಿತಿಯ ಲಾಭವನ್ನು ಪಡೆದುಕೊಳ್ಳುತ್ತಾನೆ. ಅಲ್ಲಿಯ ಸುತ್ತ ಇರುವ ತರುಣರನ್ನು ಕೂಡಿಸಿ ಅವರಿಗೆ ತರಬೇತಿ ಕೊಟ್ಟು ತುಂಗಭದ್ರೆಯನ್ನು ದಾಟಿ ಕೋಟೆಯನ್ನು ಸೇರಿಕೊಂಡು ಹರಪನಹಳ್ಳಿ ರಾಜನೆಂದು ಘೋಷಿಸಿಬಿಟ್ಟನು. ಈ ಸುದ್ದಿಯನ್ನು ತಿಳಿದ ಟಿಪ್ಪು ತನ್ನ ಸೈನ್ಯದೊಂದಿಗೆ ಬಂದು ಮೂರು ದಿನ ಕದನ ಮಾಡಿ ಕೋಟೆಯನ್ನು ವಶಪಡಿಸಿಕೊಂಡನು. ಅಲ್ಲದೆ ಸೈನಿಕರನ್ನು ಸೆರೆಹಿಡಿದು ಮತ್ತು ಭೀಮರಾಯನನ್ನು ಬಂಧಿಸಿ ಮುಸಲ್ಮಾನ ಸರದಾರನ ಅಪ್ಪಣೆ ಪಡೆದು ಕೈ ಕಡಿಯುವ ಕಾರ್ಯಕ್ಕೆ ಮುಂದಾದನು. ಈ ಸಂಗತಿಯನ್ನು ಗಮನಿಸಿದ ಭೀಮರಾಯನು ನನ್ನ ಕೈ ಬೇಕಾದರೆ ಕಡಿರಿ, ಆದರೆ ಆ ಸೈನಿಕರನ್ನು ಬಿಟ್ಟುಬಿಡಿ ಎಂದು ವಿನಂತಿಸಿಕೊಂಡನು. ನಂತರ ಕೈ ಕಡಿದರೆ ಯಾವುದನ್ನು ಕಡಿಯಬೇಕು ಎನ್ನುವ ಪ್ರಶ್ನೆ ಬಂದಾಗ ಎಡಗೈಯೋ ಬಲಗೈಯೋ ಎಂದಾಗ ಬಲಗೈ ಕಡಿಯುವ ಬದಲು ಎಡಗೈ ಕಡಿದರೆ ಜೀವನ ಮಾಡಿಕೊಂಡು ಬದುಕುವೆ ಎಂದು ಆತಂಕವನ್ನು ತೋಡಿಕೊಂಡನು. ಆದರೆ ತದ್ವಿರುದ್ಧವಾಗಿ ಸರದಾರ ಬಲಗೈಯನ್ನೇ ತುಂಡರಿಸಿದ. ಹೀಗಾಗಿ ಆತನಿಗೆ ಮೊಂಡಗೈ ಭೀಮರಾಯ ಎಂಬ ಹೆಸರು ಬರಲು ಕಾರಣವಾಯಿತು.

ಭೀಮರಾಯನ ಊರಾದ ಕಲಕೇರಿ ಪ್ರದೇಶ ನಿಜಾಮನ ಆಳ್ವಿಕೆಗೆ ಒಳಪಟ್ಟಿತ್ತು. ಸೈನ್ಯದ ಪ್ರತಿನಿತ್ಯದ ವೆಚ್ಚಕ್ಕಾಗಿ ಹಣಬೇಕಾಗಿತ್ತು. ಆ ಊರಿನ ಕುರುಬ ಸಮುದಾಯದವರ ಹೊಲದಲ್ಲಿ ಕೊಪ್ಪರಿಕೆ ಹಣ ಇರುವ ಕುರಿತು ಸುದ್ದಿ ತಿಳಿದಿತ್ತು. ಹೊಲವನ್ನು ಬಗೆಸಿದನು. ಅಲ್ಲಿ ಹಣ ಸಿಕ್ಕಿತು. ಅದನ್ನು ಹೊಲದ ಮಾಲೀಕನಿಗೆ ಒಪ್ಪಿಸಿ, ಇದರಲ್ಲಿ ಅರ್ಧಭಾಗ ನನಗೆ ಕೊಡು ಉಳಿದರ್ಧಭಾಗ ನೀನು ತೆಗೆದುಕೊ ಎಂದು ಹೇಳುತ್ತಾನೆ. ಇದಕ್ಕೆ ಆಕ್ಷೇಪಣೆ ಮಾಡುತ್ತಾನೆ. "ಎಷ್ಟೆಂದರೂ ಆ ಹಣ ನಿನ್ನದು; ಕೊಡುವುದಾದರೆ ಅರ್ಧಭಾಗ ಕೊಡು ಇಲ್ಲವಾದರೆ ಬೇಡ ಎಂದು ಹೇಳುತ್ತಾನೆ."[೨] ಈ ಮಾತಿಗೆ ಪ್ರತಿಯಾಗಿ ಅರ್ಧ ಹಣವನ್ನು ಕೊಡಲು ಒಪ್ಪಿಕೊಳ್ಳುತ್ತಾನೆ. ನಂತರದ ದಿನಗಳಲ್ಲಿ ಕೊಪ್ಪಳದ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳುತ್ತಾನೆ. ಹೀಗಾಗಿ ಮುಂಡರಗಿ ಅದರ ವ್ಯಾಪ್ತಿಗೆ ಸೇರುತ್ತದೆ. ಅದು ನಿಜಾಮನ ಆಳ್ವಿಕೆ ಒಳಪಟ್ಟಿದ್ದರಿಂದ ಪ್ರತಿ ವರ್ಷ ೧೦ ಸಾವಿರ ಕಾಣಿಕೆ ನೀಡುತ್ತಿದ್ದನು. ಹೀಗೆ ಏಳೆಂಟು ವರ್ಷಗಳ ಕಾಲ ಆಳ್ವಿಕೆ ಮಾಡಿದನು. ಪಕ್ಕದಲ್ಲಿ ಡಂಬಳ ದೇಸಾಯಿ ಪೇಶ್ವೆಗೆ ಪೆನ್ಶನ್ ಕೊಟ್ಟು ಹೆಚ್ಚಿನ ಆದಾಯವನ್ನು ತಾನೇ ಪಡೆಯಬೇಕೆಂದಿದ್ದನು. ಇದನ್ನು ಡಂಬಳ ದೇಸಾಯಿ ವಿರೋಧಿಸಿ ಭೀಮರಾಯ ಸಹಾಯ ಪಡೆದು ಸ್ವತಂತ್ರನೆಂದು ಘೋಷಿಸಿಕೊಂಡನು. ಇದನ್ನು ಗಮನಿಸಿದ ವೆಲ್ಲೆಸ್ಲಿಯು ಮರಾಠರ ಪರವಾಗಿ ಬಂದು ಡಂಬಳ ದೇಸಾಯಿ ಹತ್ಯೆ ಮಾಡಿದನು.

ಈ ಪ್ರದೇಶಗಳನ್ನು ಡಂಬಳ, ನವಲಗುಂದ, ಮುಂಡರಗಿ ನಂತರದ ದಿನಗಳಲ್ಲಿ ಭಾಭಾ ಸಾಹೇಬರನು ೧೩ ವರ್ಷಗಳ ಕಾಲ ಆಳ್ವಿಕೆ ಮಾಡಿದನು. ಭಾಭಾ ಸಾಹೇಬ ಮತ್ತು ಭೀಮರಾಯನಿಗೂ ಬಹಳ ದಿನಗಳ ಕಾಲ ವೈರತ್ವ ಸಾಧಿಸಿದ್ದರು. ನಂತರದ ದಿನಗಳಲ್ಲಿ ನಾಗನಗೌಡನು ತನ್ನ ರಾಜ್ಯ ಮರಳಿ ಪಡೆಯುವ ನಿಟ್ಟಿನಲ್ಲಿ ಹೋರಾಟ

ಮಾಡಿದನು. ನಾಗನಗೌಡ ಪಠಾಣರ ಸಹಾಯ ಪಡೆದು ಭೀಮರಾಯನ ಮಗನಾದ ರಂಗನನ್ನು ಅಪಹರಿಸಿ ದೊಡ್ಡ ಮೊತ್ತದ ಹಣವನ್ನು ಕೊಡುವಂತೆ ಬೇಡಿಕೆ ಇಟ್ಟನು. ಭೀಮರಾಯ ಒಬ್ಬನೇ ಮಗನು ಇರುವ ಕಾರಣ ಅವರು ನೀರಿಕ್ಷಿಸಿದಷ್ಟು ಹಣ ಕೊಟ್ಟು ಮಗನನ್ನು ಬಿಡಿಸಿಕೊಂಡನು. ಕೊಪ್ಪಳಕ್ಕೆ ನೀವು ಹೋಗಿರಿ ಎಂದು ಹೇಳಿ ನಂತರ ಅವರನ್ನು ಬೆನ್ನಟ್ಟಿ ಹೋಗಿ ಡಂಬಳದ ಹತ್ತಿರ ಹತ್ಯೆ ಮಾಡಿದನು. ಕೊನೆಗೆ ಮೋಸದಿಂದ ಭೀಮರಾಯನ ಅಂತ್ಯವಾಗಿದ್ದು ದುರಂತವೇ ಸರಿ. "ತರುಣ ವಯಸ್ಸಿನಲ್ಲಿ ಅರ್ಧ ಬಲಗೈಯನ್ನು ಕಳೆದುಕೊಂಡ ಭೀಮರಾಯನು ಅದೆಂತು ಯುದ್ಧ ವೀರನಾಗಿ ಸಾವಿರಾರು ಸೈನಿಕರ ಅಧಿಪತಿಯಾಗಿ ಮೆರೆದನೋ! ಅದಕ್ಕೆ ಅವನ ಮನದಾಳದ ಮಹತ್ವಾಕಾಂಕ್ಷೆ, ಸಾಹಸ ಹಾಗೂ ಛಲಗಾರಿಕೆಗಳೇ ಕಾರಣ"[೩೩] ಸ್ವಾತಂತ್ರ್ಯಪೂರ್ವದಿಂದ ಹಿಡಿದು ಸ್ವಾತಂತ್ರ್ಯ ಪಡೆಯುವವರೆಗೆ ಮೊಂಡಗೈ ಭೀಮರಾಯನಂಥ ನೂರಾರು ಯುವಕರು ತಮ್ಮ ಸಾಹಸ, ಶೌರ್ಯ ಮೆರೆದು ಅಮರರಾಗಿದ್ದಾರೆ. ಕೆಲವೇ ಕೆಲವು ಸಾಹಸಿಗರನ್ನು ನಮ್ಮ ಪಠ್ಯಪುಸ್ತಕಗಳಲ್ಲಿ ಸೇರಿಸಿರುವುದನ್ನು ಬಿಟ್ಟರೆ ಭೀಮರಾಯರಂಥವರನ್ನು ನಾವು ಮರೆತಿರುವುದು ವಿಪರ್ಯಾಸದ ಸಂಗತಿ. ಭೀಮರಾಯರಂಥವರ ಜೀವನವೇ ಯುವ ಪೀಳಿಗೆಗೆ ಆದರ್ಶವಾಗಬೇಕು. ಶ್ರೀನಿವಾಸ ಹಾವನೂರ ಅವರು ಭೀಮರಾಯನ ಶೌರ್ಯ, ಔದಾರ್ಯ, ಸಾಹಸವನ್ನು ಸೋದಾಹರಣವಾಗಿ ಈ ಲೇಖನದಲ್ಲಿ ನೀಡಿದ್ದಾರೆ.

**ತಳ್ಳಿ ನ್ಯಾಯಾ ಸಾಧನೆಯ ವಿಚಿತ್ರ ಪದ್ಧತಿ**

ಉತ್ತರ ಕರ್ನಾಟಕದ ಹಳ್ಳಿಗಳಲ್ಲಿ ಪ್ರಾಚೀನ ಪೂರ್ವಕಾಲದಲ್ಲಿ ತಳ್ಳಿಕೋರರ ವರ್ಗವೊಂದಿತ್ತು. ನಡುಗನ್ನಡದ ಕನ್ನಡ ಕಾವ್ಯಗಳಲ್ಲೂ ಇದರ ಉಲ್ಲೇಖವಿದೆ. ಈ ಕುರಿತು ಕಾಲಜ್ಞಾನದಲ್ಲಿ 'ಜಗದೊಳ್ ಒಳ್ಳೆಯತನವಿಲ್ಲವೆಂಬುದು ಮಾತು ಉಲ್ಲೇಖಗೊಂಡಿದೆ. ಹಾಗೇ ಸರ್ವಜ್ಞನ ಮಾತಿನಲ್ಲೂ ಪ್ರಸ್ತಾಪಗೊಂಡಿದೆ. 'ಎಲ್ಲಿ ನೋಡಿದೊಡಲ್ಲಿ ಟೋಳು ಜಾಲಿಯ ಮುಳು ಬಡಗಲ ತಳ್ಳಿ ಬೇದಂಡ ಸರ್ವಜ್ಞ' ಎಂಬುದು ಅಭಿವ್ಯಕ್ತಗೊಂಡಿದೆ. ಹಾಗೆಯೇ ಈ ಕುರಿತು ೧೮ನೇ ಶತಮಾನದ 'ತುರಂಗ ಭಾರತ'ದ ಕಾವ್ಯದಲ್ಲಿ ತಳ್ಳಿ ಕೋರರ ಕುರಿತು ಉಲ್ಲೇಖಗೊಂಡಿದೆ. ಅಲ್ಲದೆ ದಾಸರ ಹಾಡುಗಳಲ್ಲಿ 'ತಳ್ಳಿ' ಪದ ಪ್ರಸ್ತಾಪಗೊಂಡಿದೆ. ಇನ್ನೊಂದು ಮಹತ್ವದ ಅಂಶವನ್ನು ದಾಖಲೆ ಚರಿತ್ರೆ ಪುರಾವೆಯಾಗಿ ನಿಲ್ಲುತ್ತದೆ. ಬ್ರಿಟಿಷ್ ಅಧಿಕಾರಿಯಾದ ವಾಲ್ಟರ್ ಎಲಿಯಟ್ ಸ್ಮತಿ ಗ್ರಂಥದಲ್ಲಿ ಉಲ್ಲೇಖಗೊಂಡಿದೆ. ಅಲ್ಲದೆ ಒಂದಷ್ಟು ವಿವರಗಳು ಸಿಗುತ್ತವೆ. ಆದರೆ ಕಲೆಕ್ಟರ್ ಥ್ಯಾಕರೆ ಸಹಾಯಕ್ಕಾಗಿ ಧಾರವಾಡಕ್ಕೆ (೧೮೨೨) ಬಂದರು. ಹಾಗೆಯೇ ಕಿತ್ತೂರಿನ ಯುದ್ಧದಲ್ಲಿ ಈತನು ಪಾಲ್ಗೊಂಡಿದ್ದನು.

ಕರ್ನಾಟಕದ ಇತಿಹಾಸವನ್ನು ಶಿಲಾಶಾಸನ, ಕೃತಿಗಳನ್ನು ಆಧರಿಸಿ ಅಭ್ಯಾಸ ಮಾಡಿ ಚರಿತ್ರೆ ರೂಪಿಸುತ್ತಾನೆ. ಆದರೆ ವಾಲ್ಟರ್ ಎಲಿಯಟ್ Reminiseesನ ಕಣ್ಣಾರೆ ಕಂಡ ಚಿತ್ರಣವನ್ನು ವ್ಯಕ್ತಿಗಳಲ್ಲಿ ಸ್ವಾಮಿನಿಷ್ಠೆ, ಧಾರ್ಮಿಕ ಶ್ರದ್ಧೆ ಮತ್ತು ಪ್ರಾಮಾಣಿಕೆಯ ಬಗ್ಗೆ ತಳ್ಳಿಕೋರರ ಕುರಿತು ವಿವರಗಳು ಲಭ್ಯವಾಗುತ್ತವೆ.

**ನ್ಯಾಯಾ ಕುರಿತು**

ಸುಮಾರು ೩೦೦ ವರ್ಷಗಳ ಹಿಂದೆ ಉತ್ತರ ಕರ್ನಾಟಕದಲ್ಲಿದ್ದ 'ತಳ್ಳಿಕೋರರು' ಎಂಬ ಕಷ್ಟಗಳನ್ನು ಕೊಡುವ ವಿಚಿತ್ರ ವರ್ಗವೊಂದು ಪ್ರಚಲಿತದಲ್ಲಿತ್ತು ಎಂಬುದನ್ನು ಶ್ರೀನಿವಾಸ ಹಾವನೂರ ಅವರು ಲೇಖನದ ಮೂಲಕ ನೆನಪಿಸಿದ್ದಾರೆ; ಪರಿಚಯಿಸಿದ್ದಾರೆ. ಬ್ರಿಟೀಶ್ ಅಧಿಕಾರಿ ಸ್ಮೃತಿಗ್ರಂಥದಲ್ಲಿ ತಳ್ಳಿಕೋರರ ಬಗೆಗೆ ದಾಖಲು ಮಾಡಿರುವುದನ್ನು ಲೇಖಕರು ಉಲ್ಲೇಖಿಸಿದ್ದಾರೆ. ಸಮಾಜ ತನ್ನನ್ನು ಹೀನಾಯವಾಗಿ ಕಂಡಾಗ, ಸದಾ ಕಿರುಕುಳ ನೀಡಿದಾಗ, ಅನ್ಯಾಯವನ್ನು ಸರಿಪಡಿಸದೇ ಹೋದಾಗ ಅನ್ಯಾಯಕ್ಕೊಳಗಾದ ವ್ಯಕ್ತಿ ಸಮಾಜದ ವ್ಯವಸ್ಥೆಯ ವಿರುದ್ಧ ರೋಷಾವೇಶವನ್ನು ವ್ಯಕ್ತಪಡಿಸುತ್ತಾ ತನಗೆ ತೋಚಿದಂತೆ ಜೀವನ ಮಾಡುವವನೇ ತಳ್ಳಿಕೋರನಾಗುತ್ತಿದ್ದ ಬಗೆಗೆ ಲೇಖಕರು ವಿಶಿಷ್ಟವಾಗಿ ಪರಿಚಯಿಸಿದ್ದಾರೆ.

ಜನಸಾಮಾನ್ಯರು ಈ ತಳ್ಳಿಕೋರರ ವರ್ಗಕ್ಕೆ ಹೆದರುತ್ತಿದ್ದರು. ಕಾರಣ ತಳ್ಳಿಕೋರರು ಮುನಿಸಿಕೊಂಡರೆ ಸಾಕು. ನಿರಂತರ ಕಷ್ಟಗಳು ಎದುರಾಗುತ್ತವೆ ಎಂಬುದನ್ನು ಮನಗಂಡು ವಿರೋಧ ವ್ಯಕ್ತಪಡಿಸುತ್ತಿರಲಿಲ್ಲ. "ಕೆಲವು ತಳ್ಳಿಕೋರರು ನೆರೆಯೂರಿನ ಜಮೀನುದಾರರ ಆಶ್ರಯವನ್ನು ಕೋರುತ್ತಿದ್ದರು. ಆ ಶ್ರೀಮಂತರು ತಮ್ಮ ಯಾವುದೇ ಸ್ವಾರ್ಥದ, ಮೋಸದ ಕಾರ್ಯಗಳಿಗೆ ಅವರನ್ನು ಬಳಸಿಕೊಳ್ಳುತ್ತಿದ್ದರು."[೨೪] ಇಂದಿನ ಸಮಾಜದಲ್ಲಿರುವ 'ಗ್ಯಾಂಗ್' ಅಂಡರ್‌ವರ್ಲ್ಡ್ ಎಂದು ಕರೆಯುವ ವರ್ಗದಂತೆಯೇ ಮೇಲ್ನೋಟಕ್ಕೆ ತಳ್ಳಿಕೋರರು ಕಂಡುಬರುತ್ತಾರೆ ಎಂದು ಹೇಳಬಹುದು. ಪ್ರಸ್ತುತ ಲೇಖನದಲ್ಲಿ 'ತಳ್ಳಿಕೋರರ' ವರ್ಗಕ್ಕೆ ಸೇರಿದ ಕೆಂಚ, ಬಸ್ಯಾ ಮುಂತಾದ ತಳ್ಳಿಕೋರರ ಚಲನವಲನಗಳ ಬಗ್ಗೆ ವಿವರಣೆಗಳಿವೆ.

**ಕಿತ್ತೂರಿನ ಚರಿತ್ರೆಯಲ್ಲಿ ಎಲೆಮರೆಯಾದ ಮಹತ್ವದ ಸಂಗತಿ**

ಶಿವಲಿಂಗರುದ್ರನ ಮಡದಿ ಈರಮ್ಮ ಸಂಸ್ಥಾನ ಒಡತಿಯ ಸ್ಥಾನ ಪಡೆದಿದ್ದರು. ಚರಿತ್ರೆಯಲ್ಲಿ ಸಮಾಜಮುಖಿಯಾಗಿರುವ ವ್ಯಕ್ತಿಯ(ಈರಮ್ಮ) ಸ್ವರೂಪ ಗೌಣಗೊಂಡಿದೆ. ಸಂಸ್ಥಾನದ ಎಲೆಮರೆಕಾಯಿಯಂತೆ ತೆರೆಮರೆಯಲ್ಲಿ ತನ್ನ ಬದುಕನ್ನು ಕಳೆದಳು. ತನ್ನ ಕೌಟುಂಬಿಕ ಸ್ಥಾನಮಾನಗಳಿಂದ ವಂಚಿತಗೊಂಡ ಬದುಕು ಆಕೆಯದಾಗಿದ್ದಿತು. ಶ್ರೀನಿವಾಸ ಹಾವನೂರ ಅವರ ಬಿಡಿ ಬರಹ ಮನುಕುಲದ ಮೇಲೆ ಪರಿಣಾಮ ಬೀರುವಂತೆ ಚಿತ್ರಿತಗೊಂಡಿದೆ.

ಕಿತ್ತೂರಿನ ಸಂಸ್ಥಾನದಲ್ಲಿ ಘಟಿಸಿ ಹೋಗಿರುವ ಇಂತಹ ಸಂಗತಿಯು ಈ ಲೇಖನದ ಮೂಲಕ ಅವಕಾಶಗಳಿಂದ ವಂಚಿತಳಾದ ವೀರಮ್ಮನನ್ನು ಹಾವನೂರ ಪರಿಚಯಿಸಿದರು. ಈ ಪ್ರದೇಶ ಟಿಪ್ಪುವಿನಿಂದ ಪಡೆದುಕೊಂಡು, ಬ್ರಿಟಿಷರು ಮತ್ತು ಮರಾಠರು ಹಂಚಿಕೊಂಡಿದ್ದರು. ಸದರಿ ಸಂಸ್ಥಾನ ಮರಾಠರ ಪಾಲಿನದಾಗಿತ್ತು. ಇದನ್ನು ಬ್ರಿಟಿಷರು ಪಡೆದುಕೊಳ್ಳಬೇಕೆಂಬ ಹಂಬಲ ಅವರದಾಗಿತ್ತು. ಈ ಸಂಸ್ಥಾನ ಹೆಚ್ಚು ಸಂಪನ್ಮೂಲವನ್ನು ಹೊಂದಿದ ಕಾರಣದಿಂದ ವೆಲ್ಲೆಸ್ಲಿಯು ಕಿತ್ತೂರಿನ ದೊರೆಯ ಸಹಾಯ ಕೇಳಿದಾಗ ಆಗ ಸಹಕರಿಸಲಿಲ್ಲ ಎನ್ನುವ

ಕಾರಣಕ್ಕೆ ಅವರ ಮೇಲೆ ದ್ವೇಷವಿತ್ತು. ಮುಂಬಯಿ ಕರ್ನಾಟಕ ಬಹುದೊಡ್ಡ ಕನ್ನಡಿಗರ ಏಕೈಕ ರಾಜ್ಯವಾಗಿತ್ತು.

ಪ್ರತಿ ವರ್ಷವು ಮರಾಠರಿಗೆ ಕಪ್ಪವನ್ನು ಕೊಡಬೇಕಾಗಿತ್ತು. ಈ ಕಾರಣ ಮರಾಠರು ಬಹಳ ಕಿರುಕುಳ ಕೊಡುತ್ತಿದ್ದರು. ಒಂದು ಸಲ ಕಿತ್ತೂರಿನ ದೊರೆಯನ್ನು ಪುಣೆಯ ಗೃಹ ಬಂಧನದಲ್ಲಿ ಇಟ್ಟಿದ್ದರು. ಕಾಯಿಲೆಗೆ ಒಳಗಾದ ಎನ್ನುವ ಕಾರಣಕ್ಕೆ ಮರಳಿ ಕಿತ್ತೂರಿಗೆ ಕಳುಹಿಸಿದರು. ಕ್ರಿ.ಶ.೧೮೨೨ರಲ್ಲಿ ಕಿತ್ತೂರು ಸಂಸ್ಥಾನದವರನ್ನು ಬ್ರಿಟಿಷರು ತೆರೆದಾಳ ಮೇಲೆ ದಾಳಿ ಮಾಡಿದಾಗ ಕಿತ್ತೂರಿನ ಸಹಾಯ ಕೇಳಿದರು. ಆ ಸಂದರ್ಭದಲ್ಲಿ ಅವರು ಸಹಕರಿಸಲಿಲ್ಲ ಎನ್ನುವ ಕಾರಣ ಬ್ರಿಟಿಷರ ವಕ್ರದೃಷ್ಟಿ ಈ ಸಂಸ್ಥಾನದ ಮೇಲೆ ಬಿತ್ತು. ಹೀಗಾಗಿ ಒತ್ತಡದ ತಂತ್ರವನ್ನು ಹೇರಲು ಮುಂದಾದರು.

ಕಿತ್ತೂರಿನ ಕೊನೆಯ ಅರಸ ಶಿವಲಿಂಗರುದ್ರ ತೀರಿಕೊಳ್ಳುವ ಮುನ್ನ ಮಾಸ್ತರ 'ಮರಡಿಯ ಹುಡುಗನನ್ನ' ದತ್ತಕ್ಕೆ ತೆಗೆದುಕೊಂಡಿದ್ದರು. ದತ್ತಕ್ಕೆ ತೆಗೆದುಕೊಳ್ಳುವಾಗ ಪೂರ್ವಾನುಮತಿ ಪಡೆಯಬೇಕೆಂಬ ಆಜ್ಞೆಯನ್ನು ಕಲೆಕ್ಟರ್ ಥ್ಯಾಕರೆ ಹೊರಡಿಸಿದ್ದರು. ನಂತರ ಪರಿಸ್ಥಿತಿ ಬದಲಾದ ಕಾರಣ ಯುದ್ಧ ಯಾವ ಸಂದರ್ಭದಲ್ಲಿ ಘಟಿಸಬಹುದೆಂದು ಚೆನ್ನಮ್ಮ ಆಭರಣವನ್ನು ತೆಗೆದುಕೊಂಡು ಹೋಗುವ ನಿರ್ಧಾರ ಮಾಡಿದ್ದಳು ಎನ್ನುವ ಸಂದೇಹ ಮತ್ತು ಟ್ರೆಜರಿಯ ಹಣವನ್ನು ಸಾಗಿಸುತ್ತಾಳೆ ಎನ್ನುವ ಸುಳಿವಿನಿಂದ ಥ್ಯಾಕರೆಯವರು ಇಬ್ಬರು ಕಾವಲುಗಾರರನ್ನು ನೇಮಿಸಿದರು.

ಥ್ಯಾಕರೆಯು ಟ್ರೆಜರಿಯ ಸುರಕ್ಷತೆಯ ಬಗ್ಗೆ ಪತ್ರವನ್ನು ಬರೆದುಕೊಡಬೇಕೆಂದು ಆದೇಶಿಸಿದನು. ಚನ್ನಮ್ಮನ ಸಹಾಯಕರು ರಾಣಿಯವರ ಆದೇಶವಿಲ್ಲದೆ ಪತ್ರವನ್ನು ಬರೆದುಕೊಡಲು ಸಾಧ್ಯವಿಲ್ಲವೆಂದು ಖಡಾಖಂಡಿತವಾಗಿ ಹೇಳಿದರು. ಈ ರೀತಿಯ ವಿಚಾರವನ್ನು ಕೇಳಿದ ಥ್ಯಾಕರೆಯವರು ಚನ್ನಮ್ಮ ಮತ್ತು ಸೊಸೆ ವೀರಮ್ಮನ್ನು ಕಾಣಲು ಆದೇಶಿಸಿದರು. ಆಗ ತಾನು ಹೋಗದೆ ತನ್ನ ನಂಜಿಗಸ್ಥನಾದ ಗುರುಸಿದ್ಧಪ್ಪನನ್ನು ಥ್ಯಾಕರೆಯವರನ್ನು ಕಂಡು ಬರಲು ಹೇಳಿದಳು. ಆತನು ಥ್ಯಾಕರೆಯ ಕಾಣಲು ಹೋದಾಗ ಆತನನ್ನ ಕುಳಿತುಕೊಳ್ಳಲಿಕ್ಕೆ ಆಸನವನ್ನು ಕೊಡದೆ ನಿಂತುಕೊಂಡೆ ಥ್ಯಾಕರೆಗೆ ಪ್ರತಿಕ್ರಿಯಿಸಿದನು. ಈ ವಿಷಯ ಕೇಳಿದ ಕಿತ್ತೂರು ಜನತೆ ಆಕ್ರೋಶಗೊಂಡು ಗುರುಸಿದ್ಧಪ್ಪನಿಗೆ ಮಾಡಿದ ಅವಮಾನವಲ್ಲ. ಕಿತ್ತೂರಿನ ಸಂಸ್ಥಾನಕ್ಕೆ ಮಾಡಿದ ಅಪಮಾನವೆಂದು ತಮ್ಮ ಆಕ್ರೋಶವನ್ನು ತೋರಿಸಿದರು.

ಹೀಗೆ ಕಿತ್ತೂರು ಸಂಸ್ಥಾನದ ಮೇಲೆ ಪದೆಪದೆ ನಿರ್ಬಂಧ ಹೇರುತ್ತಿದ್ದರು. ಕೋಟೆಯ ಒಳಗೆ ಹೋಗಲು ನಿರ್ಬಂಧವಿರಲಿಲ್ಲ. ಹೀಗಾಗಿ ೫೦೦೦ ಯುದ್ಧಾಸಕ್ತರು ಸೇರಿದರು. ಕೋಟೆಯ ಮೂರು ಭಾಗಗಳಲ್ಲಿ ಬ್ರಿಟಿಷರ ಸೈನ್ಯವಿತ್ತು. ಸೈನಿಕರು ಮತ್ತು ಅರೆಸೈನಿಕರು ಇದ್ದರು. ಬ್ರಿಟೀಶ್ ಇತಿಹಾಸಕಾರ ಲೆಗ್ಯಾಂಡ್‌ಜೇಕಬ್ ಕಿತ್ತೂರಿನ ಜನರನ್ನು ಕುರಿತು ಹೀಗೆ ಹೇಳಿದ್ದರು. "They belonged to a Race not genrally given to wanton bloodshed however ansparing they might be in actual warfare"[೩೫]

ಬ್ರಿಟಿಷರ ಮತ್ತು ಕಿತ್ತೂರ ಸಂಸ್ಥಾನದ ನಡುವೆ ನಡೆದ ಯುದ್ಧದಲ್ಲಿ ಥ್ಯಾಕರೆಯ ಮತ್ತು ಇಬ್ಬರು ಬ್ರಿಟಿಷರು ಮರಣ ಅಪ್ಪಿದರು. ಅಲ್ಲಿಯ ಸೈನಿಕರು ಅಸ್ತ್ರಗಳನ್ನು ಕೆಳಗಿಟ್ಟು ಶರಣಾದರು. ಆ ಸೈನಿಕರನ್ನು ಕುರಿತು 'ನೀವು ನಿಮ್ಮ ಕ್ಯಾಂಪಿಗೆ ಸುರಕ್ಷಿತವಾಗಿ ಹೋಗಬಹುದೆಂದು ಹೇಳಿದರು. ತಾಳ್ಮೆಯನ್ನು ಕಳೆದುಕೊಂಡ ಜನ ಕ್ಯಾಂಪಿಗೆ ತಲುಪುವುದರೊಳಾಗಿ ಇವರು ಕ್ಯಾಂಪನ್ನು ಧ್ವಂಸಗೊಳಿಸಿದರು. ಅನೇಕರು ಸಾವನ್ನಪ್ಪಿದರು. ಉಳಿದ ಈರ್ವರೂ ಮಾತ್ರ ಎಲಿಯಟ್ ಮತ್ತು ಸ್ಟಿವನ್‌ಸನ್ ಸುರಕ್ಷಿತವಾಗಿ ಇದ್ದರು. ನಂತರದ ದಿನಗಳಲ್ಲಿ ಮಾಲ್ಕಮ್ ಕಿತ್ತೂರಿನ ಮೇಲೆ ದಾಳಿ ಮಾಡಿ ಸಂಸ್ಥಾನವನ್ನು ಬ್ರಿಟಿಷರ ಕೈವಶವಾಯಿತು.

**ಕಿತ್ತೂರಿನ ಇತಿಹಾಸ ಬೆಳಕಿಗೆ ಬಂದಿರದ ಕೆಲ ಅಂಶಗಳು**

ಕಿತ್ತೂರು ಪ್ರದೇಶವು ಟಿಪ್ಪು ಆಳ್ವಿಕೆ ವ್ಯಾಪ್ತಿಗೆ ಒಳಪಟ್ಟಿತ್ತು. ಅಂದರೆ ನಂತರ ಈ ನಾಡನ್ನು ಮರಾಠರು ಮತ್ತು ಬ್ರಿಟಿಷರು ಹಂಚಿಕೊಂಡಿದ್ದರು. ಹೀಗಾಗಿ ಮರಾಠರ ಪಾಲಿಗೆ ಬಂದಿತ್ತು. ಆ ಕಾಲಘಟ್ಟದ ಮಲ್ಲಸರ್ಜನ ಆಳ್ವಿಕೆ ಇತ್ತು. ಮಹತ್ವದ ಅಂಶವೆಂದರೆ ಈ ಎಲ್ಲಾ ಪ್ರದೇಶಗಳಿಗಿಂತ ಹೆಚ್ಚು ಉತ್ಪನ್ನ ಮತ್ತು ಸಂಪನ್ಮೂಲ ಹೊಂದಿದ್ದ ರಾಜ್ಯವಾಗಿತ್ತು. ಈ ಕಾರಣದಿಂದ ಬ್ರಿಟಿಷರ ದೃಷ್ಟಿ ಕಿತ್ತೂರು ರಾಜ್ಯದ ಮೇಲೆ ಬಿತ್ತು. ಸಣ್ಣಪುಟ್ಟ ದಂಗೆಗಳು ದೊಂಡೆ ವಾಘನನ್ನು ವೆಲ್ಲೆಸ್ಲಿ ಬೆನ್ನಟ್ಟಿದ್ದ ಸಂದರ್ಭದಲ್ಲಿ ಕಿತ್ತೂರಿನ ರಾಜ ಸಹಾಯ ಮಾಡಲಿಲ್ಲ ಎನ್ನುವ ಕಾರಣಕ್ಕೆ ಈ ರಾಜ್ಯದ ಮೇಲೆ ವಕ್ರದೃಷ್ಟಿ ಬಿತ್ತು. ಅಲ್ಲದೆ ಉತ್ತರ ಕರ್ನಾಟಕ ಲಿಂಗಾಯತರ ಸಮಾಜದ ಏಕೈಕ ರಾಜ್ಯವಾಗಿತ್ತು.

ಮರಾಠರಿಗೆ ಕಿತ್ತೂರು ಸಂಸ್ಥಾನದವರು ಒಂದು ಲಕ್ಷದ ಇಪ್ಪತ್ತೈದು ಸಾವಿರ ರೂಪಾಯಿಯನ್ನು ಪ್ರತಿವರ್ಷವೂ ಕೊಡಬೇಕಾಗಿತ್ತು. ಹೀಗಾಗಿ ಮರಾಠರ ಕಿರುಕುಳ ತಡೆದುಕೊಳ್ಳುವುದು ಬಹಳ ಕಷ್ಟಕರವಾಗಿತ್ತು. ಈ ಕಾರಣದಿಂದ ಮಲ್ಲಸರ್ಜನನ್ನು ಗೃಹಬಂಧನದಲ್ಲಿ ಇಟ್ಟಿದ್ದರು. ಅಲ್ಲದೆ ತೆರದಾಳ್ ಮೇಲೆ ದಾಳಿ ಮಾಡಿದಾಗ ಕಿತ್ತೂರಿನವರು ಸಹಾಯ ಮಾಡಲಿಲ್ಲ. ಅವರು ದಾಳಿ ಮಾಡಲು ಕಾರಣ ಕಿತ್ತೂರಿನ ಕೊನೆಯ ಅರಸ ಸಾಯುವ ಪೂರ್ವದಲ್ಲಿ ಮಾಸ್ತರ ಮರಡಿಯ ಬಾಲಕನನ್ನು ದತ್ತು ತೆಗೆದುಕೊಳ್ಳಲು ಕಂಪನಿ ಸರ್ಕಾರದ ಪರವಾನಗಿ ಪಡೆದುಕೊಳ್ಳದೆ ದತ್ತು ತೆಗೆದುಕೊಂಡಿದ್ದರು. ಹೀಗಾಗಿ ಥ್ಯಾಕರೆ ಕೋಪಗೊಂಡಿದ್ದನು. ಇನ್ನೊಂದು ಮಹತ್ವದ ಸಂಗತಿ ಎಂದರೆ ಯುದ್ಧ ಯಾವ ಸಂದರ್ಭದಲ್ಲಾದರೂ ಜರುಗಬಹುದು. ಈ ಕಾರಣದಿಂದ ಚನ್ನಮ್ಮನ ಆಭರಣ ಮತ್ತು ಟ್ರೆಜರಿಯನ್ನು ಸ್ಥಳಾಂತರಿಸುವ ಕುರಿತ ಸುದ್ದಿ ಥ್ಯಾಕರೆಗೆ ತಿಳಿದಿತ್ತು. ಈ ಹಿನ್ನೆಲೆಯಿಂದ ಇಬ್ಬರು ಅಧಿಕಾರಿಗಳನ್ನು ನೇಮಕ ಮಾಡಿದರು. ಅಲ್ಲದೆ ಟ್ರೆಜರಿ ಸುರಕ್ಷಿತ ಕುರಿತು ಪತ್ರ ಬರೆದುಕೊಡುವಂತೆ ತಾಕೀತು ಮಾಡಿದರು. ಈ ಮಾತಿಗೆ ಚೆನ್ನಮ್ಮ ದಿಟ್ಟ ಉತ್ತರವನ್ನು ಕೊಟ್ಟಳು.

ಹ್ಯೂಯನ್‌ತ್ಸಾಂಗ್ ಕನ್ನಡ ಪ್ರಾಚೀನ ಶಾಸನ ಕನ್ನಡಿಗರು ಎಂಥ ಜನರು ಎಂಬುದನ್ನು ಈ ಮಾತು ಪ್ರತಿನಿಧಿಸುತ್ತದೆ. 'ಸಾಧುಗೆ ಸಾಧು ಮಾದುರ್ಯಂಗೆ ಮಾಧುರ್ಯನ್ ಬಾದಿಪ್ಪ ಕಲಿಗೆ ಕಲಿಯುಗ ವಿಪರೀತನ್' ಈ ಮಾತಿನ ಮೂಲಕ ಕನ್ನಡಿಗರ ಗುಣ ಸ್ವಭಾವಗಳು ಅಭಿವ್ಯಕ್ತಗೊಂಡಿವೆ. ಥ್ಯಾಕರೆ ಅಲ್ಲದೆ ಇಬ್ಬರು ಬ್ರಿಟಿಷ್ ಅಧಿಕಾರಿಗಳು ಹತ್ಯೆಯಾಗುತ್ತಾರೆ. ದುರ್ದೈವವಶಾತ್ ಈ ಯುದ್ಧಕ್ಕಾಗಿ ಬಂದವನಲ್ಲ. ಆದರೆ ಮನ್ರೋ ಎಂಬುವರು ಸೊಲ್ಲಾಪುರ ಕಲೆಕ್ಟರೇಟ್ ಸಹಾಯಕರಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಆ ಸಂದರ್ಭದಲ್ಲಿ ಥ್ಯಾಕರೆಯನ್ನು ಕಾಣಲು ಕಿತ್ತೂರಿಗೆ ಬಂದಿದ್ದರು. ಆದರೆ ಎಲಿಯಟ್, ಸ್ಟೀವನ್‌ಸನ್ ಈ ಯುದ್ಧ ನಂತರವೂ ಬಹಳ ಸುರಕ್ಷಿತವಾಗಿ ಇದ್ದರು ಎಂಬುದು ಅವರು ಕೊಟ್ಟಿರುವ ವರದಿಯಿಂದ ತಿಳಿಯುತ್ತದೆ. 'ನಮ್ಮನ್ನ ಬಹಳ ಚೆನ್ನಾಗಿ ನೋಡಿಕೊಂಡಿದ್ದು ಎಂಬುದು ಉಲ್ಲೇಖಗೊಂಡಿದೆ. ತಾವು ಕೊಟ್ಟಿರುವ ವರದಿಯಲ್ಲಿ ನಮ್ಮನ್ನು ಬಹಳ ಚೆನ್ನಾಗಿ ನೋಡಿಕೊಂಡಿದ್ದರು ಎಂದು ತಮ್ಮ ಅಭಿಪ್ರಾಯವನ್ನು ಅಭಿವ್ಯಕ್ತಪಡಿಸುತ್ತಾರೆ.

**ಬ್ರಿಟಿಷ್ ದಾಖಲೆಗಳು ರೂಪಿಸಿದ ಸಂಗೊಳ್ಳಿ ರಾಯಣ್ಣ**

ಮುಂಬಯಿಯ 'ಮಹಾರಾಷ್ಟ್ರ ಅರ್ಕೈವ್ಸ್' ಸಂಗ್ರಹಾಲಯದಲ್ಲಿರುವ ಸಂಗೊಳ್ಳಿ ರಾಯಣ್ಣನಿಗೆ ಸಂಬಂಧಿಸಿದ ದಾಖಲೆಗಳನ್ನು ಪರಾಮರ್ಶಿಸಿದ ಶ್ರೀನಿವಾಸ ಹಾವನೂರ ಅವರು ಆ ಮೂಲಕ ರಾಯಣ್ಣನ ಹೋರಾಟದ ಚರಿತ್ರೆಯನ್ನು 'ಬ್ರಿಟಿಶ್ ದಾಖಲೆಗಳು ರೂಪಿಸಿದ ಸಂಗೊಳ್ಳಿ ರಾಯಣ್ಣ' ಎಂಬ ಶೀರ್ಷಿಕೆಯ ಲೇಖನದಲ್ಲಿ ಬಿಚ್ಚಿಟ್ಟಿದ್ದಾರೆ.

ಎಚ್.ಜೆ.ಸ್ಟೋರ್ಸ್ಲಂ ಅವರ A Historical Account of the Belgaum District (೧೮೭೦) ಎಂಬ ಗ್ರಂಥದಲ್ಲಿ ರಾಯಣ್ಣನ ವೃತ್ತಾಂತವಿರುವುದನ್ನು ಲೇಖಕರು ವಿವರಿಸಿದ್ದಾರೆ. ೧೮೨೯ರಲ್ಲಿ ಊರು ಬಿಟ್ಟುಹೋದ ಕಾಲಘಟ್ಟವನ್ನು ರಾಯಣ್ಣನ ಹೋರಾಟ ಆರಂಭವೆಂದು ಗಣಿಸಬೇಕೆಂದು ಶ್ರೀನಿವಾಸ ಹಾವನೂರ ಅವರು ತಿಳಿಸುತ್ತಾರೆ.

ದಿನಾಂಕ ೨೮.೪.೧೮೩೦ರಂದು ಸಂಪಗಾವಿ ಅಮಲ್ದಾರನೆದುರು ಸಂಗೊಳ್ಳಿ ರಾಯಣ್ಣನ ಪ್ರಾಥಮಿಕ ವಿಚಾರಣೆ ನಡೆದು ತನ್ನೆಲ್ಲ ಮಾಹಿತಿಗಳಿಗೆ ಉತ್ತರಿಸಿರುವುದರ ದಾಖಲೆಯನ್ನು ಲೇಖಕರು ನೀಡಿದ್ದಾರೆ. (ಪು.೩೬) ಸಂಗೊಳ್ಳಿ ರಾಯಣ್ಣ ೨೮.೪.೧೮೩೦ರ ಉತ್ತರದಲ್ಲಿ ತಾನು ಊರು ಬಿಟ್ಟಿದ್ದರ ಕಾರಣವನ್ನು ನೀಡಿದ್ದನ್ನು ದಾಖಲಿಸಲಾಗಿದೆ. "The year before last they impoed more rent on the half hoozruttee field, which I cultivated in sangolli for this I and Muntguttee shet-surdee of same village left the village together"[೩೬]

"ರಾಯಣ್ಣನದು hit and run ರೀತಿಯ ಗೆರಿಲ್ಲಾ ಕ್ರಮದ ಯುದ್ಧವಾದ್ದರಿಂದ ಘೋರತರವಾದ ಯುದ್ಧ ನಡೆಯಿತೆಂದು ಹೇಳುವ ಹಾಗಿರಲಿಲ್ಲ. ಬ್ರಿಟಿಶ್ ದಾಖಲೆಗಳಿಂದ ರಾಯಣ್ಣನ ಯುದ್ಧದ ಸ್ವರೂಪವನ್ನು ಸ್ಪಷ್ಟವಾಗಿ ತಿಳಿಯಬಹುದು. ದೇಸನೂರ, ಶಮಶೇರಗಡ

ಬಳಿಯ ಅಥವಾ ಯಾವುದೊಂದು ಊರಿನ ಬಳಿ ಇರಬಹುದಾದ ದಟ್ಟ ಅಡವಿಗಳಲ್ಲಿ ತಂಗುವುದು. ಸರಕಾರದ ಸೈನ್ಯ ನೆಲೆಯೂರಿದಲ್ಲಿ ಗಕ್ಕನೆ ಎರಗಿ, ಗರಿಷ್ಠ ಪ್ರಮಾಣದಲ್ಲಿ ಹಾನಿಗೈದು ಮತ್ತೆ ಮರೆಯಾಗಿಬಿಡುವುದು. ಇತ್ತ ಸರಕಾರಿ ಕಚೇರಿಗಳು, ಚಾವಡಿಗಳು ಇರುವಲ್ಲಿ ಇಲ್ಲಿಯ ಕಾಗದ ಪತ್ರಗಳು ನಾಶವಾಗುವಂತೆ ಸುಟ್ಟುಬಿಡುವುದು. ತಿಜೋರಿ ಇದ್ದರೆ ಹಣದ ಲೂಟಿ ಮಾಡುವುದು. ಸರ್ಕಾರಿ ಟಪಾಲಿನ ಸಾಗಣೆಯನ್ನು ಪ್ರತಿಬಂಧಿಸುವುದು ಇವು ನಿಯಮಿತ ಕಾಯಕಗಳಾಗಿದ್ದವು. ಕೆಲಸ ಮೂಗಿದೊಡನೆ ರಾಯಣ್ಣನ ಜನರು ತಮ್ಮ ಆಶ್ರಯದ ಗುಡ್ಡದ ಓರೆಗಳಲ್ಲಿ ಅಡವಿಗಳಲ್ಲಿ ಅಂತರ್ಧಾನರಾಗಿ ಬಿಡುತ್ತಿದ್ದರು. ಯಾವುದನ್ನು ಛತ್ರಪತಿ ಶಿವಾಜಿಯು ಅನುಸರಿಸಿದನೋ, ತದ್ವತ್ತಾಗಿ ರಾಯಣ್ಣ ಅದನ್ನೇ ಮಾಡಿದನೆಂಬುದನ್ನು ಗಮನಿಸಬಹುದು."[೩೭] ಹೀಗೆ ಶ್ರೀನಿವಾಸ ಹಾವನೂರ ಅವರು ದಾಖಲೆಗಳನ್ನು ಆಧಾರವಾಗಿಟ್ಟುಕೊಂಡು ವಿಶ್ಲೇಷಿಸಿದ್ದಾರೆ.

ದಿನಾಂಕ ೫.೧.೧೮೩೦ರಂದು ಸಂಗೊಳ್ಳಿ ರಾಯಣ್ಣ ಮಾಡಿದ ಮೊದಲ ದಾಳಿಯನ್ನು ದಾಖಲಿಸಿರುವುದನ್ನು ಲೇಖಕರು ಉಲ್ಲೇಖಿಸಿದ್ದಾರೆ. ಈ ದಾಳಿಯಲ್ಲಿ ಅಲ್ಪಮೊತ್ತದ ಹಣ ಪಡೆದ ರಾಯಣ್ಣ ತನ್ನ ಕಡೆಯ ಕಾವಲಿನವನನ್ನು ಕಳೆದುಕೊಂಡ ವಿಚಾರ ಮತ್ತು ಬೆಳಗಾವಿಯಲ್ಲಿ ಸೈನ್ಯವನ್ನು ಸಿದ್ಧವಾಗಿಡಬೇಕೆಂದು ನಿಷ್ಬತ್‌ನ ಆಗ್ರಹ ಪತ್ರಗಳ ವಿಚಾರಗಳೂ ಇಲ್ಲಿ ಪ್ರಸ್ತಾಪಗೊಂಡಿರುವುದನ್ನು ಕಾಣಬಹುದು.

ಸಂಪಗಾವಿ, ಖಾನಾಪುರ, ಶಮಕೇರಗಡ, ಇಟಗಿ, ಪಾರಿಶವಾಡ, ಅಂಕಲಗಿ ಇತ್ಯಾದಿ ಪ್ರದೇಶಗಳಲ್ಲಿ ದಾಳಿ ವಾಡಿದ ವಿಚಾರಗಳನ್ನು ಲೇಖಕರು ವಿವರಿಸಿದ್ದಾರೆ. "ಸರಕಾರದೊಡನೆಯ ಒಟ್ಟಿನ ಸೆಣಸಾಟದಲ್ಲಿ ರಾಯಣ್ಣ ಯಾವ ಯುದ್ಧದಲ್ಲಿ ಗೆದ್ದ; ಯಾವುದರಲ್ಲಿ ಸೋತ–ಎಂದು ಕೇಳಿದರೆ ಹೇಳುವಂತಹದೇನೂ ಇಲ್ಲ. ದೊಡ್ಡ ಸುಸಜ್ಜಿತ ಸೈನ್ಯವನ್ನು ಕಟ್ಟಿಕೊಂಡು ಅವನು ಯುದ್ಧ ಮಾಡಿದರೆ ತಾನೇ ಆ ಮಾತು? ಅವನ ಉದ್ದೇಶ ಸ್ಪಷ್ಟವಾಗಿದ್ದಿತು. ತನಗಾದ ಅನ್ಯಾಯಕ್ಕೆ ಪ್ರತೀಕಾರ ಹೂಡಬೇಕೆನ್ನುವುದು ನಿಮಿತ್ತವಾಯಿತು. ಮುಂದೆ ಕಿತ್ತೂರನ್ನು ಕಬಳಿಸಿದ ಸರಕಾರದ ವಿರುದ್ಧ ಜನತೆಯ ಅಸಂತೋಷ ಸೇರಿದ್ದರಿಂದ ಅವನಲ್ಲಿಯ ಸ್ವಾತಂತ್ರ್ಯದ ಕೆಚ್ಚು ವಿಶಾಲ ವ್ಯಾಪ್ತಿಯನ್ನು ಪಡೆಯಿತು. ಅವನ ಗುರಿ ಬ್ರಿಟಿಶರನ್ನೇ ಈ ದೇಶದಿಂದ ಹೊರಹಾಕಬೇಕು ಎನ್ನುವುದಿರದೆ, ಅವರ ಆಡಳಿತ ಯಂತ್ರ ನಡೆಯಗೊಡಬಾರದು ಮತ್ತು ಸಾಧ್ಯವಾದರೆ ಕಿತ್ತೂರ ದೇಸಗತಿಯನ್ನು ಪುನಃ ಪ್ರಸ್ತಾಪಿಸಬೇಕು ಎಂಬುದಾಗಿತ್ತು"[೩೮] ಎಂದು ಲೇಖಕರು ಒಟ್ಟು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಲೇಖಕರು ವಿಶ್ಲೇಷಿಸಿರುವಂತೆ ಸಂಗೊಳ್ಳಿ ರಾಯಣ್ಣನಿಗೆ ಬ್ರಿಟೀಶರನ್ನು ಈ ದೇಶದಿಂದ ಹೊರಹಾಕಬೇಕೆನ್ನುವುದು ಇರದಿದ್ದರೂ ಕಿತ್ತೂರನ್ನು ಬ್ರಿಟೀಶರಿಂದ ವಶಪಡಿಸಿಕೊಂಡು ರಾಜ್ಯಾಡಳಿತ ಮಾಡಬೇಕೆನ್ನುವ ಮಹತ್ವಾಕಾಂಕ್ಷೆ ಇದ್ದುದು ನಿಜ. ನಂತರದ ಕಾಲಘಟ್ಟದಲ್ಲಿ ಆ ಮಹತ್ವಾಕಾಂಕ್ಷೆ ಪ್ರತಿಧ್ವನಿಸಿರುವುದನ್ನು ಲೇಖಕರು ದಾಖಲಿಸಿದ್ದಾರೆ. "ಕಿತ್ತೂರ ದೇಸಗತಿಯನ್ನು ಪುನಃ ಪ್ರಸ್ತಾಪಿಸುವ (ಪ್ರತಿಷ್ಠಾಪಿಸುವ?) ಅಪೇಕ್ಷೆ ಜನತೆಯಿಂದ ಪೂರ್ಣತ

ಕಣ್ಮರೆಯಾಗಿರಲಿಲ್ಲ. ಪ್ರಸಂಗ ಒದಗಿ ಬಂದರೆ ಮತ್ತೆ ಜನರು ಅದರಲ್ಲಿ ಉದ್ಯುಕ್ತರಾಗುತ್ತಿದ್ದರು. ಹುಡುಗನಾಗಿದ್ದ ಮಾಸ್ತಮರಡಿಯ ಸವಾಲಿಯ ಮಲ್ಲಸರ್ಜ ಮುಂದೆ ತನ್ನ ತರುಣ ವಯಸ್ಸಿನಲ್ಲಿ ದಂಗೆ ಎದ್ದ. ರಾಯಣ್ಣನ ಅಂತ್ಯವಾಗಿ ೧೪ ವರ್ಷಗಳು ಕಳೆದ ಮೇಲೆ, ಆಗೂ ಜನ ಮತ್ತೆ ಸಹಾಯ ಮಾಡಲು ಮುಂದಾದರು"[೫೯]

ಇತಿಹಾಸ ಮರುಕಳಿಸುತ್ತದೆ ಎಂಬ ಮಾತಿನಂತೆ ಆಯಾ ಕಾಲಘಟ್ಟದಲ್ಲಿ ಜರುಗಿದ ಘಟನೆಗಳೇ ಮುಂದೆಯೂ ಘಟಿಸುತ್ತವೆ; ಘಟಿಸುತ್ತಿವೆ. ಸಂಗೊಳ್ಳಿ ರಾಯಣ್ಣನ ಕಾಲಘಟ್ಟದಲ್ಲಿ ನಂತರ ಬ್ರಿಟೀಶ್ ಆಡಳಿತಕ್ಕೆ ಕಷ್ಟ ನಷ್ಟ ಬರಿಸಲು ಕಚೇರಿ ಚಾವಡಿಗಳಿಗೆ ಬೆಂಕಿ, ಕಾಗದ ಪತ್ರಗಳ ನಾಶ, ತಿಜೋರಿಗಳ ಲೂಟಿ ಇತ್ಯಾದಿ ವಿಧ್ವಂಸಕ ಕಾರ್ಯಗಳಿಗೆ ಮುಂದಾಗಿರುವುದು ನಂತರದ ಭಾರತ ಸ್ವಾತಂತ್ರ್ಯ ಹೋರಾಟಗಳಲ್ಲೂ ಈ ರೀತಿಯ ವಿಧ್ವಂಸಕ ಕೃತ್ಯಗಳ ಮೂಲಕ ಬ್ರಿಟೀಶರಿಗೆ ಉತ್ತರ ನೀಡಿದ ಕ್ರಾಂತಿಕಾರಿಗಳ ಇತಿಹಾಸ ನಮ್ಮ ಮುಂದಿದೆ. ಈ ಹಿನ್ನೆಲೆಯಿಂದ ಶ್ರೀನಿವಾಸ ಹಾವನೂರ ಅವರು ಅತ್ಯಂತ ವಿಶಿಷ್ಟ ಶೈಲಿಯಲ್ಲಿ ಮನಮುಟ್ಟುವಂತೆ ಕ್ರಾಂತಿಕಾರಿ ಸಂಗೊಳ್ಳಿ ರಾಯಣ್ಣನ ಜೀವನವನ್ನೇ ಪುಟ್ಟ ಲೇಖನದಲ್ಲಿ ಬಂಧಿಸಿದ್ದಾರೆ. ಆ ಮೂಲಕ ಇಂದಿನ ಯುವ ಜನತೆಗೆ ಸಂಗೊಳ್ಳಿ ರಾಯಣ್ಣನ ಸಾಹಸ, ಶೌರ್ಯ, ಧೈರ್ಯವಂತಿಕೆಗಳನ್ನು ಮನದಟ್ಟು ಮಾಡಿರುವುದು ಸುತ್ಯರ್ಹ.

**ಕಿತ್ತೂರಿನ ಕಿರಿಯ ರಾಣಿ ವೀರಮ್ಮ**

ಕಿತ್ತೂರಿನ ಚರಿತ್ರೆಯಲ್ಲಿ ಹುದುಗಿದ್ದ 'ವೀರಮ್ಮ' ಎಂಬ ವೀರಮಹಿಳೆಯ ಸೂಕ್ಷ್ಮಾತಿಸೂಕ್ಷ್ಮ ಸಂಗತಿಗಳು ಈ ಬಿಡಿ ಲೇಖನದಲ್ಲಿ ಪ್ರಸ್ತುತಗೊಂಡಿದೆ. ಕಿತ್ತೂರಿನ ಇತಿಹಾಸದಲ್ಲಿ ಚನ್ನಮ್ಮ ಸರ್ವಕಾಲಕ್ಕೂ ಮೌಲ್ಯಯುತವಾದ ವ್ಯಕ್ತಿತ್ವದ ಸ್ವರೂಪ ಪರಿಚಿತಗೊಂಡಿದೆ. ನಾಡ ಪ್ರೇಮ, ಧೀಮಂತಿಕೆ ಮತ್ತು ರಾಜನೀತಿ ಎಲ್ಲಾ ಹಂತದಲ್ಲಿ ವ್ಯಕ್ತಿತ್ವಕ್ಕೆ ಮೆರುಗು ಬರುವ ಹಾಗೆ ಇತಿಹಾಸದಲ್ಲಿ ಚಿತ್ರಿತಗೊಂಡಿದೆ. ಆದರೆ ವೀರಮ್ಮ ಮಾತ್ರ ಕೌಟುಂಬಿಕ, ಸಾಮಾಜಿಕ, ರಾಜಕೀಯ ವಲಯದಲ್ಲಿ ಗೌಣವಾಗಿರುವುದನ್ನು ಕಿತ್ತೂರಿನ ಇತಿಹಾಸವನ್ನು ಅವಲೋಕಿಸಿದರೆ ತಿಳಿಯುತ್ತದೆ. ಈ ರೀತಿಯ ವಸ್ತುಸ್ಥಿತಿಯ ಸ್ವರೂಪ ಗಮನಿಸಿದರೆ ಇತಿಹಾಸಕಾರ ಜಾಣ್ಮೆ ಕೌಟುಂಬಿಕ ಮತ್ತು ರಾಜಕೀಯ ವಲಯದಲ್ಲಿ ವ್ಯಕ್ತಿಯ ಕುತಂತ್ರ ತೆರೆಮರೆಗೆ ಸರಿಸುವಂತೆ ಮಾಡುತ್ತದೆ.

"ವೀರಮ್ಮನಿಗೆ ಕೌಟುಂಬಿಕ ಹಿನ್ನೆಲೆ ಇಲ್ಲದಿರುವುದು ಪ್ರಮುಖ ಕಾರಣ. ಈ ಸಂಸ್ಥಾನದ ಶಿವಲಿಂಗರುದ್ರನ ಪತ್ನಿಯಾದ ವೀರಮ್ಮನ ಕೌಟುಂಬಿಕ ಹಿನ್ನೆಲೆ ಯಾವ ಕೃತಿಯಲ್ಲೂ ಪ್ರಸ್ತಾಪವಿರುವುದಿಲ್ಲ. ಮಹತ್ವದ ಅಂಶವೆಂದರೆ "ಕಲೆಕ್ಟರ್ ವಾಲ್ಟರ್ ಎಲಿಯಟ್ ಸ್ಮರಣ ಸಂಪುಟದಲ್ಲಿ ಈ ರೀತಿ ಉಲ್ಲೇಖ ಪ್ರಸ್ತಾಪಗೊಂಡಿದೆ. ವೀರಮ್ಮ ಹುಮನಾಬಾದಿನ (ಈಗಿನ ಬೀದರ್ ಜಿಲ್ಲೆ) ಓರ್ವ ಶೆಟ್ಟಿಯ ಮಗಳು. ಅಷ್ಟು ದೂರದ ಕನ್ಯೆ ಕಿತ್ತೂರಿನ ರಾಣಿ ಅರಮನೆಯನ್ನು ಹೇಗೆ ಸೇರಿದಳು."[೬೦] ಅವಳಿಗೆ ಬಾಲ್ಯ ವಿವಾಹವಾಗಿತ್ತು.

ಬ್ರಿಟೀಶ್ ಅಧಿಕಾರಿ ಮಾತು ಮತ್ತು ಲಾವಣಿಯನ್ನು ಆಧರಿಸಿ ಹೇಳಿರುವುದನ್ನು ಲೇಖಕರು ಇಲ್ಲಿ ಗಮನಿಸಿದ್ದಾರೆ. "ಈ ಹೆಂಡತಿಯಿಂದ ತನಗಿನ್ನು ಮಕ್ಕಳಾಗುವುದಿಲ್ಲವೆಂದು

ತಿಳಿದು ದತ್ತು ಮಗನನ್ನು ತರುವ ಯೋಚನೆ ಶಿವಲಿಂಗರುದ್ರನು ಮಾಡುತ್ತಾನೆ. ಈ ಮಾತು ಮತ್ತು ಲಾವಣಿ(ಹೆಬ್ಬಾಳ್ ಬಸವನದು) ಹಾಡು ಪುಷ್ಠಿ ಕೊಡುತ್ತದೆ. ಪುರುಷನ ಕೂಡದೆಂದು ಕಾಲ ಸರಸವಾಡಲಿಲ್ಲ. ಅರಸು ಬಾಪುಸಾಬ ಇನ್ನೊಂದೂ ದೋಷವಿರಲಿಲ್ಲ."[೪೧] ಚರಿತ್ರೆಯಲ್ಲಿ ವೀರಮ್ಮನ ಹೆಸರು ಗೌಣವಾಗಿಡಲು ಕಾರಣ ವಾಗಿರಬಹುದು.

ಥ್ಯಾಕರೆ ದಾಖಲೆಗಳನ್ನು ಗಮನಿಸಿದಾಗ ಸೂಕ್ಷ್ಮ ಸುಳಿವುಗಳು ಸಿಗುತ್ತವೆ. ಅಂದರೆ ದತ್ತುಪುತ್ರನಾದ ಸವಾಯಿ ಮಲ್ಲಸರ್ಜನು ಊರು ಬಿಟ್ಟು ಹೋಗಬೇಕು ಎಂದು ಆಜ್ಞಾಪಿಸುತ್ತಾನೆ. "ವೀರಮ್ಮ ಮತ್ತು ಚೆನ್ನಮ್ಮ ಮುಂಬಯಿ ಪುಣೆಯ ಕಡೆಗೆ ಹೋಗಬೇಕೆಂದಾಗ ಚನ್ನಮ್ಮ ಹೋಗಲಿ ವೀರಮ್ಮ ಬೇಡ ಎಂದು ಸರದಾರ ಗುರುಸಿದ್ದನಿಗೆ ಹೇಳುತ್ತಾನೆ."[೪೨] ಚರಿತ್ರೆಯ ತೆರೆಮರೆಯಿಂದ ಬಹಿರಂಗವಾಗಬೇಕಾದರೆ, ಬ್ರಿಟೀಶರು ಮತ್ತು ಲಾವಣಿಗಳ ಮೂಲಕ ಚರಿತ್ರೆಯಲ್ಲಿ ಕೆಲವು ದೋಷಗಳನ್ನು ಸರಿಪಡಿಸಿಕೊಳ್ಳಲಿಕ್ಕೆ ಇವು ಬಹಳ ಸಹಕಾರಿಯಾದವು.

ಚನ್ನಮ್ಮ ಮತ್ತು ಜಾನಕಿಬಾಯಿ ಕ್ರಿ.ಶ.೧೮೨೯ರ ಪೂರ್ವದಲ್ಲಿ ತೀರಿಕೊಂಡರು. ತದನಂತರ ವೀರಮ್ಮಳಿಗೆ ಆಡಳಿತ ಜವಾಬ್ದಾರಿಯನ್ನು ನಿರ್ವಹಿಸುವ ಹೊಣೆ ಬಂತು. ಆ ಸಂದರ್ಭದಲ್ಲಿ ಅನುಭವ ಮತ್ತು ಅನುಕೂಲವಿರಲಿಲ್ಲ. ಆದರೂ ಆಡಳಿತದ ಜವಾಬ್ದಾರಿಯನ್ನು ನಿರ್ವಹಿಸಿದಳು ಎಂಬ ಕೆಲವು ಮಹತ್ವದ ಸಂಗತಿಗಳು ಕಂಡು ಬರುತ್ತವೆ. "ಕ್ರಿ.ಶ. ೧೮೩೦ರಲ್ಲಿ ಕಿತ್ತೂರು ವಿಮೋಚನೆಯ ಹೋರಾಟ ಸಕ್ರಿಯ ಆಗಿ ಪ್ರಾರಂಭವಾಯಿತು. ಈ ಅವಧಿಯಲ್ಲಿ ವೀರಮ್ಮ ದೂರದಲ್ಲಿದ್ದ ತನ್ನ ದತ್ತು ಪುತ್ರನಿಗೆ ೪೫೫ರೂ.ಗಳನ್ನು ಗುಟ್ಟಾಗಿ ಕಳುಹಿಸಿದಳೆಂದು ಉಲ್ಲೇಖಗೊಂಡಿದೆ."[೪೩] ಅಲ್ಲದೆ ವೀರಮ್ಮ ವಿಮೋಚನೆ ಚಟುವಟಿಕೆಯಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದಾಳೆಂಬುದನ್ನು ಧಾರವಾಡ ಸಭಾದ ಆಗಿನ ಪ್ರಿನ್ಸಿಪಲ್ ಕಲೆಕ್ಟರ್ ನಿಸ್ಬತ್ ಸಮರ್ಥಿಸಿಕೊಂಡ ಉಲ್ಲೇಖವಿದೆ. ಈ ಹಿಂದಿನ ಎಲ್ಲಾ ಸಂಗತಿಗಳನ್ನು ಆಧರಿಸಿ ಹೇಳುವುದಾದರೆ, ವೀರಮ್ಮಳೂ ಕೂಡ ಕಿತ್ತೂರಿನ ಸಂಸ್ಥಾನಕ್ಕೆ ತನ್ನದೇಯಾದ ಅಳಿಲು ಸೇವೆ ಮಾಡಿದ್ದಾಳೆ ಎನ್ನುವ ಅಂಶ ವೇದ್ಯವಾಗುತ್ತದೆ.

ಸಾವು ಕುರಿತು ಸಂಶಯ ಅಂಶಗಳು ಈ ಲೇಖನದಲ್ಲಿವೆ. ತನ್ನ ಬದುಕಿನಲ್ಲಿ ಆತ್ಮಹತ್ಯೆ ಮಾಡಿಕೊಂಡಳೊ ಅಥವಾ ವೇಬರ್ ಬಣ್ಣದ ಗುಳಿಗೆಗಳು ಕೊಟ್ಟ ಕೃತ್ಯವೊ, ಕೆಲವು ಮಹತ್ವ ಪುರಾವೆಗಳಿಂದ ಈ ಮೂರು ಅಂಶಗಳ ಸುಳಿವು ಕಾಣುತ್ತದೆ.

೧. ನುಂಗಿದ ಬಣ್ಣದ ಗುಳಿಗೆಗಳು ವಿಷದ ಗುಳಿಗೆಗಳಲ್ಲ ಮತ್ತು ಸಿವಿಲ್ ಸರ್ಜನ್ ಕೊಟ್ಟ ಅಲೋಪಥಿಕ್ ಔಷಧ ಗುಳಿಗೆಗಳು,

೨. ವೀರಮ್ಮಳು ಕುಸುಗಲ್ಲಿನಿಂದ ಧಾರವಾಡಕ್ಕೆ ನೇರವಾಗಿ ಬಂದಿರಲಿಲ್ಲ. ನವಲಗುಂದದಲ್ಲಿ ಇದ್ದು ಬಂದಳೆಂದು ತಿಳಿದುಬರುತ್ತದೆ.

ಲಾವಣಿ ಹೇಳುವ ಸಂಗ್ರಾಣಿ ರೋಗಕ್ಕೂ ಮತ್ತು ನಿಸ್ಬತ್ ಹೇಳುವ ಮಾತಿಗೂ ಸಾಮ್ಯವಿದೆಯೋ ಎಂಬುದು ಕಿತ್ತೂರಿನ ಚರಿತ್ರೆಯ ಅಧ್ಯಯನದಿಂದ ತಿಳಿಯುತ್ತದೆ. ಒಂದು

ಸಂಸ್ಥಾನದ ರಾಣಿಯಾಗಿದ್ದಾಗಲೂ ಉಪೇಕ್ಷೆಗೆ ಒಳಗಾಗಿದ್ದು ವಿಷಾದನೀಯ. ಚರಿತ್ರೆಯ ತೆರೆಮರೆಯಲ್ಲಿ ಇರುವ ವೀರಮ್ಮಳಿಗೆ ಚರಿತ್ರೆಯಲ್ಲಿ ಮಹತ್ವ ಬರುವಂತೆ ಹಾವನೂರ ಅವರು ಪರಿಚಯಿಸಿದ್ದಾರೆ.

**ಮುಧೋಳ ರಾಜನ ಪರಕಾಯ ಪ್ರವೇಶ**

ಶ್ರೀನಿವಾಸ ಹಾವನೂರ ಅವರು ಬರೆದ ಮುಧೋಳ ರಾಜನ ಪರಕಾಯ ಪ್ರವೇಶ ಎಂಬ ಚಾರಿತ್ರಿಕ ಹಿನ್ನೆಲೆಯ ಲೇಖನವು ದಕ್ಷಿಣ ಮರಾಠ ಪ್ರವೇಶಗಳಲ್ಲಿ ಒಂದಾದ ಮುಧೋಳ ಸಂಸ್ಥಾನದ ಉತ್ತರಾಧಿಕಾರಕ್ಕೆ ಸಂಬಂಧಿಸಿದೆ. ಮುಧೋಳ ಸಂಸ್ಥಾನದ ಪ್ರಖ್ಯಾತ ರಾಜನಾಗಿದ್ದ ಮಾಲೋಜಿ ಘೋರ್ಪಡೆ (೧೭೧೬–೧೮೦೫)ಯ ಹಿರಿಯ ಮಗನ ಸಾವಿನ ಹಿನ್ನೆಲೆಯಲ್ಲಿ ಮೊಮ್ಮಗನಾದ ನಾರಾಯಣರಾವ್ ಆಡಳಿತ ನಡೆಸುತ್ತಾನೆ. ನಾರಾಯಣರಾವ್ ಕ್ರಿಶ. ೧೮೧೬ರಲ್ಲಿ ತೀರಿಕೊಂಡಾಗ ಆತನ ಹಿರಿಯ ಮಗನಾದ ಗೋವಿಂದರಾವ್ ಸಿಂಹಾಸನವನ್ನೇರಬೇಕಿತ್ತು. ಆದರೆ ಹಿರಿಯ ಹೆಂಡತಿ ನಾರಾಯಣರಾವ್‌ಗೆ ಜಾನಕಿ ಮತ್ತು ಬುಕ್ಕಾಬಾಯಿ ಎಂಬ ಇಬ್ಬರು ಹೆಂಡತಿಯರಿದ್ದರು. ನಾರಾಯಣರಾವ್ ತೀರಿಕೊಂಡ ನಂತರ ಕೆಲಕಾಲ ಬುಕ್ಕಬಾಯಿಯೇ ಆಡಳಿತದ ಚುಕ್ಕಾಣಿ ಹಿಡಿದಿದ್ದಳು. ತನ್ನ ಮಗನಾದ ವೆಂಕಟನನ್ನು ರಾಜನನ್ನಾಗಿ ಮಾಡಬೇಕೆಂದು ಇಚ್ಚಿಸಿದ್ದಳು. ನಾರಾಯಣರಾವ್‌ನ ಹಿರಿಯ ಮಗನಾದ ಪುಣೆಯಲ್ಲಿದ್ದ ಗೋವಿಂದರಾವ್‌ಗೆ ಸಿಂಹಾಸವನ್ನೇರಲು ಬುಕ್ಕಾಬಾಯಿ ನಿರಾಕರಿಸುತ್ತಿದ್ದಳು. ಇದರಿಂದ ನೊಂದುಕೊಂಡ ಗೋವಿಂದರಾವ್ ಮರಾಠ ಪ್ರಾಂತದಲ್ಲಿ ಹೆಸರು ಪಡೆದಿದ್ದ ಬಾಪುಗೋಖಲೆ ಎಂಬ ಸರದಾರನೊಡನೆ ಸಖ್ಯ ಬೆಳೆಸಿದ್ದನು.

ಕ್ರಿ.ಶ. ೧೮೧೮ರಲ್ಲಿ ನಡೆದ 'ಅಷ್ಟಿ' ಯುದ್ಧದಲ್ಲಿ ಬಾಪುಗೋಖಲೆ ಬ್ರಿಟೀಶರ ವಿರುದ್ಧ ಹೋರಾಡಿ ಸಾವನ್ನಪ್ಪುತ್ತಾನೆ. ಗೆಳೆಯ ಗೋವಿಂದರಾವ್ ಗಾಯಗೊಂಡು ಕಣ್ಮರೆಯಾಗುತ್ತಾನೆ. ಎಲ್ಲರೂ ಗೋಪಿಂದರಾವ್ ತೀರಿಕೊಂಡನೆಂದು ಭಾವಿಸುತ್ತಾರೆ. ಆನಂತರ ಎಂಟು ವರುಷಗಳು ಕಳೆದಾಗ ಬ್ರಿಟೀಶ್ ಗವರ್ನರ್ ಎಲ್ಫಿನ್‌ಸ್ಟನ್‌ಗೆ ಚಿಂಚೋಳಿಯಲ್ಲಿ ವಾಸವಾಗಿರುವ ಗೋವಿಂದರಾವ್ ಪತ್ರ ಬರೆದು ನನಗೆ ನ್ಯಾಯ ದೊರಕಿಸಿಕೊಡಬೇಕೆಂದು ವಿನಂತಿಸುತ್ತಾನೆ. ತನ್ನ ತಮ್ಮ ವೆಂಕಟರಾವ್‌ಗೆ ನೀಡಿರುವ ಸಂಸ್ಥಾನದಲ್ಲಿ ನನಗೂ ಪಾಲಿದೆ ಎಂದು ವಿನಂತಿಸುತ್ತಾನೆ.

"ಈ ಪತ್ರದ ಕಾರಣದಿಂದಾಗಿ ತೀರಿಹೋದನೆಂದು ಭಾವಿಸಲಾಗಿದ್ದ ಗೋವಿಂದರಾವ್ ಜೀವಂತನಾಗಿರುವನೆಂಬ ಸುದ್ದಿ ಶರವೇಗದಲ್ಲಿ ಹಬ್ಬಿತು. ಚಿಂಚೋಳಿಯಲ್ಲಿ ವಸತಿ ಹೂಡಿರುವ ಈ ವ್ಯಕ್ತಿ ಗೋವಿಂದರಾವನೇ ಹೌದೇ? ಎಂಬುದನ್ನು ಖಾತ್ರಿಗೊಳಿಸಲು ವೆಂಕಟರಾವ್ ತನ್ನ ಆಪ್ತ ವರ್ಗದ ಕೆಲವರನ್ನು ಚಿಂಚೋಳಿಗೆ ಕಳುಹಿಸಿದನು. ಇವರು ಗೋವಿಂದರಾಯನನ್ನು ಮುಖತಃ ಭೇಟಿಯಾಗಿ, ಮಾತನಾಡಿಸಿ ಈತನೇ ಗೋವಿಂದರಾವ್ ಎನ್ನುವ ನಿಶ್ಚಿತ ನಿಲುವು ತಳೆದರು. ಅನಂತರ ವೆಂಕಟರಾವ್ ತನ್ನ ಕಾರುಭಾರಿ ಅಪ್ಪಾಜಪ್ಪನನ್ನು ಗೋವಿಂದರಾವ್‌ನ ಬಳಿ ಕಳುಹಿಸಿದನು. ಈತನೂ ಚಿಂಚೋಳಿಯಲ್ಲಿರುವ ವ್ಯಕ್ತಿ

ಗೋವಿಂದರಾವ್ ಹೌದು ಎನ್ನುವುದನ್ನು ದೃಢೀಕರಿಸಿದನು."[೪೪] ಎಂಬುದನ್ನು ಸವಿವರವಾಗಿ ಲೇಖಕರು ವಿವರಿಸಿದ್ದಾರೆ. ಅನೇಕ ಬಲ್ಲವರೆಲ್ಲ ಚಿಂಚೋಳಿಗೆ ಹೋಗಿ ಗೋವಿಂದರಾವ್ ಹೌದೆಂದು ದೃಢೀಕರಿಸಿಕೊಂಡು ಬಂದರು. ಇದರಿಂದಾಗಿ ಬುಕ್ಕಾಬಾಯಿಗೆ ಮತ್ತು ವೆಂಕಟರಾವ್‌ಗೆ ಸಣ್ಣ ಮಟ್ಟದ ತಳಮಳವುಂಟಾಯಿತು.

ಎಲ್ಲಾ ರೀತಿಯಲ್ಲೂ ತಪಾಸಿಸಲಾಗಿ ಗೋವಿಂದರಾವ್ ಹೌದು ಎಂಬಂತಾದಾಗ ಬ್ರಿಟೀಶರ ಪರವಾಗಿ ಬೇಹುಗಾರಿಕೆ ಮಾಡುತ್ತಿದ್ದ ಬಾಲಾಜಿಪಂತನ ಪ್ರವೇಶವಾಗುತ್ತದೆ. ಬಾಲಾಜಿಪಂತ್ ವೆಂಕಟರಾವ್‌ನಿಂದ ಲಂಚ ಸ್ವೀಕರಿಸಿ ಗೋವಿಂದರಾವ್‌ಗೆ ಯಾವುದೇ ಕಾರಣಕ್ಕೆ ಮುಧೋಳ ಸಂಸ್ಥಾನದ ಆಸ್ತಿಯಲ್ಲಿ ಪಾಲು ಪಡೆಯಲು ಸಾಧ್ಯವಾಗದಿರುವಂತೆ ನೋಡಿಕೊಂಡನು.

ಗೋವಿಂದರಾವ್ ಆಸ್ತಿಯಲ್ಲಿ ಪಾಲು ಪಡೆಯಲು ಪ್ರಯತ್ನಿಸಿದ ಎಲ್ಲಾ ಹಂತಗಳಲ್ಲೂ ಬಾಲಾಜಿಪಂತ್ ಹಸ್ತಕ್ಷೇಪ ಮಾಡಿ ಪ್ರಕರಣ ಮುಚ್ಚಿ ಹೋಗುವಂತೆ ಮಾಡುವಲ್ಲಿ ಯಶಸ್ವಿಯಾಗುತ್ತಾನೆ. ಕೊನೆಗೆ ಬ್ರಿಟೀಶ್ ಆಡಳಿತದ ಕಟ್ಟುನಿಟ್ಟಿನ ಕಾನೂನಿನಂತೆ ಗೋವಿಂದರಾವ್ ತನ್ನ ಪತ್ನಿ ಮತ್ತು ಇಬ್ಬರು ಮಕ್ಕಳೊಂದಿಗೆ ಊರು ಬಿಟ್ಟು ಉತ್ತರ ಭಾರತದ ಕಡೆಗೆ ಹೊರಟು ಹೋಗುತ್ತಾನೆ. ಆನಂತರದಲ್ಲಿ ಗೋವಿಂದರಾವ್‌ನ ಸಂಬಂಧಿಕರು ಓರ್ವ ಗೋಸಾವಿಯನ್ನು ಗೋವಿಂದರಾವ್‌ನ ಪರಕಾಯ ಪ್ರವೇಶ ಮಾಡಿಸಿದರೂ ಪ್ರಯೋಜನವಾಗಲಿಲ್ಲ ಎಂದು ಲೇಖಕರು ತಿಳಿಸುತ್ತಾರೆ. ದಾಯಾದಿ ವೈರತ್ವ ಮತ್ತು ಅಧಿಕಾರದ ಆಸೆ ಎಲ್ಲ ರೀತಿಯ ಸಂಬಂಧಗಳನ್ನು, ಮಾನವೀಯತೆಯನ್ನು ಮೀರಿ ನಿಲ್ಲುತ್ತದೆ ಎಂಬುದಕ್ಕೆ ಈ ಪ್ರಕರಣ ಉತ್ತಮ ಉದಾಹರಣೆ. ಅನಾದಿಕಾಲದಿಂದಲೂ ಈ ರೀತಿಯ ಪ್ರಕರಣಗಳು, ಸತ್ಯಕ್ಕೆ ಸೋಲಾಗುವ ಸ್ಥಿತಿಗತಿಗಳು ಚರಿತ್ರೆಯುದ್ದಕ್ಕೂ ನಡೆದಿರುವುದನ್ನು ಈ ಚಾರಿತ್ರಿಕ ಲೇಖನ ಉಲ್ಲೇಖಿಸುತ್ತದೆ.

**ದತ್ತಕವಿಧಿ ಕೆಲ ವಿಶಿಷ್ಟ ಘಟನೆಗಳು**

ಮುಂಬಯಿ ಕರ್ನಾಟಕ ಪ್ರದೇಶಕ್ಕೆ ಸಂಬಂಧಿಸಿದ ದತ್ತಕ ವಿಧಿಯ ಕೆಲವು ಘಟನೆಗಳನ್ನು ಆಧರಿಸಿದ ಲೇಖನವೇ ದತ್ತಕವಿಧಿ-ಕೆಲ ವಿಶಿಷ್ಟ ಘಟನೆಗಳು. ಪ್ರಾಚೀನ ಕಾಲದಿಂದಲೂ ದತ್ತಕ ವಿಧಿ ಕಾರ್ಯರೂಪದಲ್ಲಿದುದ್ದನ್ನು ಮತ್ತು ಬ್ರಿಟಿಷರ ಕಾಲದಲ್ಲಿ ಭಾರತೀಯ ತೀವ್ರ ಅಸಮಾಧಾನಕ್ಕೆ ಕಾರಣವಾದ ದತ್ತಕ ವಿಧಿಯ ಬಗೆಗಿನ ಕೆಲವು ಘಟನೆಗಳನ್ನು ಶ್ರೀನಿವಾಸ ಹಾವನೂರ ಅವರು ವಿಶ್ಲೇಷಿಸಿದ್ದಾರೆ.

ಪ್ರಾಚೀನ ಕಾಲದಲ್ಲಿನ ಕುಟುಂಬ ವ್ಯವಸ್ಥೆಯಲ್ಲಿ ದತ್ತಕ ವಿಧಿ ನೆಲೆಯೂರಿದ್ದನ್ನು ಪೌರಾಣಿಕ ಕಥೆಗಳಲ್ಲಿ ಉಲ್ಲೇಖವಾಗಿರುವುದನ್ನು ಲೇಖಕರು ವಿವರಿಸಿದ್ದಾರೆ. ಹಾಗೆಯೇ ಮಧ್ಯಯುಗದಲ್ಲಿಯೂ ದತ್ತಕ ವಿಧಿ ಪ್ರಚಲಿತದಲ್ಲಿದ್ದು, ಸದ್ಗತಿ ಪ್ರಾಪ್ತಿ, ವಂಶ ಪರಂಪರೆ, ಆಸ್ತಿಯ ಉಪಭೋಗ ಇತ್ಯಾದಿಗಳನ್ನು ದತ್ತಕವಿಧಿಯ ಮುಖಾಂತರ ಪಡೆಯಬಹುದಾಗಿತ್ತು. ಬ್ರಿಟಿಷರು ಇದನ್ನೇ ಒಂದು ಅಸ್ತ್ರವನ್ನಾಗಿ ಬಳಸಿಕೊಂಡು ಭಾರತೀಯ ದೇಸಿ ಸಂಸ್ಥಾನಿಕರ

ಕೆಂಗಣ್ಣಿಗೆ ಗರಿಯಾದರು. ಈ ಕುರಿತು ಶ್ರೀನಿವಾಸ ಹಾವನೂರ ಅವರು ಹೀಗೆ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. "ಇದರಲ್ಲಿ ಅವರ ಅಪ್ಪಟ ಸ್ವಾರ್ಥವಿತ್ತೆಂದು ಬೇರೆ ಹೇಳಬೇಕಿಲ್ಲ. ಯಾರೊಬ್ಬ ದೇಸಾಯಿ/ಸಂಸ್ಥಾನಿಕ ತೀರಿಹೋದರೆ, ಮಕ್ಕಳಿಲ್ಲವೆಂಬ/ ವಾರಸುದಾರರಿಲ್ಲೆಂಬ ಕಾರಣಕೊಟ್ಟು ಆ ಪ್ರದೇಶವನ್ನು ತಮ್ಮ ನೇರ ಆಡಳಿತಕ್ಕೆ ಒಳಗಾಗಿಸಬಹುದು. ಡಾಲ್‌ಹೌಸಿ ವೈಸರಾಯ್‌ಯ 'Doctrine of Lapse' ಈ ವಿಷಯದಲ್ಲಿ ಕುಪ್ರಸಿದ್ಧವಿದೆ. ಅದರ ಬಹುದೊಡ್ಡ ಉದಾಹರಣೆ ಝೂಂಸಿಯ ರಾಣಿ ಲಕ್ಷ್ಮಿಬಾಯಿಯದು; ಅಲ್ಲಿಯ ರಾಜನು ಜೀವಂತ ಇದ್ದಾಗಲೇ ಒಬ್ಬ ಹುಡುಗನನ್ನು ದತ್ತು ತೆಗೆದುಕೊಂಡಿದ್ದನು. ರಾಣಿಯು ಅದಕ್ಕೆ ಮಂಜೂರಾತಿಯನ್ನು ಕೇಳಿದಾಗ ಡಾಲ್‌ಹೌಸಿ ಕೊಡಲಿಲ್ಲ. ಆ ಮುಂದೆ ೧೮೫೭ರ ವಿಪ್ಲವದಲ್ಲಿ ರಾಣಿಯು ಯಾವ ರೀತಿ ಪ್ರತಿಕ್ರಿಯೆ ತೋರಿದಳೆಂಬುದನ್ನು ಬಲ್ಲೆವು."[೪೫]

ಕಿತ್ತೂರಿನ ಸಂಸ್ಥಾನವನ್ನು 'ದತ್ತಕ ವಿಧಿ'ಯ ಮೂಲಕವೇ ಬ್ರಿಟೀಷರು ಕಿತ್ತುಕೊಂಡರು, ತಮಗೆ ಬೇಕಾದ ರೀತಿಯಲ್ಲಿ ವ್ಯಾಖ್ಯಾನಗಳೊಂದಿಗೆ ಬ್ರಿಟೀಶರು ದತ್ತಕ ವಿಧಿಗೆ ಕಾಯಕಲ್ಪ ನೀಡಿದರು. ಅದರಲ್ಲಿಯೂ ತಮ್ಮ ಆಡಳಿತಕ್ಕೆ ಅನುಕೂಲವಾಗುವಂಥ ನಿಯಮಗಳನ್ನು ಅಳವಡಿಸಿಕೊಳ್ಳುವುದರಲ್ಲಿ ಹಿಂದೆ ಬೀಳಲಿಲ್ಲ ಬ್ರಿಟೀಶರು. ಭಾರತೀಯ ಧರ್ಮಗ್ರಂಥಗಳಲ್ಲಿ ದತ್ತಕಕ್ಕೆ ಸಂಬಂಧಿಸಿದ ವಿಷಯಗಳನ್ನು ತಿಳಿದರೂ ಕೆಲವೊಂದು ವಿಚಾರಗಳಲ್ಲಿ ಬ್ರಿಟೀಶರಿಗೆ ಬಗೆಹರಿಸಲು ಸಮಸ್ಯೆಯಾದದ್ದುಂಟು ಎಂದು ಲೇಖಕರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. (ಪು. ೭೬) ಬ್ರಿಟೀಶ್ ಆಡಳಿತದ ಕಲೆಕ್ಟರ್ ಓರ್ವ ಶಾಸ್ತ್ರಿಯನ್ನು ಯಾವ ರೀತಿ ಪ್ರಶ್ನೆಗಳನ್ನು ಕೇಳಿದ ಎಂಬುದಕ್ಕೆ ಉದಾಹರಣೆಗಳನ್ನು ನೀಡಿದ್ದಾರೆ. ಡಂಬಳ, ರಂಗಾಪುರ ದತ್ತಕ ಪ್ರಕರಣಗಳ ಸೂಕ್ಷ್ಮತೆಗಳನ್ನು ಲೇಖಕರು ವಿವರಿಸಿದ್ದಾರೆ.

**ಕರ್ನಾಟಕ ಏಕೀಕರಣದ ಮೊದಲ ಪ್ರಯತ್ನ**

ದೇಶದಲ್ಲಿ ಬ್ರಿಟಿಷರ ಆಡಳಿತದ ವಿರುದ್ಧ ಪ್ರತಿಭಟನೆ ದಂಗೆಗಳು ಅಲ್ಲಲ್ಲಿ ಎದ್ದವು. ಸಂಸ್ಥಾನಗಳಾದ ಕಿತ್ತೂರ, ಸಿಂದಗಿ, ನಿಪ್ಪಾಣಿ, ಖಾನಾಪುರ, ಹಲಗಲಿ, ಬೈಲಹೊಂಗಲ, ಮುಂಡರಗಿ, ಡಂಬಳಗಳಲ್ಲಿ ಸಣ್ಣಪುಟ್ಟ ದಂಗೆಗಳೇಳುತ್ತಿದ್ದವು. ಚಾಪ್ಲಿನ್‌ನಿಗೆ ಆಡಳಿತ ದೃಷ್ಟಿಯಿಂದ ನಿರ್ವಹಣೆ ಮಾಡುವುದು ಕಷ್ಟಕರವಾಗಿತ್ತು. ಕಂದಾಯ ದೃಷ್ಟಿಯಿಂದ ಹೇಳುವುದಾದರೆ ಹೆಚ್ಚು ಆದಾಯವಿರಲಿಲ್ಲ. ಈತನು ಈ ಪ್ರಾಂತ್ಯವನ್ನು ಮುಂಬಯಿಗೆ ಹಸ್ತಾಂತರಿಸಬಾರದೆಂದು ಎಲ್‌ಫಿನ್‌ಸ್ಟನ್‌ನಿಗೆ ಪತ್ರದ ಮೂಲಕ ಹೇಳಿದ. ಈ ಪ್ರಾಂತ್ಯದ ಗಲಭೆಯನ್ನು ನಿಯಂತ್ರಿಸಲು ಮದ್ರಾಸ್ ಸೈನಿಕರ ಸಹಾಯ ಪಡೆಯುತ್ತಿದ್ದರು. ಸ್ಥಳೀಯರು ಕನ್ನಡ ಮಾತನಾಡುವ ಹಾಗೆಯೇ ಮದ್ರಾಸ್ ಪ್ರಾಂತ್ಯದ ಭಾಗದಲ್ಲಿ ಕನ್ನಡ ಮಾತನಾಡುತ್ತಾರೆ. ಸ್ಥಳೀಯ ಸಂಸ್ಥಾನಿಕರು ವತನದಾರರು, ಮರಾಠಿಗರು, ಪೇಶ್ವೆಯರು. ಹೀಗಾಗಿ ಮರಾಠರ ಬಗ್ಗೆ ಬಡಿಯಲು ಸಹಾಯವಾಗಬಹುದು ಎಂದು ಮಹತ್ವ ವಿಚಾರವನ್ನು ಚಾಪ್ಲಿನ್ ಬರೆದಿದ್ದ. ಮುಂಬಯಿ ಪ್ರಾಂತ್ಯದ ಕೌನ್ಸಿಲ್ ಸದಸ್ಯರಾದ ವಾರ್ಡೆನ್ ಇದನ್ನು ತಿರಸ್ಕರಿಸುತ್ತಾನೆ.

ಅಲ್ಲದೆ ಈತನು ಕೆಲವು ಅಂಶಗಳನ್ನು ತಿಳಿಸುತ್ತಾನೆ. ಇಲ್ಲಿ ಗಲಭೆಯಾದಾಗ ಮುಂಬಯಿ ಮಿಲಿಟರಿಯನ್ನು ಬಳಸಿಕೊಳ್ಳುವುದು ಉಚಿತ ಎಂಬ ಅಭಿಪ್ರಾಯವನ್ನು ತಿಳಿಸುತ್ತಾನೆ. ಸ್ಥಳೀಯರು ಮರಾಠಿಗರು ಅಲ್ಲದೆ ಅದೇ ಭಾಷೆಯನ್ನು ಮಾತನಾಡುತ್ತಾರೆ. ಹಾಗೆಯೇ ಸಂಸ್ಥಾನಿಕರು ಮತ್ತು ಇನಾಂದಾರ್ ಮತ್ತು ಇವರೆಲ್ಲರೂ ಮರಾಠಿಗರಿರುತ್ತಾರೆ. ಹೀಗಾಗಿ ಮುಂಬಯಿ ಪ್ರಾಂತ್ಯದಲ್ಲಿ ಉಳಿಸಿಕೊಳ್ಳಬೇಕು ಎಂದು ಆಕ್ಷೇಪ ವ್ಯಕ್ತಪಡಿಸುತ್ತಾನೆ. ಹಾಗಾಗಿ ಒಂದು ರೀತಿಯಲ್ಲಿ ಎಲ್‌ಫಿನ್‌ಸ್ಟನ್ನನಿಗೆ ಉಭಯ ಸಂಕಟವಾದಂತಾಯಿತು. ಈ ರೀತಿಯಾಗಿ ವಾರ್ಡ್‌ನ್‌ನಿಂದ ಉತ್ತರ ನಿರೀಕ್ಷಿಸಲಾಗಿರಲಿಲ್ಲ. ಎಲ್‌ಫಿನ್‌ಸ್ಟನ್ ಮದ್ರಾಸ್ ಗವರ್ನರ್ ಮನ್ರೋಗೆ ಅಭಿಪ್ರಾಯ ಕೇಳಿ ಪತ್ರ ಬರೆದನು. ಇದಕ್ಕೆ ಮನ್ರೋ ದೀರ್ಘವಾದ ಉತ್ತರವನ್ನು ನೀಡಿರುವುದನ್ನು ಲೇಖಕರು ವಿವರಿಸಿದ್ದಾರೆ. "ಸದ್ಯ ಮಿಲಿಟರಿ ಆಡಳಿತವು ಬಹುಮಟ್ಟಿಗೆ ಮದ್ರಾಸಿನವರದ್ದಾಗಿದೆ. ಸಿವಿಲ್ ಆಡಳಿತವು ಮುಂಬಯಿ ಸರಕಾರಕ್ಕೆ ಸೇರಿದೆ. ಆಡಳಿತದ ಈ ರೀತಿಯ ವಿಭಜನೆ ಸಲ್ಲದು ಎರಡೂ ಒಂದೇ ಅಧಿಕಾರಕ್ಕೆ ಒಳಪಟ್ಟಿರತಕ್ಕದು"[೪೬] ಎಂಬುದಾಗಿ ಮನ್ರೋ ಅಂತಿಮ ಉತ್ತರ ನೀಡಿರುವುದನ್ನು ಲೇಖಕರು ಉಲ್ಲೇಖಿಸಿದ್ದಾರೆ.

"...ಮನ್ರೋ ಒಬ್ಬನನ್ನುಳಿದು ಯಾರಿಗೂ ಈ ವಿಚಾರವಾಗಿ ನಿಜವಾದ ಆಸ್ಥೆಯಾಗಲೀ, ಅದರಿಂದಾಗುವ ಪ್ರಯೋಜನದ ಕಲ್ಪನೆಯಾಗಲೀ ಇರಲಿಲ್ಲ. ಚಾಪ್ಲಿನ್ ಕೂಡ ಯೋಜನೆಯನ್ನು ಮಂಡಿಸುವಾಗಲೂ ಆಳವಾಗಿ ಆಲೋಚಿಸಿದಂತೆ ಕಾಣಲಿಲ್ಲ. ಕನ್ನಡ ಮಾತನಾಡುವವರು ಒಂದುಗೂಡುವರೆಂಬ ಕಾರಣವನ್ನು ಕಾಣಿಸಿದ್ದರೂ ಕರ್ನಾಟಕ ಏಕೀಕರಣದ ಕಲ್ಪನೆಯೇನೂ ಅವನಿಗಿರಲಿಲ್ಲ. ಆದರೆ ಯಾವ ಕಾರಣಕ್ಕಾಗಿ ಭಾಷಿಕ ಏಕೀಕರಣವಾಗಬೇಕು ಎಂದು ನಾವು ತಿಳಿದಿದ್ದೇವೆಯೋ ಅದು ತಂತಾನೆ ಕೈಗೂಡುತ್ತಿತ್ತು. ಈ ಹಸ್ತಾಂತರವಾಗಿದ್ದರೆ 'ಕೆನರಾ'ದ ೨ ಜಿಲ್ಲೆಗಳು ಮತ್ತು ಬಳ್ಳಾರಿ, ೧೮೪೩ರಲ್ಲಿ ವಿಲೀನವಾದ ಕೊಡಗು ಮತ್ತು ಧಾರವಾಡ, ಬೆಳಗಾವಿ, ವಿಜಾಪುರ ಜಿಲ್ಲೆಗಳು ಹೀಗೆ ಒಟ್ಟಿಗೆ ೭ ಜಿಲ್ಲೆಗಳು ಒಂದೇ ಆಡಳಿತಕ್ಕೆ ಒಳಪಡುತ್ತಿದ್ದವು. ಕ್ಷೇತ್ರಮಾನದಲ್ಲಿ ಇದಿಷ್ಟು ಆಗಿನ ಮೈಸೂರು ಸಂಸ್ಥಾನಕ್ಕೆ ಸಮಾನವಾಗಿದ್ದಿತು. ಮೈಸೂರು ಸಂಸ್ಥಾನವಾದರೂ ಮದ್ರಾಸ್ ಪ್ರಾಂತದವರಂತೆಯೇ ತನ್ನ ಆಡಳಿತವನ್ನು ನಡೆಸುತ್ತಿದ್ದಿತು. ಆದ್ದರಿಂದ ಎರಡೂ ಪ್ರದೇಶಗಳ ಹತ್ತಿರದ ಒಡನಾಟಕ್ಕೆ ಅವಕಾಶವಿದ್ದಿತು ಎಂಬುದಾಗಿ ಶ್ರೀನಿವಾಸ ಹಾವನೂರ ಅವರು ವಿಶ್ಲೇಷಿಸಿದ್ದಾರೆ.

ಸ್ಥಳೀಯ ಹಂತದಲ್ಲಿ ಕಂಡು ಬರುವ ದಂಗೆಯು ತಾತ್ಕಾಲಿಕವಾಗಿದ್ದವು. ಕನ್ನಡ ಪ್ರದೇಶ ವ್ಯಾಪ್ತಿ ಮದ್ರಾಸ್ ಪ್ರಾಂತ್ಯದ ಸುತ್ತುವರಿದಿತ್ತು. ಅಲ್ಲಿಯ ಜನರಾಡುವ ಭಾಷೆ ಕೆನರೀಸ್ ಆಗಿತ್ತು. ಅಲ್ಲದೆ ಕೌಟುಂಬಿಕ ಮತ್ತು ವ್ಯಾಪಾರ ಸಂಬಂಧ ಪಕ್ಕದ ಶಿರಸಿ, ಸೋಂದಾ ಮತ್ತು ಬಳ್ಳಾರಿ, ಹೊಸಪೇಟೆ ಜನರೊಂದಿಗೆ ಸಂಬಂಧವಿತ್ತು. ಈ ಮಾತನ್ನು ಗಮನಿಸಿ ಹೇಳುವುದಾದರೆ. "It would give more satisfaction to the people to be united to their own than to be transferred to a country of

mahrattas with whom they have no Natural connection"[೪೭] ಈ ರೀತಿಯ ಮಹತ್ವದ ಸಂಗತಿಗಳು ತಿಳಿಯುತ್ತದೆ. ಇದು ಒಂದಡೆ ಇರಬೇಕು ಎನ್ನುವುದು ವೇದ್ಯವಾಗುತ್ತದೆ.

ಈ ಸಂಗತಿಯನ್ನು ಗಮನಿಸಿದರೆ ಏಕೀಕರಣದ ಸ್ವರೂಪ ಪ್ರತಿನಿಧಿತಗೊಂಡಿದೆ. ಈ ಮಿಲಿಟರಿ ಆಡಳಿತವು ಮದ್ರಾಸ್‌ವರಿಗಿತ್ತು. ಅಲ್ಲದೆ ಸಿವಿಲ್ ಆಡಳಿತ ಮುಂಬಯಿಗಿತ್ತು. ಹೀಗಾಗಿ ಈ ವಿಭಜನೆ ಮಾಡುವುದು ಉಚಿತವಲ್ಲ. ಈ ಎರಡು ಒಂದೇ ಒಂದೇ ಅಧಿಕಾರಕ್ಕೆ ಒಳಪಟ್ಟಿರಬೇಕು. ಇದನ್ನು ಬದಲಾಯಿಸುವುದು ಆರ್ಥಿಕವಾಗಿ ಪರಿಣಾಮ ಕುರಿತು ಸಮಿತಿ ಮಾಡಿದೆ. ಆದ್ದರಿಂದ ಆರ್ಥಿಕ ಪರಿಣಾಮವನ್ನು ಮನ್ರೋ ಪತ್ರದ ಮೂಲಕ ವರಿಷ್ಠರ ಗಮನಕ್ಕೆ ತರುತ್ತಾರೆ. ಎಲ್ಲದರ ಪರಿಣಾಮ ಬದಲಾಯಿಸುವುದು ಅಗತ್ಯವಿಲ್ಲವೆಂದರು. ಈ ಕಾರ್ಯವು ಮನ್ರೋ ಒಬ್ಬರಿಗೆ ಬಿಟ್ಟರೆ ಇನ್ನಾರಿಗೂ ಇಷ್ಟವಿರಲಿಲ್ಲ. ಅಲ್ಲದೆ ಕನ್ನಡ ಭಾಷೆ ಒಂದು ಕಡೆ ಇರುವುದು ಅವರಿಗೂ ಇಷ್ಟ ಇರಲಿಲ್ಲ. ಅದರ ಪ್ರಯೋಜನ ಬೇಕಾಗಿರಲಿಲ್ಲ. ಕರ್ನಾಟಕ ಏಕೀಕರಣದ ಸ್ವರೂಪ ಪಡೆದುಕೊಳ್ಳಲು ಸಾಧ್ಯವಿಲ್ಲ. ಯಾವ ಕಾರಣಕ್ಕಾಗಿ ಭಾಷಿಕವಾಗಿ ಏಕೀಕರಣವಾಗಬೇಕು ಎಂದು ಅರಿತುಕೊಂಡಿದ್ದರು. ಆ ಕಾರ್ಯ ತನ್ನಿಂದ ತಾನೇ ಸಾಗಿತು. ಕೆನರಾ ಎರಡು ಜಿಲ್ಲೆಗಳು, ಬಳ್ಳಾರಿ ವಿಲೀನ, ಕೊಡಗು ಧಾರವಾಡ ಬೆಳಗಾವಿ ವಿಜಾಪುರ ಹೀಗೆ ಜಿಲ್ಲೆಗಳಾಗಿವೆ. ಅಲ್ಲದೆ ನಿಜಾಮನ ಅಳ್ವಿಕೆಗೆ ಒಳಪಟ್ಟಿತ್ತು. ಮೂರು ಜಿಲ್ಲೆ ಹೊರತುಪಡಿಸಿದರೆ ಇನ್ನುಳಿದ ಎಲ್ಲವು ಈ ಭಾಷೆಯ ಅಡಿಯಲ್ಲಿ ಬರುತ್ತವೆ.

ಕ್ರಿ.ಶ.೧೮೨೯ರಲ್ಲಿ ಹಸ್ತಾಂತರ ಕುರಿತು ಮಹತ್ವ ಸೂಚನೆ ಬರುತ್ತದೆ. ಮುಂಬಯಿ ವ್ಯಾಪ್ತಿಯಲ್ಲಿ ಬರುವ ಕನ್ನಡ ಪ್ರದೇಶ ಮದ್ರಾಸ್ ವ್ಯಾಪ್ತಿಯ ಕನ್ನಡ ಪ್ರದೇಶ ಮುಂಬಯಿ ಸೇರಬೇಕು. ಮುಂಬಯಿ ಗೌವರ್ನರ್ ಜಾನ್ ಮಲ್ಕಮ್. ಕೈಬಿಡುವ ಪ್ರದೇಶವೆಂದರೆ ಉತ್ತರಕನ್ನಡ ಘಟ್ಟದ ಕೆಳಗಿನ ಪ್ರದೇಶ ಸೂಪಾ ತಾಲೂಕಿನ ಶಿರ್ಸಿ, ಸಿದ್ದಾಪುರ, ತಪ್ಪಲಿನ ಪ್ರದೇಶ, ಕರಾವಳಿ ಭಾಗದ ಮಧ್ಯಸಹ್ಯಾದ್ರಿಯ, ಈ ಪ್ರದೇಶ ಧಾರವಾಡ, ಬೆಳಗಾಂ ಜಿಲ್ಲೆಯಲ್ಲಿ ಸೇರಿಕೊಳ್ಳುತ್ತವೆ. ಆಡಳಿತ ಸಂಬಂಧಿಸಿದಂತೆ ಮುಂಬಯಿ ಮದ್ರಾಸ್ ಪ್ರಾಂತ್ಯಗಳ ನಡುವೆ ಪತ್ರ ವ್ಯವಹಾರ ನಡೆದಿತ್ತು.

**ಆಡಳಿತ ಶಿಕ್ಷಣ ರಂಗಗಳಲ್ಲಿ ಭಾಷಾ ಮಾಧ್ಯಮ ಸಮಸ್ಯೆ**

ಬ್ರಿಟಿಷರು ಈ ದೇಶಕ್ಕೆ ಬಂದಾಗ ಮೊದಲ ಸಮಸ್ಯೆಯಾಗಿ ಕಂಡದ್ದು ಭಾಷಾ ಸಮಸ್ಯೆ. ಏಕೆಂದರೆ ಪ್ರತಿಯೊಂದು ಭಾಷೆ ತನ್ನದೇಯಾದ ಭೌಗೋಳಿಕ ಎಲ್ಲೆಯನ್ನು ಹೊಂದಿರುತ್ತದೆ. ಆಡಳಿತ ಭಾಷೆ ಮತ್ತು ವ್ಯವಹಾರಿಕ ಭಾಷೆ ಒಂದೇಯಾದರೆ ಯಾವುದು ತೊಡಕು ಬರುವುದಿಲ್ಲ. ಆಡಳಿತ ಭಾಷೆ ಜನಭಾಷೆ ಬೇರೆ ಬೇರೆಯಾದರೆ ಸಮಸ್ಯೆಯಾಗುತ್ತದೆ. ಹಾವನೂರ ಈ ಲೇಖನದ ಮೂಲಕ ಭಾಷೆಯ ತೊಡಕಿನಿಂದ ಉಂಟಾಗುವ ಸಮಸ್ಯೆಯನ್ನು ಕುರಿತು ವಿವೇಚಿಸಿದ್ದಾರೆ.

ಕನ್ನಡದ ಜನತೆಗೆ ಮರಾಠಿ ಭಾಷೆಯ ಬಗ್ಗೆ ತಿಳುವಳಿಕೆ ಇರಲಿಲ್ಲ. ಮರಾಠಿ ಓದು ಮತ್ತು ಬರಹ ಅವರಿಗೆ ರೂಢಿಯಾಗಿರಲಿಲ್ಲ. ಹೀಗಾಗಿ ಕಲಿಯುವ ಭಾಷೆ

ಮಾತೃಭಾಷೆಯಾಗಿರದೆ ಇತರ ಭಾಷೆಯಾದರೆ ಕಲಿಯಲು ಸರಳವಾಗುವುದಿಲ್ಲ. ಈ ಕಾರಣದಿಂದ ಟೇಲರ್ ಎಂಬ ಅಧಿಕಾರಿ ಶಿಕ್ಷಣ ಮತ್ತು ಆಡಳಿತವು ಕನ್ನಡದಲ್ಲಿಯೇ ನಡೆಯಬೇಕೆಂದು ಒತ್ತಿ ಹೇಳಿದ. ಯಾವುದೇ ಪ್ರದೇಶ ಆಡಳಿತ ವ್ಯವಹಾರವು ಅಲ್ಲಿಯ ಜನರ ಆಡುವ ಭಾಷೆಯೇ ಆಗಬೇಕಾದದು ನ್ಯಾಯಸಮ್ಮತ. ಆದರೆ ಈ ವಿಷಯ ಮುಂಬಯಿ ಕರ್ನಾಟಕದಲ್ಲಿ ತದ್ವಿರುದ್ಧವಾಗಿತ್ತು. ಸರಕಾರದ ವ್ಯವಹಾರವು ಮತ್ತು ಕಾಗದ ಪತ್ರಗಳು ಮರಾಠಿ ಭಾಷೆಗಿಂತ ಕನ್ನಡ ಭಾಷೆಯಲ್ಲಿ ಇರಬೇಕು ಎನ್ನುವುದು ಹಾವನೂರ ಅಭಿಮತ. ಹೀಗಾಗಿ ಭಾಷೆಗೆ ನಿಯಮಗಳನ್ನು ಕಡ್ಡಾಯಗೊಳಿಸಿ ಅನುಷ್ಠಾನ ತರುವುದು ಅಗತ್ಯ. ನೌಕರನಿಗೆ ಕನ್ನಡ ತಿಳಿದಿರಬೇಕು ಮತ್ತು ನೌಕರಿ ಬೇಕಾದವರಿಗೆ ಕನ್ನಡ ಚೆನ್ನಾಗಿ ಗೊತ್ತಿರಬೇಕು ಎಂದು ವಿಶ್ಲೇಷಿಸಿದ್ದಾರೆ.

ನೌಕರರಿಗೆ ಕನ್ನಡ ಬಾರದಿದ್ದರೆ ಕಡ್ಡಾಯವಾಗಿ ಕಲಿಯಬೇಕು. ಕನ್ನಡ ಪರೀಕ್ಷೆ ಪಾಸು ಮಾಡಬೇಕು. ಈ ಪ್ರಕಾರವಾಗಿ ಬೆಥಿಂಗ್ಟನ್ ಎಂಬ ಇಂಗ್ಲಿಷ್ ಅಧಿಕಾರಿಯು ಕನ್ನಡ ಪರೀಕ್ಷೆ ಕಟ್ಟಿ ಪಾಸು ಮಾಡಿದರು. ಧಾರವಾಡ ಸಭಾದ ಮುಖ್ಯ ಕಲೆಕ್ಟರ್ ಡನಲಪ್ ಅವರು ಭಾಷೆಯ ಕುರಿತು ತನ್ನ ಅನುಭವದ ಮಾತನ್ನು ಹೀಗೆ ಹೇಳಿದ್ದರು.

"ಈ ಭಾಷೆ ಬದಲಾವಣೆ ಕಷ್ಟ ಸಾಧ್ಯವೆಂಬುದು ಬಲ್ಲೆ. ಆದರೆ ಇದರ ಉದ್ದೇಶ ಘನವಾದದ್ದು ಮತ್ತು ಪ್ರಯೋಜನ ಅಪಾರವಾದದ್ದು. ಆದ್ದರಿಂದ ಏನೇ ತೊಂದರೆ ಬರಲಿ ಇದನ್ನು ಪೂರೈಸುವಲ್ಲಿ ಸಾರ್ಥಕತೆ ಇದೆ."[೨೮] ಕನ್ನಡ ಬಗ್ಗೆ ಇದ್ದ ತಾತ್ಸಾರ ಕಡಿಮೆಯಾಯಿತು. ಸರಕಾರದ ವರದಿಯ ಪ್ರಕಾರ (೧೮೪೮) ಕನ್ನಡ ಕಲಿತ ನೌಕರರ ಸಂಖ್ಯೆ ಹೆಚ್ಚಾಗಿರುವುದು ತಿಳಿದುಬರುತ್ತದೆ. ಆ ಕಾಲದಲ್ಲಿ ಸರಕಾರಿ ನೌಕರರು ಮರಾಠಿ ಮತ್ತು ಕನ್ನಡ ಎರಡು ಭಾಷೆ ಬಲ್ಲವರಾಗಿರಬೇಕು ಎನ್ನುವ ನಿಯಮಾವಳಿ ಕಡ್ಡಾಯವಾಗಿತ್ತು. ಕನ್ನಡ ಅಸ್ತಿತ್ವವು ಉಳಿಯಬೇಕಾದರೆ ಶಿಕ್ಷಣ ವಲಯದಲ್ಲಿ ಕನ್ನಡ ಭಾಷೆಯ ಅವಶ್ಯವಾಗಿ ಬಳಕೆ ಮಾಡಬೇಕು. ಭಾಷಾ ಮಾಧ್ಯಮ ನೀತಿಯು ೧೮೨೫ರ ಬೋರ್ಡ್ ಆಫ್ ಎಜುಕೇಷನ್ ೧೮೪೭ರ ವರದಿಯ ಚಾಲ್ತಿಯ ನಿಯಮಗಳು ಕಾರ್ಯಗತಗೊಂಡವು.

ಜನರ ಮತ್ತು ಸರ್ಕಾರದ ಮಧ್ಯ ಸಂಪರ್ಕಕ್ಕೆ ಭಾಷೆ ಬೇಕಾಗಿದ್ದರಿಂದ ಕನ್ನಡ ಶಾಲೆಗಳಲ್ಲಿ ಮರಾಠಿ ಕಲಿಸುವ ಅವಕಾಶವಿರಬಾರದು. ಮರಾಠಿ ಶಾಲೆಗಳಿಗೆ ಅನುಮತಿ ನೀಡಬಾರದು. ಮರಾಠಿ ಶಾಲೆಯಲ್ಲಿ ಕನ್ನಡ ಕಲಿಸುವ ಅವಕಾಶವಿರಬಾರದು ಎಂಬ ಈ ತೆರನಾಗಿ ನಿರ್ಬಂಧ ಹೇರುವುದರಿಂದ ಭಾಷೆಗೆ ಅಸ್ತಿತ್ವ ಪಡೆದುಕೊಳ್ಳಲು ಸಾಧ್ಯವಾಗಬಹುದು. ಶಿಕ್ಷಣ ವಲಯದಲ್ಲಿ ಭಾಷೆಯ ಪ್ರಗತಿಯಾಗಬೇಕಾದರೆ ಈ ರೀತಿಯ ಮಾನದಂಡಗಳು ಬೇಕು. ಭಾಷೆ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳುತ್ತದೆ.

ಈ ದೇಶದಲ್ಲಿ ಕ್ರಿ.ಶ. ೧೮೫೩ರ ಅವಧಿಯಲ್ಲಿ ಕನ್ನಡ ಅಸ್ತಿತ್ವದ ಮಹತ್ವ ಕಂಡಾಗ ಇಂಗ್ಲಿಷ್ ಅಭಿಯಾನ ಪ್ರಾರಂಭವಾದ ವರ್ಷವೆಂದು ಹೇಳಬಹುದು. ಮುಂಬಯಿ ಪ್ರಾಂತ್ಯದಲ್ಲಿ ಇಂಗ್ಲಿಷ್ ಬೇಕೆ-ಬೇಡವೇ ಎನ್ನುವ ಚರ್ಚೆ ನಡೆಯಿತು. ಈ ತೆರನಾದ ಚರ್ಚೆಯ ಸಂದರ್ಭದಲ್ಲಿ ಎಲ್‌ಫಿನ್‌ಸ್ಟನ್‌ನು ತನ್ನದೇಯಾದ ಸೂತ್ರವನ್ನು ಕೊಟ್ಟನು. ಅದರಲ್ಲಿ

ಇಂಗ್ಲಿಷ್ ಶಿಕ್ಷಣ ಒಂದು ವಿಷಯವಾಗಿ ಕಲಿಯಬೇಕು. ಕ್ರಿ.ಶ. ೧೮೪೮ರಲ್ಲಿ ಬೋರ್ಡ್ ಆಫ್ ಎಜುಕೇಷನ್ ಹಾಗೂ ಸರಕಾರಿ ಮಟ್ಟದಲ್ಲಿ ಚರ್ಚೆ ನಡೆದವು. ಅದೇನೆಂದರೆ ಯಾವ ಯಾವ ವಿಷಯಗಳು ಯಾವ ಹಂತದಲ್ಲಿ ಕಲಿಸಬೇಕು ಎನ್ನುವ ನಿಯಮಗಳನ್ನು ನಿರೂಪಿಸಿಕೊಟ್ಟರು.

ಸರ್ ಪಾರ್ಕಿನ್ಸನ್ ಹಾಗೂ ಇನ್ನಿರ್ವರು ಇಂಗ್ಲಿಷ್ ಕಲಿಯಬೇಕು ಮತ್ತು ಹೆಚ್ಚು ಇಂಗ್ಲಿಷ್ ಶಾಲೆಗಳನ್ನು ಸ್ಥಾಪಿಸಬೇಕು ಎನ್ನುವ ನಿರ್ಧಾರಕ್ಕೆ ಬಂದರು. ಇನ್ನೊರ್ವ ಅಧಿಕಾರಿ ಕರ್ನಲ್ ಜರ್ವಿಸ್ ಅವರು ಈ ಸಂಗತಿಯನ್ನು ವಿರೋಧಿಸಿ ತನ್ನದೇಯಾದ ವಿಚಾರವನ್ನು ಮಂಡಿಸಿದ. ಇತರ ಭಾಷೆಗಿಂತ ಮಾತೃಭಾಷೆಯಲ್ಲಿ ಕಲಿಸಬೇಕು ಎನ್ನುವ ವಾದ ಮಂಡಿಸಿದರು.

ಈಗಲೂ ಕೂಡ ಈ ಸಮಸ್ಯೆಯು ಜೀವಂತಿಕೆ ಕಂಡಿದೆ. ಅದು ಏನೇ ಇರಲಿ ಇಂಗ್ಲಿಷ್ ಭಾಷೆಯನ್ನು ಒಂದನೆಯ ತರಗತಿಯಿಂದ ಕಲಿಸಬೇಕೆ? ಅಥವಾ ಐದನೇ ತರಗತಿಯಿಂದ ಕಲಿಸಬೇಕೆ? ಎನ್ನುವ ಚರ್ಚೆ ಸರ್ಕಾರ ಮಟ್ಟದಲ್ಲಿ ಚರ್ಚೆಗೊಂಡು ಅಂತಿಮವಾಗಿಲ್ಲ ಇನ್ನು ಜೀವಂತಿಕೆ ಪಡೆದುಕೊಂಡಿದೆ ಎಂದರೆ ವಿಪರ್ಯಾಸ ಎನ್ನುವುದು ಮಹತ್ವದ ಸಂಗತಿ. ನ್ಯಾಯಾಲಯವು ತನ್ನದೇಯಾದ ನಿರ್ದೇಶನವನ್ನು ನೀಡಿ ಇಂತಹ ಸಮಸ್ಯೆಗೆ ಶಾಶ್ವತವಾದ ಪರಿಹಾರ ಕಂಡುಕೊಳ್ಳುವುದು ಸೂಕ್ತ ಎನ್ನುವುದು ನನ್ನ ತಿಳುವಳಿಕೆ.

**ಪ್ರಾಥಮಿಕ ಶಿಕ್ಷಣ ಸಾಗಿ ಬಂದ ದಾರಿ**

ಕ್ರಿ.ಶ. ೧೮೧೮ರಲ್ಲಿ ಖಡಕಿ ಯುದ್ಧ ನಡೆದು ಪೇಶ್ವೆಯರು ಸೋತ ನಂತರ ಉತ್ತರ ಕರ್ನಾಟಕ ಪ್ರದೇಶವೆಲ್ಲ ಬ್ರಿಟೀಶರ ವಶವಾಯಿತು. ಈ ಸಂದರ್ಭದಲ್ಲಿ ಶಿಕ್ಷಣದ ಆಗು-ಹೋಗುಗಳನ್ನು ನೋಡಿಕೊಳ್ಳಲು ಡಿ.ಪಿ.ಐ. ಕಚೇರಿಗಳನ್ನು ತೆರೆದು ಅಧಿಕಾರಿಗಳನ್ನು ನೇಮಿಸಿದರು. ಆ ಮೂಲಕ ಪಾಶ್ಚಾತ್ಯ ಶಿಕ್ಷಣ ಕ್ರಮ ಪ್ರಾರಂಭವಾಯಿತು. ಈ ವಿಷಯವನ್ನೇ ಶ್ರೀನಿವಾಸ ಹಾವನೂರ ಅವರು "ಪ್ರಾಥಮಿಕ ಶಿಕ್ಷಣ ಸಾಗಿ ಬಂದ ದಾರಿ" ಲೇಖನದಲ್ಲಿ ಬಳಸಿಕೊಂಡಿದ್ದಾರೆ.

ಪ್ರಾದೇಶಿಕವಾಗಿ ನೂರಾರು ಭಾಷೆಗಳನ್ನು ಮಾತನಾಡುವ ಜನರನ್ನು ಹೊಂದಿರುವ ಪ್ರಾಂತೀಯ ಭಾರತವನ್ನು ತಿಳಿಯಲು ಮೊದಮೊದಲು ಬ್ರಿಟೀಶರು ಹೆಣಗಾಡಿದ್ದಂತು ನಿಜ. ತಾವು ಗೆದ್ದುಕೊಂಡ ದಕ್ಷಿಣ ಮರಾಠ ಪ್ರದೇಶದ ಜನರ ಭಾಷೆ ಯಾವುದೆಂದು ತಿಳಿಯುವುದಕ್ಕೇ ಪೇಚಾಡಿದರು ಎಂಬುದಾಗಿ ಲೇಖಕರು ವಿವರಿಸುತ್ತಾರೆ. ಮರಾಠಿ ಆಡಳಿತ ಭಾಷೆಯಾಗಿ ಕಂಡರೆ ಹಿಂದಿ, ಕನ್ನಡ, ಇಂಗ್ಲಿಷ್ ಇವುಗಳ ಪ್ರಾಮುಖ್ಯತೆ ಬಗ್ಗೆ ಬ್ರಿಟೀಶರು ಗೊಂದಲಕ್ಕೀಡಾದರು.

"ಈ ವಿಷಮಸ್ಥಿತಿಯನ್ನು ಹೋಗಲಾಡಿಸಲು ಅನೇಕ ಬ್ರಿಟೀಶ್ ಅಧಿಕಾರಿಗಳು ಪ್ರಾಮಾಣಿಕವಾಗಿ ಕೆಲವು ಸಲ ತಮ್ಮ ಅಧಿಕಾರ ಮಿತಿಯನ್ನು ಮೀರಿ ಪ್ರಯತ್ನಪಟ್ಟರು. ೧೮೦ ವರ್ಷಗಳ ಹಿಂದಿನ ಸಂಗತಿ ಇದು ಧಾರವಾಡದಂತಹ ಪ್ರಮುಖ (ರಾಜಧಾನಿ)ನಗರದಲ್ಲಿ ಕನ್ನಡ ಶಾಲೆ ಇಲ್ಲವೆಂದರೇನು? ಎಂಬುದಾಗಿ ಕಳವಳಗೊಂಡ

ಧಾರವಾಡದ ಅಸಿಸ್ಟೆಂಟ್-ಕಲೆಕ್ಟರ್ ವಾಲ್ಟರ್ ಎಲಿಯಟ್ ಎಂಬಾತ ಸರಕಾರದ ಪೂರ್ಣ ಮಂಜೂರಿಯನ್ನು ಕಾಯದೇ ಕನ್ನಡ ಶಾಲೆಯೊಂದನ್ನು ತೆರೆದನು. ಆ ಮಂಜೂರಾತಿ ಬರಲೇ ಇಲ್ಲ. ಆ ತಪ್ಪಿಗಾಗಿ ತನ್ನ ತಿಂಗಳ ಸಂಬಳದಿಂದಲೇ ಶಿಕ್ಷಕನ ಸಂಬಳವನ್ನು ಪೂರೈಸಿದನು. ಎಷ್ಟು ದಿನ? ಅಖಂಡ ಮೂರು ವರ್ಷಗಳವರೆಗೆ!"[೨೯] ಎಂಬ ಮಹತ್ವದ ಸಂಗತಿಯ ಬಗ್ಗೆ ಲೇಖಕರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಇಂದಿನ ನಮ್ಮನ್ನಾಳುವ, ನಮ್ಮವರೇ ಆದವರು ಎಷ್ಟರಮಟ್ಟಿಗೆ ಮಾತೃಭಾಷೆಗೆ ಮಹತ್ವವನ್ನು ಕೊಡುತ್ತಿದ್ದಾರೆ? ಅದೇ ೧೮೦ ವರ್ಷಗಳ ಹಿಂದೆಯೇ ಇಂಗ್ಲೆಂಡಿನಿಂದ ಬಂದಂಥ ಅಧಿಕಾರಿಗಳು ತಮ್ಮದಲ್ಲದ ಭಾಷೆಗೆ ಕೊಟ್ಟಂಥ ಮಹತ್ವ ನಮ್ಮನ್ನು ಬೆರಗುಗೊಳಿಸುವಂಥದ್ದು, (ಮೆಕಾಲೆ ಶಿಕ್ಷಣ ಪದ್ಧತಿಯನ್ನು ಅಳವಡಿಸಿರುವುದು ಬೇರೆ ಮಾತು) ಮದ್ರಾಸ್ ಮತ್ತು ಮುಂಬಯಿ ಗವರ್ನರುಗಳಾದ ಮನ್ರೋ, ಎಲ್‌ಫಿನ್‌ಸ್ಟನ್ ಅವರಿಬ್ಬರಿಗೂ ಭಾರತೀಯರಿಗೆ ಪಾಶ್ಚಿಮಾತ್ಯ ಶಿಕ್ಷಣ ಮನ್ರೋನ ಮಾತುಗಳಿಂದ ತಿಳಿಯಬಹುದಾಗಿದೆ.

"The expenses incured by the goverment on education would be amply repaid by the improvement of the country, for the general diffusion of knowledge is inseparably followed by more orderly habits by increasing industry, by a taste for the comforts of life, by exertion to acquire them and by the growing prosperity of the people"[೩೦]

ಬಳ್ಳಾರಿಯಲ್ಲಿ ಕಲೆಕ್ಟರ್‌ನಾಗಿ ಕಾರ್ಯನಿರ್ವಹಿಸಿದ ಕ್ಯಾಂಬೆಲ್ ಗವರ್ನರ್ ಮನ್ರೋಗೆ ಬಳ್ಳಾರಿ ಪ್ರದೇಶದ ವಿದ್ಯಾಭ್ಯಾಸದ ಬಗೆಗೆ ಸವಿವರವಾದ ಮಾಹಿತಿಗಳನ್ನು ನೀಡಿರುವುದನ್ನು ಲೇಖಕರಾದ ಶ್ರೀನಿವಾಸ ಹಾವನೂರ ಅವರು ವಿವರಿಸಿದ್ದಾರೆ. ಊಟಾಬೈಸಿನ ಶಿಕ್ಷೆ, ಜಂತಿ ಹಿಡಿದು ಜೋತು ಬೀಳುವ ಶಿಕ್ಷೆ ಮತ್ತು ವಿದ್ಯಾಭ್ಯಾಸದ ಸ್ವರೂಪಗಳನ್ನು ಉಲ್ಲೇಖಿಸಲಾಗಿದೆ. ಪೆಂಡರ್‌ಗಾಸ್ಟ್ ತನ್ನ ಅಭಿಪ್ರಾಯವನ್ನು ಹೀಗೆ ಹೇಳಿದ್ದಾನೆ. "ಈ ಶಾಲೆಗಳಲ್ಲಿ ಓದು-ಬರಹ-ಗಣಿತ ಈ ಪ್ರಾಥಮಿಕ ವಿಷಯಗಳನ್ನು ಹೆಚ್ಚಿನ ವೆಚ್ಚವಿಲ್ಲದೇ ಕಲಿಸಲಾಗುತ್ತದೆ. ಕಲಿಸುವ ಪದ್ಧತಿಯೂ ಅತ್ಯಂತ ಸರಳ; ಅಷ್ಟೇ ಪರಿಣಾಮಕಾರಿಯೂ ಹೌದು; ಇಲ್ಲಿಯ ಸಾಮಾನ್ಯ ರೈತರು ಅಥವಾ ವ್ಯಾಪಾರಿಗಳು ಲೆಕ್ಕದಲ್ಲಿ ಇಷ್ಟೊಂದು ಚಾಕಚಕ್ಯತೆಯಿಂದ ವ್ಯವಹರಿಸುತ್ತಾರಲ್ಲ, ಅದೇ ಮಟ್ಟದ ನಮ್ಮ ದೇಶದ ಜನರಿಗಿಂತ ಇವರು ಈ ವಿಷಯದಲ್ಲಿ ಮೇಲ್ಮೆಯನ್ನು ಪಡೆದರೆಂದೇ ಹೇಳಬೇಕು."[೩೧]

ಮುಂಬಯಿ-ಕರ್ನಾಟಕ ಪ್ರಾಂತದಲ್ಲಿ ಕನ್ನಡಿಗರು ಶಿಕ್ಷಣದಲ್ಲಿ ಅತ್ಯಂತ ಹೆಚ್ಚು ಮಹತ್ವ ಕೊಟ್ಟಿರುವುದು ಕಾವ್ಯಕ್ಕೆ. ಜೈಮಿನಿ ಭಾರತ, ಕುಮಾರವ್ಯಾಸ ಭಾರತ, ಷಡಕ್ಷರಿಯ ರಾಜಶೇಖರ ವಿಳಾಸ, ಬಸವಪುರಾಣ, ಕನಕದಾಸರ ಹರಿಭಕ್ತಿಸಾರ, ಸರ್ವಜ್ಞ ತ್ರಿಪದಿಗಳು, ಸೋಮೇಶ್ವರ ಶತಕ ಹೀಗೆ ಕಾವ್ಯ ವೈಶಿಷ್ಟ್ಯಗಳನ್ನು ಶಾಲೆಗಳಲ್ಲಿ ಮಕ್ಕಳಿಗೆ ಮತ್ತು ಹಳ್ಳಿಗಳಲ್ಲಿ

ಜನಸಾಮಾನ್ಯರಿಗೆ ಪಠಿಸುವ ಮೂಲಕ ತಿಳಿಸಿಕೊಡಲಾಗುತ್ತಿತ್ತು ಎಂಬುದನ್ನು ಸರ್ಕಾರಿ ವರದಿಗಳು ಉಲ್ಲೇಖಿಸಿವೆ ಎಂದು ಶ್ರೀನಿವಾಸ ಹಾವನೂರ ಅವರು ತಿಳಿಸುತ್ತಾರೆ. ಶಿಕ್ಷಣಾವಧಿ ಕೇವಲ ೩-೪ ವರ್ಷ ಮಾತ್ರ; ನಂತರ ತಮ್ಮ ಕುಲಕಸುಬಿಗೆ ಮಕ್ಕಳನ್ನು ಸೇರಿಸುತ್ತಿದ್ದರು ಎಂದು ಬಂಕಾಪುರದಲ್ಲಿದ್ದ ಅಧಿಕಾರಿಯೊಬ್ಬ ಅಸಮಾಧಾನ ವ್ಯಕ್ತಪಡಿಸಿರುವುದನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

ವಾಲ್ಟರ್ ಎಲಿಯಟ್, ಎಲ್‌ಫಿನ್‌ಸ್ಟನ್ ಅಂಥವರು ಕನ್ನಡ ಶಾಲೆಯ ಬಗ್ಗೆ, ಕನ್ನಡ ಭಾಷೆಯನ್ನು ಕಲಿಸುವ ಬಗೆಗೆ ಹೊಸ ಹೆಜ್ಜೆ ಇಟ್ಟಿರುವುದನ್ನು ಹಾವನೂರ ಅವರು ವಿವರಿಸಿದ್ದಾರೆ. ಬಾಸೆಲ್ ಮಿಶನ್, ಪಠ್ಯಪುಸ್ತಕ ರಚನೆ, ಮೆಕಾಲೆ ಶಿಕ್ಷಣ ಪದ್ಧತಿ, ಹೀಗೆ ಎಲ್ಲ ರೀತಿಯಿಂದಲೂ ಕನ್ನಡ ಭಾಷೆಗೆ ಸಿಗಬೇಕಾದ ಮನ್ನಣೆ ಹಂತ ಹಂತವಾಗಿ ಸಿಕ್ಕಿರುವುದನ್ನು ಪ್ರಸ್ತುತ ಲೇಖನದಲ್ಲಿ ತಿಳಿಸಿದ್ದಾರೆ. ೧೮೩೬ರಲ್ಲಿ ಮುಂಬಯಿ-ಕರ್ನಾಟಕ ಭಾಗದಲ್ಲಿ ಕನ್ನಡ ಮಾಧ್ಯಮವುಳ್ಳ ಶಾಲೆಗಳನ್ನೇ ಸ್ಥಾಪಿಸಲು ಸರಕಾರ ಮಹತ್ವಪೂರ್ಣ ನಿರ್ಣಯ ಕೈಗೊಂಡಿರುವುದು ಐತಿಹಾಸಿಕ ಮೈಲುಗಲ್ಲು ಎಂದು ದಾಖಲಾಗಿದೆ. ಒಟ್ಟಾರೆಯಾಗಿ ಮರಾಠಿ ಭಾಷೆಯ ಪ್ರಭಾವದ ಮುಂಬಯಿ ಕರ್ನಾಟಕ ಪ್ರದೇಶದಲ್ಲಿ ಕನ್ನಡಿಗರ ಕನ್ನಡ ಭಾಷೆ ಪ್ರವರ್ಧಮಾನಕ್ಕೆ ಬಂದಿರುವ ವಿಷಯಗಳನ್ನು ಸವಿಸ್ತಾರವಾಗಿ ಹಾವನೂರ ಅವರು ದಾಖಲೆ ಸಮೇತ ನೀಡಿರುವುದು ಗಮನಾರ್ಹ.

**ಅಂದಿನ ಶಾಲೆಗಳು ಮತ್ತು ಶಿಕ್ಷಕರು**

ಪೂರ್ವಕಾಲದಲ್ಲಿ ಶಾಲೆಗಳು ಮತ್ತು ಶಿಕ್ಷಕರು ಕುರಿತ ಮಹತ್ವದ ಸಂಗತಿಗಳನ್ನು ಶ್ರೀನಿವಾಸ ಹಾವನೂರ ಪರಿಚಯಿಸಿದ್ದಾರೆ. ದೇವಸ್ಥಾನ, ಧರ್ಮಶಾಲೆ, ಖಾಸಗಿ ಶಾಲೆಗಳು; ಅದರ ರೀತಿ ಮತ್ತು ಸರ್ಕಾರಿ ಶಾಲೆಗಳು ದೇವಸ್ಥಾನ ಸರ್ಕಾರಿ ಕಛೇರಿ, ಖಾಸಗಿ ಮನೆಗಳಲ್ಲಿ ಧರ್ಮ ಶಾಲೆಗಳು ಈ ರೀತಿಯ ಸ್ಥಳಗಳಲ್ಲಿ ನಡೆಯುತ್ತಿದ್ದವು. ಕೆಲವು ನಗರಗಳಲ್ಲಿ ಸರ್ಕಾರವು ಶಾಲೆಗಳಿಗೆ ಮನೆ ಬಾಡಿಗೆ ಭತ್ಯೆ ಕೊಡುತ್ತಿದ್ದರು. ಅದಕ್ಕೆ ನಿದರ್ಶನ ರತ್ನಗಿರಿ, ಪುಣೆ, ಆದರೆ ಉತ್ತರ ಕರ್ನಾಟಕದ ಯಾವ ಶಾಲೆಗಳಿಗೂ ಈ ತೆರನಾದ ಭತ್ಯೆ ದೊರೆಯುತ್ತಿರಲಿಲ್ಲ. ಯಾವುದೇ ಊರಲ್ಲಿ ಸರ್ಕಾರಿ ಶಾಲೆ ಆರಂಭಿಸಬೇಕಾದರೆ ಆ ಗ್ರಾಮದ ಮುಖಂಡರಿಂದ ಮನವಿ ಪತ್ರ ಕೊಡಬೇಕಾಗಿತ್ತು. ನಂತರ ಕಮಿಟಿ ಮಾಡಿ ಆ ಕಮಿಟಿಯವರ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಇವರಿಂದ ಪುರಸ್ಕಾರ ಕೊಡುತ್ತಿದ್ದರು.

ಧಾರವಾಡ ಶಾಲೆಯಲ್ಲಿ ಈ ರೀತಿಯ ಒಂದು ಕಮಿಟಿಯ(ಕ್ರಿ.ಶ.೧೮೩೩) ಸದಸ್ಯರು "ಮುಖ್ಯ ಕಲೆಕ್ಟರ್, ಜಡ್ಜ್ ಮತ್ತು ಸೇಶನ್ಸ್ ಜಡ್ಜ್, ಜ್ಯುಡಿಶಿಯಲ್ ಕಮಿಶನರ್ ಮತ್ತು ದೇಶಿಕರಾದ ಜೀವಣರಾವ್ ದೇಶಪಾಂಡೆ, ಶೀನಪ್ಪ ಮುತಾಲಿಕ್, ತಿಮ್ಮಪ್ಪ, ಚೆನ್ನಬಸಪ್ಪ ನಾಯಕ್, ಜವಳಿ ಭೀಮಣ್ಣ ನಾಯಕ"[೫೨] ಈ ರೀತಿ ಸದಸ್ಯ ಸಂಖ್ಯೆ ಹೊಂದಿತ್ತು. ಹಾಗೆಯೇ ಆ ಶಾಲೆಯಲ್ಲಿ ೮ನೇ ತರಗತಿವರೆಗೆ ಇದ್ದು, ಅಲ್ಲಿ ಒಟ್ಟು ವಿದ್ಯಾರ್ಥಿಗಳು ೫೪೬

ಅದರಲ್ಲಿ ೮ನೇ ತರಗತಿಯಲ್ಲಿ ೧೪ ವಿದ್ಯಾರ್ಥಿಗಳು ಇದ್ದರೆ ಅದರಲ್ಲಿ ಎರಡು ವಿದ್ಯಾರ್ಥಿಗಳು ಮಾತ್ರ ಪ್ರತಿಭಾವಂತರು. ಅವರು ಗುರುಬಸಪ್ಪ ಮೆಣಸಿಕಾಯಿ ಮತ್ತು ಮಲ್ಲಪ್ಪ ದೊಡ್ಡವಾಡ. ಒಬ್ಬರಿಗೆ ನಾಲ್ಕು ರೂಪಾಯಿ, ಇನ್ನೊಬ್ಬರಿಗೆ ಎರಡು ರೂಪಾಯಿ ಬಹುಮಾನವನ್ನು ನೀಡಲಾಯಿತು. ಮರಾಠಿ ಶಾಲೆಯ ವಿದ್ಯಾರ್ಥಿಗಳು ಕನ್ನಡ ತೆಗೆದುಕೊಳ್ಳಬಹುದು ಎಂದು ಸೂಚನೆ ನೀಡಿದರು. ಹೀಗಾಗಿ ಕೆಲವು ವಿದ್ಯಾರ್ಥಿಗಳು ಕನ್ನಡ ತೆಗೆದುಕೊಂಡರು. ಆ ವಿದ್ಯಾರ್ಥಿಗಳು ಶ್ರೀನಿವಾಸ ರಾವ್ ಮತ್ತು ವಿರೂಪಾಕ್ಷಿ ಮೆಣಸಿನಕಾಯಿ; ಇವರಿಗೆ ದಸ್ತಾವೇಜೂ, ಕೈಫಿಯತ್ತುಗಳನ್ನು ಓದಲು ಹೇಳಿದರು. ಅದನ್ನು ಚೆನ್ನಾಗಿ ಓದಿದರು. ಹೀಗಾಗಿ ಆ ವಿದ್ಯಾರ್ಥಿಗಳಿಗೆ ನಾಲ್ಕು ಬಹುಮಾನ ಕೊಟ್ಟು ಗೌರವಿಸಿದರು.

ಆ ಕಮಿಟಿಯವರು ಶಿಕ್ಷಣ ಕ್ಷೇತ್ರದಲ್ಲಿ ಉಪಕ್ರಮ ಚಾಲ್ತಿಗೆ ತಂದರು. ಅದುವೇ ಮಾನಿಟರ್ ಪದ್ಧತಿ. ಏಕೆಂದರೆ ಶಿಕ್ಷಕರ ಕೊರತೆಯನ್ನು ನೀಗಿಸಲು ಹಿರಿಯ ವಿದ್ಯಾರ್ಥಿಗಳ ಸಹಾಯ ತೆಗೆದುಕೊಂಡರು. ಆ ಮಾನಿಟರ್‌ಗೆ ೪ ರೂ. ನಿಗದಿಪಡಿಸಿದಿದರು. ಅಂದರೆ ಶಿಕ್ಷಕರು ಇಲ್ಲದ ಸಮಯದಲ್ಲಿ ತರಗತಿಯ ನಿರ್ವಹಣೆಯನ್ನು ಹಿರಿಯ ವಿದ್ಯಾರ್ಥಿಗಳು ಮಾಡಬೇಕಿತ್ತು. ಹಾಗೆಯೇ ಶಿಕ್ಷಕ ಗಳಿಕೆ ಕುರಿತು ಪ್ರಸ್ತಾಪ ಬರುತ್ತದೆ. ಧಾರವಾಡ ಮತ್ತು ವಿಜಾಪುರ ಪರಿಸರದಲ್ಲಿ ಸಂಬಳ ವ್ಯತ್ಯಾಸ ಕಂಡು ಬರುತ್ತದೆ. ಮರಾಠಿ ಶಿಕ್ಷಕನಿಗೆ ರೂ. ೩೦, ಕನ್ನಡ ಶಿಕ್ಷಕನಿಗೆ ೨೦ ರೂ. ಇರುತ್ತಿತ್ತು. ಶಿಕ್ಷಕ ವೃತ್ತಿ ಕುರಿತು ಅಲ್ಲದೆ ವಿದ್ವಾಂಸರು ನಿಷ್ಠಾವಂತರು ಆಗಿದ್ದರು. ಈ ವೃತ್ತಿ ಪವಿತ್ರವೆಂದು ಭಾವಿಸುತ್ತಿದ್ದರು.

ಕ್ರಿ.ಶ. ೧೮೨೦ರಲ್ಲಿ ಕೊಂಕಣದಲ್ಲಿ ಜನಿಸಿದ ಬಾಳಶಾಸ್ತ್ರಿ ಜಾಂಭೇಕರ ಅವರು ಆಗಿನ ಕಾಲದ ದೇಶೀಯರಲ್ಲಿ ಅತ್ಯಂತ ಪ್ರತಿಭಾನ್ವಿತರೆನಿಸಿಕೊಂಡಿರುವುದು ದಾಖಲಾಗಿದೆ. ದ್ವಾದಶ ಭಾಷಾ ತಜ್ಞರಾಗಿದ್ದ ಜಾಂಭೇಕರರು ಸಮಾಜ ಸುಧಾರಕರೂ ಆಗಿದ್ದರೂ. ಮರಾಠಿಯಂತೆಯೇ ಕನ್ನಡ ಶಿಕ್ಷಣಕ್ಕೂ, ಭಾಷೆಗೂ ಸಾಕಷ್ಟು ಪ್ರೋತ್ಸಾಹ ನೀಡಿದರು ಎಂದು ದಾಖಲೆಗಳನ್ನು ಆಧರಿಸಿ ಶ್ರೀನಿವಾಸ ಹಾವನೂರ ಅವರು ವಿಶ್ಲೇಷಿಸಿದ್ದಾರೆ.

ಪ್ರಥಮ ಬಾರಿಗೆ ತರಬೇತಿ ಕೇಂದ್ರ ಧಾರವಾಡದಲ್ಲಿ (೧೮೪೨)ದಲ್ಲಿ ಸ್ಥಾಪನೆಯಾಯಿತು. ಹಾಗೆಯೇ ಬೆಳಗಾವಿ-ಧಾರವಾಡ-ಬಿಜಾಪುರ ಪ್ರಾಂತ್ಯಗಳ ಅಸಮರ್ಥ ಶಿಕ್ಷಕರಿಗೆ ತರಬೇತಿ ನೀಡಿರುವುದನ್ನು ದಾಖಲೆಗಳು ಸ್ಪಷ್ಟಪಡಿಸುತ್ತವೆ. ಹಾಗೆಯೇ ತರಬೇತಿಯ ಸ್ವರೂಪ, ಫಲಿತಾಂಶಗಳ ಬಗೆಗಿನ ವಿವರಗಳನ್ನು ಹಾವನೂರ ಅವರು ನೀಡಿದ್ದಾರೆ.

ಆಗಿನ ಕಾಲದಲ್ಲಿ ಶಿಕ್ಷಣರಂಗದಲ್ಲಿ ಧ್ರುವನಕ್ಷತ್ರ ಹೊಳೆಯುವಂತೆ ಕಾರ್ಯನಿರ್ವಹಿಸಿದ ಬಾಳಕೃಷ್ಣ ಮಹಾದೇವ ಮಾಸ್ತರ್ ಅವರ ಕೆಲಸದ ವೈಖರಿಯನ್ನು, ಪ್ರಾಮಾಣಿಕತೆಯನ್ನು ಮತ್ತು ಅವರಿಗೆ ಸಂದ ಗೌರವ-ಪುರಸ್ಕಾರಗಳನ್ನು ಲೇಖಕರು ಸೋದಾಹರಣವಾಗಿ ವಿಶ್ಲೇಷಿಸಿದ್ದಾರೆ.

**'ಮುಲ್ಕಿ ಶಾಲೆಗಳ ವಿಸಿಟ್ ಬುಕ್'**

ಕ್ರಿ.ಶ. ೧೮೭೭ರಿಂದ ೧೯೩೮ರವರೆಗೆ ಪ್ರಾಥಮಿಕ ಶಾಲೆಗಳಲ್ಲಿ ಒಂದು 'ವಿಸಿಟ್ ಬುಕ್' ಬಳಕೆಯಲ್ಲಿದ್ದನ್ನು ಈ ಲೇಖನದ ಮೂಲಕ ಹಾವನೂರ ಅವರು ತಿಳಿಸಿದ್ದಾರೆ.

'ವಿಸಿಟ್ ಬುಕ್' ಪದ್ಧತಿಯನ್ನು ಬ್ರಿಟೀಶ್ ಸರಕಾರ ಜಾರಿಗೆ ತಂದಿತ್ತು. ಕ್ರಿ.ಶ. ೧೮೭೮ರಲ್ಲಿ ಮುಂಬಯಿ ಸರಕಾರ ಪ್ರತಿಯೊಂದು ಮುಲ್ಕೀ ಶಾಲೆಯವರು 'ವಿಸಿಟ್ ಬುಕ್' ಇರಿಸಬೇಕೆಂದು ಸುತ್ತೋಲೆಯನ್ನು ಹೊರಡಿಸಿತು. ಕಾರಣ ಸರ್ಕಾರಿ ಮತ್ತು ಖಾಸಗಿ ಶಾಲೆಗಳಿದ್ದು, ಅವುಗಳಿಗೆ ಸರಕಾರ ಅನುದಾನವನ್ನು ಕೊಡುತ್ತಿತ್ತು. ಅನುದಾನ, ಸಂಬಳ ಇತ್ಯಾದಿ ಹಣಕಾಸಿನ ಸಂಬಂಧ ಮತ್ತು ಶಾಲೆಯ ಅಭಿವೃದ್ಧಿ, ಅನಿಸಿಕೆಗಳಿಗೆ ಅವಕಾಶ ನೀಡಿ ಪರಿಶೀಲನೆ ಮಾಡುವುದಾಗಿತ್ತು. ಜಿಲ್ಲೆಯಲ್ಲಿರುವ ಡೆಪ್ಯೂಟಿ ಎಜುಕೇಶನ್ ಇನ್ಸ್‌ಪೆಕ್ಟರ್, ಅಸಿಸ್ಟೆಂಟ್, ಊರಿನ ಗಣ್ಯ ನಾಗರಿಕರು, ಸ್ಕೂಲ್ ಕಮಿಟಿ ಮೆಂಬರ್ಸ್, ರೆವಿನ್ಯೂ ಅಥವಾ ಸರಕಾರಿ ಖಾತೆಗಳಿಗೆ ಸಂಬಂಧಿಸಿದ ಅಧಿಕಾರಿಗಳು ಶಾಲೆಗೆ ಭೇಟಿ ನೀಡಿದಾಗ ತಮ್ಮ ಅಭಿಪ್ರಾಯಗಳನ್ನು ವಿಸಿಟ್-ಬುಕ್‌ನಲ್ಲಿ ದಾಖಲಿಸುತ್ತಿದ್ದರು.

ಹಾವೇರಿ ತಾಲೂಕಿನ ಹಾವನೂರ ಮತ್ತು ಗುತ್ತಲ ಶಾಲೆಯ ವಿಸಿಟ್ ಬುಕ್‌ನಲ್ಲಿ ದಾಖಲಾದ ವಿವರಗಳನ್ನು ಲೇಖಕರು ಇಲ್ಲಿ ಉಲ್ಲೇಖಿಸಿ ವಿಶ್ಲೇಷಿಸಿದ್ದಾರೆ. ಅವರ ಅಭಿಪ್ರಾಯದಂತೆ ಈ ರೀತಿಯ ದಾಖಲೆಗಳಿಂದ ಅತ್ಯಂತ ಮಹತ್ವದ ಅಂಶಗಳನ್ನು ಪಡೆಯದಿದ್ದರೂ ಆ ಕಾಲದ ಜನಜೀವನದ ಸ್ಥಿತಿಗತಿಗಳನ್ನು, ಶಿಕ್ಷಣ ಪದ್ಧತಿಯನ್ನು ಜನಸಾಮಾನ್ಯರ ಅನುಭವ-ಅನಿಸಿಕೆಗಳನ್ನು ತಿಳಿಯಲು ಒಂದು ಉತ್ತಮ ಆಕರವಾಗಿ ಕಂಡುಬರುವುದರಲ್ಲಿ ಸಂಶಯವಿಲ್ಲ.

"ಈ ಶಾಲೆಯು ಕ್ರಮೇಣ ಸುಧಾರಿಸುತ್ತಾ ನಡೆದಿದೆ ಮತ್ತು ಎರಡನೇ ಅಸಿಸ್ಟೆಂಟರು ಮಿ। ಕುಲಕರ್ಣಿ ಇವರ ಸಹಾಯದಿಂದಲೂ ಉತ್ಸಾಹದಿಂದಲೂ ತಾಲೀಮು ಮತ್ತು ಹೂದೋಟ ಇವೆರಡರ ಕೆಲಸ ಚೆನ್ನಾಗಿ ನಡೆದಿದೆ... ಶಿಕ್ಷಣದಲ್ಲಿ ಉಪಯೋಗವಾಗುವಂಥ ಕೆಲವು ಚಿತ್ರಪಟಗಳು ನೋಡಿ ಸಂತೋಷವಾಯಿತು... ಊರ ಪ್ರಮುಖ ಜನರೂ, ಗೌಡರೂ ಶಾಲೆಯ ಹತ್ತಿರ ಒಂದು ಬಾವಿಯನ್ನು ಅಗೆಸಿದ್ದಾರೆ. ಅದರಿಂದ ಶಾಲೆಯ ಹೂದೋಟಕ್ಕೆ ಬಹಳ ಉಪಯೋಗವಾಗುತ್ತದೆ."[೫೩]

ಈ ರೀತಿಯ ದಾಖಲೆಗಳಿಂದ ಶಾಲೆಯ ಅಭಿವೃದ್ಧಿಗಾಗಿ ಊರಿನ ಸಹಕಾರ ಯಾವ ರೀತಿಯಲ್ಲಿತ್ತು ಹೀಗೆ ಅನೇಕ ಮಾಹಿತಿಗಳು ದೊರಕುತ್ತವೆ.

**ಇಂಗ್ಲೆಂಡಿನ ಬಡ ಕೂಲಿಕಾರರು ಭಾರತದ ಶ್ರೀಮಂತ ರೈತರು.**

ಕ್ರಿ.ಶ. ೧೮೬೭ರಲ್ಲಿ ಬೆಳಗಾವಿಯ ಕಲೆಕ್ಟರ್ ಜಾನ್ ಗಾರ್ಡನ್‌ನ ಒಂದು ಮನವಿಯ ಸಾರಾಂಶ ಈ ಲೇಖನದ ವಸ್ತು. ಅಮೇರಿಕಾದಿಂದ ಹತ್ತಿಯ ಪೂರೈಕೆ ಇಂಗ್ಲೆಂಡಿಗೆ ನಿರಂತರವಾಗಿತ್ತು. ಹಾಗೆಯೇ ಭಾರತದ ಹತ್ತಿಯನ್ನೂ ಕಡಿಮೆ ಬೆಲೆಗೆ ಖರೀದಿಸಿ ಬಟ್ಟೆ ಗಿರಣಿಗಳಲ್ಲಿ ಬಟ್ಟೆ ತಯಾರಿಸಿ ಹೆಚ್ಚು ಬೆಲೆಗೆ ಭಾರತದಲ್ಲಿ ಮಾರಾಟ ಮಾಡುವ ಕೆಲಸದಲ್ಲಿ ಬ್ರಿಟೀಶರು ತೊಡಗಿದ್ದರು. ಭಾರತದ ಹತ್ತಿಗಿಂತ ಅಮೇರಿಕಾದ ಹತ್ತಿ ಉತ್ತಮ ಗುಣಮಟ್ಟದ್ದು; ಆಕಾರದಲ್ಲಿ ಉದ್ದವೂ ಆಗಿತ್ತು. ಅಮೇರಿಕಾದಲ್ಲಿ ಆಂತರಿಕ ಕಲಹದಿಂದಾಗಿ ಇಂಗ್ಲೆಂಡಿಗೆ ರಫ್ತಾಗುತ್ತಿದ್ದ ಹತ್ತಿ ನಿಂತುಹೋದಾಗ ಇಂಗ್ಲೆಂಡಿನ ಹತ್ತಿ ಗಿರಣಿ ಮಾಲೀಕರು, ಕಾರ್ಮಿಕರು ಕಂಗಾಲಾದರು.

ಶ್ರೀನಿವಾಸ ಹಾವನೂರ ಅವರ ಪ್ರಕಾರ ಬೆಳಗಾವಿಯ ಕಲೆಕ್ಟರ್ ಜಾನ್‌ಗಾರ್ಡನ್ ಭಾರತೀಯರು ಬ್ರಿಟೀಶರಿಗೆ ಹತ್ತಿ ರಫ್ತು ಮಾಡಿದುದರಿಂದಾಗಿ ಶ್ರೀಮಂತರಾಗಿದ್ದಾರೆ. ಆದರೆ ಹತ್ತಿಯನ್ನು ಆಮದು ಮಾಡಿಕೊಂಡ ಬ್ರಿಟೀಶರು ಬಡವರಾಗಿದ್ದಾರೆ. ಈ ಹಿನ್ನೆಲೆಯಲ್ಲಿ ಬಡತನದಿಂದ, ಚಳಿಯಿಂದ ಸಾಯುತ್ತಿರುವ ಇಂಗ್ಲೆಂಡಿನ ಬಡ ಕೂಲಿಕಾರರನ್ನು ರಕ್ಷಿಸಬೇಕಾಗಿದೆ. ತಾವು ಮಾನವೀಯತೆಯ ಗುಣದಿಂದ ಆರ್ಥಿಕ ಸಹಾಯ ಮಾಡಬೇಕೆಂದು ಮನವಿ ಮಾಡುತ್ತೇನೆ. ದಾನ ಮಾಡಿ ಪುಣ್ಯ ಕಟ್ಟಿಕೊಳ್ಳಿ ಎಂದು ಪ್ರಾರ್ಥಿಸುತ್ತಾನೆ ಕಲೆಕ್ಟರ್ ಗಾರ್ಡ್‌ನ್ ಐಷಾರಾಮಿ ಜೀವನವನ್ನು ಸಾಗಿಸಿದ ಜಾನ್‌ಗಾರ್ಡನ್‌ಗೆ ಭಾರತದ ಹಳ್ಳಿಗಳ ಬಡತನದ ಬೇಗೆ ಅರ್ಥವಾಗಿಲ್ಲದಿರುವುದು ಆತನ ಮನವಿಯಿಂದ ವೇದ್ಯವಾಗುತ್ತವೆ. "ಈ ಮನವಿ ಪತ್ರಕ್ಕೆ ಮನ್ನಣೆಯಿತ್ತು ರೈತರು ದೊರೆಗೆ ಕೊಟ್ಟರೆಂಬುದಕ್ಕೆ ಆಧಾರವೇನೂ ಇಲ್ಲ. ಸಾಧ್ಯವೂ ಇರಲಿಲ್ಲ. ಸರಕಾರದ ಕೃಪೆಯನ್ನು ಅವಲಂಬಿಸಿದ್ದ ಕೆಲವು ಇನಾಮದಾರರು ಮತ್ತು ಜಮೀನುದಾರರು ಕೊಟ್ಟಿರಲೂ ಸಾಕು. ಅಂತೂ ಬ್ರಿಟೀಶರು ಇಲ್ಲಿಯ ತಮ್ಮ ಆಡಳಿತಾವಧಿಯ ೧೫೦ ವರ್ಷಗಳಲ್ಲಿ ನಾನಾ ರೀತಿಯ ಕುಟಿಲ ಉಪಾಯಗಳನ್ನು ಅನುಸರಿಸುತ್ತಿದ್ದೆನ್ನುವುದಕ್ಕೆ ಇದೂ ಒಂದು ಉದಾಹರಣೆ"[೫೪] ಎಂಬುದಾಗಿ ಶ್ರೀನಿವಾಸ ಹಾವನೂರ ಅವರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಹತ್ತಿಯ ವ್ಯವಹಾರದಲ್ಲಿ ಕರಾವಳಿ ಕರ್ನಾಟಕದ ಮೇಲಾದ ದುಷ್ಪರಿಣಾಮವೊಂದನ್ನು ತಿಳಿಸಿದ್ದಾರೆ. ಕರಾವಳಿಯ ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ ಜಿಲ್ಲೆಗಳಾದವು. ಮದ್ರಾಸ್‌ಗೆ ಹತ್ತಿರವಿದ್ದ ದಕ್ಷಿಣ ಕನ್ನಡ ಅಭಿವೃದ್ಧಿ ಹೊಂದಿದರೆ, ಮುಂಬಯಿಗೆ ದೂರವಿದ್ದ ಉತ್ತರ ಕನ್ನಡ ಅಭಿವೃದ್ಧಿ ಹೊಂದದಿರುವುದನ್ನು ಲೇಖಕರು ವಿಶ್ಲೇಷಿಸಿದ್ದಾರೆ. ಹಾಗೆ ನೋಡಿದರೆ ದಕ್ಷಿಣ ಕನ್ನಡ ಜಿಲ್ಲೆ ಮದ್ರಾಸ್ ರಾಜಧಾನಿಗೆ ದೂರವಿದ್ದು, ಉತ್ತರ ಕನ್ನಡ ಮುಂಬಯಿ ರಾಜಧಾನಿಗೆ ಹತ್ತಿರವಿರುವುದನ್ನು ಗಮನಿಸಬೇಕು. ರಾಜಧಾನಿ ದೂರವಿರುವುದರಿಂದಲೇ ಅಭಿವೃದ್ಧಿ ಆಗಲಿಲ್ಲ ಎಂದು ಹೇಳಿದರೆ ಬಾಲಿಶವಾದೀತು.

**ಯುರೋಪಿಯನ್ನರು ಕಂಡ ಧಾರವಾಡ**

ಸಾಹಿತ್ಯಿಕವಾಗಿ, ಶೈಕ್ಷಣಿಕವಾಗಿ ಹೆಸರುವಾಸಿಯಾದ ಜಿಲ್ಲಾ ಕೇಂದ್ರ ಧಾರವಾಡ ನಗರವನ್ನು ಪ್ರೀತಿಸದ ಜನರಿಲ್ಲ; ಅಷ್ಟರಮಟ್ಟಿಗೆ ಪ್ರಾಕೃತಿಕವಾಗಿ, ಸಮೃದ್ಧವಾಗಿ ಧಾರವಾಡವನ್ನು ಯುರೋಪಿಯನ್ನರು ಹೇಗೆ ಕಂಡರು ಎಂಬುದನ್ನು ಲೇಖಕ, ಸಂಶೋಧಕ ಶ್ರೀನಿವಾಸ ಹಾವನೂರ ಅವರು ವಿಶ್ಲೇಷಿಸಿದ್ದಾರೆ. "ಯುರೋಪಿಯನ್ ವಸತಿಯು ಪಟ್ಟಣದಲ್ಲಿ ಬೆಳೆಯುತ್ತ ನಡೆಯಿತು. ಗೋವೆ, ಮದ್ರಾಸ್ ಕಡೆಗಳಿಂದ ದೇಶೀ ಕ್ರೈಸ್ತರೂ ಬಂದರು. ಈ ಕ್ರೈಸ್ತರ ಆಗಮನದಿಂದ ಧಾರವಾಡದ ಆಗಿನ ವಾತಾವರಣ ಎದ್ದು ಕಾಣುವಂತೆ ಬದಲಿಸಿತು. ೧೯ನೇ ಶತಮಾನದ ಕೊನೆಯಲ್ಲಿ ಎರಡು ಸಾವಿರದಷ್ಟು ಜನ, ಮತ್ತು ವಿವಿಧ ಬ್ರಿಟೀಶ್ ಅಧಿಕಾರಿಗಳೂ ಸೇರಿದಂತೆ ಧಾರವಾಡದಲ್ಲಿ ನೆಲೆನಿಂತರು."[೫೫]

ಥಾಮಸ್ ಮನ್ರೋ, ಸೇಂಟ್‌ಜಾನ್ ಥ್ಯಾಕರೆ, ವಾಲ್ಟರ್ ಎಲಿಯೆಟ್ (ಸಹಾಯಕ ಅಧಿಕಾರಿ), ಬ್ರೂಸ್‌ಫುಟ್ (ಭೂವಿಜ್ಞಾನಿ), ರೆವರೆಂಡ್ ಮೊಗ್ಲಿಂಗ್, ರೆವರೆಂಡ್ ಕ್ರಿಸ್ಲರ್ (ಶಿಕ್ಷಣ ತಜ್ಞ) ಪೋರ್ಬ್‌ಸ್ (ವೈದ್ಯ, ಸಿವಿಲ್ ಇಂಜಿನೀಯರ್) ಮುಂತಾದವರು ಧಾರವಾಡವನ್ನು ಬಹಳ ಮೆಚ್ಚಿಕೊಂಡಿರುವುದನ್ನು ಲೇಖಕರು ಉಲ್ಲೇಖಿಸಿದ್ದಾರೆ. ಥ್ಯಾಕರೆ ಮತ್ತು ಪೇಂಟರ್ ಇಬ್ಬರು ಕುಖ್ಯಾತಿಗೆ ಹೆಸರಾದರೆ, ಅನೇಕ ಬ್ರಿಟೀಶ್ ಅಧಿಕಾರಿಗಳು ಧಾರವಾಡದ ಸಾಮಾನ್ಯ ಜನರ ಸುಖ–ದುಃಖದೊಳಗೆ ಸ್ಪಂದಿಸಿ ಹೆಸರು ಮಾಡಿದರು. ಅನೇಕ ಯುರೋಪಿಯನ್ನರು ತಮ್ಮ ಅಧಿಕಾರಾವಧಿ ಮುಗಿದ ನಂತರವೂ ವಿಶ್ರಾಂತಿ ಜೀವನವನ್ನು ಧಾರವಾಡದಲ್ಲಿಯೇ ಕಳೆದಿರುವುದು ಕಂಡುಬರುತ್ತದೆ.

ಈ ಮೂಲಕ ಶ್ರೀನಿವಾಸ ಹಾವನೂರ ಅವರು ಧಾರವಾಡ ನಗರದ ಹಿರಿಮೆಯನ್ನು ಕೊಂಡಾಡಿದ್ದಾರೆ.

**'ಧಾರವಾಡ ಶಿಕ್ಷಣ ಸಂಸ್ಥೆಯೊಂದರ ಹಿನ್ನೆಲೆ'**

ಕ್ರಿ.ಶ. ೧೯೧೭ ಜೂನ್ ೨೦ರಂದು ಧಾರವಾಡದಲ್ಲಿ ಅಸ್ತಿತ್ವಕ್ಕೆ ಬಂದ ಕರ್ನಾಟಕ ಕಾಲೇಜನ್ನು ಹುಟ್ಟುಹಾಕಲು ಶ್ರಮವಹಿಸಿದ ಸಂಪೂರ್ಣ ಮಾಹಿತಿಗಳನ್ನು ಈ ಲೇಖನದಲ್ಲಿ ಶ್ರೀನಿವಾಸ ಹಾವನೂರ ಅವರು ನೀಡಿದ್ದಾರೆ. ಧಾರವಾಡದಲ್ಲಿ ಕರ್ನಾಟಕ ಕಾಲೇಜು ಸ್ಥಾಪಿಸಲು ಸರಿಸುಮಾರು ಹತ್ತು ವರ್ಷಗಳ ಕಾಲದ ಪರಿಶ್ರಮವಿದ್ದುದನ್ನು ಲೇಖಕರು ವಿವರಿಸಿದ್ದಾರೆ. ಬೆಳಗಾವಿ, ಧಾರವಾಡ, ಬಿಜಾಪುರ ಪ್ರದೇಶಗಳ ವಿದ್ಯಾರ್ಥಿಗಳು ಉನ್ನತ ಶಿಕ್ಷಣ ಪಡೆಯಬೇಕಾದರೆ ದೂರದ ಮುಂಬಯಿ, ಪುಣೆಗೆ ಹೋಗಬೇಕಾಗಿತ್ತು. ಅದು ಸ್ಥಿತಿವಂತರ ಮಕ್ಕಳು ಮಾತ್ರ ಎಲ್ಫಿನ್‌ಸ್ಟನ್, ಡೆಕ್ಕನ್, ಫರ್ಗ್ಯುಸನ್ ಕಾಲೇಜುಗಳಿಗೆ ಹೋಗುತ್ತಿದ್ದರು. ಈ ಹಿನ್ನೆಲೆಯಲ್ಲಿ ಧಾರವಾಡದಲ್ಲಿ ಕಾಲೇಜು ಸ್ಥಾಪನೆಗೆ ಧಾರವಾಡದ ಗಣ್ಯನಾಗರಿಕರು ಮುಂಬಯಿ ಗವರ್ನರ್‌ಗೆ ಬೇಡಿಕೆ ಇಟ್ಟರು. ಸರಕಾರ ನೀವು ಎರಡು ಲಕ್ಷ ಹಣ ಜೋಡಿಸಿಕೊಟ್ಟರೆ ಕಾಲೇಜು ಸ್ಥಾಪಿಸಲು ಸಾಧ್ಯ ಎಂದಾಗ ರೊದ್ದ ಅರಟಾಳ ರುದ್ರಗೌಡರು, ಒಂಟಮುರಿ ದೇಸಾಯಿ ಮತ್ತು ಇತರರು ಎರಡು ಲಕ್ಷ ರೂ. ಹಣವನ್ನು ಸರ್ಕಾರದ ಟ್ರೆಜರಿಗೆ ಜಮಾ ಮಾಡಿದರು.

ಮುಂಬಯಿ–ಕರ್ನಾಟಕ ಭಾಗದ ಬಹುದಿನಗಳ ಕನಸು ಕರ್ನಾಟಕ ಕಾಲೇಜು ಸ್ಥಾಪನೆಯನ್ನು ಲೇಖಕರು ವಿವರಿಸಿದ್ದಾರೆ. ಪ್ರತ್ಯಕ್ಷ–ಪರೋಕ್ಷವಾಗಿ ಸಹಕರಿಸಿದ ಎಲ್ಲರ ಬಗೆಗೂ ದಾಖಲೆಗಳನ್ನು ಕ್ರೋಢೀಕರಿಸಿರುವುದು ಈ ಲೇಖನದ ಹೆಚ್ಚುಗಾರಿಕೆ. ಹಾಗೆಯೇ ದಾಖಲೆಗಳ ಸಂಗ್ರಹಣೆಯಲ್ಲಿ ಮತ್ತು ನಿರೂಪಣೆಯಲ್ಲಿ ಲೇಖಕರಾದ ಶ್ರೀನಿವಾಸ ಹಾವನೂರ ಅವರು ಮುತುವರ್ಜಿ ಕಾರ್ಯಕ್ಷಮತೆ ಎಲ್ಲರನ್ನೂ ದಂಗುಬಡಿಸುವುದರಲ್ಲಿ ಎರಡು ಮಾತಿಲ್ಲ.

**'ಹಾವನೂರಲ್ಲಿ ವಿನೋಬಾಜಿ ಹೆಜ್ಜೆ ಗುರುತು'**

ಭಾರತದ ಇತಿಹಾಸ ಪ್ರಸಿದ್ಧ ಭೂದಾನ-ಗ್ರಾಮದಾನ ಚಳವಳಿಯ ಮಾತೃ ಆಚಾರ್ಯ ವಿನೋಬಾ ಭಾವೆ ಅವರ ಕರ್ನಾಟಕದಲ್ಲಿನ ಪಾದಯಾತ್ರೆಯನ್ನು ಈ ಲೇಖನ ಪರಿಚಯಿಸುತ್ತದೆ. ೧೯೫೫ರಲ್ಲಿ ಭೂದಾನ ಚಳವಳಿಗೆ ಚಾಲನೆ ನೀಡಿ ಅದನ್ನು ವ್ಯಾಪಕಗೊಳಿಸಿ ಅಸಂಖ್ಯ ಭೂದಾನಕ್ಕೆ ಪ್ರೇರಣೆ ನೀಡಿದರು. ಭೂಮಿ ಉಳ್ಳವರು ಭೂಮಿ ಇಲ್ಲದವರಿಗೆ ದಾನ ಮಾಡುವ ಒಂದು ಮಹಾನ್ ಆಂದೋಲನ. ಈ ಆಂದೋಲವನ್ನು ಮೌನ ಕ್ರಾಂತಿಯ ಮೂಲಕ ಆಗುಮಾಡಿದವರು ವಿನೋಬಾ ಭಾವೆ.

ಇಂದಿನ ಯುವಪೀಳಿಗೆಯವರಲ್ಲಿ ಭೂದಾನ ಚಳವಳಿಯ ಮಹತ್ವದ ಬಗೆಗಿನ ಆಧಾರವನ್ನು ಲೇಖಕರು ಗಮನಿಸಿಯೇ ಒಂದು ದಾಖಲೆ ರೀತಿಯಲ್ಲಿ ನಿರೂಪಿಸಿದ್ದಾರೆ. ಹಾವೇರಿ ಜಿಲ್ಲೆಯ ಹಾವನೂರ ಊರು ವಿನೋಭಾ ಭಾವೆಯವರ ತಾಯಿಯ ಸಂಬಂಧಿಕರು ವಾಸವಾಗಿದ್ದ ಊರು "ಆ ಊರಲ್ಲಿ ನಾನು ಬಾಲ್ಯದ ಕೆಲದಿನಗಳನ್ನು ನನ್ನ ತಾಯಿಯೊಂದಿಗೆ ಕಳೆದಿದ್ದೇನೆ... ಅಲ್ಲಿಯ ಜೋಗ ಮನೆತನದವರು ನನ್ನ ತಾಯಿಗೆ ಹತ್ತಿರದ ಸಂಬಂಧಿಕರು"[೫೬] ಎಂದು ಯಾತ್ರೆಯ ಸಂಯೋಜಕರಿಗೆ ಹೇಳಿದ್ದನ್ನು ಶ್ರೀನಿವಾಸ ಹಾವನೂರ ಅವರು ದಾಖಲಿಸಿದ್ದಾರೆ. ಹಾಗೆಯೇ ಹಾವನೂರಿನ ಜೋಗ ಪರಿವಾರದ ಮನೆಯನ್ನು ನೋಡಿ ತನ್ನ ತಾಯಿ ಭಜನೆ ಮಾಡುತ್ತಿದ್ದ ಸ್ಥಳವನ್ನು ನೋಡಿ ಧ್ಯಾನಸ್ಥರಾದಂಥ ಘಟನೆಗಳನ್ನು ಲೇಖಕರು ದಾಖಲಿಸಿದ್ದಾರೆ. ಈ ಭಾಗದಲ್ಲಿ ವಿನೋಬಾ ಭಾವೆ ಅವರು ಪಾದಯಾತ್ರೆ ಮಾಡಿದ ಊರು ದಿನಾಂಕಗಳನ್ನು ದಾಖಲೆಯಿಂದ ನೀಡಿದ್ದಾರೆ ಲೇಖಕರು.

**ರಾಜ್ಯ ಮಟ್ಟದ ೧೬ನೇ ಕರ್ನಾಟಕ ಇತಿಹಾಸ ಸಮ್ಮೇಳನ-ಮೈಸೂರು**

೨೦೦೫ ಮೇ ೨೦ರಂದು ಮೈಸೂರಲ್ಲಿ ನಡೆದ ರಾಜ್ಯಮಟ್ಟದ ೧೬ನೇ ಕರ್ನಾಟಕ ಇತಿಹಾಸ ಸಮ್ಮೇಳನದ ಅಧ್ಯಕ್ಷತೆಯನ್ನು ಶ್ರೀನಿವಾಸ ಹಾವನೂರ ಅವರು ವಹಿಸಿದ್ದರು. ಅಧ್ಯಕ್ಷೀಯ ಭಾಷಣದಲ್ಲಿ ಸವಿಸ್ತಾರವಾಗಿ ಕನ್ನಡ ಭಾಷೆ, ಇತಿಹಾಸ, ಅಭಿವೃದ್ಧಿ, ಕನಸುಗಳ ಬಗ್ಗೆ ಮಾತನಾಡಿದ್ದಾರೆ. ಶ್ರೀನಿವಾಸ ಹಾವನೂರ ಅವರ ಅಧ್ಯಕ್ಷೀಯ ಭಾಷಣದಲ್ಲಿ ಅನೇಕ ಮಹತ್ವದ ಸಂಗತಿಗಳು ನಿರೂಪಿತಗೊಂಡಿವೆ. ಸಾಹಿತ್ಯ ಪರಿಚದೊಂದಿಗೆ ವಿಮರ್ಶೆಯ ಹೊಳಹುಗಳನ್ನು ಪರಿಚಯಿಸಿದರು. ಸಾಹಿತ್ಯ ಮತ್ತು ಇತಿಹಾಸ ಕ್ಷೇತ್ರದ ಹೊಳಹುಗಳ ಶೋಧ ಮಾಡಿದ ಮಹತ್ವದ ಸಂಗತಿಗಳು ಅನಾವರಣಗೊಂಡಿವೆ. ಮಯೂರವರ್ಮನು ವಿವಿಧ ರಾಜ್ಯ ಗೆದ್ದು ಹಾಗೂ ಕೆರೆಯನ್ನು ನಿರ್ಮಾಣ ಮಾಡಿರುವುದನ್ನು ಪ್ರಸ್ತಾಪಿಸಿದ್ದಾರೆ. ಆದರೆ ಹಾವನೂರರು ದಾಖಲೆಗಳ ಮೂಲಕ ಕಂಡುಕೊಂಡಂತೆ ಕೆರೆಯನ್ನು ಕಟ್ಟಿಸಲಿಲ್ಲ. ಅದನ್ನು ಜೀರ್ಣೋದ್ಧಾರ ಮಾಡಿದನು ಎಂದು ತಿಳಿಯುತ್ತದೆ. ವಿಷಯದ ಸ್ವರೂಪ ಬದಲಾಗುವುದನ್ನು ಕಾಣಬಹುದು ಎಂದು ವಿಶ್ಲೇಷಿಸಿದ್ದಾರೆ. ಹೀಗೆ ಹಾವನೂರ ಅವರ ಸುದೀರ್ಘ ಭಾಷಣ ಎಲ್ಲಾ ಕ್ಷೇತ್ರಗಳನ್ನು ಒಳಗೊಂಡಿರುವುದನ್ನು ಕಾಣಬಹುದು.

**ಕಂಪ್ಯೂಟರ್ :**

ವಿಜ್ಞಾನ ಕ್ಷೇತ್ರದಲ್ಲಿನ ಸಂಶೋಧನಾರ್ಥಿಗಳನ್ನು ಕಂಡು ಹಾವನೂರರಿಗೆ ಹೊಸ ಆಲೋಚನೆ ಬಂತು. ಕನ್ನಡ ಸಾಹಿತ್ಯ, ಇತಿಹಾಸ, ಸಂಶೋಧನ ಕ್ಷೇತ್ರಕ್ಕೆ ಕಂಪ್ಯೂಟರ್ ಬಳಕೆ ಮಾಡಿ ಕನ್ನಡ ಸಾಹಿತ್ಯ ಸಂಸ್ಕೃತಿ ಚರಿತ್ರೆ ಇತರ ರಾಷ್ಟ್ರಗಳಿಗೆ ಕನ್ನಡದ ಸೊಗಡನ್ನು ಪರಿಚಯಿಸಲಿಕ್ಕೆ ಬಹಳ ಸುಲಭವಾದ ಮಾರ್ಗವೆಂದರೆ ಕಂಪ್ಯೂಟರ್. ಇದರ ಬಳಕೆಯಿಂದ ಆಗುವ ಪ್ರಯೋಜನ ಮನಗಂಡು ಸಂಶೋಧನ ವಲಯದಲ್ಲಿ ಕನ್ನಡ ಭಾಷೆಯನ್ನು ಕಂಪ್ಯೂಟರಿಗೆ ಅಳವಡಿಸಿದ ಮೊದಲ ಕನ್ನಡಿಗ ಎನ್ನುವ ಹಿರಿಮೆಗೆ ಹಾವನೂರ ಭಾಜನರಾಗುತ್ತಾರೆ.

ಆಧುನಿಕ ಉಪಕರಣದ ಮಹತ್ವಗಳನ್ನು ಅರಿತ ಹಾವನೂರ ಅವರಿಗೆ ಅದನ್ನು ಕನ್ನಡ ವಲಯಕ್ಕೆ ಪರಿಚಯಿಸುವುದು ಉದ್ದೇಶವಾಗಿತ್ತು. ಕಂಪ್ಯೂಟರ್ ಸಹಾಯದಿಂದ ಅಲ್ಪ ಅವಧಿಯಲ್ಲಿ ಹೆಚ್ಚು ಕೆಲಸ ಕೆಲವೇ ವ್ಯಕ್ತಿಗಳಿಂದ ಮಾಡಬಹುದು. ಹಣ ಮತ್ತು ಸಮಯ ಎರಡರ ಬಳಕೆ ಮಿತಿಯನ್ನು ನಿಯಂತ್ರಿಸಬಹುದು ಎಂದು ಹಾವನೂರ ಅವರು ಮನಗಂಡರು.

ಬರವಣಿಗೆ ಮತ್ತು ಹೆಚ್ಚು ಮಾಹಿತಿ ಪಡೆದುಕೊಳ್ಳಬೇಕೆಂದರೆ ಎಷ್ಟು ಕಷ್ಟ ಎನ್ನುವುದು ಹಾವನೂರ ಅವರು ಬಹಳ ಚೆನ್ನಾಗಿ ಬಲ್ಲವರು. ಮಹತ್ವದ ಅಂಶವೆಂದರೆ ಶಬ್ದ ಪ್ರಯೋಗ ಕೋಶವು ಸಿದ್ಧವಾದರೆ ಎಷ್ಟೊಂದು ವೇಳೆ ಮತ್ತು ಶ್ರಮ ಉಳಿಸಬಹುದೆಂದು ಕೆಲವು ಮಹತ್ವದ ನಿದರ್ಶನಗಳನ್ನು ಕೊಡುತ್ತಾರೆ. "ಕ್ರೈಸ್ತ ತತ್ವಜ್ಞಾನವನ್ನು ಕುರಿತು ಥಾಮಸ್ ಎಕ್ವಿನ್ ಎಂಬ ಮಹಾ ಭಾಷ್ಯಕಾರ (೧೩ನೇ ಶತಮಾನ) ಅನೇಕ ಗ್ರಂಥಗಳನ್ನು ಬರೆದ. ಅವನು ಒಟ್ಟು ಬಳಸಿದ ಶಬ್ದಗಳ ಸಂಖ್ಯೆ ಒಂದು ಕೋಟಿ. ಆದರೆ ಅವುಗಳ ಶಬ್ದ ಪ್ರಯೋಗ ಕೋಶ ತಯಾರಿಸುವ ಸಾಹಸಕ್ಕಿಳಿದಾಗ 'ರಾಬರ್ಟ್ ಬೂಸ್' ಎಂಬ ಪಾದ್ರಿ ಐವತ್ತು ಜನ ವಿದ್ವಾಂಸರು ಈ ಕೆಲಸಕ್ಕೆ ಪೂರ್ಣಾವಧಿಗೆ ತೊಡಗಿದರೆ ಅದನ್ನು ಮುಗಿಸಲು ೪೦ ವರ್ಷಗಳು ಬೇಕಾಗುವುದೆಂದು ಬೂಸ್ ಅಂದಾಜು ಮಾಡಿ ೧೯೩೮ರ ಸುಮಾರಿಗೆ ಆರಂಭಿಸಿದನು."[೫೭] ಹಾಗೆಯೇ "ಬಸವಣ್ಣನ ೬೪೯ ವಚನಗಳ ಶಬ್ದಗಳ ಪಟ್ಟಿಕೆ ಸಿದ್ಧಪಡಿಸಲು ಗುಂಜಾಳರಿಗೆ ಏಳು ವರ್ಷ ಬೇಕಾಯಿತು. ಆ ಪಟ್ಟಿಕೆಗಳನ್ನು ಹೊಂದಿಸಲು ಮತ್ತೆರಡು ವರ್ಷಗಳಾದವು. ಬೈರನ್‌ನ ಕಾವ್ಯ ಸಂಪದದ ಶಬ್ದ ಪ್ರಯೋಗ ಕೋಶ ತಯಾರಿಸಲು ಶ್ರೀಮತಿ ಯಂಗ್ ಎಂಬಾಕೆಗೆ ಸುಮಾರು ೨೫ ವರ್ಷಗಳ ಮೇಲೆ ಮುಗಿಸಿದಳು. ಈ ತಾಪತ್ರಯ ನನ್ನ ವೈರಿಗಳಿಗೂ ಬರೋದು ಬೇಡ ಎಂಬ ಆಶಯವನ್ನು ಆಕೆ ತನ್ನ ಪೀಠಿಕೆಯಲ್ಲಿ ಹೇಳಿದ್ದಾಳೆ."[೫೮]

ಸರ್ವನಾಮದಂತಹ ಸಾಮಾನ್ಯ ಶಬ್ದಗಳ ಪಟ್ಟಿ ಮಾಡುವಲ್ಲಿಯೂ ಪ್ರಯೋಜನ ಇದೆಯೆಂಬುದು ಡಿಕೆನ್ಸ್‌ಳ ಕೋಶದಿಂದ ತಿಳಯುತ್ತದೆ. ಇದಲ್ಲದೆ ಹಲವಾರು ಪ್ರಯೋಜನಗಳಿವೆ. ಒಟ್ಟಿನಲ್ಲಿ ಕವಿಯ ಶಬ್ದ ಸಂಪತ್ತು, ಭಾಷೆ ಸಂಪತ್ತು ಒಂದೆಡೆ

ದೊರೆಯುತ್ತದೆ. ಶಬ್ದ ಮತ್ತು ಅದನ್ನೊಳಗೊಂಡಿರುವ ವಾಕ್ಯ ಸಹಿತವಾದ ಇಂಥ ಅಕಾರದಿ ಸೂಚಿಗಳಿಗೆ con-condance ಎಂದು ಹೆಸರು. ಕನ್ನಡದಲ್ಲಿ ಅದನ್ನು 'ಶಬ್ದ ಪ್ರಯೋಗ ಕೋಶ' ಎಂದು ಕರೆಯಲಾಗಿದೆ. ಹಳೆಗನ್ನಡ ಸಾಹಿತ್ಯದಷ್ಟೇ ಆಧುನಿಕ ಕಾವ್ಯಗಳಿಗೆ ಇಂಥ ಕೋಶಗಳ ರಚನೆ ಹೆಚ್ಚು ಅಗತ್ಯವಾಗಿದೆ. ತುಸು ಮಟ್ಟಿಗೆ ಅನಿವಾರ್ಯವು ಹೌದು.

ಕರ್ನಾಟಕ ಇತಿಹಾಸದ ಸಮಸ್ತ ಮಾಹಿತಿ(Data)ಯನ್ನು ಕಂಪ್ಯೂಟರಿನಲ್ಲಿ ವ್ಯವಸ್ಥಿತವಾಗಿ ಸಂಗ್ರಹಿಸುವುದು ಸುಲಭ. ಇದನ್ನು ಎಲ್ಲಾ ಕನ್ನಡಿಗರಿಗೂ ಮತ್ತು ಕರ್ನಾಟಕದ ಹೊರಗಿನವರಿಗೂ ತಲುಪಿಸಬಹುದು. ಇದರಿಂದ ಎಲ್ಲಾ ಕನ್ನಡಿಗರಿಗೂ ಮತ್ತು ಕರ್ನಾಟಕದ ಹೊರಗಿನವರಿಗೂ ಪ್ರಯೋಜನಕಾರಿ. ಅದರಲ್ಲೂ ಇತಿಹಾಸದ ಮಾಹಿತಿ ಅಪಾರವಾಗಿರುವುದರಿಂದ ಕಂಪ್ಯೂಟರ್ ಶೇಖರಣೆ ಅತ್ಯಾವಶ್ಯಕ ಎಂದು ಯೋಜನೆ ರೂಪಿಸಲಾಗಿದೆ. 'ಸರ್ವಾಂಗೀಣ' ಶಬ್ದವನ್ನು ಎರಡು ಅರ್ಥದಲ್ಲಿ ಬಳಸಲಾಗಿದೆ. ಒಂದು ಕರ್ನಾಟಕಕ್ಕೆ ಸಂಬಂದಿಸಿದ್ದು, ಎರಡು ಕರ್ನಾಟಕದ ಇತಿಹಾಸದ ಅಧ್ಯಯನಕ್ಕೆ ಬೇಕಾದ ಆಯಾಮಗಳನ್ನು ಒಳಗೊಂಡಿದೆ. ಅವು ಈ ಮುಂದಿನಂತೆ ಇವೆ. ಬರಹದ ರೂಪ, ವಸ್ತು ರೂಪದವು, ನಾಮ ವಿಜ್ಞಾನ. ಯಾವ ಯಾವ ಕಲಮುಗಳು ಏಕರೂಪತೆ, ನಾಮ ವಿಜ್ಞಾನಕ್ಕೆ ಸಂಬಂದಿಸಿದ್ದು, ಒಂದು ಅಥವಾ ಎರಡು ಮಾದರಿ ನಮೂದುಗಳಲ್ಲಿ ಬೀಜ ಶಬ್ದಗಳು(Key words) ಎರಡು ಆವರಣಗಳು – ಕಂಸಾವರಣ () ಕೋನಾವರಣ <> ಉದಾ: ಬಸವೇಶ್ವರ <> ಶಿ.ಶ. ಶಿವಶರಣರು; ಅದರ ಕೆಳಗೆ ಅದೆಷ್ಟೋ ಜನ ಶಿವಶರಣರ ಪಟ್ಟಿ ಪ್ರತ್ಯೇಕವಾಗಿ ಇರುತ್ತದೆ. ಉದಾ: ಪದ್ಮಮ್ಮ(ಏಕಾಂತದ ರಾಮಯ್ಯನ ತಾಯಿ ಈ ಪದ್ಮಮ್ಮ ಯಾರು ಎನ್ನುವ ವಿವರಣೆಯನ್ನು ಉಲ್ಲೇಖಿಸುತ್ತದೆ.)

"ಶಬ್ದ ಪ್ರಯೋಗ ಕೋಶವು ಬಹು ಪ್ರಯೋಜನವು ಸಾರ್ವಕಾಲಿಕವೂ ಆಗಿರುವುದರಿಂದ ಈಗಾಗಲೇ ಜಾಗತಿಕ ಮಟ್ಟದಲ್ಲಿ ನೂರಾರು ಸಿದ್ಧವಾಗಿವೆ. ಆದರೆ ಇತಿಹಾಸವು ೧೩ನೇ ಶತಮಾನದಷ್ಟು ಹಿಂದೆ ಹೋಗುವುದಾದರೂ ಅದು ಇಂದಿನ ಸ್ವರೂಪದಲ್ಲಿ ಕಾಣಿಸಿಕೊಳ್ಳತೊಡಗಿತು. ಈಚೀನ ನೂರು ವರ್ಷಗಳಲ್ಲಿ ಶೇಕ್ಸ್‌ಪಿಯರ್ ಮಿಲ್ಟನ್ ಮುಂತಾದ ಎಲ್ಲಾ ಪ್ರಮುಖ ಆಂಗ್ಲ ಕವಿಗಳ ಕೃತಿಗಳಿಗೆ ಶಬ್ದಪ್ರಯೋಗ ಕೋಶಗಳಿವೆ."[೫೯]

ಹಾವನೂರ ಮುಂಬಯಿ ಟಾಟಾ ಇನ್ಸ್‌ಟ್ಯೂಟ್ ಆಫ್ ಫಂಡ್‌ಮೆಂಟಲ್ ರಿಸರ್ಚ್ ಸಂಸ್ಥೆಯಲ್ಲಿ ಲೈಬ್ರೆರಿಯನ್ ಆಗಿ ಕೆಲಸ ಮಾಡುವ ಅವಧಿಯಲ್ಲಿ ಪ್ರತಿನಿತ್ಯದ ವಿದ್ಯಮಾನಗಳನ್ನು ಗಮನಿಸುತ್ತಿದ್ದರು. ಅಂದರೆ ೧೯೭೩ರಲ್ಲಿ ಕನ್ನಡ ಸಾಹಿತ್ಯ ಸಂಶೋಧನೆ ಕಂಪ್ಯೂಟರ್ ಏಕೆ ಪ್ರಯೋಗಿಸಬಾರದು? ಅನ್ನುವ ವಿಷಯ ಅದರ ಬಗ್ಗೆ ಆಲೋಚಿಸಿ ಕೆಲಸ ಪ್ರಾರಂಭಿಸಿದರು.

ವಿಜ್ಞಾನ ಸಂಶೋಧನೆಯಲ್ಲಿ ಸಂಶೋಧನಾರ್ಥಿಗಳ ಸಂಶೋಧನೆಯಲ್ಲಿ ನಿರಂತರವಾಗಿ ವೈಜ್ಞಾನಿಕ ಮಾಹಿತಿ ಪರಿಷ್ಕರಣೆ, ವಿಶ್ಲೇಷಣೆ, ಪದ ಪ್ರಯೋಗ ಕೋಶಗಳ ಸಿದ್ಧತೆ ಮುಂತಾದ ಕಾರ್ಯಗಳಿಗೆ ಕಂಪ್ಯೂಟರನ್ನು ಉಪಯೋಗಿಸುತ್ತಿದ್ದರು. ಈ ಕಾರ್ಯವನ್ನು ಕಂಡು ಹಾವನೂರ ಅವರು ಹೊಸ ಯೋಜನೆಗೆ ಸಂಕಲ್ಪ ಮಾಡಿಕೊಂಡರು.

ಇವರು ಸಂಶೋಧನೆಗೆ ಆಯ್ಕೆ ಮಾಡಿಕೊಂಡ ಕೆಲಸ ಅಷ್ಟು ಸರಳವಾದುದಲ್ಲ. ಆ ಕಾಲಕ್ಕೆ ಗಣಕಯಂತ್ರದಲ್ಲಿ ಕನ್ನಡ ಲಿಪಿಯನ್ನು ಬಳಸುವ ತಂತ್ರಾಂಶ ಬಳಕೆಯಲ್ಲಿ ಇರಲಿಲ್ಲ. ಡಿ.ಟಿ.ಪಿ. ಮತ್ತು ಮುದ್ರಣ ಕಾರ್ಯಕ್ಕೆ ಮಾತ್ರ ಸಿಮೀತವಾಗಿತ್ತು. ಮಾಹಿತಿ ಗಣಕಯಂತ್ರದಿಂದ ಮರಳಿ ಪಡೆಯುವುದಕ್ಕೆ ಸೂಕ್ತವಾದ ಪ್ರೋಗ್ರಾಮ್ ರೂಪಿಸಿಕೊಳ್ಳಬೇಕಾಗಿತ್ತು. ಈ ಕಾರಣದಿಂದ ಬಹಳ ವರ್ಷಗಳ ಮಾಡಿದ ಚಿಂತನೆ ನೂತನ ಪ್ರಯೋಗಕ್ಕೆ ಚಾಲನೆ ಕೊಡಲು ಹಾವನೂರ ಅವರಿಗೆ ಸಾಧ್ಯವಾಯಿತು. ಈ ಕಾರ್ಯದಲ್ಲಿ ಶ್ರೇಯಸ್ಸು ಸಿಕ್ಕಿತು. ಕನ್ನಡ ಶಿಕ್ಷಣ ಇತಿಹಾಸ ಭಾಷೆ ಸಾಹಿತ್ಯದ ಅಧ್ಯಯನಕ್ಕೆ ಗಣಕಯಂತ್ರ ಪ್ರಯೋಗಿಸುವ ಹೊಳಹುಗಳನ್ನು ಕಂಡುಕೊಂಡ ಅವರು ಸಂಶೋಧನೆಯಲ್ಲಿ ಹೊಸ ಆಯಾಮವನ್ನು ಶೋಧಿಸಿದರು.

**ಕನ್ನಡ ಸಂಶೋಧನೆಯಲ್ಲಿ ಕಂಪ್ಯೂಟರ್‌ನ ಬಳಕೆ**

ಶ್ರೀನಿವಾಸ ಹಾವನೂರ ಅವರು ಗಣಕಯಂತ್ರವನ್ನು ಕನ್ನಡ ಸಾಹಿತ್ಯ ಲೋಕದಲ್ಲಿ ಮಹತ್ವದ ಮಾಹಿತಿಗಳನ್ನು ಕ್ರೋಢೀಕರಿಸಲು ಬಳಸಿಕೊಂಡರು. ಕಂಪ್ಯೂಟರ್ ಸಮಸ್ತ ಮಾಹಿತಿ ಹಿಡಿದಿಡುವುದರಿಂದ ಅಧ್ಯಯನ ಮಾಡುವವರಿಗೆ ಅನುಕೂಲವಾಗಬೇಕು ಅನ್ನುವುದು ಅವರ ಅಚಲವಾದ ನಿಲುವಾಗಿತ್ತು.

ವೇದೋಪನಿಷತ್ತು, ಮಹಾಕಾವ್ಯಗಳು, ಭಗವದ್ಗೀತೆ, ಬ್ರಹ್ಮಸೂತ್ರ ಪುರಾಣ ಮುಂತಾದ ಮಹತ್ವದ ಕೃತಿಗಳನ್ನು ಅಧ್ಯಯನ ಮಾಡುವರಿಗೆ ಮಾಹಿತಿ ಪಡೆದುಕೊಳ್ಳಲು ತುಂಬ ಕಷ್ಟ ಪಡುವ ಅಗತ್ಯವಿರುವುದಿಲ್ಲ. ಕಂಪ್ಯೂಟರಿನ ಸಹಾಯವಿದ್ದರೆ ಸಾಕು ಎಲ್ಲ ಮಾಹಿತಿಯು ಆ ಸ್ಥಳದಲ್ಲಿ ಸಿಗುತ್ತದೆ. ಇದರ ಜೊತೆಗೆ ಪದ ಪ್ರಯೋಗ ಕೋಶವನ್ನು ಮಾಡಿಕೊಳ್ಳುವುದರಿಂದ ಕೆಲಸ ತುಂಬ ಸುಲಭವಾಗುತ್ತದೆ. ಕಂಪ್ಯೂಟರ್ ಪದ ಪ್ರಯೋಗ ಕೋಶವನ್ನು ಸಿದ್ಧ ಪಡಿಸಿಕೊಳ್ಳುವುದರಿಂದ ಬಹಳ ಕಠಿಣವಾದ ಕಾರ್ಯವನ್ನು ಸರಳವಾಗಿ ನಿರ್ವಹಿಸಬಹುದು. ಅಲ್ಲದೆ ಕನ್ನಡ ಭಾಷೆಯನ್ನು ಜಾಗತಿಕ ಮಟ್ಟದಲ್ಲಿ ಪರಿಚಯಿಸುವ ಅಗತ್ಯ ಪೂರೈಸುತ್ತದೆ. ಹಾಗೆಯೇ ಅಧ್ಯಯನ ಮಾಡಿ ಮಾಹಿತಿಗಳನ್ನು ಕ್ರೋಢೀಕರಿಸಿ ಆಯಾ ಕಾಲದ ಧಾರ್ಮಿಕ, ಸಾಮಾಜಿಕ, ರಾಜಕೀಯ, ವಿಜ್ಞಾನ ಹೀಗೆ ಎಲ್ಲಾ ವಲಯದ ಭಾಷೆ ಸಂಸ್ಕೃತಿಯನ್ನು ಶಬ್ದಪ್ರಯೋಗ ಕೋಶದ ಮೂಲಕ ಪಡೆದುಕೊಳ್ಳಬಹುದು.

ಎಸ್.ಆರ್.ಗುಂಜಾಳ ಅವರು ಬಸವಣ್ಣನ ವಚನಗಳನ್ನು ಆಧರಿಸಿ 'ವಚನ ಪದ ಪ್ರಯೋಗ ಕೋಶ'(೧೨೦೦ ಪುಟಗಳು) ರಚಿಸಿದ್ದಾರೆ. ಅದು ವಚನಗಳನ್ನು ಮತ್ತು ವೀರಶೈವ ಧರ್ಮದ ಸಾಹಿತ್ಯ ಆಸಕ್ತರ ಅಧ್ಯಯನಕ್ಕೆ ಹೆಚ್ಚು ಉಪಯುಕ್ತವಾಗುತ್ತದೆ. ಹಾಗೆಯೇ ಹಾವನೂರ ಅವರು ಕಂಪ್ಯೂಟರ್ ಸಹಾಯದಿಂದ 'ಜೇಡರ ದಾಸಿಮಯ್ಯ' ಪದ ಪ್ರಯೋಗ ಕೋಶವನ್ನು ಒಂದು ತಿಂಗಳಲ್ಲಿ ಸಿದ್ಧಪಡಿಸಿದರು. ಕವಿ ಮತ್ತು ಸಾಹಿತಿ ಎಂದರೆ ಬಡಬಡಿಸುವ ಬುಡಬುಡಿಕೆಯಲ್ಲ. ಆಯಾ ಕಾಲದ ಕಾವ್ಯ ಸಾಹಿತ್ಯ ಸಮಾಜದ

ಸಾಮಾನ್ಯರ ಬದುಕಿನ ಪ್ರತಿರೂಪವಾಗಿರುತ್ತದೆ. ಈ ಕಾರಣದಿಂದ ಕಾವ್ಯ ಪದ ಪ್ರಯೋಗ ಶಬ್ದಕೋಶ ಬಹಳ ಸಹಕಾರಿಯಾಗುತ್ತದೆ ಎಂದು ಶ್ರೀನಿವಾಸ ಹಾವನೂರ ಅವರು ಪ್ರತಿಪಾದಿಸುತ್ತಾರೆ.

ಶ್ರೀನಿವಾಸ ಹಾವನೂರ ಮುದ್ದಣ ಕವಿಗೆ ಸಂಬಂಧಿಸಿದ ಮಹತ್ವದ ಮಾಹಿತಿ ಕ್ರೋಢೀಕರಿಸಿದ್ದಾರೆ. ಮುದ್ದಣನ ಪ್ರಮುಖ ಕೃತಿಗಳಾದ ಶ್ರೀರಾಮ ಪಟ್ಟಾಭಿಷೇಕ, ಅದ್ಭುತ ರಾಮಾಯಣ ಹಾಗೂ ಶ್ರೀರಾಮಶ್ವಮೇದ ಈ ಕೃತಿಗಳ ರಾಮನ ನಾಮದಿಂದಲೇ ಆರಂಭವಾಗುತ್ತದೆ. ರಾಮ ಮುದ್ದಣನ ಪ್ರಿಯವಾದ ದೇವರು; ಆದರೆ ವಸ್ತುಸ್ಥಿತಿ ಬೇರೆ. ಈ ಕೃತಿಯನ್ನು ಕಂಪ್ಯೂಟರ್‌ರಿಗೆ ಕೊಟ್ಟಾಗ ಅಲ್ಲಿ ೩೦೫ ಬಾರಿ ಶಿವನಾಮ ಬಂದರೆ ೧೯೧ ಸಾರಿ ರಾಮ ಉಲ್ಲೇಖಗೊಂಡಿದೆ. ಇತರೆ ಬ್ರಹ್ಮ ೧೦೩, ಇಂದ್ರ ೧೪೯, ಹರಿ ೧೫೯ ಈ ಎಲ್ಲಾ ಉಲ್ಲೇಖಗಳನ್ನು ಗಮನಿಸಿದರೆ ಶಿವ ಲಯಕಾರಿ, ಶಿವನಲ್ಲಿ ಮಂಗಳಕಾರ ಶಿವನಾಗಿದ್ದಾನೆ. ಈ ಕಾರಣದಿಂದ ಮುದ್ದಣ ದೈವ ಶಿವ ಎಂಬುದು ಕಂಡು ಬರುತ್ತದೆ.

ಹೀಗೆ ಒಂದು ತಂತ್ರಜ್ಞಾನವನ್ನು ಯಾವ ರೀತಿಯಲ್ಲಿ ಉಪಯೋಗಿಸಬಹುದೆಂಬುದನ್ನು ಶ್ರೀನಿವಾಸ ಹಾವನೂರ ಅವರು ವಿಶ್ಲೇಷಿಸಿದ್ದಾರೆ. ಹಾವನೂರ ಅವರ ಚಿಂತನೆಗಳೆಲ್ಲ ಕಾರ್ಯರೂಪಕ್ಕೆ ಬಂದಿರುವುದನ್ನು ಈಗಿನ ಕಂಪ್ಯೂಟರ್ ಲೋಕ ತಿಳಿಸುತ್ತದೆ. ಕನ್ನಡ ಸಾಹಿತ್ಯ, ಸಂಶೋಧನೆ, ಅಭಿವೃದ್ಧಿಗಳಿಗೆ ಸಂಬಂಧಿಸಿದ ಎಲ್ಲ ಕ್ಷೇತ್ರಗಳಲ್ಲೂ ಈ ಗಣಕಯಂತ್ರ ಅನಿವಾರ್ಯ ಮತ್ತು ಅತ್ಯವಶ್ಯಕ ಎಂಬಂತಾಗಿರುವುದನ್ನು ನಾವು ಗಮನಿಸಬಹುದು. ಈ ರೀತಿಯ ಚಿಂತನೆಗಳನ್ನು ಎಪ್ಪತ್ತರ ದಶಕದಲ್ಲಿಯೇ ಹಾವನೂರ ಅವರು ರೂಪಿಸಿದ್ದರು ಎಂಬುದೇ ಮಹತ್ವದ ಸಂಗತಿ.

**ಐ.ಮಾ. ಮುತ್ತಣ್ಣ ಅವರ ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ.**

ಇತ್ತೀಚಿನ ದಿನಮಾನಗಳಲ್ಲಿ ಕನ್ನಡ ಸಾಹಿತ್ಯ ಸಾಕಷ್ಟು ಅಭಿವೃದ್ಧಿ ಹೊಂದಿರುವುದನ್ನು ನಾವು ಕಾಣುತ್ತಿದ್ದೇವೆ. ಪ್ರತಿವರ್ಷ ಲಕ್ಷಾಂತರ ಹೊಸ ಹೊಸ ಪ್ರಕಟಣೆಗಳು ಹೊರಬರುತ್ತಿವೆ. ಸಮಗ್ರ ಕನ್ನಡ ಸಾಹಿತ್ಯದ ಎಲ್ಲ ಪ್ರಕಾರಗಳ ಹೊಸ ಹೊಸ ಚಿಂತನೆಗಳು. ಆಶಯಗಳು, ಮನರಂಜನೆಗಳು, ಸಮಾಜಮುಖಿ ಯೋಚನೆಗಳು ಹೀಗೆ ಎಲ್ಲ ಕ್ಷೇತ್ರಗಳಲ್ಲೂ ಪ್ರಕಟಣೆಗಳು ಬೆಳಕು ಕಾಣುತ್ತಿರುವುದು ಗಮನೀಯ. ಕನ್ನಡ ಸಾಹಿತ್ಯದ ಹುಟ್ಟು, ಬೆಳವಣಿಗೆ, ಇತಿಹಾಸ ಕುರಿತ ಪುಸ್ತಕಗಳು ಪ್ರಕಟವಾಗುತ್ತಿರುವುದನ್ನು ಕಾಣುತ್ತೇವೆ.

ಬೆಳೆ ಅಂದ ಮೇಲೆ ಕಾಳು-ಜೊಳ್ಳು ಸಹಜ. ಅಂತೆಯೇ ಸಾಹಿತ್ಯ ಕೃಷಿಯಲ್ಲಿಯೂ ಕಾಳು-ಜೊಳ್ಳು ಸರ್ವೇಸಾಮಾನ್ಯ. ಇತ್ತೀಚಿನ ಒಂದೆರಡು ದಶಕಗಳಲ್ಲಿ ಸಾಹಿತ್ಯ ಕೃತಿಗಳ ವಿಮರ್ಶೆ ಏಕಮುಖವಾಗುತ್ತಿವೆ. ಹಿಂದೆ ಇದ್ದಿಲ್ಲವೆಂದಲ್ಲ. ಆಗಿನ ಕಾಲದಲ್ಲಿ ಜೊಳ್ಳುಗಳಿಗಿಂತ ಕಾಳುಗಳೇ ಹೆಚ್ಚಿದ್ದವು. ಜೊಳ್ಳನ್ನು ಜೊಳ್ಳು ಎಂದು ಹೇಳುವ ಜಾಯಮಾನವಿತ್ತು. ಆದರೆ ಇಂದು ಅದರ ಪ್ರಮಾಣ ಕಡಿಮೆಯಾಗಿದೆ. ಈ ಓಸ್ನೆಲೆಯ ಜೊಳ್ಳು ಎಂದು

ಹೆಸರಿಸಬಹುದಾದ ಒಂದು ಕೃತಿಯನ್ನು ಶ್ರೀನಿವಾಸ ಹಾವನೂರ ಅವರು ಸಮಗ್ರವಾಗಿ ವಿಮರ್ಶಿಸಿದ ಫಲಶ್ರುತಿಯೇ 'ಐ.ಮಾ.ಮುತ್ತಣ್ಣ ಅವರ ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ' ಎಂಬ ಲೇಖನ.

ಇಂದು ವಿಮರ್ಶೆ, ವಿಶ್ಲೇಷಣೆ ಎಂಬ ಹೆಸರಿನಲ್ಲಿ, ಕಾರ್ಯದಲ್ಲಿ ಮುಖಸ್ತುತಿಗೆ, ಹೊಗಳಿಕೆಗೆ ಪ್ರಥಮ ಪ್ರಾಶಸ್ತ್ಯ. ಆದರೆ ಹಾವನೂರ ಅವರು ಒಂದು ಕೃತಿಯನ್ನು ಹೇಗೆ ವಿಮರ್ಶಿಸಬೇಕು ಎಂಬುದನ್ನು ಈ ಲೇಖನದ ಮೂಲಕ ತಿಳಿಯಪಡಿಸಿದ್ದಾರೆ. 'ಪಾಶ್ಚಾತ್ಯ ವಿದ್ವಾಂಸರ ಕನ್ನಡ ಸೇವೆ' ಗ್ರಂಥದಲ್ಲಿ ಸಾಕಷ್ಟು (ಅಗಣಿತ) ಅಕ್ಷರ ದೋಷಗಳಿರುವುದನ್ನು ತಿಳಿಸಲಾಗಿದೆ ಭಾಷಾದೋಷ, ಅಸ್ಪಷ್ಟ ವಿಚಾರ, ಪುನರುಕ್ತಿ, ಅಕ್ಷರ ದೋಷ, ಕ್ರಮಬದ್ಧವಲ್ಲದ, ತಪ್ಪು ಕಲ್ಪನೆ ಇತ್ಯಾದಿಗಳಿರುವುದರಿಂದ ಅದನ್ನು 'ಗ್ರಂಥ'ವೆಂದು ಕರೆಯುವುದೇ ಅಪ್ರಸ್ತುತ ಎಂದೆನಿಸುತ್ತದೆ.

ಬರೆದಿರುವುದೆಲ್ಲ ಗ್ರಂಥ, ಹೇಳಿರುವುದೆಲ್ಲ ಸತ್ಯ ಎಂಬ ಆಲೋಚನೆಯಿಂದ ರಚಿಸಲ್ಪಟ್ಟಿರುವ ಪ್ರಸ್ತುತ ಕೃತಿಯನ್ನು ಆಮೂಲಾಗ್ರವಾಗಿ ವಿಮರ್ಶೆ ಮಾಡಿರುವ ಶ್ರೀನಿವಾಸ ಹಾವನೂರ ಅವರು "ಈ ಗ್ರಂಥದ ಸ್ವರೂಪ ಮೇಲುನೋಟಕ್ಕೆ ಗೊತ್ತಾಗುವಂತಿದ್ದರೂ ನಮ್ಮಲ್ಲಿಯ ಎಷ್ಟೋ ಜನ ಸಾಹಿತ್ಯಕರೂ ಸಾಹಿತ್ಯಾಭ್ಯಾಸಿಗಳೂ ಮೇಲಿಂದ ಮೇಲೆ ಈ ಗ್ರಂಥವನ್ನು ಆಧಾರವಾಗಿ ಬಳಸುತ್ತಿದ್ದಾರೆ; ಉಲ್ಲೇಖಿಸುತ್ತಾರೆ. ಇದು ಬೇಸರದ ವಿಷಯ ಎಂದು ಅಭಿಪ್ರಾಯ ಮಂಡಿಸಿದ್ದಾರೆ.

ಹೀಗೆ ಶ್ರೀನಿವಾಸ ಹಾವನೂರ ಅವರು ಕನ್ನಡದ ಬಹುಮುಖ್ಯ ಸಂಶೋಧಕರಾಗಿ ಗುರುತಿಸಲು ಅವರ ಕೃತಿಗಳು ನಮಗೆ ಸಾಕ್ಷಿಯಾಗಿವೆ. ವಿಶೇಷವಾಗಿ ೧೮-೧೯ನೇ ಶತಮಾನದ ಶೈಕ್ಷಣಿಕ ಸಾಹಿತ್ಯಿಕ ವಿದ್ಯಮಾನಗಳ ಬಗ್ಗೆ ಹಾವನೂರ ಅವರ ಹೆಜ್ಜೆಸ ವಿಶ್ಲೇಷಣೆಯಿಂದ ತಿಳಿದುಬರುತ್ತದೆ.

**ಕೊನೆ ಟಿಪ್ಪಣಿ**

೧. ರಾಜ್ಯಮಟ್ಟ ೧೬ನೇ ಇತಿಹಾಸದ ಸಮ್ಮೇಳನ ಮೈಸೂರು(ಲೇಖನ) ಶ್ರೀನಿವಾಸ ಹಾವನೂರ-ಪು.ಸಂ.-೦೩

೨. ವಿಜಯ ಕರ್ನಾಟಕ, ಭಾನುವಾರ, ಏಪ್ರೀಲ್, ೨೦೧೧(ಸಪ್ತಾಹಿಕ) ಪು.ಸಂ.೦೧

೩. ಇತಿಹಾಸ ದರ್ಶನ. ಸಂಪುಟ ೧೫/೨೦೦ ಶ್ರೀನಿವಾಸ ಹಾವನೂರ, ಪು.ಸಂ.೦೮

೪. ಕನ್ನಡ ಸಂಶೋಧನೆ ಶ್ರೀನಿವಾಸ ಹಾವನೂರ ಕೊಡುಗೆ-ರವೀಂದ್ರ ಶೆಟ್ಟಿ, ಪು.ಸಂ-೧೪

೫. ಕನ್ನಡ ಸಂಶೋಧನೆ ಶ್ರೀನಿವಾಸ ಹಾವನೂರ ಕೊಡುಗೆ-ರವೀಂದ್ರ ಶೆಟ್ಟಿ, ಪು.ಸಂ-೧೪

೬. ಎಂ.ಎಂ.ಕಲಬುರ್ಗಿ ಮಾರ್ಗದ ಮಹಾವಾಕ್ಯಗಳು ಸಂಪಾದನೆ, ಎಫ್.ಟಿ.ಹಳ್ಳಿಕೇರಿ. ಎನ್.ವಿರುಪಾಕ್ಷಿ ಪು.ಸಂ-೦೧

೭. ಅದೇ, ಪು.ಸಂ-೦೧

೮. ಅದೇ, ಪು.ಸಂ-೦೩

೯. ಎಂ.ಎಂ.ಕಲಬುರ್ಗಿ ಮಾರ್ಗದ ಮಹಾವಾಕ್ಯಗಳು ಸಂಪಾದನೆ, ಎಫ್.ಟಿ.ಹಳ್ಳಿಕೇರಿ. ಎನ್.ವಿರೂಪಾಕ್ಷಿ, ಪು.ಸಂ-೦೭

೧೦. ಎಂ.ಎಂ.ಕಲಬುರ್ಗಿ ಮಾರ್ಗದ ಮಹಾವಾಕ್ಯಗಳು ಸಂಪಾದನೆ, ಎಫ್.ಟಿ.ಹಳ್ಳಿಕೇರಿ. ಎನ್.ವಿರೂಪಾಕ್ಷಿ, ಪು.ಸಂ-೦೯

೧೧. ಹೊಸಗನ್ನಡ ಅರುಣೋದಯ ಹಾವನೂರ ಪು.ಸಂ. ೫೮೪

೧೨. ಅದೇ, ಪು.ಸಂ. ೫೮೫

೧೩. ಅದೇ, ಪು.ಸಂ. ೫೮೮

೧೪. ತುಂಗಭದ್ರೆಗೆ ನಾಡಿಗೆ ವರವೋ ಶಾಪವೋ. ಶ್ರೀನಿವಾಸ ಹಾವನೂರ. ಪು ಸಂ. ೨೭

೧೫. ಅದೇ, ಪು.ಸಂ. ೨೯

೧೬. ಅದೇ, ಪು.ಸಂ. ೪೨

೧೭. ಅದೇ, ಪು.ಸಂ. ೪೭-೪೮

೧೮. ಅದೇ, ಪು.ಸಂ. ೫೦-೫೧

೧೯ ಅದೇ, ಪು.ಸಂ. ೭೭

೨೦. ಅದೇ, ಪು.ಸಂ. ೭೯

೨೧. ಅದೇ, ಪು.ಸಂ. ೮೧

೨೨. ಅದೇ, ಪು.ಸಂ. ೮೪

೨೩. ಅದೇ, ಪು.ಸಂ. ೯೧

೨೪. ಅದೇ, ಪು.ಸಂ. ೧೦೨

೨೫. ಅದೇ, ಪು.ಸಂ. ೧೦೮

೨೬. ಅದೇ, ಪು.ಸಂ. ೧೧೨

೨೭. ಅದೇ, ಪು.ಸಂ. ೧೧೩
೨೮. ಮರೆಯಲಾಗದ ಮುಂಬಯಿ ಕರ್ನಾಟಕ, ಶ್ರೀನಿವಾಸ ಹಾವನೂರ, ಪು.ಸಂ. ೦೧
೨೯. ಅದೇ, ಪು.ಸಂ. ೦೩
೩೦. ಅದೇ, ಪು.ಸಂ. ೦೫
೩೧. ಅದೇ, ಪು.ಸಂ. ೦೭
೩೨. ಅದೇ, ಪು.ಸಂ. ೨೧
೩೩. ಅದೇ, ಪು.ಸಂ. ೨೩
೩೪. ಅದೇ, ಪು.ಸಂ. ೨೫
೩೫. ಅದೇ, ಪು.ಸಂ. ೩೧
೩೬. ಅದೇ, ಪು.ಸಂ. ೩೬
೩೭. ಅದೇ, ಪು.ಸಂ. ೩೭–೩೮
೩೮. ಅದೇ, ಪು.ಸಂ. ೫೪
೩೯. ಅದೇ, ಪು.ಸಂ. ೫೫
೪೦. ಅದೇ, ಪು.ಸಂ. ೫೬
೪೧. ಅದೇ, ಪು.ಸಂ. ೫೭
೪೨. ಅದೇ, ಪು.ಸಂ. ೫೭
೪೩. ಅದೇ, ಪು.ಸಂ. ೫೮
೪೪. ಅದೇ, ಪು.ಸಂ. ೬೬
೪೫. ಅದೇ, ಪು.ಸಂ. ೭೩
೪೬. ಅದೇ, ಪು.ಸಂ. ೮೧
೪೭. ಅದೇ, ಪು.ಸಂ. ೮೧
೪೮. ಅದೇ, ಪು.ಸಂ ೮೬
೪೯. ಅದೇ, ಪು.ಸಂ. ೯೦
೫೦. ಅದೇ, ಪು.ಸಂ ೯೧
೫೧. ಅದೇ, ಪು.ಸಂ ೯೫
೫೨. ಅದೇ, ಪು.ಸಂ ೧೦೫
೫೩. ಅದೇ, ಪು.ಸಂ ೧೧೮
೫೪. ಅದೇ, ಪು.ಸಂ ೧೨೩
೫೫. ಅದೇ, ಪು.ಸಂ ೧೨೫
೫೬. ಅದೇ, ಪು.ಸಂ ೧೪೬
೫೭. ಕನ್ನಡ ಕ್ರೈಸ್ತ ಸಾಹಿತ್ಯ ಹನಿಗತೆ ಕಂಪ್ಯೂಟರ್ ಇತ್ಯಾದಿ, ಹಾವನೂರ, ಪು.ಸಂ. ೧೩೯
೫೮. ಅದೇ, ಪು.ಸಂ ೧೪೦
೫೯. ಅದೇ, ಪು.ಸಂ ೧೪೧

## ಅಧ್ಯಾಯ ಐದು

# ಸೃಜನ ಸಾಹಿತ್ಯ

ಶ್ರೀನಿವಾಸ ಹಾವನೂರ ಅವರ ಸಾಹಿತ್ಯ ಕೃಷಿಯು ಸೃಜನ ಸಾಹಿತ್ಯದ ಸಣ್ಣಕಥೆಯ ರಚನೆಯೊಂದಿಗೆ ಆರಂಭವಾಯಿತು. ಅವರ ಸಾಹಿತ್ಯದ ವಸ್ತು ವಿಷಯ, ಬದುಕು, ಸಮಾಜ ಈ ರೀತಿಯ ಪರಿಕಲ್ಪನೆಯ ವ್ಯಾಪ್ತಿ ವಿಸ್ತರಿಸಿಕೊಂಡಿದೆ. ಮನಸ್ಸು ತಿಳಿಗೊಳ್ಳುವ ಹಾಗೆ ಕಥಾ ಸ್ವರೂಪವನ್ನು ಪರಿವರ್ತಿಸುವ ಸಾಮರ್ಥ್ಯವನ್ನು ಹೊಂದಿದೆ. ಅವರ ಸಾಹಿತ್ಯಕ್ಕೆ ಸತ್ವಯುತವಾದ ಶಕ್ತಿಯಿದೆ ಎನ್ನುವುದಕ್ಕೆ ಅವರ ಸೃಜನ ಸಾಹಿತ್ಯ ನಿದರ್ಶನವಾಗಿದೆ. ಸೃಜನಶೀಲ ಸಾಹಿತ್ಯದ ಪ್ರಕಾರಗಳಾದ ೧. ಸಣ್ಣಕಥೆ, ೨. ಲಲಿತ ಪ್ರಬಂಧ, ೩. ವಿಚಾರಸಾಹಿತ್ಯ ಇವುಗಳ ಮೂಲಕ ಸಾಹಿತ್ಯದ ಕೃಷಿಯ ಪ್ರವೇಶ ಮಾಡಿದರು.

**'ಹೋಟೆಲಿನ ಪ್ರಭಾವ'** (೧೯೨೯) ಅವರ ಮೊದಲ ಪ್ರಕಟಿತ ಕಥೆ ನಂತರ 'ರಂಭಾ,' 'ಕಾಮಕ್ಕೆ ಕಣ್ಣಿಲ್ಲ,' 'ಇಬ್ಬಗೆಯ ಹಂಚಿಕೆ,' 'ಪತ್ರಪರೀಕ್ಷೆ' ಮುಂತಾದವುಗಳು ಉಷಾ, ನುಡಿ, ನಗುವ ನಂದನ ಮುಂತಾದ ಪತ್ರಿಕೆಗಳಲ್ಲಿ ಪ್ರಕಟವಾದವು. ೧೯೪೮ರಲ್ಲಿ ಜಯಂತಿ ಪತ್ರಿಕೆಯು ಆಯೋಜಿಸಿದ್ದ ಕಥಾ ಸ್ಪರ್ಧೆಯಲ್ಲಿ 'ತಮ್ಮಯ್ಯನ ಮರಣ' ಕಥೆಯು ಬಹುಮಾನ ಪಡೆದುಕೊಂಡಿತು. ಎರಡು ನೀಳ್ಗತೆಗಳ ಸಂಕಲನ 'ಅವರು ಮತ್ತು ದೇವಕ್ಕ' ಕೃತಿಯನ್ನು ಗೋಕರ್ಣದ ಪರ್ಣಕುಟಿ ಗ್ರಂಥಮಾಲೆಯು ಪ್ರಕಟಿಸಿತು. ಈ ರೀತಿ ಸಾಹಿತ್ಯ ಕೃಷಿ ವಿಕಾಸದ ದಾರಿ ಹಿಡಿಯಿತು.

ಶ್ರೀನಿವಾಸ ಹಾವನೂರರ ಸೃಜನ ಸಾಹಿತ್ಯದ ಕೃಷಿಗೆ ಪಾ.ವೆಂ. ಆಚಾರ್ಯರರು ಪ್ರೇರಣೆ ನೀಡಿದರು. ಕಸ್ತೂರಿಯ ಸಂಪಾದಕರಾಗಿದ್ದ ಪಾ.ವೆಂ. ಆಚಾರ್ಯರ ಒತ್ತಾಸೆಯಿಂದ ಪತ್ರಿಕೆಯಲ್ಲಿ ಬರೆಯಲು ಅವಕಾಶವಾಯಿತು. ಹೀಗಾಗಿ ಕನ್ನಡ ಸಾಹಿತ್ಯದಲ್ಲಿ ಹಾವನೂರ ಅವರು ಸೃಜನ ಸಾಹಿತ್ಯದ ಶ್ರೇಷ್ಠ ಬರಹಗಾರರಾಗಿ ಸಾಹಿತ್ಯ ಲೋಕಕ್ಕೆ ಪರಿಚಿತಗೊಂಡರು. ಅವರ ಸಾಹಿತ್ಯದ ಬರವಣಿಗೆ ಭೂತ ಮತ್ತು ವರ್ತಮಾನಗಳನ್ನು ಸಮೀಕರಿಸಿ ಭವಿಷ್ಯತ್ತಿನ ಚಿಂತನೆಗಳನ್ನು ಹಾವನೂರ ಅವರ ಸೃಜನ ಸಾಹಿತ್ಯ ಕೃಷಿ ಪ್ರಮಾಣದಲ್ಲಿ ಒಳಗೊಂಡಿದೆ. ಕಡಿಮೆಯಾದರೂ ಗುಣಾತ್ಮಕ ದೃಷ್ಟಿಯಿಂದ ಸರ್ವಕಾಲಕ್ಕೂ ಮೌಲ್ಯಯುತವಾದ ಸಾಹಿತ್ಯವಾಗಿದೆ.

### ೫.೧. ಸಣ್ಣ ಕಥೆ

ಕನ್ನಡ ಸಾಹಿತ್ಯದಲ್ಲಿ ಸೃಜನಶೀಲ ಸಾಹಿತ್ಯ ತನ್ನದೇಯಾದ ಅಸ್ಮಿತೆ ಕಂಡುಕೊಂಡಿದೆ. ಈ ಪ್ರಕಾರದಲ್ಲಿ ಸಣ್ಣ ಕಥೆಯು ಜನರ ಬದುಕಿನಲ್ಲಿ ಹಾಸುಹೊಕ್ಕಿದೆ. ಈ ಕಥಾ ಸಂಕಲನವನ್ನು ಗಮನಿಸಿದಾಗ ಸೂಕ್ಷ್ಮಾತಿಸೂಕ್ಷ್ಮ ಸಂಗತಿಗಳನ್ನು ಎಳೆ ಎಳೆಯಾಗಿ ಬಿಡಿಸುವಲ್ಲಿ ಅವರ ಬುದ್ಧಿವಂತಿಕೆ ಅನಾವರಣಗೊಂಡಿದೆ. ವರ್ತಮಾನದ ಬದುಕಿನ ಸ್ವರೂಪ ಹಾಗೂ ಪ್ರತಿನಿತ್ಯದ ಹೆಣ್ಣು ಗಂಡಿನ ವ್ಯವಹಾರಿಕ ಒಡನಾಟ ಕೌಟುಂಬಿಕ ಬದುಕು, ಧಾರ್ಮಿಕ ಪರಿಸರದ ಸ್ವರೂಪ, ರಾಜಕೀಯ ತಂತ್ರಗಾರಿಕೆ, ತಂತ್ರ ಮತ್ತು ಕುತಂತ್ರಗಳ ಬಳಸಿಕೊಂಡು ತನ್ನ ಬದುಕನ್ನು ಕಟ್ಟಿಕೊಳ್ಳುವ ಹೀಗೆ ಜಗತ್ತಿನ ಅನೇಕ ವೈವಿಧ್ಯಮಯ ವೈಶಿಷ್ಟ್ಯತೆ ಈ ಸಂಕಲನ ಹೊಂದಿದೆ.

'ಲೇಪಾಕ್ಷಿಯೂ ಲೇಡಿಸ್ ಹಾಸ್ಟೆಲೂ' (ಹದಿಹರೆಯ) 'ಅವರು' (ವಿವಾಹ ಪೂರ್ವದಲ್ಲಿ) 'ಸ್ವಪ್ನ ಮುರಳಿ,' (ವೈವಾಹಿಕ ಸ್ವಪ್ನಲೋಕ) 'ವಾತ್ಸಲ್ಯ ಪರೀಕ್ಷೆ' (ತಾಯ್ತನ ಸಂಭ್ರಮ) ಸಂಭಾವಿತೆ (ಗಂಡಿನ ಚಿತ್ತ ಚಾಂಚಲ್ಯ) 'ಗಂಧ ಮತ್ತು ಕಲ್ಲು' (ಸಂಸಾರದ ವಿರಸ) 'ಕಾಗೆಗೆ ಹೇಳಿದ ಕಥೆ' (ಸ್ತ್ರೀ ಜಾರಿದಾಗ) ಇಂತಿ ನಮಸ್ಕಾರ (ಸಂಸಾರದ ಕೊನೆಯ ಘಟ್ಟದಲ್ಲಿ) ಮಾವನವರು (ಮಾನಸಿಕ ವಿಚ್ಛೇದ) ಈ ರೀತಿ ಒಂಭತ್ತು ಕಥೆಗಳನ್ನು ಒಳಗೊಂಡಿದೆ.

ಪ್ರಸ್ತುತ ಕಥಾ ಸಂಕಲನದ ವಸ್ತು ಮಹಿಳೆ ಹೆಣ್ಣಿನ ಜೀವನದ ಏಳುಬೀಳುಗಳ ನಡುವೆ ಜೀವನದ ಘಟ್ಟಗಳನ್ನು ಕಾಣಬಹುದು. ಬಾಲ್ಯ ಪ್ರೌಢಾವಸ್ಥೆಯ ಮತ್ತು ವೃದ್ಧಾಪ್ಯ ಈ ಹಂತಗಳು ತುಂಬ ವಿಶಿಷ್ಟವಾದ ಸಂಗತಿಗಳು ಪ್ರಸ್ತಾಪಿತಗೊಂಡಿದೆ. ಈ ಮೂರು ಹಂತಗಳಲ್ಲಿ ಅವಳ ಮನೋಸ್ಥಿತಿಯ ದೌರ್ಬಲ್ಯಗಳ ಚಿತ್ರಣ ನಿರೂಪಿತಗೊಂಡಿದೆ.

**'ಲೇಪಾಕ್ಷಿಯೂ ಲೇಡಿಸ್ ಹಾಸ್ಟೆಲೂ'** ಹದಿಹರೆಯದ ಮನೋಭೂಮಿಕೆಯನ್ನು ಕತೆಗಾರರಾದ ಶ್ರೀನಿವಾಸ ಹಾವನೂರ ಅವರು ಪ್ರಸ್ತುತ ಕಥೆಯಲ್ಲಿ ಮನೋಜ್ಞವಾಗಿ ಚಿತ್ರಿಸಿದ್ದಾರೆ. ಕಥಾನಾಯಕಿ ಲೇಪಾಕ್ಷಿ ವಯೋಸಹಜ ಗುಣಗಳನ್ನು ಬಹಿರಂಗವಾಗಿ ತೋರ್ಪಡಿಸಿದ್ದರಿಂದ ಲೇಪಾಕ್ಷಿಯ ಅಕ್ಕನ ಮನೆ ಒಂದು ರೀತಿಯಲ್ಲಿ ನೀರವ ಮೌನದಲ್ಲಿ ಮುಳುಗುವ ಹಾಗಾಯಿತು. ಮುಗ್ಧ ಸ್ವಭಾವದ ವಿಮಲ (ಲೇಪಾಕ್ಷಿಯ ಅಕ್ಕ) ಗಂಭೀರವಾದವಳಂತೆ ತೋರುತ್ತಾಳೆ. "ಹರೇದ ವಯಸ್ಸು... ಒಂದಿಷ್ಟು ನಾವೇ ಎಚ್ಚರದಿಂದ ಇದ್ದರಾಯ್ತು..." ಎಂಬ ಎಚ್ಚರ ಮತ್ತು ಸಾವಧಾನದ ಕಲ್ಯಾಣಿಯ ಮಾತು ವಿಮಲಳಿಗೆ ಸಮಾಧಾನ ಕೊಡುವುದಿಲ್ಲ. ಕೊನೆಗೊಂದು ದಿನ ಕಲ್ಯಾಣಿಯೇ ಲೇಪಾಕ್ಷಿ ಭೀಮೇಶನ ಪ್ರಣಯ ಪ್ರಸಂಗ ಕಣ್ಣಾರೆ ಕಾಣುವಂತಾಯಿತು. ಜೊತೆ ಜೊತೆಗೆ ತಾನು ಮದುವೆಗೆ ಮುಂಚೆ ಗಂಡನೊಂದಿಗೆ ಸರಸವಾಡಿದ ನೆನಪು ಇದೀಗ ನಡೆದು ಹೋಯಿತೇನೋ ಎಂಬಂಥ ಭಾವನೆಯುಂಟಾಯಿತು. ಕಲ್ಯಾಣಿಗೆ ಸುಲಭವಾಗಿ ಬಗೆಹರಿಸಿದರಾಯಿತು

ಎಂದುಕೊಂಡಿದ್ದ ಕಲ್ಯಾಣಿ ತಾನೂ ಗಂಭೀರವಾಗಬೇಕಾದ ಅನಿವಾರ್ಯತೆ, ಜವಾಬ್ದಾರಿ ಬಂತು 'ತನ್ನ ಹದಿಹರೆಯದಲ್ಲಿ ಇಷ್ಟು ವಿಕೋಪಕ್ಕೆ ಹೋಗಿರಲಿಲ್ಲ' ಎಂಬ ಸ್ವಾಗತ ಕಲ್ಯಾಣಿಯದ್ದು. ಕಾಲೇಜು ಹಾಸ್ಟೆಲ್‌ಗೆ ಲೇಪಾಕ್ಷಿಯನ್ನು ಸೇರಿಸಬೇಕೆಂದು ಆಲೋಚಿಸಿ ತನ್ನ ಕ್ಲಾಸ್‌ಮೇಟ್ ಹಾಸ್ಟೆಲ್ ವಾರ್ಡನ್‌ನನ್ನು ಕಂಡು ಕೆಲಸ ಮುಗಿಸಬೇಕೆಂದುಕೊಂಡಳು. ಮರಿಯಮ್ಮಳನ್ನು ಮಾತನಾಡಿಸಿದಾಗ "ನನ್ನ ಸರ್ವಿಸ್‌ನಾಗೆ ಇಂತಹ ಸಾವಿರಾರು ಪ್ರಕರಣಗಳನ್ನು ನೋಡಿದಿನಿ! ನಮ್ಮ ಕಾಲಕ್ಕೂ ಈಗಿನ ಕಾಲಕ್ಕೂ ವ್ಯತ್ಯಾಸ ಆಗಿರುವುದನ್ನು ನಾವು ಮನಗಾಣಬೇಕು. ಎಲ್ಲಾ ಕಾಲಕ್ಕೂ ಒಂದೇ ರೀತಿಯಲ್ಲಿರುವ ಅಸಾಧ್ಯ ಎಂದು ವಾಸ್ತವ ಸ್ಥಿತಿಯನ್ನು ವಿವರಿಸುತ್ತಾಳೆ. "ಹಾಸ್ಟೆಲಿಗೆ ಸೇರಿಸಿಕೊಂಡ ನಂತರವೂ ಗುಟ್ಟಾಗಿ ನಡೆದುಹೋಗುವುದನ್ನು ನಾನು ನೋಡಿದ್ದೇನೆ. ಅಲ್ಲಿ ಗ್ಯಾರಂಟಿ ಕೊಡುವುದಕ್ಕೆ ಸಾಧ್ಯವೇ? ಎಂದು ಕಲ್ಯಾಣಿಯನ್ನು ಪ್ರಶ್ನಿಸುತ್ತಾಳೆ. ಅಪರಿಚಿತ ಎಂದು ಹೇಳಿಕೊಂಡಿದ್ದ ಕಲ್ಯಾಣಿ ತನ್ನ ಮನೆಯವರೇ ಹೀಗೆಲ್ಲ ಮಾಡುತ್ತಿದ್ದಾರೆ ಎಂದೂ... ತಕ್ಕ ಗತಿ ಕಾಣಿಸುತ್ತೇನೆಂದು ದೃಢನಿರ್ಧಾರಕ್ಕೆ ಬರುತ್ತಾಳೆ. ಹದಿಹರೆಯದ ಪ್ರೇಮ ಪ್ರಕರಣದಂಥ ಮನದಿಂಗಿತಗಳನ್ನು ತಡೆಯುವುದು ಕಷ್ಟಸಾಧ್ಯ ಎಂದು ಕಥಾಗಾರರು ಕಥೆಯ ಮೂಲಕ ತಿಳಿಸಿದ್ದಾರೆ.

**ಅವರು :** ಮದುವೆ ವಯಸ್ಸಿನ ಹೆಣ್ಣುಮಗಳ ಮನಸ್ಥಿತಿ, ಮನೆಯ ವಾತಾವರಣ ಅಪ್ಪನ ತಳಮಳ ಮತ್ತು ತನ್ನ ಮುಂದಿರುವ ಭವಿಷ್ಯದ ಪ್ರಶ್ನೆಗಳೆಲ್ಲವೂ 'ಅವರು' ಕಥೆಯಲ್ಲಿ ಅನಾವರಣಗೊಂಡಿದೆ. ಕಥೆಗಾರರಾದ ಶ್ರೀನಿವಾಸ ಹಾವನೂರ ಅವರು 'ರಮಾ' ಕಥಾನಾಯಕಿಯರು ಮೂಲಕ ವಾಸ್ತವತೆ ಕನಸಿಗಿಂತ ಎಷ್ಟು ಕಠೋರವಾಗಿರುತ್ತದೆ ಎಂಬುದನ್ನು ಅವರು ಕಥೆಯ ಮೂಲಕ ತಿಳಿಯಪಡಿಸಿದ್ದಾರೆ.

ದಾರಿಯಲ್ಲಿ ಹೋಗುವಾಗ ಅಥವಾ ಪ್ರಯಾಣಿಸುವಾಗ ಎಷ್ಟೋ ಪರಿಚಿತರು, ಅಪರಿಚಿತರು ಎದುರುಗೊಂಡಾಗ ಮಾತನಾಡುತ್ತೇವೆ. ಸಮಯ-ಸಂದರ್ಭಕ್ಕೆ ತಕ್ಕಂತೆ ಮಾತುಕತೆಯ ಸಮಯ ವಸ್ತು ಒಳಗೊಂಡಿರುತ್ತದೆ. ಆದರೂ ಒಂದೊಂದು ಸಂದರ್ಭದಲ್ಲಿ ಅವು ಅಚ್ಚಳಿಯದೇ ನಮ್ಮ ಜೊತೆಯಲ್ಲಿರುತ್ತವೆ. ಪಯಣದ ಸಂದರ್ಭದಲ್ಲಿ ರಮಾ ಮತ್ತು ಸುರೇಶನಿಗೆ ಸಹಕರಿಸಿದ ಕುರೂಪಿ ಮುಖದ ವರದರಾಜ ಕೊನೆಗೆ ಸಂಬಂಧಿಕನಾಗುವ ಸಂದರ್ಭದಲ್ಲಿ 'ರಮಾ' ಮನಸ್ಸಿನಲ್ಲಿ ತೊಯ್ದಾಟಗಳುಂಟಾಗುತ್ತವೆ. ಪ್ರಥಮ ಬಾರಿಗೆ ವರದರಾಜ ಕುರೂಪಿಯಾಗಿ ಕಂಡರೂ ಸಹಾಯವಿತ್ತ ನಂತರ 'ಅಷ್ಟೊಂದು ಕುರೂಪಿ'ಯಲ್ಲ ಎಂಬಷ್ಟರ ಮಟ್ಟಿಗೆ ಬದಲಾವಣೆಯನ್ನು ಕಾಣುತ್ತದೆ. ರಮಾ ಮನಸ್ಸಿನಲ್ಲಿ ಹಾಗೆಯೇ ತನ್ನ ಮನಸ್ಸಿನಲ್ಲಿ "ನನ್ನನ್ನು ಮದುವೆಯಾಗುವವ ಇವನಷ್ಟು ಕುರೂಪಿಯಾಗಿರಬಾರದು. ಇವನಂತೆಯೇ ಸದೃಢ ಮೈಕಟ್ಟು ಹೊಂದಿರಬೇಕೆಂದು ಆಶಿಸುತ್ತಾಳೆ "ನನ್ನ ಕೈಹಿಡಿಯುವವನು ಅಂತಹ ಸಮರ್ಥನಾಗಿರುವವನಿರಬೇಕು. ಪ್ರಭಾವಶಾಲಿ ವ್ಯಕ್ತಿತ್ವವುಳ್ಳ ಹಾಗೂ ಉತ್ತಮ ಸ್ವಭಾವದವನು ನನ್ನನ್ನು ತನ್ನವಳನ್ನಾಗಿ ಮಾಡಿಕೊಂಡರೆ ಸಾಕು. ನನಗೆ ಸ್ವಚ್ಛಂದತೆ ಬೇಡ

ಅಂತಹವರಿಗೆ ನನ್ನ ಸರ್ವಸ್ವವನ್ನೆಲ್ಲ ಒಪ್ಪಿಸಿ, ನಿಶ್ಚಿಂತಳಾಗುವದರಲ್ಲಿಯೇ ಸುಖವಿದೆಯಲ್ಲವೆ? ಈಗ ಸುರೇಶನು ಅವರ ತೊಡೆ ಮೇಲೆ ಎಷ್ಟು ಹಾಯಾಗಿ ಮಲಗಿದ್ದಾನೆ. ಅಂತಹ ನೆಮ್ಮದಿ ನನಗೆ ಬೇಕು. ಶಾಂತಿ ಬೇಕು ಈ ರೀತಿಯ ಆಶೆ-ಆಕಾಂಕ್ಷೆ ಹದಿಹರೆಯದ ಎಲ್ಲ ಹೆಣ್ಣುಮಕ್ಕಳಲ್ಲಿ ಬರುವ ಸಹಜಗುಣಗಳು. ವಾಸ್ತವವದಲ್ಲಾಗುವ ಘಟನೆಗಳನ್ನೆಲ್ಲ ತನ್ನ ಜೀವನದಲ್ಲಿ ನಡೆಯುತ್ತಿಯೆಂಬಂತೆ ಭ್ರಮಾಲೋಕದಲ್ಲಿ ರಮಾ ವಿಹರಿಸುತ್ತಾಳೆ. ಆದರೆ ಭ್ರಮೆಗೂ ವಾಸ್ತವಕ್ಕೂ ಅಜಗಜಾಂತರ ವ್ಯತ್ಯಾಸಗಳಿರುವುದನ್ನು ಕುರೂಪಿ ವರದರಾಜನ ತಮ್ಮನನ್ನು ಅನುಮೋದಿಸುವಾಗ ಅರಿವಾಗುತ್ತದೆ.

ಮನೆಯ ವಾತಾವರಣ, ತಂದೆ ಕಷ್ಟಗಳೆಲ್ಲ ಕಣ್ಮುಂದೆ ಸುಳಿದಾಗ "ನಿಶ್ಚಯದ ಬಗ್ಗೆ ಮಾತಾಡಲಿಕ್ಕೆ ಬರತೇವಿ ಅಂತ ಪುರೋಹಿತರು ಹೇಳಲಿ" ಎಂದು ರಮಾ ಉಸುರುತ್ತಾಳೆ. ತಾನು ಬಯಸಿದಂಥ ವರ ಸಿಗದಿದ್ದರೂ ತಂದೆಗೆ ಕಷ್ಟ ಕೊಡಬಾರದು. ಒಮ್ಮೆ ಅಪ್ಪನ ತ್ರಾಸ ಕಡಿಮೆ ಮಾಡಗಬೇಕು; ಮಾಡುತ್ತಿದ್ದೇನೆ ಎಂದು ಸಮಾಧಾನಗೊಳ್ಳುತ್ತಾಳೆ. ಮನಸು ನಿರಾಳವಾಗುತ್ತದೆ.

ಅವರು ಕಥೆಯ ಮೂಲಕ ಭಾರತೀಯ ಸಂಕೀರ್ಣ ಸಮಾಜ, ಸಂಕೀರ್ಣತೆಯಿಂದ ಕೂಡಿದ ಕುಟುಂಬ. ತಂದೆ-ತಾಯಿಯ ಪರಿಪಾಟಲು, ಮದುವೆ-ಸಂಸಾರಗಳೆಂಬ ವ್ಯವಸ್ಥೆ, ಆ ವ್ಯವಸ್ಥೆಗೆ ಒಗ್ಗಿಕೊಳ್ಳುವ ಚಡಪಡಿಕೆ, ಧಾವಂತಗಳೆಲ್ಲ ಅನಾವರಣಗೊಂಡಿದೆ.

**ಸ್ವಪ್ನ ಮುರಲಿ :** ಸ್ತ್ರೀ ಪುರುಷರಲ್ಲಿ ಸಮಾಜದಲ್ಲಿ ಕಂಡ ಸನ್ನಿವೇಶಗಳಿಗುಣವಾಗಿ ತಮಗಿಷ್ಟವಾದ ಸ್ವಭಾವ-ರೂಪ-ಲಾವಣ್ಯವಿರುವವರನ್ನು ಪ್ರತಿಕ್ಷಣವೂ ಮನಸಿನ ಲೋಕದಲ್ಲಿ ತಂದುಕೊಳ್ಳುವುದು ಸಹಜಗುಣ. ಬಾಲ್ಯದಲ್ಲಿ ಕಂಡಂಥ ತಮ್ಮ ಮನಸಿಗೆ ಮುದ ನೀಡಿದ ಸ್ತ್ರೀ-ಪುರುಷ ಯಾರೇ ಆಗಿರಲಿ ಅವರನ್ನು ಜೀವನದುದ್ದಕ್ಕೂ ಮರೆಯದೇ ನೆನಪಿಸಿ ಕೊಳ್ಳುವಂತಹ ಗುಣ ಸ್ವಭಾವಗಳನ್ನು ಹೊಂದಿರುವ ಅನೇಕ ಸ್ತ್ರೀ-ಪುರುಷರನ್ನು ನಾವು ಕಾಣುತ್ತೇವೆ. ಅಂಥ ಸ್ವಭಾವದ ಯುವತಿಯ ಚಿತ್ರಣವನ್ನು ಕಥೆಗಾರ ಶ್ರೀನಿವಾಸ ಹಾವನೂರ ಅವರು 'ಸ್ವಪ್ನ ಮುರಲಿ' ಎಂಬ ಕಥಾಹಂದರದಲ್ಲಿ ಹೆಣೆದಿದ್ದಾರೆ.

ಸುಂದರಿಯ ಕೃಷ್ಣಮೂರ್ತಿಯ ಹುಚ್ಚು ಬಾಲ್ಯದಿಂದಲೇ ಇತ್ತು. ಅದು ಬಾಲ್ಯ, ಶಿಕ್ಷಣ, ವೈವಾಹಿಕ ಹಂತದಲ್ಲಿಯೂ ಮುಂದುವರಿದಿರುವುದು ಅಚ್ಚರಿಯ ಸಂಗತಿ. ಹಾಗೆಯೇ ಸುಂದರ ಸಂಪ್ರದಾಯಸ್ಥ ಕುಟುಂಬದ ಹಿನ್ನೆಲೆಯುವಳು ಎಂಬುದನ್ನು ಮೇಲ್ನೋಟಕ್ಕೆ ತೋರಿಸುತ್ತದೆ. ಕಾರಣ ಸಾಂಪ್ರದಾಯಿಕ ಕುಟುಂಬಗಳಲ್ಲಿ ಮಾತ್ರ ಈ ರೀತಿಯ ನಡವಳಿಕೆಗಳಿಗೆ ಆಸ್ಪದ, ಸ್ವಾತಂತ್ರ್ಯವಿರುವುದನ್ನು ನಾವು ಕಾಣುತ್ತೇವೆ. ಸಾಂಪ್ರದಾಯಿಕ ಕುಟುಂಬ ವ್ಯವಸ್ಥೆಯಲ್ಲಿ ಪ್ರತಿವರ್ಷ ಹಬ್ಬ-ಆಚರಣೆಗಳೆಲ್ಲವೂ ಚಾಚೂ ತಪ್ಪದೆ ನೆರವೇರುತ್ತವೆ. ಹಾಗೆಯೇ 'ಸ್ವಪ್ನ ಮುರಲಿ'ಯ ಸುಂದರಿಗೂ ಪ್ರತಿಯೊಂದು ಹಂತಗಳಲ್ಲಿಯೂ ಕೃಷ್ಣನ ಪೂಜೆ, ಪುನಸ್ಕಾರ, ಹೊಗಳಿಕೆಗಳೆಲ್ಲವೂ ಮನೆಯ ಇತರೆ ಸದಸ್ಯರ ಮೂಲಕ ತಿಳಿದುದರಿಂದಲೇ ಆತನನ್ನು

ತನ್ನವನನ್ನಾಗಿ ಮಾಡಿಕೊಳ್ಳಬೇಕೆಂದು ಆಶೆ ಚಿಗುರೊಡೆಯುತ್ತದೆ. ಹಬ್ಬ-ಆಚರಣೆ-ಸಂಪ್ರದಾಯಗಳೆಲ್ಲ ಯಾವ ರೀತಿಯಲ್ಲಿ ತಲೆಮಾರಿನಿಂದ ತಲೆಮಾರಿಗೆ ಹಸ್ತಾಂತರಗೊಳ್ಳುತ್ತವೆ ಎಂಬುದನ್ನು ಈ ಕಥೆಯ ಮೂಲಕ ತಿಳಿಯಬಹುದು. ಹಿರಿಯರಿಂದ ಪಡೆದ ಕೃಷ್ಣನ ಚರಿತ್ರೆ ಸುಂದರಿಯ ಮನದಲ್ಲಿ ಅಚ್ಚಳಿಯದೆ ನಿಂತಿದೆ. ದೇವರೆಂದು ಪರಿಚಯಿಸಿದ ಕೃಷ್ಣ ತನ್ನವನಾಗಬೇಕೆಂದು ಹರೆಯದ ಮನ ಹಂಬಲಿಸುವುದು ಸ್ವಾಭಾವಿಕ ಬಾಲಲೀಲೆಗಳನ್ನೆಲ್ಲಾ ತಿಳಿದ ಸುಂದರಿ ಪ್ರತಿಕ್ಷಣ ಕೃಷ್ಣನ ಜೊತೆಜೊತೆಗೆ ಹೆಜ್ಜೆಯಿಡುತ್ತಿದ್ದೇನೆ ಎಂಬ ಭ್ರಮೆಯಲ್ಲಿಯೇ ಜೀವನ ಸಾಗಿಸುತ್ತಾಳೆ. ಮದುವೆಯ ನಂತರವೂ ಮುಂದುವರಿಯುವ ಭ್ರಮಾಲೋಕದಲ್ಲಿ ತನ್ನ ಗಂಡನನ್ನೇ ಕೃಷ್ಣನನ್ನಾಗಿಸಿ ಸೋಲುತ್ತಾಳೆ. ಒಂದು ರೀತಿಯಲ್ಲಿ ಅಪ್ರಬುದ್ಧಳಂತೆಯೇ ಸುಂದರಿ ಕಂಡುಬರುತ್ತಾಳೆ.

ವಯಸ್ಸಿಗೆ ಬಂದ ಹೆಣ್ಣು ತನಗೆ ಇಂಥವೇ ಹೆಸರು ಬೇಕೆನ್ನುವುದರಲ್ಲಿ ಅಸಹಜ ಗುಣವಿರುವಂತೆ ತೋರುತ್ತದೆ. ಕೃಷ್ಣನನ್ನೇ ಪುತ್ರನನ್ನಾಗಿ ಪಡೆಯುವ ಅಪರಿಮಿತ ಭ್ರಮೆಯಲ್ಲಿಯೇ ಸುಂದರಿ ತನ್ನ ಹಟ (ಪ್ರೀತಿಯ ಹಟ)ವನ್ನು ಸಾಧಿಸುತ್ತಾಳೆ.

**ವಾತ್ಸಲ್ಯ ಪರೀಕ್ಷೆ :** ಪರಂಪರಾಗತವಾಗಿ ಕೌಟುಂಬಿಕ ವ್ಯವಸ್ಥೆಯಲ್ಲಿ ನಿಗದಿಪಡಿಸಿದ ಕೆಲಸ ಕಾರ್ಯ-ಕರ್ತವ್ಯಗಳನ್ನು ಬೇರೊಬ್ಬರು ಮಾಡಿದಾಗ ಆಗಬಹುದಾದ ಮಾನಸಿಕ ತಲ್ಲಣಗಳನ್ನು 'ವಾತ್ಸಲ್ಯ ಪರೀಕ್ಷೆ' ಕಥೆ ಬಿಂಬಿಸುತ್ತದೆ. ಭಾರತೀಯ ಸಮಾಜದಲ್ಲಿನ ಕೌಟುಂಬಿಕ ವ್ಯವಸ್ಥೆ ಅತೀ ಸಂಕೀರ್ಣತೆಯಿಂದ ಕೂಡಿರುವುದನ್ನು ನಾವು ಕಾಣುತ್ತೇವೆ. ಪ್ರಾಚೀನ ಕಾಲದಿಂದಲೂ ಕೌಟುಂಬಿಕ ವ್ಯವಸ್ಥೆ ಯಾವುದೇ ರೀತಿಯ ಭಂಗ ಅಥವಾ ಅಡೆತಡೆಗಳನ್ನು ಸಾಮಾನ್ಯವಾಗಿ ಸಹಿಸುವುದಿಲ್ಲ. ಒಂದು ರೀತಿಯ ಅಲಿಖಿತ ಶಾಸನವೆಂಬಂತೆ ನಡೆದುಕೊಂಡು ಬಂದಿದೆ. 'ವಾತ್ಸಲ್ಯ ಪರೀಕ್ಷೆ'ಯಲ್ಲಿ ಸರಸ-ರಾಘಣ್ಣ ದಾಂಪತ್ಯವೇ ಕಥಾವಸ್ತು. ವೈವಾಹಿಕ ಜೀವನದಲ್ಲಿ ನಡೆಯುವ ಅಸಮಾಧಾನಗಳ ಜೊತೆಗೆ 'ಸ್ವಾಭಿಮಾನ' 'ಇಗೋ'ಗಳೆಲ್ಲ ಸೇರಿದಾಗ ಆಗುವ ಸಣ್ಣಪುಟ್ಟ ಜಗಳವನ್ನು ಪ್ರಸ್ತುತ ಕಥೆ ನಿರೂಪಿಸುತ್ತದೆ.

ರಾಘಣ್ಣನ ಹೆಂಡತಿ ಸರಸಗೆ ತನ್ನ ದೈನಂದಿನ ಕೆಲಸ ಕಾರ್ಯಗಳನ್ನು ಗಂಡ ರಾಘಣ್ಣ ಮಾಡುತ್ತಾನೆ. ಆ ಮೂಲಕ ತನ್ನ ಅಸ್ತಿತ್ವವನ್ನು ಇಲ್ಲವಾಗಿಸುತ್ತಾನೆ ಎಂಬ ಕೊರಗು; ಆದರೆ ಅವೆಲ್ಲದರ ಬಗ್ಗೆ ತಲೆ ಕೆಡಿಸಿಕೊಳ್ಳದ ರಾಘಣ್ಣ ಚಿಕ್ಕಂದಿನಿಂದಲೇ ಸಾಗಿ ಬಂದ ಜೀವನ ವಿಧಾನದಂತೆ ನಡೆದುಕೊಳ್ಳುತ್ತಾನೆ. ಆದರೆ ಆತನ ಮಾತು ಹೆಂಡತಿ ಸರಸಳನ್ನು ಮಾನಸಿಕವಾಗಿ ಚುಚ್ಚುವಂತೆ ಮಾಡುತ್ತದೆ. 'ಸಂಸಾರ ಮಾಡುವುದರಲ್ಲಿ ನೀನು ಅಯೋಗ್ಯಳು: ನಿನ್ನ ಕೈಯಿಂದ ಏನಾಗುತ್ತದೆ: ನೀನು ತುಂಬ ಆಲಸಿ ದಿನನಿತ್ಯದ ಈ ಮಾತುಗಳು ಸರಸಳನ್ನು ಹಿಂಸಿಸುವಂತೆ ಮಾಡುತ್ತದೆ. 'ಒಂದು ಸುಳ್ಳನ್ನು ನೂರು ಸಾರಿ ಹೇಳಿದಾಗ ಸತ್ಯವಾಗುತ್ತದೆ' ಎಂಬ ಸಾಮಾನ್ಯ ಮಾತಿನಂತೆ ಪ್ರತಿದಿನದ ಹೀಯಾಳಿಕೆಯ ಮಾತುಗಳು ನಿಧಾನವಾಗಿ ಸರಸಳಿಗೆ ನೋವನ್ನುಂಟುಮಾಡುತ್ತದೆ: ಹಾಗೆಯೇ ಇದೇ

ಸತ್ಯ; ನಾನು ಅಯೋಗ್ಯಳು ಎಂಬ ಒಂದು ನಿರ್ಧಾರವನ್ನು ತಳೆಯುವುದನ್ನು ಗಮನಿಸಬಹುದು. ಇತರೆ ಸಂಸಾರದಲ್ಲಿ ಹೆಂಡತಿಯರು ತಮ್ಮ ಗಂಡ ಏನೂ ಕೆಲಸ ಮಾಡುವುದಿಲ್ಲ; ಕೆಟ್ಟ ಗಂಡಸರು ಎಂದು ಬೈಯ್ಯುತ್ತಿದ್ದರೆ ಸರಸಳ ಸಂಸಾರದಲ್ಲಿ ಆಕೆಗೆ ಬೈಯ್ಯಲು ಅವಕಾಶವೇ ಇಲ್ಲದಂತಾಗಿದೆ. ಹಾಗಾಗಿ ಗಂಡನನ್ನು ಯಾವ ರೀತಿಯಲ್ಲೂ ಬೈಯ್ಯುವಂತಿಲ್ಲ ಎಂಬ ಒಂದು ವಿಷಣ್ಣ ಕೊರಗು ಇತ್ತು ಇದರಿಂದ ಆಕೆಗೂ ಲಾಭವಾಗಿರುವುದನ್ನು ತಿಳಿಸಿದ್ದಾಳೆ. "ಅವ್ವನ ಹತ್ತಿರ ಹೋಗ್ತೀಯೇನು" ಎಂದು ಮಗುವಿಗೆ ಗಂಡ ರಾಘಣ್ಣ ಕೇಳಿದರೆ "ನೀವು ಕೈ ಬಿಡಿರಲ್ಲ ಹೇಗೆ ಬರಬೇಕು ಅಂವ" ಎಂದು ಮುನಿಸು ತೋರಿಸುತ್ತಾಳೆ. "ಯಾಕೋ ನೀಚಾ, ಈಗ ಬೇಕಾಯಿತೇನೋ ನಾನು? ಹೋಗ್ಹೋಗು ನಾ ನಿನಗೆ ಏನೂ ಅಲ್ಲ; ಅವರ ಕಡೆಗೇ ಹೋಗು. ಅವರೇ ಹಾಕುತ್ತಾರೆ ಹೊಟ್ಟೆಗೆ" ಹೀಗೆ ಮಾತಿನ ಚಾಟಿ ಬೀಸುತ್ತಾಳೆ ಸರಸ ಗಂಡ ರಾಘಣ್ಣನಿಗೆ.

ಸಂಸಾರದಲ್ಲಿ ಪ್ರೀತಿ-ಪ್ರೇಮ-ಪ್ರಣಯದಂತೆ ಸಿಟ್ಟು, ಸೆಡವು ಕೋಪ-ತಾಪಗಳೆಲ್ಲ ಸಾಮಾನ್ಯ. ಅಂತೆಯೇ 'ವಾತ್ಸಲ್ಯ ಪರೀಕ್ಷೆ'ಯಲ್ಲಿ ರಾಘಣ್ಣ-ಸರಸರ ನಡುವಿನ ಕೋಪ-ತಾಪಗಳ ಮಧ್ಯೆ ಮಗನ ಆಗಮನವೂ ಸಮ್ಮಿಲಿತಗೊಂಡಿವೆ. ಸಾಂಪ್ರದಾಯಿಕವಾಗಿ ಬಂದಂಥ ರೀತಿ-ನೀತಿಗಳು ರಾಘಣ್ಣನ ಮನೆಯಲ್ಲಿ ತದ್ವಿರುದ್ಧವಾಗಿದ್ದುದೇ ಸರಸಳ ಕೋಪ-ತಾಪಗಳಿಗೆ ಕಾರಣವಾಗುತ್ತಿರುವುದನ್ನು ಕಥೆಗಾರ ಶ್ರೀನಿವಾಸ ಹಾವನೂರ ಅವರು ರಸವತ್ತಾಗಿ ಚಿತ್ರಿಸಿದ್ದಾರೆ.

**ಗಂಧ ಮತ್ತು ಕಲ್ಲು :** ಶ್ರೀನಿವಾಸ ಹಾವನೂರ ಅವರ ಗಂಧ ಮತ್ತು ಕಲ್ಲು ಕಥಾ ಸಂಕಲನದ ಶೀರ್ಷಿಕೆ ಕಥೆ ಗಂಧ ಮತ್ತು ಕಲ್ಲು ದಾಂಪತ್ಯ ವಿರಸದ ಸ್ವರೂಪವೊಂದನ್ನು ಪರಿಚಯಿಸುತ್ತದೆ. ಗಂಧ ಮತ್ತು ಕಲ್ಲು ಕಲಾತ್ಮಕ ನಿರೂಪಣೆಯನ್ನು ಜೀವಾಳವಾಗಿಸಿಕೊಂಡಿರುವ ಕಥೆ. ಇಲ್ಲಿ ಭಾರತೀಯ ಸಮಾಜದ ಸ್ವರೂಪವನ್ನು ಕೌಟುಂಬಿಕ ಜೀವನದ ಅಡಿಪಾಯವನ್ನು, ದಾಂಪತ್ಯದ ಗಟ್ಟಿತನವನ್ನು ನಾವು ಕಾಣಬಹುದು. "ಅಡಿಗೀ ಮನಿ ನನ್ನದದ. ಅದರೊಳಗೆ ನಿಮ್ಮದೇನೂ ಅಧಿಕಾರ ಇಲ್ಲ ತಿಳೀತ?" ಹೆಂಡತಿಯ ಕರ್ಮಭೂಮಿ ಅಡುಗೆಮನೆ ಏನಿದ್ದರೂ ಗಂಡ ಹೊರಗಿರಬೇಕು. ಇಲ್ಲಿ ಏನೂ ನಡೆಯೂದಿಲ್ಲವೆಂಬಂತೆ ಹೆಂಡತಿ ಗಂಡನ ಬಾಯಿ ಮುಚ್ಚಿಸುತ್ತಾಳೆ. ಅದಕ್ಕಾಗಿಯೇ ಮೊದಲೇ ಪ್ರಸ್ತಾಪಿಸಿದಂತೆ ಭಾರತೀಯ ಸಮಾಜದ ಸ್ವರೂಪವನ್ನು ಈ ರೀತಿಯ ವೈವಾಹಿಕ ಜೀವನದಲ್ಲಿ ಕಾಣಬಹುದು ಎಂದೆ ಹೇಳಿದ್ದೇನೆ.

'ಗಂಧ ಮತ್ತು ಕಲ್ಲು'ನ ಗಂಡ-ಹೆಂಡಿರ ಜಗಳಕ್ಕೆ ಕಾರಣ ಇಷ್ಟೇ! ಪ್ರತಿದಿನ ರಾತ್ರಿ ಹೆಚ್ಚು ಮಾಡಿದ ಅಡುಗೆಯನ್ನು ಒಕ್ಕಲಗಿತ್ತಿಗೆ ಹಾಕುವುದು; ಸಾಮಾನ್ಯ ಕಾರಕೂನನ ಹೆಂಡತಿ ದಿನಂಪ್ರತಿ ಹೆಚ್ಚು ಮಾಡಿದ ಅಡುಗೆಯನ್ನು ಹೊರಕಳುಹಿಸಿದರೆ ಪಗಾರ ಸಾಕಾಗಲ್ಲ. ಮಿತ ಅಡುಗೆ ಮಾಡಿದರೆ ಯಾವ ಸಮಸ್ಯೆಯೂ ಇಲ್ಲವೆಂಬುದು ಗಂಡನ ಸರಿಯಾದ

ವಾದ. ಆದರೆ ಗಂಡನ ಮಾತು ಹೆಂಡತಿಗೆ ಅರ್ಥವಾಗಬೇಕಲ್ಲವೇ? ಮೂರು ಮಕ್ಕಳಾದ ಎಂಟು-ಹತ್ತು ವರ್ಷಗಳ ದಾಂಪತ್ಯದಲ್ಲಿ ಈ ರೀತಿಯ ಬಿರುಕೇಕೆ ಎಂಬುದು ಗಂಡನ ಸ್ವಗತ; ನನಗೆ ತಿಳಿದಂಗೆ ನಾ ಮಾಡತೇನಿ; ಪರಸ್ಪರ ಕೆಲಸದೊಳಗೆ ಕೈ ಹಾಕೂ ಬ್ಯಾಡ" ಹೆಂಡತಿಯ ಅಂತಿಮ ಷರಾ ಗಂಡ-ಹೆಂಡಿರ ಮಧ್ಯೆ ಸರಸ-ವಿರಸ ಸಹಜ. ಆದರೆ ವಿಕೋಪಕ್ಕೋದ ಪ್ರಸ್ತುತ ಜಗಳಕ್ಕೆ 'ಮಾತು ಬಿಡುವ ನಿಧಾರ' ಪರಿಹಾರವಾಗುತ್ತದೆ. ಅದು ಸರಿಸುಮಾರು ಒಂದು ತಿಂಗಳು; ಹಠ ಹಿಡಿದ ಹೆಂಡತಿ ಜಪ್ಪಯ್ಯ ಅಂದ್ರು ಗಂಡನ ಜೊತೆ ಮಾತನಾಡುವುದಿಲ್ಲ. "ಇದರ ಕೊನೆಯೆಂತು? ಹೀಗೆ ನಾವು ದೂರ ದೂರವಿದ್ದರೆ ಮುಂದೇನು ಗತಿ"[೨] ಎಂದು ಆಗಾಗ್ಗೆ ಚಿಂತಿಸಿದರೂ ಗಂಡ 'ಆದದ್ದಾಗಲಿ ನೋಡೋಣ' ಎಂಬ ಮುಂದುವರಿಕೆಗೆ ಅಸ್ತು ಅನ್ನುತ್ತಾನೆ.

ಮಗುಗೆ ಜ್ವರ ಬಂದಾಗಲೂ ಗಂಡ-ಹೆಂಡತಿ ಮಾತನಾಡುವುದಿಲ್ಲ. ಅಷ್ಟರಮಟ್ಟಿಗೆ ತಮ್ಮ ತಮ್ಮ ವಾದಕ್ಕೆ ಕಟ್ಟುಬಿದ್ದವರಂತೆ ವರ್ತಿಸುತ್ತಾರೆ. ಕೊನೆಗೆ ಮಧ್ಯರಾತ್ರಿಯಲ್ಲಿಯೇ ಹೆಂಡತಿ ವೈದ್ಯರನ್ನು ಕರೆತರುತ್ತಾಳೆ.

ಪ್ರಸ್ತುತ ಕಥೆಯಲ್ಲಿ ಹೆಣ್ಣು ತನ್ನ ಅಸ್ತಿತ್ವವನ್ನು ಗಟ್ಟಿಗೊಳಿಸಿಕೊಳ್ಳುವ ಸ್ವರೂಪವಿದೆ. ತನ್ನ ಮಕ್ಕಳ ಮೂಲಕ ಕುಟುಂಬವನ್ನು ಸರಿದಾರಿಗೆ ತರುವ ಬಗ್ಗೆ ಚಿಂತಿಸುತ್ತಾಳೆ. ಮತ್ತೊಂದು ಕಡೆ ತನ್ನ ಗಂಡ ಹೀಗಿರಬೇಕೆಂದು ಆಶಿಸುತ್ತಾಳೆ. ಗಂಡನ ಸಹಾಯ ದೊರೆಯದಿದ್ದರೂ ತನ್ನ ಛಲವನ್ನು ಮಾತ್ರ ಬಿಟ್ಟುಕೊಡಲಾರಳು ಎಂಬುದನ್ನು ಕಥೆ ಅರುಹುತ್ತವೆ.

**'ಕಾಗೆಗೆ ಹೇಳಿದ ಕಥೆ'** ತಾನು ಮಾಡಿದ ಕೃತ್ಯಕ್ಕೆ ಪಶ್ಚಾತ್ತಾಪ ಪಟ್ಟು ಆತ್ಮಹತ್ಯೆಗೆ ಶರಣು ಹೋದ ಸ್ತ್ರೀಯೋರ್ವಳ ಧಾರುಣ ಚಿತ್ರವೇ ಕಾಗೆಗೆ ಹೇಳಿದ ಕಥೆ. ಮಾನಸಿಕವಾಗಿ ತಡೆದುಕೊಳ್ಳಲಾರದ ವೇದನೆಯನ್ನು ಕಾಗೆಗೆ ನಿವೇದಿಸಿ ಪೂರ್ಣ ಜೀವನವನ್ನು ಅನಾವರಣಗೊಳಿಸುವ ಕಥಾ ಸ್ವರೂಪ ಗಮನಾರ್ಹವಾದುದು. ಕಥಾಶೈಲಿ, ಕಥಾನಿರೂಪಣೆ ಕಥೆಗಾರ ಶ್ರೀನಿವಾಸ ಹಾವನೂರ ಅವರ ವಿದ್ವತ್ತನ್ನು ಪ್ರತಿಬಿಂಬಿಸುತ್ತದೆ. ಸಾಂಪ್ರದಾಯಿಕ ಕುಟುಂಬ ವ್ಯವಸ್ಥೆಯಲ್ಲಿ ಹೆಣ್ಣು ಅಪ್ಪಿತಪ್ಪಿಯೂ ಎಡವಬಾರದೆಂಬುದು ಅಲಿಖಿತ ಶಾಸನವಿದ್ದಂತೆ. ಅದೇ ಗಂಡು ಎಡವಿದರೆ ಈ ರೀತಿಯ ತುಮುಲ-ತಲ್ಲಣಗಳಿಗೆ ಈಡಾಗುವುದಿಲ್ಲ; ಪುರುಷ ಪ್ರಧಾನ ಸಮಾಜದ ಆಶಯವೇ ಅದು. ಆದರೆ ಸ್ತ್ರೀಗೆ ಮಾತ್ರ ಕಟ್ಟುನಿಟ್ಟುಗಳ ಸಂಕೋಲೆಗಳಿರುತ್ತವೆ.

'ಕಾಗೆಗೆ ಹೇಳಿದ ಕಥೆ'ಯ ನಾಯಕಿ ಅಪ್ರತ್ಯಕ್ಷವಾಗಿ ಪಿಂಡ ಕಾಗೆಯನ್ನು ಉದ್ದೇಶಿಸಿ ತನ್ನ ಜೀವನ ವೃತ್ತಾಂತವನ್ನೇ ತಿಳಿಸುತ್ತಾಳೆ. ಕಾಗೆ ಸಾಂಕೇತಿಕ ಕಥಾನಾಯಕಿ ತನ್ನ ಮನೆಯಲ್ಲಿ ಅನುಭವಿಸಿದ ಸುಖ-ದುಃಖ-ದುಮ್ಮಾನಗಳನ್ನು (ಭೌತಿಕವಾಗಿಲ್ಲದೆ) ನಿಜ

ಸಂಗತಿಗಳನ್ನು ಹೇಳುತ್ತಾಳೆ. ಅಲ್ಲಿ ಯಾವ ನಾಚಿಕೆ-ಮುಜುಗರಗಳ ಸುಳಿವಿಲ್ಲ. ಕಾರಣ ಆತ್ಮ ಮಾತನಾಡುವುದರಿಂದ; "ಓ ದೇವರೇ ! ಒಂದೇ ಒಂದು ಸಲ ನನಗೆ ನನ್ನ ಈ ಬಳಗದವರೊಡನೆ ಮಾತನಾಡಲು ಬಿಡು. ಒಂದೇ ಸಲ ! ಅವರಿಗೆ ತಿಳಿಸಿ ಹೇಳುವೆ; ನನ್ನ ವಾಸನೆ ಇದಲ್ಲ ಎಂದು ಆಮೇಲೆ ಮತ್ತೆ ನಿನ್ನಲ್ಲಿಗೆ ಖಂಡಿತವಾಗಿ ಬರುವೆ. ಮಗುವಿನ ನಂಟನ್ನು ಗಣಿಸುವುದಿಲ್ಲ. ಮಗು ನನಗೆ ಬೇಡವಾದುದು ಎಂದು ನೀನರಿಯೆಯಾ?"

ಬಂಧು ಬಳಗದವರೊಡನೆ ಇದ್ದೇನೆ. ಮಾತನಾಡಿಸಿ ಬರುವೆ ಎಂದು ಅರುಹುವ ನಾಯಕಿ ತನ್ನ ಇರುವನ್ನು ಸ್ಪಷ್ಟಪಡಿಸುತ್ತಾಳೆ. "ಇವರೊಟ್ಟಿಗೆ ನಾನು ಏಳು ವರ್ಷ ಕಳೆದಿದ್ದೇನೆ. ನನಗಿಂತ ಹಿಂದೆ ಒಬ್ಬಾಕೆ ಇವರ ಕೈ ಹಿಡಿದಿದ್ದಳಂತೆ ನಾನು ಅವಳನ್ನು ನೋಡಿಲ್ಲ. ಆಕೆ ಬಂಜೆಯೆಂದು ನಮ್ಮ ಅತ್ತೆ ಅವಳನ್ನು ಉರಿಸುತ್ತಿದ್ದಳಂತೆ" "ಕಲಿತ, ಸ್ವತಂತ್ರ ವಿಚಾರವುಳ್ಳವಳೆಂದು ನನ್ನ ನಾ ತಿಳಿಸಿರುವಾಗ ನನಗೆ ವಯಸ್ಸು ಹೆಚ್ಚಾಯಿತೆಂದೂ, ನನಗಾಗಿ ಕೈಯೆತ್ತಿಕೊಡಬೇಕಾದ ವರದಕ್ಷಿಣೆಯ ಹಣವನ್ನು ತಂದೆಯಲ್ಲಿಲ್ಲವಾಗಿಯೂ ನಾನು ಈ ಮನೆಗೆ ಬರಬೇಕಾಯಿತು; ಬಂದೆ" "ನನ್ನ ಬಾಳಿನ ಜೊತೆಗಾರ ರಸಿಕನಾಗಿರಬೇಕು, ನನ್ನನ್ನು ಒಂದು ಮಲ್ಲಿಗೆ ಹೂವಿನಂತೆ ನೋಡಿಕೊಳ್ಳಬೇಕು. ನನ್ನ ಮಾತನ್ನು ಕೇಳುತ್ತಿರಬೇಕು..."

ಕಥಾನಾಯಕಿಯ ಮನೋಸ್ಥಿತಿಗಳ ಒಂದು ಹಂತಗಳಿವೆ. ತನ್ನ ಗಂಡನಿಗೆ ಮೊದಲೊಂದು ಮದುವೆಯಾಗಿತ್ತು. ಇದು ನಾಯಕಿಗೆ ಪೂರ್ಣಪ್ರಮಾಣದಲ್ಲಿಲ್ಲದಿದ್ದರೂ ಒಂದು ರೀತಿಯ ಅಪಥ್ಯದ ವಿಷಯವೇ ಸರಿ. ಸ್ವತಂತ್ರ ವಿಚಾರವುಳ್ಳವಳಾದರೂ ವೈವಾಹಿಕ ಸಂಬಂಧದಲ್ಲಿ ಅನುರೂಪವಾದ ಗಂಡನನ್ನು ಪಡೆಯಲಾಗಲಿಲ್ಲ. ಅಂತೆಯೇ ಮದುವೆಯಾದ ಗಂಡನಿಗೆ ಯಾವ ರಸಿಕತನವಾಗಲಿ ಇಲ್ಲ ಎಂದು ಮನದಿಂಗಿತಗಳನ್ನು ಕಥಾನಾಯಕಿ ತಿಳಿಸುತ್ತಾಳೆ. ಈ ಎಲ್ಲಾ ಸತ್ಯ ಸಂಗತಿಗಳೇ ಕೊನೆಗೆ ಮೈದುನನನ್ನು ಸೇರುವಲ್ಲಿ ಪರ್ಯಾಯಸಾನವಾಗುತ್ತದೆ. "ಆಕಸ್ಮಿಕವಾಗಿ ಅವನು ಶರಣು ಬಂದಿದ್ದ ಆಸೆ, ಆನಂದ ಪೂರ್ವ ಎಲ್ಲವನ್ನೂ ಒತ್ತಾಗಿಸಿಕೊಂಡು, ಹುಚ್ಚಳ ಹಾಗೆ ಅವನೆಡೆ, ನೋಡುತ್ತಿದ್ದೆ... ನನ್ನ ಮೈಮೇಲೆ ನನಗೇ ತಿಳಿದಿರಲಿಲ್ಲ... ಎಂಥದೋ ದಾಹ ನನ್ನ ದೇಹವನ್ನು ಸುಡುತ್ತಿತ್ತು... ಸತ್ಯ ಜಗತ್ತಿನಲ್ಲಿ ನಾನು ಕುಲಟಿಯಾದೆ..." ಕಥಾನಾಯಕಿ ಹೇಗೆ ತಪ್ಪುದಾರಿಗೆ ಹೋದೆ ಎಂಬುದನ್ನು ಕಾರಣಸಹಿತ ಎಳೆಎಳೆಯಾಗಿ ಬಿಚ್ಚಿಡುತ್ತಿದ್ದಾಳೆ.

ಈ ಎಲ್ಲಾ ಕಾರಣಗಳಿಗಾಗಿಯೇ ನಾನು ಇರುವುದಿಲ್ಲ; ಹುಟ್ಟಿದ ಮಗುವಿನ ತಂದೆಯ ಬಗೆಗೆ ನನಗೆ ಆಕ್ರೋಶವಿದೆ. ನನ್ನ ನಡತೆಯ ಬಗ್ಗೆ ನನಗೆ ಪಶ್ಚಾತ್ತಾಪವಿದೆ. ಜೀವನ ಪರ್ಯಂತ ಈ ಮಗುವನನ್ನು ನೋಡಿದಾಗಲೆಲ್ಲ ನನ್ನ ಪಾಪಪ್ರಜ್ಞೆ ನನ್ನನ್ನು ಕೊಲ್ಲುತ್ತದೆ. ಈ ರೀತಿ ಪ್ರತಿದಿನ ಸಾಯಲು ನನಗೆ ಅಸಾಧ್ಯ; ಎಲ್ಲವನ್ನೂ ನೋಡುತ್ತಿರುವ ಮೈದುನ ಹಾಯಾಗಿದ್ದಾನೆ. ನನಗೇನು ತಿಳಿದಿಲ್ಲ ಎಂಬಂತಿದ್ದಾನೆ. ಇರಲಿ. ಎಲ್ಲ ದೇವರಿಗೆ

ಗೊತ್ತಿಲ್ಲ, ಒಟ್ಟು ಪಶ್ಚಾತ್ತಾಪದಿಂದ ದಿನ ಬೇಯುವುದನ್ನು ತಪ್ಪಿಸಬೇಕೆಂದು ಸಾವನ್ನು ಆಹ್ವಾನಿಸುತ್ತಾಳೆ.

ಪ್ರಸ್ತುತ ಕಥೆಯಲ್ಲಿ ಪಶ್ಚಾತ್ತಾಪಪಟ್ಟು, ವೇದನೆ ಪಟ್ಟುಕೊಂಡು ಇರುವುದಕ್ಕಿಂತ ಸಾವೇ ಮೇಲು ಎಂಬ ಆಶಯವನ್ನು ಕಥಾನಾಯಕಿ ಹೊಂದುತ್ತಾಳೆ. ಇವುಗಳನ್ನು ಮೀರಿದ ಪುರುಷ ಪ್ರಧಾನ ಸಮಾಜದ ವ್ಯವಸ್ಥೆ ಹೇಗಿದೆ ಎಂಬುದನ್ನು ಈ ಕಥೆ ಅನಾವರಣಗೊಳಿಸುತ್ತಿದೆ.

**'ಇಂತಿ ನಮಸ್ಕಾರ'** ಕಥೆಗಾರರಾದ ಶ್ರೀನಿವಾಸ ಹಾವನೂರ ಅವರು ಇಂತೀ ನಮಸ್ಕಾರ ಕಥೆಯ ಮೂಲಕ ದಾಂಪತ್ಯ ಜೀವನದಲ್ಲಿ ಜಿಗುಪ್ಸೆ ಹೊಂದಿದ ಗೋವಿಂದರಾಯನ ವೈವಾಹಿಕ ಜೀವನವನ್ನು ನಿರೂಪಿಸಿದ್ದಾರೆ.

ಗೊಂವಿಂದರಾಯ ಹೆಣ್ಣುಕೊಟ್ಟ ಮಾವರಿಗೆ ಪತ್ರದ ಮೂಲಕ ಏಪಕ್ಷೀಯ ರೀತಿಯಲ್ಲಿ ಸುಖ-ದುಃಖಗಳನ್ನು ತೋಡಿಕೊಂಡಿದ್ದಾನೆ. ವಿಪರ್ಯಾಸವೆಂದರೆ ಪತ್ರವನ್ನು ಮಗಳ ಮುಖಾಂತರವೇ ಕಳುಹಿಸಿಕೊಡುತ್ತಿರುವುದು. ಮೂವತ್ತು ವರ್ಷಗಳ ವೈವಾಹಿಕ ಜೀವನದಲ್ಲಿ ಪಟ್ಟ ಸುಖ-ದುಃಖಗಳನ್ನು ಸವಿವರವಾಗಿ ವಿವರಿಸಿ ಹೇಳುತ್ತಾನೆ ಗೋವಿಂದರಾಯ ಮೂವತ್ತು ವರ್ಷಗಳ ಹಿಂದೆ "ಹುಡುಗಿ ಬುದ್ಧಿವಂತೆ, ಸ್ವಭಾವದಲ್ಲಿ ಮುಗ್ಧೆ, ಎಲ್ಲ ಮನೆಗೆಲಸದಲ್ಲಿ ಪ್ರವೀಣೆ. ನಾನು ಬಡವ, ಮಕ್ಕಳಂದಿಗ, ಈ ಮದುವೆಗೆ ಒಪ್ಪಿ ನನ್ನನ್ನು ಉದ್ಧಾರ ಮಾಡಬೇಕು"[೩] ಎಂದು ಹೇಳಿದ ಮಾವನವರ ಮಾತುಗಳನ್ನು ಗೋವಿಂದರಾಯ ನೆನಪಿಸುತ್ತಾನೆ. "ಗತಿಸಿ ಹೋದ ನಿಮ್ಮ ಶ್ರೀಮತಿಯನ್ನು ಬೈಯುತ್ತಿದ್ದೇನೆಂದು ಬೇಸರಿಸಬೇಡಿರಿ ಹೇಳಬೇಕಾದ ಮಾತೆಂದರೆ ಬಾಣಂತಿತನಕ್ಕಾಗಿ ತನ್ನ ತಾಯಿಯೊಡನೆ, ತವರಿಗೆ ಹೋಗಿ ನಿಮ್ಮ ಮಗಳು ನಾನಿಯೊಡನೆ ತಿರುಗಿ ಬಂದಾಗ. ಸಂಪೂರ್ಣ ಬದಲಾಯಿಸಿದ್ದರು. ಅಥವಾ ತನ್ನ ಮುಗ್ಧತನವನ್ನು ತಾಯಿಯ ಮಡಿಲಲ್ಲಿ ಬಿಟ್ಟು. ನಾಲಗೆಯನ್ನು ಹರಿತ ಮಾಡಿಕೊಂಡು, ಇನ್ನೆರಡು ಕೈಗಳನ್ನು ಕಟ್ಟಿಕೊಂಡು. ಕಾಳಿಕಾ ರೂಪವನ್ನು ಗ್ರಹಣ ಮಾಡಿದ್ದಳು"[೪] ಹೀಗೆ ಗೋವಿಂದರಾಯ ತನ್ನ ಪತ್ನಿಯ ಬದಲಾದ ಗುಣಸ್ವಭಾವವನ್ನು ಪರಿಚಯಿಸುತ್ತಾನೆ. "ಎಲ್ಲವನ್ನೂ ತಾನು ಸ್ವತಃ ಮಾಡಬೇಕು; ತಾನು ಮಾಡಿದ್ದೇ ಯಾವಾಗಲು ಸರಿ ಎಂಬ ಭಾವನೆಯೇ ಕಾರಣವೆಂದು ನನ್ನ ತಿಳಿವಳಿಕೆ. ಇನ್ನು ಅವಳು ಮಾಡಿದ್ದು, ನನ್ನ ದೃಷ್ಟಿಯಲ್ಲಿ ತಪ್ಪು ಎನಿಸಿ ವಾದಿಸಹೋದರೆ, ವಿಶೇಷ ರಗಳೆ ಮಾಡುತ್ತಾಳೆ. ಹೇಗೆ ತಿಳಿಸಿ ಹೇಳಿದರೂ ಕೇಳುವ ಪ್ರವೃತ್ತಿಯವಳಲ್ಲ ಎಂದು ಕಂಡುಬಂದ ಮೇಲೆ ನಾನು ಆದಷ್ಟು ವಾದವನ್ನು ಬೆಳೆಸಬಾರದೆನ್ನುವ ಧೋರಣೆಯನ್ನು ತಳೆದೆ" ಎಂದು ತಾನು ರೋಸಿಹೋದ ಗಳಿಗೆಗಳನ್ನು ಮಾವನವರಿಗೆ ನೆನಪಿಸುತ್ತಾನೆ. 'ತಾನೇ ಶ್ರೇಷ್ಠ; ತಾನು ನಡೆದದ್ದೇ ದಾರಿ' ಎಂಬಂತೆ ವರ್ತಿಸುವ ಸ್ತ್ರೀ/ಪುರುಷರಿಂದ ಸಂಸಾರವೆಂಬ ನೌಕೆ ಬಹುದೂರ ಸಾಗಲಾರದು ಎಂಬ ಅನುಭವಿಗಳ, ಹಿರಿಯ ಮಾತು ಅಕ್ಷರಶಃ ಸತ್ಯ ಎಂಬುದನ್ನು ಗೋವಿಂದರಾಯ ನೆನಪಿಸುತ್ತಾನೆ.

"ದೈಹಿಕ ಸಂಬಂಧವಾದರೂ ಸೌಹಾರ್ದಯುತವಾಗಿ ಇರಬೇಕಿತ್ತಷ್ಟೆ, ಆದರೆ ನಿಮ್ಮ ಮಗಳು ಸಂಶಯ ಮಾತ್ಸರ್ಯಗಳಿಂದ ಪ್ರೇರಿತಳಾಗಿ ಒಮ್ಮೆ ಅದಕ್ಕೆ ಮಸಿ ಬಳಿದಳು. ಅದೇ ರಂಗೂತಾಯಿಯ ಪ್ರಕರಣ..." ಹೀಗೆ ಗಂಡ-ಹೆಂಡಿರ ಮಧ್ಯೆ ನಡೆದ ತಾಕಲಾಟಗಳನ್ನೆಲ್ಲ ಸೋದಾಹರಣವಾಗಿ ವಿವರಿಸಿದ ಗೋವಿಂದರಾಯ "ನನಗೆ ಊರೂರು ತಿರುಗಬೇಕಾಗಿದೆ. ಅನ್ಯ ಜಗತ್ತು ಹೇಗಿದೆ ಎಂಬುದನ್ನು ನೋಡಬೇಕಾಗಿದೆ... ಮುಂದಿನ ಜೀವನ ಸುಖವಾಗಿಯೇ ಕಳೆದೀತೆಂದು ನಂಬಿ ಹೊರಟಿದ್ದೇನೆ... ಬಂಧನಗಳಿಲ್ಲದ, ಸ್ವತಂತ್ರಮಯ ಜೀವನವು ಹೇಗಿರುತ್ತದೆ ಎಂಬುದರ ಅನುಭವವನ್ನು ಪಡೆಯಹೊರಟಿದ್ದೇನೆ... ಎಂದು ಮಾರ್ಮಿಕ ನುಡಿಗಳನ್ನು ಪತ್ರದ ಮೂಲಕ ಮಾವನವರಿಗೆ ತಿಳಿಸುತ್ತಾನೆ. ಪತ್ರದ ಮೂಲಕ ಅಪ್ರತ್ಯಕ್ಷವಾಗಿ ಮನಸಿನ ದುಗುಡಗಳನ್ನು ಗೋವಿಂದರಾಯ ಬಿಚ್ಚಿಡುತ್ತಾನೆ. ಕಥಾ ಸ್ವರೂಪವನ್ನು ಗಮನಿಸಿದಾಗ, ಓರ್ವ ವ್ಯಕ್ತಿ ಘಟಿಸಿದ, ಘಟಿಸದಿರುವ ವಿಷಯಗಳನ್ನು ನೇರವಾಗಿ ಮುಖತಃ ತಿಳಿಸಲು ಹಿಂಜರಿಯುತ್ತಾನೆ. ಆದರೆ ಪರೋಕ್ಷವಾಗಿ ತಿಳಿಸುವಲ್ಲಿ ಎಲ್ಲಾ ಸಂಗತಿಗಳನ್ನು ಒಟ್ಟುಗೂಡಿಸುವುದನ್ನು ನಾವು ಕಾಣುತ್ತೇವೆ.

ಒಟ್ಟಾರೆಯಾಗಿ 'ಗಂಧ ಮತ್ತು ಕಲ್ಲು' ಎಂಬ ಕಥಾಸಂಕಲನ ಹೆಣ್ಣಿನ ಜೀವನ ರೀತಿಯನ್ನು, ಸ್ವರೂಪವನ್ನು ಪರಿಚಯಿಸುವಲ್ಲಿ ಯಶ ಕಂಡಿದೆ. ಸಾಂಪ್ರದಾಯಿಕ ಕುಟುಂಬದಲ್ಲಿನ ಸ್ತ್ರೀಯರ ಸ್ಥಿತಿಗತಿಯನ್ನು, ಮನೋಭಿಲಾಷೆಯನ್ನು, ಅಹಂಗಳು, ಮಾತ್ಸರ್ಯ, ಹೀಗೆ ಎಲ್ಲಾ ಗುಣ ಸ್ವಭಾವಗಳನ್ನು ಹೊಂದಿರುವ ಒಂಬತ್ತು ಕಥೆಗಳು ವಸ್ತು, ಸ್ವರೂಪ, ಶೈಲಿಗಳಲ್ಲಿ ಅತ್ಯುತ್ತಮವಾಗಿವೆ. ಸೂಕ್ಷ್ಮ ಒಳನೋಟಗಳನ್ನು, ಸಾಮಾಜಿಕ ವ್ಯವಸ್ಥೆಗಳನ್ನು ಬಿಚ್ಚಿಡುವಲ್ಲಿ ಯಶಸ್ವಿಯಾಗಿವೆ. ಭಾರತೀಯ ಸಂಕೀರ್ಣ ಸಾಮಾಜಿಕತೆಯನ್ನು ಈ ಕಥೆಗಳು ವಿಸ್ತಾರಗೊಳಿಸುತ್ತವೆ. ಕಥೆಗಾರ ಶ್ರೀನಿವಾಸ ಹಾವನೂರ ಅವರು ಸಮಾಜದಲ್ಲಿನ ಓರೆಕೋರೆಗಳನ್ನು ಅವುಗಳ ಒಸ್ನೆಲೆ ಸಮೇತವಾಗಿ ಕುತೂಹಲ ಉಂಟಾಗುವಂತೆ ಕಥಾಹಂದರವನ್ನು ಹೆಣೆದಿದ್ದಾರೆ.

**'ಕುಚೋದ್ಯದ ಕಥೆಗಳು'** ಹಾವನೂರ ಅವರು 'ಕುಚೋದ್ಯದ ಕಥೆಗಳು' ಕನ್ನಡಕ್ಕೆ ರೂಪಾಂತರಿಸಿದ ವಿದೇಶಿ ಕಥೆಗಳ ಸಂಕಲನವನ್ನು ೧೯೮೩ರಲ್ಲಿ ಪ್ರಕಟಿಸಿದರು. ಅದು ಪುನಃ ೨೦೧೦ರಲ್ಲಿ ಮರುಮುದ್ರಣ ಕಂಡಿದೆ. ಗಂಭೀರ ಸಂಶೋಧಕರಾದ ಹಾವನೂರ ಅವರು ವಿದೇಶಿ ಕಥೆಗಳನ್ನು ಕನ್ನಡದ ಸೊಗಡಿಗೆ ಅನುಗುಣವಾಗಿ ರೂಪಾಂತರಿಸಿದ್ದಾರೆ. ಹೀಗಾಗಿ ವಿದೇಶಿ ಕಥೆಗಳು ಎಂಬುದು ಮರೆಯಾಗಿಬಿಡುತ್ತವೆ.

**'ಪ್ರತಿಬಿಂಬ'** ಕೆಟ್ಟ ಸ್ವಭಾವ, ಆಲೋಚನೆ, ಗುಣಗಳು ತಮ್ಮನ್ನು ಯಾವ ರೀತಿಯ ಕೆಲಸ ಕಾರ್ಯಗಳಲ್ಲಿ ತೊಡಗುವಂತೆ ಮಾಡುತ್ತವೆ ಎಂಬುದನ್ನು ಶ್ರೀನಿವಾಸ ಹಾವನೂರ ಅವರು ರೂಪಾಂತರಿಸಿದ 'ಪ್ರತಿಬಿಂಬ' ಕಥೆ ಸ್ಪಷ್ಟಪಡಿಸುತ್ತದೆ. ಹೇಮಸಿಂಹ ಮತ್ತು ಆತನ ಹೆಂಡತಿ-ಮಕ್ಕಳು ಜೀವನವನ್ನು ಈ ಕಥೆ ಪ್ರತಿಬಿಂಬಿಸುತ್ತದೆ. ಹೇಮಸಿಂಹ ಚಾಣಾಕ್ಷ

ಯೋಧ ಎಂಬುದರಲ್ಲಿ ಎರಡು ಮಾತಿಲ್ಲ. ಆದರೆ ತನ್ನ ಬಲಾಢ್ಯತನವನ್ನು ಚಾಣಾಕ್ಷತನವನ್ನು ಸದುಪಯೋಗಪಡಿಸಿಕೊಳ್ಳುವಲ್ಲಿ ಸೋಲುತ್ತಾನೆ. ಅದುವೇ ಆತನ ಜೀವನಕ್ಕೆ ಅಂತ್ಯ ಹಾಡುತ್ತದೆ.

ಸಾಮ್ರಾಟ್ ಅಶೋಕನು ಹೇಮಸಿಂಹನ ಕಾರ್ಯಕ್ಷಮತೆಯನ್ನು ಗಮನಿಸುತ್ತಾನೆ. "ಅವನು ಗೆದ್ದು ತಂದಿದ್ದ ದನ-ಕನಕದಲ್ಲಿ ಅರ್ಧಭಾಗವನ್ನು ಬಿಟ್ಟುಕೊಟ್ಟುದಲ್ಲದೆ, ಹೊಸದಾಗಿ ಗೆದ್ದುಕೊಂಡಿದ್ದ ರಾಜ್ಯಕ್ಕೆ ಅವನನ್ನು ಸಾಮಂತ ಅಧಿಪತಿಯನ್ನಾಗಿ ಮಾಡಿದ್ದ ಆಜ್ಞಾಪತ್ರವನ್ನೂ ಆ ಕೂಡಲೇ ಹೇಮಸಿಂಹನ ಶಿಬಿರಕ್ಕೆ ಕಳುಹಿಸಿಕೊಟ್ಟನು."[೫] ಸಾಮ್ರಾಟನ ಈ ರೀತಿಯ ಸನ್ಮಾನ ಪುರಸ್ಕಾರವನ್ನು ಸ್ವೀಕರಿಸುವುದರ ಬದಲಾಗಿ ಸಾಮ್ರಾಟನ ವಿರುದ್ಧ ಬಂಡೇಳುವುದರ ಬಗ್ಗೆ ಯೋಚಿಸಿ ಸನ್ನದ್ಧನಾದನು. ಗುಪ್ತಚರ ಮಾಹಿತಿಯಂತೆ ಸಾಮ್ರಾಟ ಅಶೋಕ ಹೇಮಸಿಂಹನ ಬಂಡಾಯವನ್ನು ಅಲ್ಲೇ ಶಮನಗೊಳಿಸಿದನು. ಇಲ್ಲಿ ಅತೀ ಆಶೆಯಿಂದ ಹೇಮಸಿಂಹ ಸಾಮ್ರಾಟನ ಕೆಂಗಣ್ಣಿಗೆ ಗುರಿಯಾದನು.

ಈ ಮೊದಲು ವಿರಾಮದ ಸಂದರ್ಭದಲ್ಲಿ ಹೈಮವತಿಯನ್ನು ವಿವಾಹವಾಗಿ ಸುಖಸಂತೋಷದಿಂದ ಯುದ್ಧಕ್ಕೆ ಹೋಗಿದ್ದ, ಯುದ್ಧದಲ್ಲಿ ಜಯಿಸಿ ದುರ್ವರ್ತನೆಯಿಂದ ದೇಶದ್ರೋಹಿಯಾಗಿ ಸಾವನ್ನಪ್ಪಿದನು. ಶವವನ್ನು ಪ್ರಾಣಿ ಪಕ್ಷಿಗಳು ತಿಂದವು. ಇನ್ನೊಂದು ಕಡೆ ಪತ್ನಿ ಹೈಮವತಿ ಅವಳಿಜವಳಿ ಹೆಣ್ಣುಮಕ್ಕಳಿಗೆ ಜನ್ಮ ನೀಡುತ್ತಾಳೆ. ಸಾಮ್ರಾಟ ತನ್ನ ಕೆಂಗಣ್ಣಿಗೆ ಗುರಿಯಾಗಿದ್ದ ಹೇಮಸಿಂಹ ಕಟ್ಟಿದ ಸೌಧವನ್ನೇ ನಾಶ ಮಾಡಿದಾಗ ಹೇಮವತಿ-ಮಕ್ಕಳು ತನ್ನ ಮುರುಕಲು ಗುಡಿಸಲಿಗೆ ಸೇರುವಂತಾಯಿತು.

ಹೇಮಸಿಂಹನ ಮಕ್ಕಳಾದ ತಾರ ಮತ್ತು ಹೀರ ಅತ್ಯದ್ಭುತವಾಗಿ ಎಲ್ಲಾ ವಿದ್ಯೆಗಳಲ್ಲೂ ಪ್ರಾವೀಣ್ಯತೆ ಹೊಂದಿ, ರೂಪವತಿಯರಾಗಿ, ಧೈರ್ಯವಂತರಾಗಿ ಹೆಸರು ಪಡೆದರು. ಬೆಳೆದಂತೆಲ್ಲ ಹೀರಾ ಶ್ರೀಮಂತ ಹುಡುಗನ ಜೊತೆ ಓಡಿಹೋದಳು. ಇವನ್ನೆಲ್ಲ ಕಂಡುಮರುಗಿದ ಹೈಮವತಿ ಕೊನೆಗೊಂದು ದಿನ ಸಾವನ್ನಪ್ಪಿದಳು. ಹೀರಾ ಜಾರೆಯಾಗಿ ಪ್ರಸಿದ್ಧಿ ಪಡೆದರೆ ತಾರ ತದ್ವಿರುದ್ಧವಾಗಿ ಬೌದ್ಧ ಬಿಕ್ಷುಣಿಯಾಗಿ ಹೆಸರು ಪಡೆದಳು. ಅದನ್ನ ಕಂಡ ಹೀರಾ ದುರಾಲೋಚನೆಯಿಂದ ತನ್ನಂತೆ ಜಾರೆಯನ್ನಾಗಿ ಮಾಡಬೇಕೆಂದು ಯೋಚಿಸಿ ಸಫಲತೆ ಕಂಡಳು. ಕೊನೆಗೆ ಅದ್ಭುತ ಸೌಂದರ್ಯವನ್ನು ಹೊಂದಿದ್ದ ತಾರಾ-ಹೀರಾ ಜಾರೆಯರಾಗಿ ತಮ್ಮ ಜೀವನನ್ನೇ ಹಾಳು ಮಾಡಿಕೊಂಡಿರುವುದನ್ನು 'ಪ್ರತಿಬಿಂಬ' ಕಥೆ ಬಿಂಬಿಸುತ್ತವೆ.

ಕೆಟ್ಟ ಗುಣ ಸ್ವಭಾವದವರು ತಾವು ಕೆಡುವುದಲ್ಲದೆ ಇತರರನ್ನು ಕೆಡಿಸುವುದರಲ್ಲಿ ನಿಸ್ಸೀಮರಾಗಿರುತ್ತಾರೆ ಎಂಬುದೇ ಈ ಕುಚೋದ್ಯ ಕಥೆಯ ಆಶಯ. ಮೂಲತಃ ಚೀನಾದ ಕಥೆಯಾದ ಪ್ರತಿಬಿಂಬವನ್ನು ಹಾವನೂರ ಅವರು ಕನ್ನಡ ಅಥವಾ ಭಾರತೀಯ ಸಮಾಜದ ಜಾಯಮಾನಕ್ಕೆ ಯಶಸ್ವಿಯಾಗಿ ರೂಪಾಂತರಿಸಿದ್ದಾರೆ.

**'ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ'** ಸ್ವಾಭಾವಿಕ ಗುಣಧರ್ಮಗಳನ್ನು ಒಳಗೊಂಡಿರುವ ಮನುಷ್ಯ ತನ್ನ ಆಶೆ-ಆಕಾಂಕ್ಷೆಗಳನ್ನು ಅನುಭವಿಸುವುದಕ್ಕೆ ಬದುಕುತ್ತಿದ್ದಾನೆಯೇ ಹೊರತು ಪರರ ಅನುಕೂಲಕ್ಕಾಗಿ ಜೀವಿಸುವುದಿಲ್ಲ ಎಂಬುದನ್ನು ಮನವರಿಕೆ ಮಾಡಿಕೊಡುವ ಕಥಾನಕವೇ ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ

ಆಧ್ಯಾತ್ಮಿಕತೆಯತ್ತ ನಡೆಯಬೇಕೆನ್ನುವ ಧನಿಕನ ಮಗನಿಗೆ ತಂದೆ-ತಾಯಿ-ಪತ್ನಿಯರ ಪ್ರೀತಿಯ ತೆಕ್ಕೆಯಿಂದ ಹೊರಬರಲು ಸಾಧ್ಯವಾಗುತ್ತಿಲ್ಲ. ಒಂದು ವೇಳೆ ನಾನು ವೈವಾಹಿಕ ಬಂಧನದಿಂದ ಹೊರನಡೆದರೆ ತಂದೆ-ತಾಯಿ ಪತ್ನಿ-ಅಪರಿಮಿತ ಪ್ರಮಾಣದಲ್ಲಿ ದುಃಖಿತರಾಗುತ್ತಾರೆ ಎಂದು ಹೊರಹೋಗುವ ಸಂದರ್ಭಗಳನ್ನು ದೂರೀಕರಿಸುತ್ತಿದ್ದ ಕಾಕತಾಳೀಯ ಎಂಬಂತೆ ಊರಿಗೆ ಬಂದ ಸಾಧುವಿನ ಪ್ರವಚನ ಕೇಳಿ ತನ್ನ ಮನಸಿನ ದುಗುಡವನ್ನು ಬಿಚ್ಚಿಡುತ್ತಾನೆ. ಆಗ ಸಾಧು "ನಿನ್ನ ತಂದೆ-ತಾಯಿ, ಪತ್ನಿಯರು ನಿನ್ನ ಮೇಲೆ ಅತಿಶಯವಾದ ಪ್ರೇಮವನ್ನಿಟ್ಟಿರುವರೆಂದು ನಿನಗೆ ಅನಿಸುವುದಲ್ಲವೆ? ಆದರೆ ಅವರ ಪ್ರೇಮವು ಕೇವಲ ನಿನಗಾಗಿ ಅಲ್ಲಿ ತಮಗಾಗಿ, ತಮ್ಮ ಸ್ವಾರ್ಥಕ್ಕಾಗಿ ಇದೆ... ಎಂದು ಉಪದೇಶ ನೀಡುತ್ತಾನೆ. ನಿನ್ನ ಮಾತಾಪಿತೃಗಳು ತಮ್ಮ ಜೀವಕ್ಕಿಂತಲೂ ನಿನ್ನನ್ನು ಹೆಚ್ಚಿಗೆ ಪ್ರೀತಿಸುತ್ತಾರೆಂದು ನಿನಗನಿಸುವುದಿಲ್ಲವೆ? ಒಳ್ಳೆಯದು. ಅವರ ಪ್ರೇಮದ ಇನ್ನೊಂದು ಬದಿಯನ್ನು ನೀನು ಕಾಣಬಹುದಾದ ಒಂದು ಉಪಾಯವನ್ನು ಹೇಳುತ್ತೇನೆ ಮಾಡುವೆಯಾ? ಎಂದು ಸಾಧು ಪ್ರಶ್ನಿಸಿದ್ದಕ್ಕೆ ಧನಿಕನ ಮಗ ಒಪ್ಪಿಗೆ ಸೂಚಿಸುತ್ತಾನೆ. ೨-೩ ತಿಂಗಳು ಅನಾರೋಗ್ಯವೆಂದು ಮಲಗಿಬಿಡು. ಮೂರು ತಿಂಗಳ ನಂತರ ಬರುತ್ತೇನೆಂದು ಹೇಳಿ ಹೊರಟನು. ಸಾಧು ಮೂರು ತಿಂಗಳಲ್ಲಿ ಧನಿಕ ತಂದೆ-ತಾಯಿ-ಪತ್ನಿ ಏನೆಲ್ಲಾ ಔಷಧಿ ಮಾಡಿದರೂ ಮಗನ ಆರೋಗ್ಯ ಹದೆಗೆಡುತ್ತಿತ್ತು. ಮಗನಿಗೋಸ್ಕರ ಧನಿಕ ಸಾಕಷ್ಟು ಖರ್ಚು ಮಾಡಿದ ಆದರೆ ಫಲಿತಾಂಶ ಶೂನ್ಯ ಮೂರು ತಿಂಗಳ ನಂತರ ಸಾಧು ಪುನಃ ಇದೇ ಊರಿಗೆ ಬಂದ ವಿಷಯ ಅನಾರೋಗ್ಯ ಪೀಡಿತನ ಪೋಷಕರಿಗೆ ತಿಳಿಯಿತು. ಸಾಧುವನ್ನು ವಿಚಾರಿಸಿ ತಮ್ಮ ಮಗನ ಖಾಯಿಲೆಯನ್ನು ಗುಣಪಡಿಸಬೇಕೆಂದು ಬೇಡಿಕೊಂಡರು. ಮಗನ ಕಷ್ಟ ನೋಡಲಾಗುತ್ತಿಲ್ಲ. ನಮಗೆ ಸಾವು ಬಂದರೆ ಸಂತೋಷ ಎಂಬಂತೆ ಮಾತನಾಡಿದರು.

ಸಾಧು ಅರ್ಧ ಸೇರು ಹಾಲು ತರಿಸಿ, ಮಂತ್ರಿಸಿ ಈ ಹಾಲಿಗೆ ನಿಮ್ಮ ಮಗನ ಖಾಯಿಲೆಯನ್ನು ಹಸ್ತಾಂತರಿಸಿದ್ದೇನೆ. ಇದನ್ನು ಕುಡಿದವರು ಎರಡು ದಿನಗಳಲ್ಲಿ ಸಾಯುತ್ತಾರೆ. ರೋಗಿಷ್ಟ ಮಗ ಬದುಕುಳಿಯುತ್ತಾನೆ. ಹಾಗಾಗಿ ಯಾರು ಕುಡಿಯುತ್ತೀರಿ ಎಂದು ಪ್ರಶ್ನಿಸುತ್ತಾನೆ. ಆಗ ಮೂವರು ತಂದೆ-ತಾಯಿ-ಪತ್ನಿ ಏನೇನೋ ಸಬೂಬು ಹೇಳಿ ಒಲ್ಲೆ ಎನ್ನುತ್ತಾರೆ. ಮಗನಿಗೋಸ್ಕರ ತಮ್ಮ ಪ್ರಾಣವನ್ನು ಕಳೆದುಕೊಳ್ಳಲು ಸಾಧ್ಯವಿಲ್ಲ ಎಂದು ಹೇಳುತ್ತಾರೆ.

ಸಾಧು ವಿವರಿಸುತ್ತಾ 'ಹಾಗಾದರೆ ನಾನೇ ಕುಡಿದು ಸಾಯುತ್ತೇನೆ. ನನ್ನಿಂದ ನಿಮಗೆಲ್ಲ ಒಳ್ಳೆಯದಾಗಲಿ ಎಂದು ಹಾಲು ಕುಡಿದು ಹೋಗುತ್ತೇನೆ.

ಸಾಧುವಿನ ಈ ಪ್ರಯೋಗದಿಂದ ಧನಿಕನ ಮಗ ವೈವಾಹಿಕ ಜೀವನದಿಂದ ಹಿಂದೆ ಸರಿಯುತ್ತಾನೆ. ಮನುಷ್ಯನ ಸಹಜ ಗುಣವನ್ನು ತಿದ್ದಲು ಅಸಾಧ್ಯ. ಪ್ರತಿಯೊಬ್ಬರಿಗೂ ತಮ್ಮದೇ ಆದಂತಹ ಆಶೆ-ಆಕಾಂಕ್ಷೆಗಳಿರುವುದರಿಂದ ಕೌಟುಂಬಿಕ ಪರಿಸರವಾದರೂ ಪ್ರಾಣಾಂತಿಕ ರೀತಿಯ ಸಹಾಯಗಳು ದೊರೆಯುವುದು ದುರ್ಲಭ ಎಂಬುದನ್ನು ಕಥೆಗಾರರು ಪ್ರಸ್ತುತ ಕಥೆಯಲ್ಲಿ ತಿಳಿಸಿದ್ದಾರೆ.

**'ಪ್ರತಿಭಾಶಾಲಿ'** ಪ್ರತಿಭಾವಂತ ಸಾಹಿತಿಯೊಬ್ಬರನ್ನು ಗುರುತಿಸದ ಸಾಹಿತ್ಯ, ಓದುಗ ಕ್ಷೇತ್ರದಲ್ಲಿನ ಸಾಹಿತಿಯ ಜೀವನವನ್ನು ಪ್ರತಿಭಾಶಾಲಿ ಕಥೆ ತೆರೆದಿಡುತ್ತದೆ. ಸುಮಾರು ಆರು ಪೌರಾಣಿಕ, ನಾಲ್ಕು ಐತಿಹಾಸಿಕ ನಾಟಕಗಳನ್ನು ಬರೆದ ಸುಧಾಮ ಶಾಸ್ತ್ರಿಗಳು ಮೂರು ಖಂಡ ಕಾವ್ಯಗಳನ್ನು, ದ್ರಾವಿಡ ಸಂಸ್ಕೃತಿ ಕುರಿತ ಉದ್ಗ್ರಂಥವೊಂದನ್ನು ಮತ್ತು ಮಕ್ಕಳ ಕತೆಗಳನ್ನು ಬರೆದ ಓರ್ವ ಅನುಭವಿ ಸಾಹಿತಿಯಾಗಿದ್ದಾರೆ. ನಾಟಕಗಳನ್ನು ಬರೆದ ಸುಧಾಮ ಶಾಸ್ತ್ರಿಗಳು ಅವುಗಳೇ ನಿಜವಾದ ಸಾಹಿತ್ಯ, ನಾಟಕದಲ್ಲಿರುವ ಕಲೆ ಬೇರೆ ಯಾವ ಪ್ರಕಾರದಲ್ಲಿಯೂ ಇಲ್ಲವೆಂದು ನಂಬಿಕೊಂಡು ಬಂದವರು. ಬದಲಾದ ಕಾಲಕ್ಕನುಗುಣವಾಗಿ Update ಆಗದ ಶಾಸ್ತ್ರಿಗಳು ಇವುಗಳನ್ನೆಲ್ಲ ಬರೆಯುವುದನ್ನು ಬಿಡಲಾರೆ ಎಂಬ ಹಠ ಸ್ವರೂಪವನ್ನು ವ್ಯಕ್ತಪಡಿಸುವವರು. ಯಾರು ಏನು ಹೊಗಳಿದರೂ, ತೆಗಳಿದರೂ ಅವನ್ನೆಲ್ಲ ಗಮನಕ್ಕೆ ತೆಗೆದುಕೊಳ್ಳದ ಸುಧಾಮ ಶಾಸ್ತ್ರಿಗಳು ತನ್ನ ಬರಹಗಳೆಲ್ಲ ಪ್ರಕಟವಾಗದಿದ್ದರೂ ಪರವಾಗಿಲ್ಲ. ನಾನು ಮಾತ್ರ ದುಂಬಾಲು ಬೀಳಲಾರೆ ಎಂಬ ದೃಢನಿರ್ಧಾರದಿಂದಿರುವರು.

ಮದುವೆಯಾದ ಎರಡು-ಮೂರು ವರ್ಷದಲ್ಲೇ ಹೆಂಡತಿ ತೀರಿಕೊಂಡ ನಂತರ ಸುಧಾಮ ಶಾಸ್ತ್ರಿಗಳು ಮತ್ತೊಂದು ಮದುವೆಯಾಗುವ ಗೋಜಿಗೆ ಹೋಗಲಿಲ್ಲ. ಒಬ್ಬಂಟಿಯಾಗಿ ಜೀವನ ಸಾಗಿಸುತ್ತಿರುವರು. ಸಂಬಂಧಿಕನೊಬ್ಬ ಹಳ್ಳಿಯಿಂದ ಒಂದು ಚೀಲ ಅಕ್ಕಿ, ಜೋಳ ಕಳುಹಿಸುತ್ತಿದ್ದನಂತೆ; ಮಾಸ್ತರಿಗೆ ಬಿಟ್ಟ ಶಾಸ್ತ್ರಿಗಳು ಸಾಹಿತ್ಯಕ ಕೆಲಸವನ್ನು ಸರಾಗವಾಗಿಸಿಕೊಂಡು ಬೇರೆ ಏನನ್ನು ಬಯಸದೇ ಜೀವಿಸುತ್ತಿದ್ದಾರೆ.

ಸುಧಾಮ ಶಾಸ್ತ್ರಿಗಳ ಶಿಷ್ಯನೊಬ್ಬ ಮುಂಬಯಿ ಚಲನಚಿತ್ರ ಕ್ಷೇತ್ರದಲ್ಲಿ ಎಡಿಟರ್ ಆಗಿದ್ದಾನೆ. ಆತ ಶಾಸ್ತ್ರಿಗಳ ಲೆಕ್ಕಾಚಾರದಲ್ಲಿ ಅಯೋಗ್ಯ ಬರವಣಿಗೆಯ ಆದರೆ ಆತ ಬೇಸರಿಸದೇ ಸುಧಾಮ ಶಾಸ್ತ್ರಿ ಅದನ್ನು ಆಗಾಗ್ಗೆ ಕಂಡು ಮಾತನಾಡಿಸುತ್ತಿದ್ದ ಕೆಲಸ ಕಾರ್ಯಗಳ ಬಗ್ಗೆ ತಿಳಿಸುತ್ತಿದ್ದ ಏನಾದರಾಗಲಿ ನಾಟಕ ಒಂದೇ ಕಲಾ ಮಾಧ್ಯಮವಲ್ಲ ಎಂಬುದನ್ನು ಶಾಸ್ತ್ರಿಗಳಿಗೆ ಮನವರಿಕೆ ಮಾಡುವಲ್ಲಿ ವಿಫಲ ಯತ್ನ ಮಾಡುತ್ತಿದ್ದ. ತನ್ನ ಎಡಿಟಿಂಗ್ ಸಾಹಸದ ಬಗ್ಗೆಗೂ ತಿಳಿಸಿದ್ದ ಮೇಲ್ನೋಟಕ್ಕೆ ಎಲ್ಲಾ 'ಫೇಕ್' ಎಂಬುದಾಗಿ ಹೇಳಿಕೊಳ್ಳುತ್ತಿರುವ ಶಾಸ್ತ್ರಿಗಳು ಶಿಷ್ಯನ ಮಾತು ಕೇಳಿ ಮಧ್ಯರಾತ್ರಿ ಮೆಹಮಾನ್

ಸಿನಿಮಾವೊಂದನ್ನು ನೋಡಿ ಬಂದ ವಿಮರ್ಶಾ ಲೇಖನವೊಂದನ್ನು ಬರೆದಿರುವುದನ್ನು ಶಿಷ್ಯನಿಗೆ ತೋರಿಸುತ್ತಾರೆ.

ಎಡಿಟರ್ ಶಿಷ್ಯ ಅದನ್ನು ಓದಿ ಹಿಂದಿಗೆ ಭಾಷಾಂತರ ನಿರ್ಮಾಪಕರೊಬ್ಬರಿಗೆ ತೋರಿಸಿ ಮೆಚ್ಚುಗೆ ಪಡೆಯುತ್ತಾನೆ. ಹಾಗೆಯೇ ೧೮ ಸಾವಿರದ ಒಪ್ಪಂದವಾಗಿ ಹತ್ತು ಸಾವಿರದ ಚೆಕ್ ಜೊತೆಗೆ ಸುಧಾಮ ಶಾಸ್ತ್ರಿಯವರನ್ನು ಭೇಟಿ ಮಾಡುತ್ತಾನೆ. ತನ್ನೆಲ್ಲ ಕೆಲಸಗಳನ್ನು ಮೆಚ್ಚಿದ ಶಾಸ್ತ್ರಿಗಳು ಇದನ್ನು ಮೆಚ್ಚುವುದಕ್ಕೆ ಸಾಧ್ಯವಿಲ್ಲ ಎಂದುಕೊಳ್ಳುತ್ತಲೇ ಅವರ ಕಥೆಯು ಚಲನಚಿತ್ರವಾಗುವ ವಿಷಯ ಬಹಿರಂಗಪಡಿಸುತ್ತಾನೆ. "ಏ ರಾಯ? ನೀ ಮಾಡಿದ್ದು ತಪ್ಪು ಅಂತ ಯಾರು ಹೇಳಿದರು ನಿನಗೆ? ನನಗೆ ನಿನ್ನ ಸಿನೆಮಾ ಸೇರುವುದಿಲ್ಲವೆಂದು ತಿಳಿದಿಯೇನು? ಆಗಿನಿಂದ ತುಂಬಾ ಚಲಚಿತ್ರಗಳನ್ನು ನೋಡಿದ್ದೇನೆ ಇಂಗ್ಲಿಷ್, ಹಿಂದಿ ಎರಡೂ!" ಎಂದು ಒಂದೇ ಉಸಿರಿನಲ್ಲಿ ಶಾಸ್ತ್ರಿಗಳು ಹೇಳಿದಾಗ ನಿಬ್ಬೆರಗಾಗುವ ಸರದಿ ಶಿಷ್ಯನದ್ದಾಗಿತ್ತು. ಚೆಕ್‌ನ್ನು ಶಾಸ್ತ್ರಿಗಳ ಕೈಗಿತ್ತು ಸಹಿ ಮಾಡಿಸಿಕೊಳ್ಳದೆ ಹೊರಬಂದ ಎಡಿಟರ್.

ಅನಿವಾರ್ಯತೆ ಯಾವುದೇ ಕೆಲಸವನ್ನು ಮಾಡಲು ನಿರಾಕರಿಸುವುದಿಲ್ಲ ಎಂಬುದೇ ಈ ಕಥೆಯು ಆಶಯ. ಸಿನಿಮಾ ಕ್ಷೇತ್ರನೇ ಆಗುವುದಿಲ್ಲವೆಂದಿದ್ದ ಶಾಸ್ತ್ರಿಗಳು ಅನೇಕ ಸಿನಿಮಾಗಳನ್ನು ನೋಡುತ್ತಾರೆ. ಅದರ ಸಾಹಿತ್ಯವನ್ನು ರಚಿಸುತ್ತಾರೆ. ಆದರೆ ಹೊರಗಡೆ ಹೇಳಿಕೊಳ್ಳುತ್ತಿರಲಿಲ್ಲ ಅಷ್ಟೇ.

**'ನಿಃಸಂತಾನ'** ಪಾಲಿಗೆ ಬಂದದ್ದು ಪಂಚಾಮೃತ ಎಂಬ ಮಾತಿನಂತೆ ಇದ್ದುದರಲ್ಲಿ ತೃಪ್ತಿಪಟ್ಟುಕೊಂಡರೆ ಅದೇ ನಿಜವಾದ ಸಂತೃಪ್ತ ಜೀವನ ಎಂಬುದನ್ನು ಶ್ರೀನಿವಾಸ ಹಾವನೂರ ಅವರ ನಿಃಸಂತಾನ ಕಥೆ ನೆನಪಿಸಿದೆ. ಧಾರವಾಡದ ಪವಾರ ಮಾಸ್ತರರ ಮಗ ಚಿಕ್ಕಂದಿನಲ್ಲಿಯೇ ತಾಯಿಯನ್ನು ಕಳೆದುಕೊಂಡರೂ ತಂದೆಯ ಆಶ್ರಯದಲ್ಲಿ ಉತ್ತಮ ಶಿಕ್ಷಣ ಪಡೆಯುತ್ತಾನೆ. ತಂದೆ ಪವಾರ ಮಾಸ್ತರಿಗೆ ಮಗ ಯಶವಂತ ಪ್ರಾಧ್ಯಾಪಕನಾಗಬೇಕೆಂಬ ಆಶೆ ಇಟ್ಟುಕೊಂಡಿದ್ದರೂ ೧೯೪೨ರ ಸ್ವಾತಂತ್ರ್ಯ ಚಳುವಳಿಯ ಭಾಗವಹಿಸಿ ಜೈಲುವಾಸ ಅನುಭವಿಸಿದನು. ಇದರಿಂದ ಕೋಪಗೊಂಡ ತಂದೆ ನೀನು ನನ್ನ ಮಗನಲ್ಲ; ನಾನು ನಿನ್ನ ತಂದೆಯಲ್ಲ ಎಂದು ನಿರಾಕರಿಸುವ ಮಾತನ್ನಾಡುತ್ತಾನೆ.

ಬೇಸರಗೊಂಡ ಯಶವಂತ ಮುಂಬಯಿಗೆ ಬಂದು ಏಶಿಯನ್ ಬ್ಯಾಂಕ್ ಸೇರಿ ದೊಡ್ಡ ಆಫೀಸರ್ ಆಗುತ್ತಾನೆ. ಪುಣೆಯಲ್ಲಿ ಕಂಡ ಮೋಹಿನಿಯಯನ್ನು ಮದುವೆಯಾಗುವ ಕನಸು ಕಾಣುತ್ತಾನೆ. ಆಕೆ ನಿರಾಕರಿಸಿದರೂ ಮತ್ತೊಮ್ಮೆ ಪ್ರಯತ್ನಿಸಿ ಮದುವೆಯಾಗುತ್ತಾನೆ. ಹತ್ತು ವರುಷವಾದರೂ ಮಕ್ಕಳಾಗುವುದಿಲ್ಲ. ಹೆಂಡತಿ ಮೋಹಿನಿಯನ್ನು ವಿಚಾರಿಸಿದರೂ "ಈಗೇನು ಅವಸರವಿಲ್ಲ. ನನ್ನ ವಯಸ್ಸಿನ್ನು ಚಿಕ್ಕದು" ಎಂದು ವಿಷಯ ಬದಲಿಸಿದಳು. ಮೋಹಿನಿ ಒಂದು ಸಾರಿ ತವರುಮನೆಗೆ ಹೋದಾಗ ಆಕೆಯ ಡ್ರಾವರ್‌ನಲ್ಲಿದ್ದ ಪತ್ರಗಳನ್ನು ಓದಿದಾಗ ಮೋಹಿನಿಗೆ ಈ ಮೊದಲು ಮದುವೆಯಾಗಿ ಒಂದು ಮಗುವಿರುವುದನ್ನು

ತಿಳಿಯುತ್ತಾನೆ. ಮೋಹಿನಿ ತಮ್ಮ ಮಗುವಿನ ವಿಷಯವನ್ನು ಮುಚ್ಚಿಟ್ಟಿದ್ದುದನ್ನು, ಮಗುವಿನ ಬಾಂಧವ್ಯದ ಕೊರತೆಗಳನ್ನು ತಿಳಿಯುತ್ತಾನೆ. ಮಗು ತಾಯಿ-ತಂದೆಯನ್ನು ಬಯಸುವುದು ಸಹಜ; ಹಾಗಾಗಿ ಮೋಹಿನಿಯ ಮಗು ತನ್ನದೇ ಮಗು ಎಂಬಂಥ ಭಾವನೆಯನ್ನು ಯಶವಂತ ತಳೆಯುತ್ತಾನೆ.

ಈ ಎಲ್ಲಾ ಸಂಗತಿಗಳು ಯಶವಂತನನ್ನು ಮಾನಸಿಕ ತೊಳಲಾಟವನ್ನು ಉಂಟುಮಾಡುತ್ತವೆ. ಒಂದು ಕಡೆ ತನ್ನ ಬಾಳು ಈ ರೀತಿಯಾಯಿತೆಲ್ಲಾ? ಎಂಬ ಬೇಸರವನ್ನುಂಟುಮಾಡಿದರೆ, ಇನ್ನೊಂದೆಡೆ ಕಳೆದ ಹತ್ತು ವರ್ಷಗಳಿಂದ ಸೌಮ್ಯ ಸ್ವಭಾವದ ಮೋಹಿನಿ ಎಲ್ಲ ಕಷ್ಟನಷ್ಟಗಳನ್ನು ಅನುಭವಿಸುತ್ತಲೇ ತನಗೆ ಸಂಗಾತಿಯಾಗಿದ್ದಾಳಲ್ಲ! ಮೋಹಿನಿ ತವರಿನಿಂದ ಬಂದಾಗ ತನಗೆ ಮಗುವೊಂದು ಬೇಕಾಗಿದೆ. ಗಂಡು ಮಗುವೊಂದನ್ನು ದತ್ತು ಪಡೆಯುತ್ತೇನೆ. ಜ್ಯೋತಿಷಿಯೊಬ್ಬ ಬಂದು ನಿನಗೆ ಮಕ್ಕಳಾಗುವುದಿಲ್ಲ ಎಂದು ಹೇಳಿದ್ದಾನೆ ಎಂದು ಮೋಹಿನಿಗೆ ಹೇಳಿ ಧಾರವಾಡಕ್ಕೆ ಹೋಗುತ್ತೇನೆಂದು ಹೊರಹೋಗುತ್ತಾನೆ.

ಕೊನೆಗೆ ಮೋಹಿನಿಯ ಮಗಳನ್ನು ಕರೆತಂದು ಎಲ್ಲ ಸಮಸ್ಯೆಗಳನ್ನು ಪರಿಹರಿಸುವ ಯಶವಂತನ ಗುಣ ಮೆಚ್ಚಬೇಕಾದದ್ದೇ ಕಥೆಗಾರ ಶ್ರೀನಿವಾಸ ಹಾವನೂರ ಅವರು ಎಂತಹ ಸಂದರ್ಭಗಳು ಒದಗಿಬಂದರೂ ದೃತಿಗೆಡದೆ ಸಾವಕಾಶವಾಗಿ ಸಮಸ್ಯೆಗಳನ್ನು ಬಗೆ ಹರಿಸಬಹುದೆಂದು ಯಶವಂತನ ದೃಷ್ಟಾಂತವನ್ನಿಟ್ಟುಕೊಂಡು ಸಾಮಾಜಿಕ ಕಳಕಳಿಯ ಆಶಯವುಳ್ಳ ಕಥೆಯನ್ನು ಹೆಣೆದಿದ್ದಾರೆ.

ಹತ್ತು ವರ್ಷಗಳಿಂದ ದುಃಖ-ದುಮ್ಮಾನ-ದುಗುಡಗಳನ್ನು ಹೊರಹಾಕದೆ ತಳಮಳಿಸುತ್ತಿದ್ದ ಮೋಹಿನಿಗೆ ಯಶವಂತನ ನಿರ್ಧಾರದಿಂದ ಮುಕ್ತಿ ಸಿಗುತ್ತದೆ. ಮಗುವಾಗಿಲ್ಲ; ಅದಕ್ಕಾಗಿ ಮೋಹಿನಿಗೆ ವಿಚ್ಛೇದನ ನೀಡಬೇಕೆಂಬ ದಿಢೀರ್ ನಿರ್ಧಾರವನ್ನು ಬದಿಗೊತ್ತಿ ಮೋಹಿನಿಯ ಮಗುವೇ ತನಗೂ ಇರಲಿ ! ಮೋಹಿನಿಯೂ ಜೊತೆಗಿರಲಿ ಎಂಬ ಮಹತ್ವದ ನಿರ್ಧಾರದಿಂದ ಯಶವಂತನ ಮಾನವೀಯತೆಗೆ ಒತ್ತುಕೊಡುತ್ತಾನೆ.

**'ಇರುವೆ ಮತ್ತು ಚಿಟ್ಟೆ'** ಸಮೃದ್ಧಿಯಿದ್ದಾಗ ಸಂಗ್ರಹಿಸಿ ಇಡಬೇಕು. ಮನುಷ್ಯ ಸತತ ಉದ್ಯೋಗದಲ್ಲಿ ತೊಡಗಿಸಿಕೊಂಡಿರಬೇಕು. ಇಲ್ಲದೇ ಹೋದರೆ ಕೊನೆಗಾಲದಲ್ಲಿ ತುತ್ತು ಅನ್ನಕ್ಕೂ ಪರದಾಡುವ ಸ್ಥಿತಿ ಬರುತ್ತದೆ ಎಂಬ ಆಶಯವನ್ನು ಹೊಂದಿರುವ ಇರುವೆ ಮತ್ತು ಚಿಟ್ಟೆ ಕಥೆ ನಿರೂಪಿಸುತ್ತದೆ. ಕುಲಕರ್ಣಿಯವರ ತಮ್ಮ ವಿಠಲರಾಯನ ಸ್ಥಿತಿ ಅದೇ ಆಗಿತ್ತು. ಉದ್ಯೋಗದಲ್ಲಿದ್ದ ವಿಠಲರಾಯನ ತನ್ನ ಹೆಂಡತಿ ತೀರಿಕೊಂಡಳು. ವಿಠಲರಾಯ ತನ್ನ ಕೆಲಸಕ್ಕೆ ರಾಜೀನಾಮೆ ನೀಡಿದ. ಬ್ಯಾಂಕಿನಲ್ಲಿದ್ದ ಹಣವನ್ನೆಲ್ಲ ಪೋಲು ಮಾಡಿಕೊಂಡು ಅಡ್ಡಾಡುತ್ತಿದ್ದ. ಕೊನೆಗೆ ಅನೇಕ ಸಾರಿ ಅಣ್ಣ ವೈದ್ಯ ಕುಲಕರ್ಣಿ ಹಣ ಕೊಟ್ಟು 'ಇನ್ನಾದರೂ ಸರಿಯಾಗಿರು' ಎಂದು ಬುದ್ಧಿವಾದ ಹೇಳಿದರು.

ವಿಠಲರಾಯ ಯಾರ ಮಾತಿಗೂ ಸೊಪ್ಪು ಹಾಕದೇ ಇದ್ದಬದ್ದ ಸಂಬಂಧಿಕರಲ್ಲಿ, ನೆರೆಯವರಲ್ಲಿ, ಪರಿಚಿತರಲ್ಲಿ ಸಾಲ ಮಾಡಿದಾಗಲೆಲ್ಲ ವೈದ್ಯರು ಮರ್ಯಾದೆಗೆ ಅಂಜಿ ಹಣ

ಕೊಡುತ್ತಿದ್ದರು. ಇದರಿಂದ ವಿಠಲರಾಯ ಉದ್ಧಾರವಾಗಲಿಲ್ಲ. ಕೊನೆಗೆ ಬೆಳಗಾವಿಯ ಪ್ರಸಿದ್ಧ ವ್ಯಾಪಾರಿಯ ಮಗಳನ್ನು ಮದುವೆಯಾಗಿ ಶ್ರೀಮಂತನಾಗಿದ್ದಾನೆ. ಆದರೆ ಸ್ವಂತ ಖರ್ಚು ಮಾಡಲಾರದಷ್ಟರ ಮಟ್ಟಿಗೆ ಮುಂದುವರಿದಿಲ್ಲವೆಂದು ಕಥೆಗಾರರು ಕಥಾಹಂದರವನ್ನು ಮುಗಿಸಿದ್ದಾರೆ.

ಮನುಷ್ಯನಿಗೆ ಒಂದೆರಡು–ಮೂರು ಸಾರಿ ಎಲ್ಲರೂ ಸಹಾಯ ಮಾಡುತ್ತಾರೆ. ಆದರೆ ಜೀವನಪೂರ್ತಿ ಸಹಾಯ ಮಾಡಲು ಸಾಧ್ಯವಿಲ್ಲ. ತನ್ನನ್ನು ತಾನು ತಿದ್ದಿಕೊಂಡು, ಯೋಜಿತ ಸಂಸಾರ–ಜೀವನ ನಡೆಸಿದರೆ ಯಾವುದೂ ಕಷ್ಟವಾಗಲಾರದು ಎಂಬುದೇ ಪ್ರಸ್ತುತ ಕಥೆಯ ತಾತ್ಪರ್ಯವಾಗಿದೆ.

**ಜೊತೆಗಾರ್ತಿ :** ಕಥೆಗಾರ ಶ್ರೀನಿವಾಸ ಹಾವನೂರ ಅವರು ಜರ್ಮನ್ ಕಥೆಯೊಂದರ ಆಧಾರದಿಂದ 'ಜೊತೆಗಾರ್ತಿ' ಎಂಬ ಕಥೆಯನ್ನು ರಚಿಸಿದ್ದಾರೆ. ಮುಂಬಯಿ–ಪುಣೆ ಮಧ್ಯೆ ರೈಲಲ್ಲಿ ಪ್ರಯಾಣ ಮಾಡುವಾಗ ನಡೆದಂಥ ಘಟನೆಯನ್ನು ಕಥಾರೂಪದಲ್ಲಿ ರಚಿಸಿದ್ದಾರೆ ಹಾವನೂರ ಅವರು.

ಪ್ರತಿ ಸಾರಿಯಂತೆ ಉದ್ಯೋಗ ನಿಮಿತ್ತ ಮುಂಬಯಿಯಿಂದ ಪುಣೆಗೆ ರೈಲು ಪ್ರಯಾಣ ಮಾಡಿ ಪುಣೆ ಹೋಟೆಲ್‌ನಲ್ಲಿ ಇಳಿದುಕೊಂಡು ತನ್ನ ಸೂಟ್‌ಕೇಸ್ ನೋಡಿದಾಗ ಅದು ಬೇರೊಬ್ಬ ಸ್ತ್ರೀಯ ಸೂಟ್‌ಕೇಸ್ ಆಗಿದ್ದುದು ಕಂಡುಬಂತು. ತನ್ನೆಲ್ಲ ಬಟ್ಟೆ–ಬರೆ ಅವಶ್ಯಕ ವಸ್ತುಗಳ್ಯಾವುವೂ ದೊರೆಯದೆ ಸ್ತ್ರೀಯೊಬ್ಬಳ ವಸ್ತುಗಳೆಲ್ಲವೂ ಅಲ್ಲಿದ್ದುದನ್ನು ಕಂಡು ಮನಸ್ಸಿನಲ್ಲಿ ಪರಸ್ತ್ರಿ ಒಬ್ಬಳು ಕೊಠಡಿಯಲ್ಲಿರುವಂತೆಯೇ ಭಾಸವಾಗುತ್ತದೆ ಕಥಾನಾಯಕನಿಗೆ. ಭೌತಿಕವಾಗಿ ಹೆಣ್ಣೊಬ್ಬಳು ಹತ್ತಿರದಲ್ಲಿಲ್ಲದಿದ್ದರೂ ಇಲ್ಲೇ ಇದ್ದಾಳೆಂಬ ಭ್ರಮೆ ಕಥಾನಾಯಕನಲ್ಲಿ ಮೂಡುತ್ತದೆ.

ಹೋಟೆಲ್ ಆಳು ಬಂದು ಸೂಟ್‌ಕೇಸ್‌ನಲ್ಲಿದ್ದ ಬಟ್ಟೆ ಬರೆಗಳನ್ನೆಲ್ಲಾ ನೀಟಾಗಿ ಹೊರಗಡೆ ಜೋಡಿಸಿಟ್ಟಿರುವುದನ್ನು ಕಂಡಾಗ ಏನೋ ತಳಮಳವುಂಟಾಗುತ್ತದೆ. ಇದೇ ಗುಂಗಿನಲ್ಲಿ ಕಥಾನಾಯಕ ಮುಂಬಯಿಗೆ ಹೊರಡುವುದನ್ನು ತಡೆಹಿಡಿದು ಇನ್ನೆರಡು ದಿನ ಪುಣೆಯಲ್ಲೇ ಉಳಿದುಕೊಳ್ಳುತ್ತಾನೆ. ಹೆಂಡತಿ ದಾರಿ ನೋಡಿ ಮೂರನೇ ದಿನ ನೇರವಾಗಿ ಪುಣೆ ಹೋಟೆಲ್‌ಗೆ ಬಂದು ನೋಡಿ ಆವಕ್ಕಾಗುತ್ತಾಳೆ. ಕೊನೆಗೆ ಕಥಾನಾಯಕ ನಡೆದ ಘಟನೆಯನ್ನು ವಿವರಿಸುತ್ತಾನೆ. ಕಥೆಯ ಅಂತ್ಯದಲ್ಲಿ ಅಷ್ಟು ಸುಲಭವಾಗಿ ಕಥಾನಾಯಕನ ಹೆಂಡತಿ ಮೌನವಾಗುವುದು ಸಮಂಜಸವಿರಲಾರದು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಲು ಸಾಧ್ಯವಿದೆ. ತನ್ನ ಅನುಪಸ್ಥಿತಿಯಲ್ಲಿ ಗಂಡ ಉಳಿದುಕೊಂಡಿರುವ ಕೊಠಡಿಯಲ್ಲಿ ಬೇರೊಬ್ಬ ಸ್ತ್ರೀಯ ಬಟ್ಟೆ ಬರೆಗಳಿರುವುದನ್ನು ಅಷ್ಟು ಸುಲಭವಾಗಿ ಒಪ್ಪಿಕೊಳ್ಳುವುದಿಲ್ಲ ಎಂಬುದು ವಾಸ್ತವದ ಸಂಗತಿ. ಈ ಹಿನ್ನೆಲೆಯಲ್ಲಿ ಕಥಾನಾಯಕನ ಹೆಂಡತಿ ಸಾವಕಾಶದಿಂದ ಗಂಡ ಎರಡೇ ಮಾತಿಗೆ ಒಪ್ಪಿರುವುದು ನಿಜವೇ? ಎಂಬಂಥ ಪ್ರಶ್ನೆ ಮೂಡುತ್ತದೆ.

**'ವಿಷಾರಿ'** ಅಮೇರಿಕಾ ಮೂಲದ ಕಥೆಯ ರೂಪಾಂತರ ಕಥೆಯೇ ವಿಷಾರಿ. ಶ್ರೀನಿವಾಸ ಹಾವನೂರ ಅವರು ರೂಪಾಂತರಿಸಿದ ಪ್ರಸ್ತುತ ಕಥೆಯು ಮಾನವೀಯ ಗುಣವನ್ನು ಮೈಗೂಡಿಸಿಕೊಳ್ಳಬೇಕೆಂಬ ಆಶಯವನ್ನು ಹೊಂದಿದೆ. ನೌಕಾಪಡೆಯ ಅಧಿಕಾರಿಯೊಬ್ಬ ತನ್ನ ಹೆಂಡತಿಯನ್ನು ವಿಷ ಕೊಟ್ಟು ಕೊಲ್ಲಬೇಕೆಂಬ ಉದ್ದೇಶವನ್ನಿಟ್ಟುಕೊಂಡು ಔಷಧಿ ಅಂಗಡಿಗೆ ಬರುತ್ತಾನೆ. ಔಷಧಿ ಅಂಗಡಿಯಲ್ಲಿ ಬೇರಾರು ಇಲ್ಲವೆಂದು ಖಾತ್ರಿಪಡಿಸಿಕೊಂಡು ವಯಸ್ಸಾದ ಅಂಗಡಿ ಯಜಮಾನನನ್ನು "ನಿಮ್ಮ ಹತ್ತಿರ, ಯಾರಿಗೂ ಗೊತ್ತಾಗದ ಹಾಗೆ ಪ್ರಾಣವನ್ನು ಹೀರಬಲ್ಲ ವಿಷ ಮಾರಲಿಕ್ಕೆ ಸಿಕ್ಕುತ್ತದಂತೆ. ನಿಜವೆ? ಎಂದು ವಿಚಾರಿಸಿದನು. ಅಂಗಡಿಯಾತ ಆಗಂತುಕ ನೌಕಾಪಡೆಯ ಅಧಿಕಾರಿಯನ್ನು ಒಳಕರೆದು ವಿಚಾರಿಸಲಾಗಿ, ತನ್ನ ಹೆಂಡತಿಯನ್ನೇ ಕೊಲ್ಲಲು ಉದ್ದೇಶಿಸಿರುವ ಮಾಹಿತಿಗಳನ್ನು ಪಡೆಯುತ್ತಾನೆ.

ಎಲ್ಲ ವಿವರಗಳನ್ನು ತಿಳಿಯುತ್ತಲೇ "ನಾನು ವಿಷವನ್ನು ಮಾರುವುದು ನಿಜ. ಅದಕ್ಕಾಗಿ ನಾನು ಹಣವನ್ನು ತಗೊಳ್ಳುವುದಿಲ್ಲ. ಸಮರ್ಥನೀಯವೆಂದು ಕಂಡು ಬಂದರೆ ಮಾತ್ರ ವಿಷ ನೀಡಬಲ್ಲೆ "ಎಂದು ಹೇಳಿದ ನನಗೂ ಕೊಟ್ಟುಬಿಡಿ ಎಂದು ನೌಕಾಧಿಕಾರಿ ಹೇಳಿದಾಗ ಈಗಾಗಲೇ ನಿನಗೆ ವಿಷವಿರುವ ಚಹಾವನ್ನೇ ಕೊಟ್ಟಿದ್ದೇನೆಂದು ಔಷಧಿ ಅಂಗಡಿಯಾತ ದಂಗುಬಡಿಸುತ್ತಾನೆ. ಈ ರೀತಿಯ ಮೋಸ ಮಾಡಬಾರದಿತ್ತು ಎಂದು ಹೇಳುತ್ತಲೇ ತನ್ನ ಪಿಸ್ತೂಲನ್ನು ಹೊರತೆಗೆಯುತ್ತಾನೆ. ಆದರೆ ಔಷಧಿ ಅಂಗಡಿಯಾತ ಸಾವಕಾಶದಿಂದ ಏನು ಪ್ರಯೋಜನವಿಲ್ಲ, ಈಗಾಗಲೇ ವಿಷ ನೀಡಿದ್ದೇನೆ. ಹೆಂಡತಿಯನ್ನು ಕೊಲ್ಲಬೇಕಾದರೆ ವಿಷ ನೀಡಬಲ್ಲೆ! ಆದರೆ "ತನ್ನ ಹೆಂಡತಿಯ ಸಾವಿಗೆ ನಾನೇ ಕಾರಣ"ವೆಂದು ಪತ್ರ ಬರೆದುಕೊಡಬೇಕೆಂದು ಹೇಳಿದಾಗ ನಿರುತ್ತರನಾದ ಅಧಿಕಾರಿ ಕೊನೆಗೆ ಗತ್ಯಂತರವಿಲ್ಲದೆ ಬರೆದುಕೊಟ್ಟು ವಿಷವನ್ನು ತೆಗೆದುಕೊಂಡು ಹೇಳಿ ಹೋಗುವ ಮನಸ್ಸು ಮಾಡುತ್ತಾನೆ. ಔಷಧಿ ಅಂಗಡಿಯಾತ ಮತ್ತೊಮ್ಮೆ ನೌಕಾಧಿಕಾರಿಗೆ ಹೇಳುತ್ತಾನೆ. "...ಇನ್ನೊಬ್ಬರ ಜೀವ ತೆಗೆಯಲು ನನಗಾಗಲೀ ನಿಮಗಾಗಲೀ ಅಧಿಕಾರ ಇಲ್ಲ. ನಾನು ನಿಮಗೆ ಏನೂ ಅನ್ಯಾಯ ಮಾಡುವುದಿಲ್ಲ..."

ಇಲ್ಲಿ ಔಷಧಿ ಅಂಗಡಿಯಾತನ ಮಾನವೀಯ ಗುಣ, ಸತ್ಯ ಸಂಧತೆ ಅನಾವರಣವಾಗಿರುವುದನ್ನು ಗಮನಿಸಬಹುದು. ಐದು ನೂರು ರೂಪಾಯಿ ಪಡೆದು ವಿಷ ಕೊಟ್ಟರೆ ನನಗೇನು ಬರಲಾರದು. ಆದರೆ ವಿನಾಕರಣ ಯಾರನ್ನು ಸಾಯಿಸಬಾರದು ಎಂಬುದು ಅಂಗಡಿಯಾತನ ಅಭಿಮತ; ಅತ್ಯಂತ ಸೂಕ್ಷ್ಮ, ಅಸಹಾಯಕ ಸ್ಥಿತಿಯಲ್ಲಿರುವವರಿಗೆ ವಿಷ ಕೊಟ್ಟು ಸಹಾಯ ಮಾಡಿದ್ದೇನೆ. ನಿಮಗೂ ಮಾಡುತ್ತೇನೆ. ಆದರೆ ಕರಾರು ಪತ್ರ ಕೊಟ್ಟರೆ ನಾನು ಜೈಲಿಗೆ ಹೋಗೋದು ತಪ್ಪುತ್ತದೆ ಎಂದು ಮಾರ್ಮಿಕವಾಗಿ ನುಡಿಯುತ್ತಾನೆ.

**ತನಿಖೆಯ ನಾಯಿ** : ತನಿಖೆಯ ನಾಯಿ ಕಥೆಯ ಮೂಲ ರಷ್ಯ. ರಷ್ಯಾದ

ಕತೆಗಾರರ ಕಲ್ಪನೆಯನ್ನು ಶ್ರೀನಿವಾಸ ಹಾವನೂರ ಅವರು ತನಿಖೆಯ ನಾಯಿ ಎಂಬ ಶೀರ್ಷಿಕೆಯಡಿ ಹಾಸ್ಯಭರಿತ ಕುತೂಹಲವುಂಟಾಗುವಂತೆ ಹೆಣೆದಿದ್ದಾರೆ. ಕೊಲೆ, ಕಳ್ಳತನ, ಭ್ರಷ್ಟಾಚಾರ ಹೆಚ್ಚಾದಾಗ ಜಿಲ್ಲೆಯ ಪೋಲೀಸ್ ಇಲಾಖೆಗೆ, ಅಧಿಕಾರಿಗಳಿಗೆ ಯೋಚನೆಯುಂಟಾಯಿತು. ಹಾಗಾಗಿ ನೆರೆಯ ರಾಜ್ಯದಿಂದ ಪೊಲೀಸ್ ನಾಯಿಯೊಂದನ್ನು ಎರವಲು ಪಡೆದರು.

ಪೊಲೀಸ್ ಕಾಲೋನಿಯಲ್ಲಿ ಕಾನ್‌ಸ್ಟೇಬರ್ ನಂ. ೧೧೪ ತನ್ನ ಹೆಂಡತಿಯ ಹೊಸ ಸೀರೆ ಕಳುವಾಗಿರುವುದನ್ನು ಕಂಡು ಕದ್ದವರಿಗೆ ಈ ಸಾರಿ ತಕ್ಕ ಶಾಸ್ತ್ರಿ ಮಾಡಬೇಕೆಂದು ಯೋಚಿಸಿದನು. ಅದರಂತೆ ಹಿರಿಯ ಅಧಿಕಾರಿ ಜೊತೆ ಮಾತನಾಡಿ ವಿನಂತಿಸಿ ಒಂದು ದಿನ ಪೊಲೀಸ್ ಕಾಲೋನಿಗೆ ಪೊಲೀಸ್ ನಾಯಿಯನ್ನು ಕರೆತರುವಲ್ಲಿ ಯಶಸ್ವಿಯಾದನು. ಕಾಲೋನಿಯವರೆಲ್ಲರೂ ಕುತೂಹಲದಿಂದ ನಾಯಿಯನ್ನು ಗಮನಿಸಿದರು.

ನಾಯಿ ಓರ್ವ ಮುದುಕಿಯನ್ನು ಹೋಗಿ ಹಿಡಿಯಿತು. ಆದರೆ ಆಕೆ "ತಾನು ಸೀರೆ ಕದ್ದಿಲ್ಲ, ಅದರ ಮೇಲಿದ್ದ ಚಿಕ್ಕ ಬಾಡೀಸ್ ಮಾತ್ರ ತೆಗೆದಿದ್ದೇನೆಂದು ತಪ್ಪೊಪ್ಪಿಕೊಂಡಳು. ನಂತರ ನಾಯಿ ನಂ.೧೮೨ರ ಕಾನ್‌ಸ್ಟೇಬಲ್‌ನನ್ನು ಹಿಡಿಯಿತು. "ನಾನೇನು ಸೀರೆ ಕದ್ದಿಲ್ಲ ನಿನ್ನ ಸಾಲದ ರೂಪದಲ್ಲಿ ೫೦ ರೂ. ಪಡೆದಿದ್ದೇನೆಂದು ಉಸುರಿದನು. ನಾಯಿ ಒಕ್ಕಲಗಿತ್ತಿಯ ಹತ್ತಿರ ಹೋಗಿ ನಿಂತಿತ್ತು. ಆಕೆ ನಡುಗುತ್ತ "ನಾನು ಸೀರೆ ಕದ್ದಿಲ್ಲ. ಗೂಡಿನೊಳಗಿದ್ದ ಬಾಟಲಿಯಲ್ಲಿದ್ದುದನ್ನು ಸ್ವಲ್ಪ ಕುಡಿದಿದ್ದೇನೆ" ಎಂದು ಹೇಳಿದಳು, ಹೀಗೆ ನಾಯಿ ಒಬ್ಬೊಬ್ಬರನ್ನು ಹಿಡಿಯತು. ಆದರೆ ಸೀರೆ ಮಾತ್ರ ಸಿಗಲಿಲ್ಲ. ಅದರ ಮೇಲ್ವಿಚಾರಣೆಯನ್ನು ನೋಡಿಕೊಳ್ಳುವವನೂ "ನಾನು ತಪ್ಪು ಮಾಡಿದ್ದೇನೆ. ಸರಿಪಡಿಸಿಕೊಳ್ಳುತ್ತೇನೆಂದು ಹೇಳಿದಾಗ ನಾಯಿ ಸುಮ್ಮನಾಯಿತು. ನಾಯಿಯ ಖ್ಯಾತಿ ಬಲುಬೇಗ ಹರಡಿತು ರಾಜ್ಯದ ರಾಜಧಾನಿಗೆ ಈ ನಾಯಿಯನ್ನು ಕರೆಸಿಕೊಳ್ಳಬೇಕೆಂಬ ನಿರ್ಧಾರವಾಗಿದೆ ಎಂಬ ಸುದ್ದಿ ಹರಡಿತು.

**'ಕಾಮದಹನ'** ಸರ್ವಸಂಗ ಪರಿತ್ಯಾಗಿಗಳಾದರೆ ಮಾತ್ರ ಸನ್ಯಾಸತ್ವವನ್ನು ಸ್ವೀಕರಿಸಬೇಕು. ಇಲ್ಲದಿದ್ದರೆ ಅನಾಹುತಕ್ಕೆ ದಾರಿಯಾಗುತ್ತದೆ ಎಂಬ ಆಶಯವನ್ನು ಹೊಂದಿರುವ ಕಾಮದಹನ ಕುಚೋದ್ಯದ ಕಥೆ ಚೈನಾ ಕಥೆಯೊಂದರ ರೂಪಾಂತರ. ಹೋ ತಾ-ಚಿಂಗ್ ಎಂಬ ರಾಜಮನೆತನಕ್ಕೆ ಸೇರಿದ ಯುವಕ ಸ್ತ್ರೀಸಂಗ ಮತ್ತು ಸಂಗೀತಗಳನ್ನೇ ಕಾಯಕವನ್ನಾಗಿಸಿಕೊಂಡು ತನ್ನ ಜೀವನವನ್ನೇ ಕಳೆದುಕೊಂಡ ಯುವಕನ ಕಥೆಯೇ ಕಾಮದಹನ. 'ಅತಿಯಾದರೆ ಅಮೃತವೂ ವಿಷ' ಎಂಬ ಮಾತಿನಂತೆ ಹೋ ತಾ ಚಿಂಗ್ ಅತಿಯಾದ ಕಾಮದಾಸೆಯಿಂದ ಜೀವವನ್ನೇ ಕಳೆದುಕೊಳ್ಳುತ್ತಾನೆ. ಸರ್ವಸಂಗ ಪರಿತ್ಯಾಗಿಗಳಾಗಿ ಚೈತ್ಯಾಲಯವನ್ನು ಸೇರಿದ ಚೀನಿ ಯುವತಿಯರು ಕಾಮದಾಸೆಯಿಂದ ಜೈಲು ಸೇರುತ್ತಾರೆ. ಹೆಸರಿಗೆ ಮಾತ್ರ ಭಿಕ್ಷುಣಿಯರಾಗಿ ಚೈತ್ಯಾಲಯಗಳಲ್ಲಿರುತ್ತಾರೆ. ಆದರೆ ಮನದಿಂಗಿತವನ್ನು ಶಮನ ಗೊಳಿಸಿಕೊಳ್ಳುವಲ್ಲಿ ವಿಫಲರಾಗುವ ಸನ್ನಿವೇಶವನ್ನು 'ಕಾಮದಹನ' ಕುಚೋದ್ಯ ಕಥೆ ಅತ್ಯಂತ ಸ್ವಾರಸ್ಯಕರವಾಗಿ

ನಿರೂಪಿಸುತ್ತದೆ. "ತಾ-ಚಿಂಗ್‌ನ ಜೀವನ ಹೀಗೆಯೇ ಸಾಗಿತ್ತು. ಒಬ್ಬರಲ್ಲ, ನಾಲ್ವರು ಕಾಮಿನಿಯರು ನಾ ಮೊದಲು, ತಾ ಮುಂದೆ-ಎಂದು ಮುಗಿಬಿದ್ದು ಬರುತ್ತಿದ್ದಾಗ ಅವನಿಗೆ ತನ್ನಂತಹ ಸುಖಿಗಳೇ ಇಲ್ಲವೆನಿಸಿತು. ಅವರಾರಿಗೂ ಹೊಟ್ಟೆಯ, ದುಡಿಮೆಯ ಪ್ರಶ್ನೆ ಇರಲಿಲ್ಲ. ಯಾರಾದರೂ ನೋಡಿದರೆ ಏನಂದಾರು ಎಂಬ ಹೆದರಿಕೆ ಇರಲಿಲ್ಲ. ವಾರಕ್ಕೊಮ್ಮೆ ಬಂದು ಹೋಗುವ ಗುರಿಕಾರನ ಅವಕಾಶವಿರಲಿಲ್ಲ. ಹಗಲು ರಾತ್ರಿಯೆಂಬ ಭೇದವೂ ಇಲ್ಲದೆ ಸರತಿಯ ಮೇಲೆ ರತಿಕ್ರೀಡೆಯಲ್ಲಿ ನಿರತರಾಗಿದ್ದರು. ಹೀಗೆ ದಿನಗಳಲ್ಲಿ ಎರಡು ತಿಂಗಳುಗಳೇ ಸಂದುವು; ಇದು ಚೈತ್ಯಾಲಯದಲ್ಲಿನ ಭಿಕ್ಷುಣಿಯರ ಮತ್ತು ಹೋ ತಾ-ಚಿಂಗ್‌ನ ದೈನಂದಿನ ದಿನಚರಿಯಾಗಿತ್ತು. ಹೀಗೆ ಕಾಲಕಳೆದು ತನ್ನ ಮನೆಗೆ ಹಿಂತಿರುಗಬೇಕೆಂದು ಅನಿಸಿತು. ಆದರೆ ಭಿಕ್ಷುಣಿಯರು ಬಿಡಲಿಲ್ಲ. "ಅವನನ್ನು ಭಿಕ್ಷುಣಿಯನ್ನಾಗಿ ಮಾಡಿಬಿಡೋಣ, ಹೇಗೂ ನೋಡುವುದಕ್ಕೆ ದುಂಡು ಮುಖದವನಾಗಿದ್ದಾನೆ" ಎಂದು ತಲೆ ಬೋಳಿಸಿ ಭಿಕ್ಷುಣಿಯ ವೇಷ ಹಾಕಿಸಿ ಉಳಿಸಿಕೊಳ್ಳುತ್ತಾರೆ.

"ತಾ-ಚಿಂಗ್‌ನಿಗೆ ಕ್ರಮೇಣ ಸ್ತ್ರೀ ಸಂಗವೇ ವಾಕರಿಕೆ ಬರುವಂತಾಯಿತು" ಕೊನೆಕೊನೆಗೆ ಮಾನಸಿಕವಾಗಿ ನಿರ್ವಿಣ್ಣನಾಗುತ್ತಾನೆ. ಅಂತಿಮವಾಗಿ ಚೈತ್ಯಾಲಯದಲ್ಲಿಯೇ ಸಾವನ್ನಪ್ಪುತ್ತಾನೆ. 'ಸತ್ಯವನ್ನು ಬಚ್ಚಿಡಲಾಗದು' ಎಂಬಂತೆ ಚೈತ್ಯಾಲಯದ ಭಿಕ್ಷುಣಿಯರೆಲ್ಲ ಜೈಲುಪಾಲಾಗುತ್ತಾರೆ.

**೫.೨. ಲಲಿತ ಪ್ರಬಂಧ**

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಲಲಿತ ಪ್ರಬಂಧವು ತನ್ನದೇಯಾದ ವೈಶಿಷ್ಟ್ಯತೆ ಪಡೆದುಕೊಂಡಿದೆ. ಓದುಗನನ್ನು ಸೆಳೆಯುವ ಶಕ್ತಿ ಈ ಪ್ರಕಾರಕ್ಕಿದೆ. ತಿಳಿಹಾಸ್ಯದ ಜೊತೆಗೆ ಗಂಭೀರತೆಯನ್ನು ಕಾಣಬಹುದು. ಅಲ್ಲದೆ ವೈಚಾರಿಕ ನೆಲೆಗಟ್ಟಿನ ನೋಡುವ ಸೂಕ್ಷ್ಮತೆಯು ಪ್ರಸ್ತಾಪಗೊಂಡಿದೆ. ಹಾವನೂರ ಅವರು ಒಂದಷ್ಟು ಲಘು ಒಂದಷ್ಟು ಗಂಭೀರ ಈ ಲಲಿತ ಪ್ರಬಂಧದೊಂದಿಗೆ ವಿಶಿಷ್ಟ ಸಂಗತಿಯನ್ನು ಓದುಗ ಪ್ರಪಂಚಕ್ಕೆ ಪರಿಚಯಿಸಿಕೊಟ್ಟಿದ್ದಾರೆ. ಈ ಪ್ರಬಂಧ ವಿಷಯ ಕೌಟುಂಬಿಕ ಧಾರ್ಮಿಕ ಮತ್ತು ಸಾಮಾಜಿಕ ವಲಯದ ಸಂಗತಿಗಳನ್ನು ಔಚಿತ್ಯಪೂರ್ಣವಾಗಿ ಬಳಸಿಕೊಂಡಿದ್ದಾರೆ. ವಾಚಕರಿಗೆ ಮನೋರಂಜನೆ ಮತ್ತು ನೀತಿಯನ್ನು ಪರಿಚಯಿಸಿದರು. ಹಾಗೆಯೇ ಓದುಗರ ಮನಸ್ಸನ್ನು ಸೂಕ್ಷ್ಮ ಗ್ರಹಿಕೆಯ ಕಡೆಗೆ ಕೊಂಡೊಯ್ಯುತ್ತದೆ. ವಾಸ್ತವಿಕ ಬದುಕನ್ನು ಅರಿಯುವಂತೆ ಮಾಡುತ್ತಿದೆ.

**'ಈತ ಸತ್ಯನಾರಾಯಣ'** ಹಿಂದು ಧರ್ಮದಲ್ಲಿರುವ ದೇವ-ದೇವತೆಗಳ ಬಗೆಗಿನ ಹಾಸ್ಯಲೇಪಿತ ಲಲಿತ ಪ್ರಬಂಧ ಈತ ಶ್ರೀಸತ್ಯನಾರಾಯಣ. ಶ್ರೀನಿವಾಸ ಹಾವನೂರ ಕನ್ನಡ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ಸಾಹಿತ್ಯ ಕೃಷಿ ಮಾಡಿರುವುದನ್ನು ಗಮನಿಸಬಹುದು. ಸಂಶೋಧನೆ, ಅನುವಾದ, ಕಥೆ, ಪ್ರಕಾರಗಳಲ್ಲಿ ಸಾಹಿತ್ಯ ಸೇವೆ ಸಲ್ಲಿಸಿದಂತೆಯೇ ಲಲಿತ ಪ್ರಬಂಧಗಳ ಗುಚ್ಚವೊಂದನ್ನು ಹಾವನೂರ ಅವರು ಸಂಕಲ್ಪಿಸಿದ್ದಾರೆ.

ಈತ ಶ್ರೀಸತ್ಯನಾರಾಯಣ! ಪ್ರಬಂಧದಲ್ಲಿ ದೇವ-ದೇವತೆಗಳ ಹುಟ್ಟು, ಪ್ರಸರಣ

ಮತ್ತು ಅಂತ್ಯಗಳ ಬಗೆಗಿನ ಚಿಂತನೆಗಳಿವೆ. ಹಾಸ್ಯಲೇಪಿತ ಚಿಂತನೆಗಳಿವೆ. ಭಾಷಾ ದೃಷ್ಟಿಯಿಂದ ಭಿನ್ನ ಭಿನ್ನ ಅರ್ಥಗಳು ವ್ಯವಹಾರಿಕ ವಿಚಾರಗಳಲ್ಲಿ ಹೇಗೆ ನಿರೂಪಿತಗೊಳ್ಳುತ್ತಿವೆ ಎಂಬುದನ್ನು ಪ್ರಸ್ತುತ ಪ್ರಬಂಧದಲ್ಲಿ ವಿಶ್ಲೇಷಿಸಿದ್ದಾರೆ.

"...ಅವನಿಗಾಗಿ ನಾನು ರೇವಾಖಂಡ ಒಂದನ್ನೇ ಏಕೆ, ಆ ಪುರಾಣದ ಎಲ್ಲಾ ಖಂಡಗಳನ್ನು ತಿರುವಿಹಾಕಿದೆ ನನ್ನ ಕೈಗೆ ಸಿಗಲಿಲ್ಲ. 'ಸತ್ಯ'ನನ್ನು ಪುರಸ್ಕರಿಸುವ ಈ ನಾರಾಯಣನಿಗೆ ಅಸತ್ಯದ ಆರೋಪ ಮಾಡುವುದು ಸಲ್ಲ! ಆದಾಗ್ಯೂ ರೇವಾಖಂಡದಲ್ಲಿ ಅವನು ಕಾಣಿಸಿಕೊಂಡದ್ದರಿಂದ ಅದು ಅರ್ಧಸತ್ಯದ ಮಾತಾಗುತ್ತದೆ ಎಂದು ಸತ್ಯನಾರಾಯಣನ ಅಸ್ತಿತ್ವದ ಹುಡುಕಾಟದ ಬಗೆಗೆ ಹಾವನೂರ ಅವರು ಛಲವನ್ನು ಪ್ರಬಂಧದಲ್ಲಿ ವಿಶ್ಲೇಷಿಸಿದ್ದಾರೆ.

ಹಿಂದು ಧರ್ಮದ ಯಾವುದೇ ಪೌರಾಣಿಕ ಶಾಸ್ತ್ರ ಗ್ರಂಥಗಳಲ್ಲಿ ಎಲ್ಲಿಯೂ ಶ್ರೀಸತ್ಯನಾರಾಯಣನ ಬಗೆಗಿನ ಉಲ್ಲೇಖಗಳು ಕಂಡುಬರುವುದಿಲ್ಲ! ಹಾಗಾದರೆ ಯಾವಾಗ ಸತ್ಯನಾರಾಯಣ ಜನ್ಮತಳೆದ ಎಂಬುದನ್ನು ಲೇಖಕರು ಮಾರ್ಮಿಕವಾಗಿ ಪ್ರಶ್ನಿಸಿದ್ದಾರೆ. ಅಂತೂ ನಮ್ಮ ಸತ್ಯನಾರಾಯಣನು ಉತ್ತರ ಭಾರತದಲ್ಲಿ ಎರಡು ಶತಕಗಳ ಹಿಂದೆ ಅವತಾರ ಮಾಡಿದ ಆಮೇಲೆ ಪಶ್ಚಿಮ ಭಾರತಕ್ಕೆ ಬಂದಿತೆಂದರೆ ಮಾಹಾರಾಷ್ಟ್ರಕ್ಕೆ ಕಳೆದ ಶತಮಾನದಲ್ಲಿ ತಲೆಎತ್ತಿ ೧೯/೨೦ ಶತಮಾನ ಕಾಲದಲ್ಲಿ ಕರ್ನಾಟಕದಲ್ಲಿ ವ್ಯಾಪಿಸಿದ ಎಂದು ಗ್ರಹಿಸಿದರೆ ತಪ್ಪೇನಾಗಲಿಕ್ಕಿಲ್ಲವಲ್ಲ!" ಹೀಗೆ ಸತ್ಯನಾರಾಯಣದ ಪ್ರಸರಣದ ಬಗ್ಗೆ ಹಾವನೂರ ಅವರು ಶೋಧನೆ ಮುಂದುವರಿಯುತ್ತದೆ. ಹಾಗೆಯೇ ಸತ್ಯನಾರಾಯಣನ ಪ್ರಸಾದದ ಹುಟ್ಟಿನ ಬಗೆಗೂ ಲೇಖಕರು ಕುತೂಹಲ ವ್ಯಕ್ತಪಡಿಸುತ್ತಾರೆ. "ಅದು ಅತ್ಯಂತ ಸ್ವಾದಿಷ್ಟವಾದದ್ದು ಎನ್ನುವುದಂತಿರಲಿ, ಅದರ ಘಟಕಗಳು (ಹಾಲು ಸಕ್ಕರೆ, ಸಜ್ಜಿಗೆ, ಬಾಳೆಹಣ್ಣು, ತುಪ್ಪ) ಇವೆಲ್ಲ ಸಮಪ್ರಮಾಣದಲ್ಲಿ ಇರಬೇಕೆಂದು ಹೇಳಿದೆ. ಈ ಬಗೆಯ Combination ಇರುವ ಖಾದ್ಯ ಪದಾರ್ಥವೂ, ನಮ್ಮ ಹಳೆಯ ಪಾಕಶಾಸ್ತ್ರಗಳಲ್ಲಿ ಉಲ್ಲೇಖಗೊಂಡಿಲ್ಲ" ಎಂದು ಲೇಖಕರು ವೈಶಿಷ್ಟ್ಯತೆ ಬಗೆಗೆ ಮಾತನಾಡುತ್ತಾರೆ.

**'ಒಕ್ಕಲಗಿತ್ತಿ'** ನಗರವಾಸಿಗಳ ಎಲ್ಲ ಮನೆಗಳಲ್ಲಿ ಕಂಡುಬರುವ ಒಕ್ಕಲಗಿತ್ತಿ ಸಮಸ್ಯೆಯ ಕುರಿತು ಲೇಖಕರು ಬಿಡಿಬಿಡಿಯಾಗಿ ಸೂಕ್ಷ್ಮವಾದ ಅಂಶಗಳ ಬಗ್ಗೆ 'ಒಕ್ಕಲಗಿತ್ತಿ' ಎಂಬ ಲಲಿತ ಪ್ರಬಂಧದಲ್ಲಿ ವಿವರಿಸಿದ್ದಾರೆ. ಬಾಡಿಗೆ ಮನೆಗಳನ್ನು ಆಶ್ರಯಿಸುವವರಿಗೆ ಹೋದಲ್ಲೆಲ್ಲಾ ಅವರಿಗೆ ಸರಿಹೊಂದುವ ಒಕ್ಕಲಗಿತ್ತಿಯರು ಸಿಗುವುದು ಅಪರೂಪವೇ ಸರಿ. ಪ್ರಸ್ತುತ ಲಲಿತ ಪ್ರಬಂಧದಲ್ಲಿ ನಾಯಕನ ಹೆಂಡತಿ ತನ್ನ ಹಿಂದಿನ ಬಾಡಿಗೆ ಮನೆಯಲ್ಲಿದ್ದಾಗ ಇದ್ದ ಒಕ್ಕಲಗಿತ್ತಿಯ ಬಗೆ ಹೇಳಿದಳು 'ಮುಖ್ಯ ಅಂದರೆ ಆಕೆ ವಾಚಾಳಿ ಇರಬಾರದು. ಆ ನಿಂಗವ್ವನನ್ನು ವಿಸ್ತರಿಸುವುದು ಎಷ್ಟು ಕಷ್ಟವಾಯಿತೆಂದು ನಿಮಗೆ ಗೊತ್ತೇ ಇದೆ" ಕೊನೆಗೊಬ್ಬಳು ರುಕ್ಕವ್ವ ಎಂಬ ಒಕ್ಕಲಗಿತ್ತಿ ಮನೆಗೆ ಸೇರಿಕೊಂಡಳು. "ಎರಡು ದೊಡ್ಡ ಹುಡುಗುರವೆ ಅಂತೆ; ಹಿರಿಯ ಮಗ ಎಲ್ಲೋ ಕೆಲಸಕ್ಕಿದ್ದಾನಂತೆ. ಚಿಕ್ಕವ ಸಾಲೆಗೆ ಹೋಗುತ್ತಿದ್ದಾನಂತೆ

ಇವಳ ಗಂಡ ತೀರಿಕೊಂಡಿದ್ದಾನೆ" ಎಂದು ಬಯೋಡಾಟ ತಿಳಿಸಿದಳು. ಒಂದಷ್ಟು ದಿನ ಚೆನ್ನಾಗಿ ಸಾಗಿತ್ತು. ಹೆಂಡತಿ-ಒಕ್ಕಲಗಿತ್ತಿ ಚೆನ್ನಾಗಿ ಬಾಂಧವ್ಯದಿರದಿದ್ದರೂ ಟೂರ್ ಹೋದಾಗಲೂ ಒಕ್ಕಲಗಿತ್ತಿಯೇ ಮನೆಯನ್ನು ಕಾದಳು. ಕೊನೆಗೊಂದು ದಿನ ರುಕ್ಕವ್ವನ ಬದಲು ಮರಿಯಮ್ಮ ಬಂದಳು. ನಂತರ ಹೆಂಡತಿ ರುಕ್ಕವ್ವಳ ಕಾರ್ಯಚಟುವಟಿಕೆಗಳನ್ನು ವಿವರಿಸಿದಳು.

ನಂತರ ನಾಯಕನ ಗೆಳೆಯನ ಮನೆಯಲ್ಲಿ ಕೆಲಸ ಮಾಡುತ್ತಿದ್ದ ರಂಗೂಬಾಯಿ ನೇಮಕವಾದಳು. ತಿಂಗಳಿಗೆ ಮೂರು ರಜೆಗಳನ್ನು ತೆಗೆದುಕೊಂಡಳು. ಅದು ಕೂಡ ಹೆಂಡತಿಗೆ ಸರಿಬರಲಿಲ್ಲ; ಕೊನೆಗೆ ಗಂಡ-ಹೆಂಡತಿ ಪತ್ರಿಕೆಯಲ್ಲಿ ಜಾಹೀರಾತು ಕೊಟ್ಟು ಒಕ್ಕಲಗಿತ್ತಿಯನ್ನು ನೇಮಕ ಮಾಡಿಕೊಳ್ಳೋಣ ಎಂಬ ನಿರ್ಧಾರಕ್ಕೆ ಬರುತ್ತಾರೆ. ಅಂತೆಯೇ ಒಕ್ಕಲಗಿತ್ತಿಗೆ ಇರಬೇಕಾದ ಅರ್ಹತೆ ಗುಣ ಸ್ವಭಾವಗಳನ್ನು ಚರ್ಚಿಸಿ ಪಟ್ಟಿ ಮಾಡುತ್ತಾರೆ.

ಪ್ರಸ್ತುತ ಪ್ರಬಂಧದಲ್ಲಿ ಲೇಖಕರು ಸೂಕ್ಷ್ಮಾತಿಸೂಕ್ಷ್ಮ ವಿಷಯಗಳನ್ನು ಹಾಸ್ಯಭರಿತವಾಗಿ ನಿರೂಪಿಸಿರುವುದನ್ನು ಕಾಣುತ್ತೇವೆ. ವಾಸ್ತವವಾಗಿ ನಡೆಯುವಂಥ ಘಟನೆಗಳೇ ಸರಿ. ಒಕ್ಕಲಗಿತ್ತಿಯ ವಯಸ್ಸಿನ ಬಗೆಗೆ ಹೆಂಡತಿ ಹೇಳುತ್ತಾಳೆ "ನೀವು ಏನೇ ಹೇಳಿರಿ. ಯಾರದೇ ಮನೆಯೊಳಗೆ, ಒಕ್ಕಲಗಿತ್ತಿ ವಯಸ್ಸು ಆದಾಕೆಯೇ ಇರಬೇಕು. ನೋಡಿರಿ ಗಂಡಸರ ಮನಸ್ಸು ಬೆಣ್ಣೆ ಇದ್ದ ಹಾಗೆ. ಸದಾ ಬಿಸಿಲಿಗೆ ಸಹಿತ ಅದು ಕರಗುತ್ತದೆ. ಅದನ್ನು ಸುಮ್ಮನೆ ಯಾಕೆ ಪರೀಕ್ಷೆ ಮಾಡಬೇಕು"

ಕಳ್ಳತನ ಮಾಡುವ, ಸರಿಯಾಗಿ, ಸ್ವಚ್ಛವಾಗಿ ಕೆಲಸ ಮಾಡದ, ವಾರಕ್ಕೆರಡು ದಿನ ರಜೆ ಮಾಡುವ ಹೀಗೆ ನೂರಾರು ಪ್ರಕರಣಗಳು ಒಕ್ಕಲಗಿತ್ತಿಯರ ಮೇಲೆ ಬರುತ್ತಿರುವುದು ವಾಸ್ತವ ಸಂಗತಿ. ಈ ವಾಸ್ತವ ಸಂಗತಿಯನ್ನೇ ಹಾಸ್ಯ ವಿಡಂಬನೆ ರೂಪದಲ್ಲಿ ರಚಿಸುವಲ್ಲಿ ಶ್ರೀನಿವಾಸ ಹಾವನೂರ ಅವರು ಯಶಸ್ವಿಯಾಗಿದ್ದಾರೆ.

**ಹೆಸರು, ಅಡ್ಡ ಹೆಸರು, ಅಡ್ನಾಡಿ ಹೆಸರುಗಳು**

ಹೆಸರಿನಲ್ಲಿರುವ ಮಹತ್ವ, ಹಾಸ್ಯಭರಿತ ಹೆಸರುಗಳು ಮತ್ತು ತರಲೆ ಹೆಸರುಗಳ ಬಗೆಗೆ ಶ್ರೀನಿವಾಸ ಹಾವನೂರ ಅವರು ಲಲಿತ ಪ್ರಬಂಧವೊಂದನ್ನು ಹಾಸ್ಯಭರಿತವಾಗಿ ರಚಿಸಿದ್ದಾರೆ. ಹೆಸರಿನಲ್ಲೇನಿದೆ ಮಹಾ! ಎಂದು ಸಲೀಸಾಗಿ ತಳ್ಳಿಹಾಕುತ್ತಿರುವ ಜನಸಾಮಾನ್ಯರಿಗೆ ಹೆಸರಿನಲ್ಲಿರುವ ವಿವಿಧತೆ, ಸಂಕೀರ್ಣ, ಮಹತ್ವ ಎಲ್ಲವನ್ನು ಸೂಕ್ಷ್ಮವಾಗಿ ಗ್ರಹಿಸಿರುವ ಲೇಖಕರು ರಸವತ್ತಾಗಿಯೇ ಹೆಸರಿನಲ್ಲಿ ಕಂಡುಬರುವ ಅಂಶವನ್ನು ಚಿತ್ರಿಸಿದ್ದಾರೆ. ಲೇಖಕರು ಹೇಳಿದಂತೆ ಪ್ರಪಂಚದಲ್ಲಿ ಹೆಸರಿಲ್ಲದ ಯಾವ ಅಂಶವೂ ಇಲ್ಲ. ಜೀವವಿಲ್ಲದ್ದಕ್ಕೂ ಹೆಸರಿರಲೇಬೇಕು. ಅಮೂರ್ತ ಸ್ವರೂಪದ ದೇವರಿಗೆಲ್ಲರಿಗೂ ಹೆಸರುಗಳನ್ನು ಮಾನವ ಜೀವಿ ಕೊಟ್ಟಿರುವುದನ್ನು ಗಮನಿಸಬಹುದಾಗಿದೆ. ಒಬ್ಬ ವ್ಯಕ್ತಿಯ ಹೆಸರನ್ನು ಉಚ್ಚರಿಸಿ

ದೊಡನೆಯೇ ಅವನ ಬಗ್ಗೆ ಗೊತ್ತಿದ್ದ ಎಲ್ಲ ಅಂಶಗಳೂ, ಅನಿಸಿಕೆಗಳು ಕ್ಷಣಾರ್ಧದಲ್ಲಿ ಮೂರ್ತರೂಪಕ್ಕೆ ತಾಳುತ್ತವೆ.

ಕಾಲ ಬದಲಾದಂತೆ, ಮನುಷ್ಯ ಬದಲಾದಂತೆ ಹೆಸರುಗಳಲ್ಲೂ ಬದಲಾವಣೆಯನ್ನು ಕಾಣುತ್ತಿದ್ದೇವೆ. "ರಾಮ, ಕೃಷ್ಣ, ಬಸವ, ಗಂಗಾ, ಗೌರಿ–ಇವು ಕ್ರಮೇಣ ಹಿಂದೆ ಸರಿದವು. ಗಿರೀಶ, ಸತೀಶರು ಕಾಣಿಸಿಕೊಂಡರು." ನಂತರ "...ವಸಂತ, ಮೋಹನ, ಗೀತಾ, ಕವಿತಾರತ್ತ ವಾಲಿದೆವು" ಆನಂತರ ಸ್ಪರ್ಧಾತ್ಮಕ ಮನೋಭಾವನೆಯಿಂದ ಚಿತ್ರ–ವಿಚಿತ್ರ ಹೆಸರುಗಳನ್ನು ಇಡುವ ಕಾಲ ಸನ್ನಿಹಿತವಾಗಿದೆ. "ನನ್ನೊಬ್ಬ ಮಿತ್ರನ ಮೊಮ್ಮಗನಿಗೆ 'ತರುಣ' ಎಂದು ನಾಮಕರಣ ಮಾಡಿದ್ದಾರೆ. ಹುಟ್ಟಿದ ಕ್ಷಣಾರ್ಧದಲ್ಲಿ 'ತರುಣ' ಆದ ಅವನಿಗೆ ತೊಟ್ಟಿಲ ಬಾಸಿಂಗವನ್ನು ಕಟ್ಟಬೇಕೇನೋ ಇನ್ನು ಅವನು ಬೆಳೆದು ದೊಡ್ಡವನಾಗಿ, ಮುದುಕನಾದ ಮೇಲೆ ಅವನನ್ನು 'ತರುಣ' ಎಂದು ಕರೆಯುವುದು ಆಭಾಸವಾಗಲಿಕ್ಕಿಲ್ಲವೇ" ಎಂದು ಪಜೀತಿಗೊಳಗಾಗುವ ವಿಚಿತ್ರ ಹೊಸ ಹೆಸರುಗಳ ಬಗ್ಗೆ ಲೇಖಕರು ಖೇದವನ್ನು ವ್ಯಕ್ತಪಡಿಸಿದ್ದಾರೆ. ಹಿರೇಮಠರಿಗೆ ಸಂಬಂಧಿಸಿದಂತೆ ಭಿನ್ನ ವಿಭಿನ್ನ ಹೆಸರುಗಳು ಸೇರ್ಪಡೆಗೊಳ್ಳುತ್ತಿರುವುದನ್ನು ಉದಾಹರಣೆ ಸಮೇತ ವಿವರಿಸಿದ್ದಾರೆ. ವ್ಯಕ್ತಿಗೂ ಹೆಸರಿಗೂ ಇರುವ ವಿಚಿತ್ರ ಸಂಗತಿಗಳನ್ನು ಹಾಸ್ಯಭರಿತವಾಗಿ ನಿರೂಪಿಸಿದ್ದಾರೆ. "ನನ್ನ ಒಬ್ಬ ವಕೀಲ ಮಿತ್ರರು ತಮ್ಮ ಮುಖದ ಮೇಲಿನ ನಗೆ ಒಂದಿಷ್ಟೂ ಮಾಸದಷ್ಟು ಪ್ರಸನ್ನವದನರು ಆದರೆ ಅವರ ಅಡ್ಡ ಹೆಸರು ಪ್ರಳಯಕಾಲಮಠ."

"ಧಡ್ಡ, ಗೊಡ್ಡೆಮ್ಮಿ, ಉಪ್ಪಿನ, ಬ್ಯಾಳಿ, ಮೆಣಸಿನಕಾಯಿ, ಚುರಮರಿ "...ಹಾದರಗೇರಿ, ಎಳಮಲಿ, ಸೂಳೇಬಾವಿ, ದೊಡ್ಡಕುಂಡಿ ಇಂಥ ಅಡ್ಡ ಹೆಸರುಗಳನ್ನು ಸಂಬಂಧಪಟ್ಟವರು ಯಾವ ಸಂಕೋಚವಿಲ್ಲದೆ ಇಟ್ಟುಕೊಂಡಿರುತ್ತಾರಲ್ಲ?" ಎಂದು ಲೇಖಕರು ಹಾಸ್ಯವಾಗಿಯೇ ಲಲಿತ ಪ್ರಬಂಧ ರಚಿಸಿದ್ದಾರೆ. ಈ ರೀತಿಯ ಚಿತ್ರವಿಚಿತ್ರ ಅಡ್ಡ ಹೆಸರುಗಳನ್ನು ಮಹಾರಾಷ್ಟ್ರದವರು ಇಟ್ಟುಕೊಂಡಿರುವುದನ್ನು ಲೇಖಕರು ವಿಶ್ಲೇಷಿಸಿದ್ದಾರೆ.

ಒಟ್ಟಾರೆಯಾಗಿ ಹೆಸರುಗಳ ವಿಚಾರವಾಗಿ ಗಂಭೀರ ಚಿಂತನೆ ಮಾಡದ, ಅಸಂಬದ್ಧತೆಯಿರುವ ಹೆಸರುಗಳ ಬಗ್ಗೆ ಹಾಸ್ಯಲೇಪಿತ, ಚಿಂತನಾತ್ಮಕ ಪ್ರಬಂಧವನ್ನು ಶ್ರೀನಿವಾಸ ಹಾವನೂರ ಅವರು ಕನ್ನಡ ಸಾಹಿತ್ಯ ಲೋಕಕ್ಕೆ ನೀಡಿದ್ದಾರೆ.ಅಡ್ಡ ಹೆಸರುಗಳ ನಿದರ್ಶನ ಕಾಣಬಹುದು. **'ಹೆಸರು ಹೆಸರನ್ನೆ ಮರೆತಾಗ'** ಈ ಪ್ರಬಂಧದ ಮೂಲಕ ನೆನಪು ಮತ್ತು ಮರುವು ಒಂದು ನಾಣ್ಯದ ಎರಡು ಮುಖಗಳಂತೆ ಚರ್ಚೆಗೊಂಡಿವೆ. ಅದರ ಇನ್ನೊಂದು ಸ್ವರೂಪ ಆತಂಕ ಮತ್ತು ಸಂಭ್ರಮ ಎರಡು ಸ್ವರೂಪ ಪರಿಚಿತಗೊಂಡಿವೆ. ವ್ಯಕ್ತಿಯ ವಯೋಮಾನಕ್ಕೆ ಅನುಗುಣವಾಗಿ ನೆನಪು ತನ್ನ ನೈಜತೆ ಕಳೆದುಕೊಳ್ಳುತ್ತದೆ. ಅದುವೇ ಮರೆವು, ವ್ಯಕ್ತಿಯ ಪರಿಚಯಿಸುವಾಗ ನೆನಪು ಬಾರದೆ ಹೋದಾಗ ಆತಂಕವಾಗುತ್ತದೆ. ನೆನಪು ಇದ್ದರೆ ತನ್ನ ದೈನಂದಿನ ವ್ಯವಹಾರ ಸುಗಮ ಇಲ್ಲವಾದರೆ ಗೊಂದಲ ವ್ಯಕ್ತಿಯ ಚಾಲನೆ ನೆನಪು ಈ ರೀತಿಯ ಚರ್ಚೆ ಪ್ರತಿನಿಧಿತಗೊಂಡಿದೆ.

**'ನಿಂದೆ, ಟೀಕೆ, ವಿಮರ್ಶೆ, ಮುಂತಾದ'** : ನಿಂದೆಯು ವ್ಯಕ್ತಿಯಲ್ಲಿ ದ್ವೇಷ ಭಾವನೆಗೆ ಕಾರಣವಾದರೆ ಟೀಕೆ ವ್ಯಕ್ತಿಯ ಮಾತಿನ ತದ್ವಿರುದ್ಧವಾಗಿ ಪ್ರತಿಕ್ರಿಯಿಸುವುದು. ಇಲ್ಲವೆ ಆ ಮಾತನ್ನು ಅಲ್ಲಗಳೆಯುವುದು. ಸಾಹಿತ್ಯ, ಸಮಾಜ, ವ್ಯಕ್ತಿ ಇವುಗಳ ಕುರಿತು ಮಾತನಾಡುವಾಗ ಜವಾಬ್ದಾರಿಯಿಂದ ಪ್ರತಿಕ್ರಿಯಿಸುವುದು ಅದರ ಎರಡು ಮಗ್ಗಲುಗಳ ಕುರಿತು ಚರ್ಚಿಸಿ ತನ್ನ ಮಾತಿನ ಮೂಲಕ ತನ್ನದೇಯಾದ ಸ್ವರೂಪ ಕೊಡುವುದು. **'ಮನಃಶಾಂತಿಯಾ ಸಪ್ತ ಸೂತ್ರಗಳು'** ಸದರಿ ಪ್ರಬಂಧದಲ್ಲಿ ಮನಸ್ಸಿನ ವೈಶಿಷ್ಟ್ಯತೆ ನಿರೂಪಿತಗೊಂಡಿದೆ. ಮೂಲ ಸಮಸ್ಯೆ ಹುಟ್ಟಿಕೊಳ್ಳುವ ರೀತಿ ಪ್ರಸ್ತಾಪ; ಹಾಗೆಯೇ ಆ ಸಮಸ್ಯೆಗೆ ಪರಿಹಾರ ಕಂಡುಕೊಳ್ಳುವ ಹಂಬಲಿಕೆ ಮಾನಸಿಕ ನೆಮ್ಮದಿ ಎಲ್ಲಿದೆ? ಯಾರಿಗೆ? ಯಾವಾಗ ಇರುತ್ತದೆ? ಏಕೆ ಇರುತ್ತದೆ? ಹೇಗೆ ಇರುತ್ತದೆ.? ಈ ರೀತಿಯ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ಅಧಿಕಾರ, ಹಣ, ಶಕ್ತಿ, ಜ್ಞಾನ ಅಲ್ಲದೆ ಸಕಲ ಸಂಪತ್ತು ಇದ್ದಾಗಲೂ ನೆಮ್ಮದಿ ಶೂನ್ಯವಾಗುತ್ತದೆ. ಇದಕ್ಕೆ ಉತ್ತರ ಹುಡುಕುತ್ತ ಹೋದರೆ ಇದು ಮಾರುಕಟ್ಟೆಯಲ್ಲಿ ಸಿಗುತ್ತದೆಯೋ? ಈ ರೀತಿಯಾಗಿ ಪ್ರಶ್ನೆಗಳ ಸರಮಾಲೆಯನ್ನು ಕಾಣಬಹುದು.

ಮನಸ್ಸಿನ ಎಲ್ಲಾ ಕಾಲದಲ್ಲಿ ಸ್ವರೂಪವನ್ನು ಬದಲಿಸಿದೆ ಭಗವದ್ಗೀತೆಯಲ್ಲಿ ಸ್ಥಿತ ಪ್ರಜ್ಞೆ ನಂತರ ದ್ವಾಪರಯುಗದಲ್ಲಿ ಮನಃಶಾಂತಿ ಹೀಗೆ ಅಭಿವ್ಯಕ್ತಗೊಂಡಿದೆ. ಮನುಷ್ಯನ ಜೀವನ ಸಾಗಬೇಕಾದರೆ ಒಂದು ಉದ್ಯೋಗ ಮಾಡುವುದು ಅನಿವಾರ್ಯ ಹಾಗೆಯೇ ಸಮಾಜದ ಋಣ ತೀರಿಸಬೇಕಾದರೆ ತನ್ನನ್ನ ಸಮಾಜ ಮುಖಿಯಾಗಿ ತೊಡಗಿಸಿಕೊಳ್ಳಬೇಕು. ಅಲ್ಲದೆ ತಾನು ಮಾಡುವ ವೃತ್ತಿಯಲ್ಲಿ ಕನಿಷ್ಠ ಪ್ರಾಮಾಣಿಕತೆ ಇರಬೇಕು. ಅದಕ್ಕೆ ನಿದರ್ಶನ ಕಾಣಬಹುದು. ಒಬ್ಬ ವೈದ್ಯನು ಇರುವ ಸಮಯದಲ್ಲಿ ಒಂದಷ್ಟು ಸಮಯ ಮೀಸಲು ಮಾಡಿಕೊಂಡು ಸಮಾಜ ಋಣವನ್ನು ತೀರಿಸಲು ಮತ್ತು ವೃತ್ತಿಯಲ್ಲಿ ಎಷ್ಟೇ ಒತ್ತಡವಿದ್ದರೂ ಅದನ್ನ ಬಿಟ್ಟು ರಾತ್ರಿ ತನ್ನ ವ್ಯಾನ್ ತೆಗೆದುಕೊಂಡು ಫೈವ್‌ಸ್ಟಾರ್ ಹೋಟಲುಗಳಿಗೆ ಹೋಗಿ ಉಳಿದ ಖಾದ್ಯ ಪದಾರ್ಥವನ್ನು ಪಡೆದುಕೊಂಡು ಕುಷ್ಠರೋಗಿಗಳಿಗೆ ಮತ್ತು ಅನಾಥಾಶ್ರಮಗಳಲ್ಲಿಯ ಅನಾಥರಿಗೆ ವಿತರಿಸುತ್ತಿದ್ದರು. ಹೀಗೆ ಮನಸ್ಸು ನೆಮ್ಮದಿಯಾಗಿ ಇಡಲು ಸಾಧ್ಯವೆನ್ನುವುದು ತಿಳಿದುಬರುತ್ತದೆ.

**'ನನ್ನಷ್ಟಕ್ಕೆ ನಾನು'** ಮನುಷ್ಯ ಅತಿಯಾಗಿ ಪ್ರೀತಿ ತೋರಿಸಿದರೆ ಅದು ದುರುಪಯೋಗವಾಗುವ ಸಾಧ್ಯತೆ ಇರುತ್ತದೆ. ಹಾಗೆಯೇ ಧಾನ, ಧರ್ಮ, ಪರೋಪಕಾರ ಎಷ್ಟರಮಟ್ಟಿಗೆ ಇರಬೇಕು, ಅಷ್ಟು ಇದ್ದರೆ ಸಾಕು; ಅದನ್ನು ಮೀರಿದರೆ ಆತಂಕ ಅನುಭವಿಸುವ ಸಂದರ್ಭಗಳು ಬರಬಹುದು. ಮನುಷ್ಯ ಅಗತ್ಯತೆಯನ್ನು ಅರಿತು ನಡೆದುಕೊಳ್ಳಬೇಕು. ಅಲ್ಲದೆ ಸಮಯ ಮತ್ತು ಸಂದರ್ಭಕ್ಕೆ ಅನುಗುಣವಾಗಿ ವರ್ತಿಸಬೇಕು ಇಲ್ಲವಾದರೆ ವ್ಯಕ್ತಿ ವ್ಯಕ್ತಿಗಳ ತಿಕ್ಕಾಟಕ್ಕೆ ವೈಮನಸ್ಸಿಗೆ ಕಾರಣವಾಗುತ್ತದೆ. ವ್ಯಕ್ತಿ ತನ್ನ ಗೌರವಕ್ಕೆ ಚ್ಯುತಿ ಬಂದಾಗ ಬೇಸರಗೊಂಡು ತನ್ನಷ್ಟಕ್ಕೆ ತಾನಾಗುತ್ತಾನೆ. ಮನುಷ್ಯನಿಗೆ ಆಹಾರ ಮತ್ತು ನಿದ್ರೆ ಎಷ್ಟು

ಮುಖ್ಯವೋ ಅಷ್ಟೇ ಮುಖ್ಯ ಅವಕಾಶ. ಆ ಅವಕಾಶದಿಂದ ತನ್ನ ಕಾರ್ಯದ ಮಹತ್ವವನ್ನು ತಿಳಿಯುವಂತೆ ಮಾಡಬಹುದು. ಅದಕ್ಕೆ ಉದಾ: ಲಾಲಾಬಹದ್ದೂರ್ ಶಾಸ್ತ್ರಿ ಪ್ರಧಾನ ಮಂತ್ರಿಯಾದಾಗ ಎಷ್ಟೋ ಜನರು ಅಪಹಾಸ್ಯ ಮಾಡಿದರು. ಅವರು ಮಾತನಾಡದೆ ತಮ್ಮ ಅತ್ಯುತ್ತಮ ಕಾರ್ಯಗಳ ಮೂಲಕ ಅಪಹಾಸ್ಯ ಮಾಡಿದವರಿಗೆ ಉತ್ತರಿಸಿದರು.

ತಾನು ಉದ್ಯೋಗ ಮಾಡುವ ಪರಿಸರದಲ್ಲಿ ೬–೮ ತಾಸು ಕಾಲ ಕಳೆಯಬೇಕು. ಅಲ್ಲಿ ಹಿತ ಬಯಸುವರು ಇರುತ್ತಾರೆ ಮತ್ತು ತಿರಸ್ಕರಿಸುವರು ಇರುತ್ತಾರೆ. ಹೀಗಾಗಿ ಸಮಯೋಚಿತವಾಗಿ ವರ್ತಿಸಬೇಕು. ಇಲ್ಲವಾದರೆ ಸಂಘರ್ಷಕ್ಕೆ ದಾರಿ ಮಾಡಿಕೊಡುತ್ತದೆ. ಸಿಟ್ಟು ಮತ್ತು ಆಕ್ರೋಶ ನುಂಗಿಕೊಂಡು ಸಹಿಸಿಕೊಳ್ಳಬೇಕು. ಅಲ್ಲದೆ ಸಾರ್ವಜನಿಕವಾಗಿ ಆಡುವ ಮಾತಿನ ಮೇಲೆ ಎಚ್ಚರವಿರಬೇಕು. ಇಲ್ಲವಾದರೆ ಅವಮಾನ ಮತ್ತು ಆತಂಕ ಅನುಭವಿಸಬೇಕಾಗುತ್ತದೆ. ಹೀಗಾಗಿ ಜಾಗೃತಿ ಇದ್ದರೆ ಗೌರವ ಮತ್ತು ಲಾಭ ಎರಡನ್ನು ಪಡೆದುಕೊಳ್ಳಬಹುದು ಎಂಬುದಾಗಿ ಪ್ರಸ್ತುತ ಲೇಖನ ಆಶಿಸುತ್ತದೆ.

**'ಮರಣ ಸಂಭ್ರಮ'** ಈ ಪ್ರಬಂಧದಲ್ಲಿ ಸುದ್ದಿ ಮಾಡುವ ಕುರಿತು ಚರ್ಚೆಯಿದೆ. ಕುತೂಹಲ ಕೆರಳಿಸುವ ಸುದ್ದಿಯಾಗಿರಬೇಕು. ಜ್ಯೋತಿಷ ಹೇಳುವುದು ಕೇಳಿಸಿಕೊಳ್ಳುವುದು ವಾಡಿಕೆ. ಆದರೆ ಮರಣವನ್ನು ಕುರಿತು ಜ್ಯೋತಿಷ ಕೇಳುವುದು ವಿಪರ್ಯಾಸ. ಈ ವಿಪರ್ಯಾಸ ಸಂಗತಿ ಹೀಗೆ ಪ್ರಾರಂಭವಾಗುತ್ತದೆ. ಹಾವನೂರ ಅವರಿಗೆ ಸುದ್ದಿಗಾರರಾಗಿ ಅನುಭವವಿದ್ದುದರಿಂದ ಜನಪ್ರಿಯ ನಾಯಕರಾದ ಇನಾಂದಾರರ ಸಾವಿನ ಸುದ್ದಿಯನ್ನು ಮಾಡಬೇಕಾಗಿತ್ತು. ಆದರೆ ಮಾಹಿತಿ ಪಡೆಯುವುದು ಯಾರಿಂದ, ಅವರ ಮಗ ಸರ್ವೇಶನಿಂದ ಸಿಗಬಹುದು? ಆತನಿಂದ ಪಡೆಯುವುದು ತುಂಬ ಕಷ್ಟ. ಹೀಗಾಗಿ ಅಡುಗೆ ಭಟ್ಟರಿಂದ ಮಾಹಿತಿ ಸುಲಭವಾಗಿ ಪಡೆಯಬಹುದು ಎಂದು ಆಲೋಚಿಸುತ್ತಾರೆ. ಅಮೇರಿಕಾದಿಂದ ಕಂಪ್ಯೂಟರ್ ತಂದು ಅದಕ್ಕೆ ಜಪಾನ್ ಸಾಫ್ಟ್‌ವೇರ್ ಜೋಡಿಸಿ ಜ್ಯೋತಿಷ ಹೇಳುವಂತೆ ಮಾಡುತ್ತಾರೆ. ಮರಣ ದಿನಾಂಕವನ್ನು ನಿಖರವಾಗಿ ಹೇಳುತ್ತದೆ: ಅತ್ಯಾಧುನಿಕ ಯಾಮಾತಾಜಿ ಕಂಪ್ಯೂಟರ್ ಸುದ್ದಿ ಹಬ್ಬಿಸಿದರು.

"ಒಬ್ಬ ಅಜ್ಜಿ ತನ್ನ ಮಗ ಮತ್ತು ಸೊಸೆ ಕೊಡುವ ತೊಂದರೆಗೆ ಬೇಸತ್ತು ದೇವರೇ ಬೇಗ ಕಣ್ಣು ಮುಚ್ಚಿಸು ಎಂದು ಬೇಡಿಕೊಳ್ಳುತ್ತಾಳೆ. ಅದಕ್ಕೆ ಒಬ್ಬ ಹೀಗೆ ಹೇಳುತ್ತಾನೆ. ಮರಣ ದಿನಾಂಕವನ್ನು ಕುರಿತು ಹೇಳುವ ಕಂಪ್ಯೂಟರ್ ಜ್ಯೋತಿಷವಿದೆ ಅದನ್ನು ಕೇಳು. ಈ ಮಾತನ್ನು ಗಮನಿಸಿದ ಅಜ್ಜಿ ಹೀಗೆ ಹೇಳುತ್ತಾಳೆ. ನನ್ನ ಮೊಮ್ಮಗನ ಮದುವೆ ಇದೆ ಎಂದು ಹೇಳುತ್ತಾಳೆ. ಬೇಸತ್ತ ಅಜ್ಜಿ ಮರಣ ಬೇಡವೆನ್ನುತ್ತಾಳೆ. ಆದರೆ ರಾಜೇಶರಾಯರು ಮರಣ ದಿನಾಂಕ ಕೇಳಿದರೆ ಭಯಪಡುವುದಿಲ್ಲ. ದಾಸರ ಮಾತಿನ ಮರಣಂ ಧ್ರುವಂ ಸಾವಿನ ದಿನ ತಿಳಿದ ಮೇಲೆ ಅಂಜಕೆಯಾತರದಯ್ಯ"[2] ಈ ಮಾತಿನ ಮಹತ್ವ ನಿರೂಪಿತಗೊಂಡಿದೆ.

**'ಹಾಲಿನ ಮೇಲಿನ ಕೆನೆ'** ಹಿರಿಯರು ತಮ್ಮ ಮಕ್ಕಳಿಂದ ಸಿಗದ ಪ್ರೀತಿ ಮೊಮ್ಮಕ್ಕಳಿಂದ ಸಿಕ್ಕಿ ಸಂತೃಪ್ತಿ ಹೊಂದುತ್ತಾರೆ. ಈ ಪ್ರಬಂಧದಲ್ಲಿ ಭಾವನಾತ್ಮಕ ಸಂಬಂಧವನ್ನು ವಿಶ್ಲೇಷಿಸಲಾಗಿದೆ. **'ವಿದೇಶಗಳಲ್ಲಿ ನಾ ಕಂಡ ನಾರಿಯರು'** ಈ ಪ್ರಬಂಧದ ಮೂಲಕ ಇಂಗ್ಲೆಂಡ್ ಲೈಬ್ರರಿಯ ನಾರಿಯರ ಪ್ರತಿ ನಿತ್ಯದ ಕಾರ್ಯ, ಶಿಸ್ತು, ಅಧ್ಯಯನದ ರೀತಿ ಮುಂತಾದ ಆ ಪರಿಸರದ ಸ್ವರೂಪವನ್ನು ವಿಶ್ಲೇಷಿಸಲಾಗಿದೆ. ಹಾವನೂರ ಅವರ ಮೊದಲ ಲೈಬ್ರರಿ ಸಂದರ್ಶನದ ಸಂದರ್ಭದಲ್ಲಿ ಮಹಿಳಾ ನೌಕರರು ತೋರಿದ ಪ್ರೀತಿ, ವಿಶ್ವಾಸಗಳನ್ನು ಗಮನಿಸಿದರೆ ಅವರ ಭಾವನೆಗಳಲ್ಲಿ ಆತ್ಮೀಯತೆ ಎದ್ದು ತೋರುತ್ತದೆ.

ಗ್ರಂಥಾಲಯ ಮುಖ್ಯಸ್ಥರಾದ ಮಿಸ್ ಲ್ಯಾಂಕೆಸ್ಟರ್ ಮತ್ತು ಸಹಾಯಕರು ಗ್ರಂಥಗಳ ಸಂಗ್ರಹವನ್ನು ಪರಿಚಯಿಸಿದರು. "ಕನ್ನಡ ಗ್ರಂಥ ಸಂಗ್ರಹ ತೋರಿಸಲು ಹಾವನೂರ ಅವರು ಕೇಳಿಕೊಂಡಾಗ ಮಿಸೆಸ್ ಡಾವಸನ್ ಪರಿಚಯಿಸಿದರು. ಏಕೆಂದರೆ ದಕ್ಷಿಣ ಭಾರತದ ಭಾಷಾ ಗ್ರಂಥಗಳ ಮೇಲ್ವಿಚಾರಣೆ ಅವಳದಾಗಿತ್ತು. ಕನ್ನಡದ ೧೫ ಹಸ್ತಪ್ರತಿಗಳನ್ನು ನೋಡಲು ಕೇಳಿಕೊಂಡಾಗ ಆಗ ಶ್ರೀಮತಿ ರೋಹಟಗಿ ವಿಂಬಳ ಬಳಿ ಕಳುಹಿಸಿದರು. ನಂತರ ಮಧ್ಯಾಹ್ನ ಊಟದ ಸಮಯದಲ್ಲಿ ಲೈಬ್ರರಿ ನೌಕರರಾದ ಬ್ರಿಟಿಷ್ ಮಹಿಳೆಯರೊಂದಿಗೆ ಬೇರೆ ಬೇರೆ ವಿಷಯಗಳ ಬಗ್ಗೆ ಹಾವನೂರು ಅವರು ಚರ್ಚೆ ಮಾಡುತ್ತಾರೆ. ಭಾರತೀಯ ಸ್ತ್ರೀಯನ್ನು ಮೆಚ್ಚಿ ಮದುವೆಯಾಗುವ ಕುರಿತು; ಏಕೆಂದರೆ ಭಾರತೀಯ ಮಹಿಳೆ ಪುರುಷರ ಯೋಗಕ್ಷೇಮಕ್ಕೆ ಹೆಚ್ಚು ಗಮನಕೊಡುತ್ತಾಳೆ. ಸಮಾನ ಹಕ್ಕಿನ ಪ್ರಶ್ನೆಯನ್ನೆತ್ತಿ ಜಗಳವಾಡುವುದಿಲ್ಲ. ಡೈವೋರ್ಸಿನ ಭಯವಿಲ್ಲ; ದಣಿದು ಮನೆಗೆ ಬಂದ ಗಂಡನಿಗೆ ಪ್ರೀತಿ ಪುರಸ್ಕಾರ ನಡವಳಿಕೆ ತುಂಬ ಹಿತಕಾರಿ"[5] ಭಾರತೀಯ ನಾರಿಯರು ಭಾವನಾತ್ಮಕ ಸಂಬಂಧಕ್ಕೆ ಹೆಚ್ಚು ಬೆಲೆ ಕೊಡುತ್ತಾರೆ. ಭಾರತೀಯ ಮತ್ತು ಪಾಶ್ಚಿಮಾತ್ಯ ಉದ್ಯೋಗಸ್ಥ ಮಹಿಳೆಯರ ಮತ್ತು ಕೌಟುಂಬಿಕ ಬದುಕಿನ ಸ್ವರೂಪ ಚರ್ಚೆಗೊಂಡಿದೆ. ಬಾಸಲ್ ಮಿಶನ್ನಿಗೆ ಹೋದ ಅನುಭವ ತುಂಬ ವಿಶಿಷ್ಟ. ರಜೆ ದಿನವಾಗಿದ್ದರೂ ಗ್ರಂಥಪಾಲಕರಾದ ಶ್ರೀ ಜೆಂಕಿನ್ಸ್ ಉಪಹಾರ ಮತ್ತು ಊಟದ ವ್ಯವಸ್ಥೆ ಮಾಡಿದರು. ಅಲ್ಲದೆ ಅವರ ಶ್ರೀಮತಿ ಬಾಸೆಲ್ ಮಿಶನ್ನಿನ ಕೇಂದ್ರ ಪ್ರಧಾನ ವರಿಷ್ಠರಾಗಿದ್ದರಿಂದಾಗಿ ಅವರಿಗೆ ಕರ್ನಾಟಕದ ಪರಿಚಯವಿತ್ತು. ಕನ್ನಡ ಭಾಷೆ ಬಲ್ಲವರಾಗಿದ್ದರಿಂದ ಹಾವನೂರರಿಗೆ ಅನೇಕ ಅನುಕೂಲ ಕಲ್ಪಿಸಿದರು.

**'ಪುಣೆ ಹಾಗೂ ಪುಣೇರಿ'** ಎರಡು ನಗರಗಳಾದ ಮುಂಬಯಿ ಮತ್ತು ಬೆಂಗಳೂರು ಆಡಳಿತಾತ್ಮಕವಾಗಿ ಅಸ್ಮಿತೆಯನ್ನು ಇಲ್ಲಿ ಗುರುತಿಸಲಾಗಿದೆ. ಸಾಂಸ್ಕೃತಿಕವಾಗಿ ಪುಣೆ ಪಡೆದುಕೊಂಡಿದೆ. ಆದರೆ ಬೆಂಗಳೂರು ಸಾಂಸ್ಕೃತಿಕವಾಗಿ ಪಡೆದುಕೊಳ್ಳಲಿಲ್ಲ. ಹಾಗೆಯೇ ಸಾಹಿತ್ಯ, ಕಲೆ, ಶಿಕ್ಷಣ ಜೀವನ ಮೌಲ್ಯಗಳು ಚರ್ಚೆಗೊಂಡಿವೆ. ಪುಣೆ ಸರ್ವಕಾಲಕ್ಕೂ ತನ್ನದೇಯಾದ ಸ್ಥಾನಮಾನ ಪಡೆದಿದೆ. ಇಲ್ಲಿನ ವಾಡೆಯಲ್ಲಿ ರಾಜನೀತಿ, ಧಾರ್ಮಿಕ

ವಿಧಿ-ವಿಧಾನಗಳ ಜೊತೆಗೆ ಮತ್ತು ಕೊಲೆಗಳ ಒಳಸಂಚುಗಳು ಲೆಕ್ಕವಿಲ್ಲದಷ್ಟು ನಡೆದವು. ಬೆಂಗಳೂರು ಉತ್ತಮ ನಗರ ಯೋಜನೆ ಕೆಂಪೇಗೌಡರು ಮಾಡಿಕೊಂಡಿದ್ದರು. ಆದರೆ ಪುಣೆಯ ಪೇಶ್ವೆಯು ನಗರ ಯೋಜನೆ ಮಾಡಿರಲಿಲ್ಲ. ಪುಣೆಯ ಪ್ರಾಚೀನ ದೇವಾಲಯಗಳಲ್ಲಿ ಗಣಪತಿ ವಿಗ್ರಹಗಳು ಹೆಚ್ಚು ಕಂಡುಬರುತ್ತವೆ. ಕಸಾಬ್ ಗಣಪತಿ ೧೬-೧೭ನೇ ಶತಮಾನದಲ್ಲಿ ಸ್ಥಾಪನೆಯಾಯತು. ಜನಾಂಗೀಯ ನೆಲೆಯಲ್ಲಿ ದೇವಾಲಯಗಳು ನಿರ್ಮಾಣಗೊಂಡಿವೆ. ತಮಿಳರಿಗೆ ಶೀತಲದೇವಿ, ಕೇರಳದವರಿಗೆ ಹರೇಕೃಷ್ಣ ಮತ್ತು ಅಯ್ಯಪ್ಪ ಸುಬ್ರಹ್ಮಣ್ಯ, ಬಂಗಾಳಿಯವರಿಗೆ ಮಹಾಕಾಳಿ ಇದ್ದರೆ, ಕರ್ನಾಟಕದವರಿಗೆ ಯಾವ ದೇವಸ್ಥಾನವು ಇರಲಲ್ಲ. ಪ್ರಬಂಧದಲ್ಲಿ ಜೈನ ಮತ್ತು ಪಾರ್ಶ್ವನಾಥ ದೇವಾಲಯದ ಉಲ್ಲೇಖವಿದೆ. ಮುಂಬಯಿ ಹೋಟೆಲ್ ತಿನುಸುಗಳ ರುಚಿಯಾದ ಖಾದ್ಯಗಳ ಹೋಟೆಲ್ ಉದ್ಯಮದ ಜನಪ್ರಿಯತೆ ಪಡೆದುಕೊಂಡಿರುವ ಬಗೆಗೆ ಲೇಖಕರ ಅಭಿಪ್ರಾಯಗಳಿವೆ.

ಪುಣೆಯ ರಂಗಭೂಮಿಯು ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿದೆ. ನಗರದ ಬ್ಯಾಂಕಿನವರು ನಾಟಕ ಸ್ಪರ್ಧೆ ನಡೆಸುತ್ತಿದ್ದರು. ಕಿವುಡ ಮತ್ತು ಮೂಕರಿಗಾಗಿ ನಾಟಕ ಸ್ಪರ್ಧೆ ನಡೆಸುತ್ತಿದ್ದರು. ಅಲ್ಲದೆ ಪ್ರೇಕ್ಷಕ ವರ್ಗದ ಪ್ರೋತ್ಸಾಹವಿತ್ತು. ಹಿಂದೂಸ್ಥಾನಿ ಸಂಗೀತ ಕ್ಷೇತ್ರದಲ್ಲಿ ಭಾಸ್ಕರ ಖುವಾ, ಬಖಲೆ, ಅಬ್ದುಲ್ ಕರೀಮ್‌ಖಾನ್ ಇವರು ಶಾಸ್ತ್ರೀಯ ಸಂಗೀತ ನಡೆಸುತ್ತಿದ್ದರು. ಪುಣೆಯ ಶ್ರೀಮಂತ ಪುಂಡ ಪೋಕರಿಗಳ ಚಪಲಕ್ಕೆ ಕಾಲೇಜಿನ ಆವರಣದಲ್ಲಿ ವಿದ್ಯಾರ್ಥಿನಿಯ ಕಗ್ಗೊಲೆಯಾಗಿರುವ ಬಗೆಗಿನ ಸಂಗತಿಗಳು ಪ್ರಬಂಧದಲ್ಲಿ ಅನಾವರಣಗೊಂಡಿದೆ.

**'ಮರಾಠಿ ಮಹಿಳೆ'** ಶ್ರೀನಿವಾಸ ಹಾವನೂರ ಅವರು ಮರಾಠಿ ಮಹಿಳೆಯ ವ್ಯಕ್ತಿತ್ವದ ಕುರಿತು ಇಲ್ಲಿ ವಿಶ್ಲೇಷಿಸಿದ್ದಾರೆ. ೧. ವಿವಾಹವಾಗಿ ಸಂಸಾರ ನಡೆಸುವ ಆಧುನಿಕ ಸಂಪ್ರದಾಯದ ಮಹಿಳೆ ೨. ಚಳುವಳಿಯಲ್ಲಿದ್ದುಕೊಂಡು ಸ್ತ್ರೀ ಸ್ವಾತಂತ್ರ್ಯ-ಸಮಾನತೆಗಾಗಿ ಹೋರಾಡಿದ ಮಹಿಳೆ. ೩. ಅವಳಲ್ಲಿ ಸ್ವತಂತ್ರ ಅಸ್ತಿತ್ವವನ್ನು ಕಾಯ್ದುಕೊಳ್ಳುವ ಅಚಲ ನಂಬಿಕೆ, ಮರಾಠಿ ಮಹಿಳೆ ಬಾಳ ಸಂಗಾತಿ ಆಯ್ಕೆ ಮಾಡಿಕೊಂಡ ನಂತರ ವಿವಾಹವಾಗಿ ತಾಯಿಯಾಗಿ ಉದ್ಯೋಗಿಯಾಗಿ ತನ್ನ ಕುಟುಂಬ ಸ್ವಾಯತ್ತತೆಯನ್ನು ಕಾಯ್ದುಕೊಂಡವಳು. ಅನಿತಳಿಗೆ ಹಿಂದೂಸ್ಥಾನಿ ಸಂಗೀತದಲ್ಲಿ ಹೆಚ್ಚು ಆಸಕ್ತಿಯಿತ್ತು. ಭೀಮಸೇನ ಜೋಶಿಯವರ ಕಾರ್ಯಕ್ರಮ ತಪ್ಪದೆ ನೋಡುವ ಹಂಬಲ. ಹೀಗಾಗಿ ಅವಳು ಮನೆಗೆ ಹೋಗುವುದು ತುಂಬ ತಡವಾಗುತ್ತಿದ್ದ ಕಾರಣಕ್ಕೆ ಪೋಷಕರ ವಿರೋಧವಿತ್ತು. ಹೀಗಾಗಿ ವಿವಾಹದ ನಂತರ ಗಂಡನ ಮನೆ ಸೇರಿಕೊಳ್ಳುವ ಮತ್ತು ಆ ಮನೆಯಲ್ಲಿ ತನ್ನ ಹಕ್ಕನ್ನು ಸ್ಥಾಪಿಸುವುದು. ಮಧ್ಯಮವರ್ಗದ ಮಹಿಳೆ ಟೀಚರ್, ನರ್ಸ್, ಕಾರಕೂನಿಕೆ, ಟೈಪಿಂಗ್, ಕಂಪ್ಯೂಟರ್ ಇತ್ಯಾದಿ ವೃತ್ತಿಯನ್ನು ಆಯ್ಕೆ ಮಾಡಿಕೊಂಡು ತನ್ನ ಕರಿಯರ್ ರೂಪಿಸಿಕೊಂಡು ಮಹಿಳೆ ತನ್ನ ಅಸ್ಮಿತೆಯನ್ನು ಉಳಿಸಿಕೊಳ್ಳುತ್ತಾಳೆ ಎಂದು ಲೇಖಕರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

**'ಸನ್ಯಾಸಿ ಮತ್ತು ಸಂಸಾರಿ'** ವ್ಯಕ್ತಿಯ ಮುಖವಾಡ ಒಂದು ತ್ಯಾಗವಾದರೆ ಮತ್ತೊಂದು ಭೋಗ ಮುಖವಾಡದ ಕುರಿತು ಪ್ರಬಂಧ ಇದಾಗಿದೆ. ಸನ್ಯಾಸಿ ಏಕಾಂಗಿಯಾದರೆ ಸಂಸಾರಿ ಸಂಘಜೀವಿ. ವ್ಯಕ್ತಿಯ ಜೀವನದಲ್ಲಿ ಸನ್ಯಾಸ ಸ್ವೀಕರಿಸುವುದು ಯಾವಾಗ? ಏಕೆ? ಹೇಗೆ ಈ ರೀತಿಯ ಪ್ರಶ್ನೆ ಹುಟ್ಟಿಕೊಳ್ಳುತ್ತವೆ. ಇದಕ್ಕೆ ಉತ್ತರ ಸನ್ಯಾಸ ಸ್ವೀಕರಿಸುವುದರಿಂದ ಸಾಮಾಜಿಕವಾಗಿ ಆಗುವ ಲಾಭ ಮತ್ತು ನಷ್ಟಗಳ ಚರ್ಚೆ ಈ ಪ್ರಬಂಧದಲ್ಲಿ ನಿರೂಪಿತಗೊಂಡಿದೆ. ಅಶೋಕನ ಕಾಲದಲ್ಲಿ ೬೦.೦೦೦ ಬೌದ್ಧ ಭಿಕ್ಷುಗಳಿದ್ದರೆಂದು ಚರಿತ್ರೆಯಲ್ಲಿ ದಾಖಲಾಗಿದೆ. 'ದೊಡ್ಡ ದೊಡ್ಡವರಲ್ಲಿ ಜಗಳ' ಎಂಬ ಪ್ರಬಂಧದ ಮೂಲಕ ಮೇರು ವ್ಯಕ್ತಿತ್ವದ ಸ್ವರೂಪ ಅಭಿವ್ಯಕ್ತಗೊಂಡಿದೆ. ಹಿರಿಯ ಸಂಶೋಧಕರಾದ ಶಂ.ಬಾ.ಜೋಶಿಯವರ 'ಕರ್ನಾಟಕ ಸಂಸ್ಕೃತಿಯ ಪೂರ್ವಪೀಠಿಕೆ' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಸಿಕ್ಕಿತು. ಈ ಹಿನ್ನೆಲೆಯಲ್ಲಿ ಅದರ ಪ್ರಕಾಶಕರು ಸಭೆಯನ್ನು ಆಯೋಜಿಸಿದ್ದರು. ಆ ಸಭೆಯ ಅಧ್ಯಕ್ಷತೆಯ ಡಿ.ಸಿ.ಪಾವಟೆ ವಹಿಸಿಕೊಂಡಿದ್ದರು. ಆ ಸಂದರ್ಭದಲ್ಲಿ ಗೆಳೆಯರ ಗುಂಪು 'ಜಯಕರ್ನಾಟಕ' ಪತ್ರಿಕೆಯವರು ಈ ಕಾರ್ಯಕ್ರಮ ನಡೆಸಬೇಕು ಎನ್ನುವ ತೀರ್ಮಾನಕ್ಕೆ ಬಂದರು. ಆ ಸಂದರ್ಭದಲ್ಲಿ ಬೇಂದ್ರೆ ಮತ್ತು ಜೋಶಿಯವರ ನಡುವೆ ಕೈ ಕೈ ಮಿಲಾಯಿಸುವ ಹಂತಕ್ಕೆ ಹೋಯಿತು. ಈ ದೃಶ್ಯ ಕಂಡ ಧಾರವಾಡದ ಅಭಿಮಾನಿಗಳ ಮುಜುಗರಪಡುವಂತಾಯಿತು ಎಂದು ಲೇಖಕರು ವಿಶ್ಲೇಷಿಸಿದ್ದಾರೆ.

ವ್ಯಕ್ತಿ ವ್ಯಕ್ತಿಗಳಲ್ಲಿ ಸ್ಪರ್ಧೆ ಈರ್ಷೆ ಕೆಲಸ ಮಾಡುತ್ತದೆ. ಈ ರೀತಿಯ ವೈಮನಸ್ಸು ಗಮನಿಸಿದರೆ ಅದರ ಪಟ್ಟಿಯೇ ಬೆಳೆಯುತ್ತಾ ಹೋಗುತ್ತದೆ. ಮುಗಳಿ-ಗೋಕಾಕ್‌ರ ಸಂಬಂಧವೂ ಕೂಡ ಸರಿ ಇರಲಿಲ್ಲ. ಹೀಗಂತ ಹಾವನೂರ ನಂಬಿರಲಿಲ್ಲ. ಎಸ್.ಆರ್.ಮಾಳಗಿಯವರು ಎರಡು ಮನಸ್ಸು ಬೆಸೆಯುವಲ್ಲಿ ಸೇತುವೆಯಾದರು. ೨೦ನೇ ಶತಮಾನದಲ್ಲಿ ಧಾರವಾಡದಲ್ಲಿ ಆಗಿಹೋದ ನಾಲ್ವರು ಧೀಮಂತ ಸಾಹಿತಿಗಳು ಶಂಬಾ ಬೇಂದ್ರೆ ಅವರಿಗಿಂತ ಒಂದು ದಶಕದ ಮುಂದೆ ಇದ್ದ ಶ್ರೀರಂಗ, ಬೆಟಗೇರಿ ಇವರನ್ನು ಉನ್ನತ ಮಟ್ಟದ ಲೇಖಕರೆಂದು ಪರಿಗಣಿಸಿದರು. ಹಾಗೆಯೇ ಮೈಸೂರು ಕಡೆಗೆ ಎ.ಆರ್.ಕೃಷ್ಣಶಾಸ್ತ್ರಿ ಮತ್ತು ಟಿ.ಎಸ್.ವೆಂಕಣ್ಣಯ್ಯ, ಡಿ.ಎಲ್.ಎನ್. ಹಾಗೂ ತೀ.ನಂ.ಶ್ರೀ ಈ ನಾಲ್ವರು ನೆನಪಿಗೆ ಬರುತ್ತಾರೆ. ಸಾಹಿತಿಗಳಲ್ಲಿ ವೈಚಾರಿಕ ಭಿನ್ನಾಭಿಪ್ರಾಯಗಳನ್ನು ಇರುವುದು ಸಹಜ. ಆದರೆ ಈ ಭಿನ್ನಭಿಪ್ರಾಯ ವೈಯಕ್ತಿಕ ನೆಲೆಯಲ್ಲಿ ಪರಿಚಯಿಸುವುದು ಎಷ್ಟು ಸರಿ? ಹಾಗೆಯೇ ರೈಸ್-ಫ್ಲೀಟ್ ನಡುವೆ ವಾದ-ವಿವಾದ ಕಂಡುಬರುತ್ತದೆ. ಇಬ್ಬರೂ ಶಾಸನ ವಿಷಯದಲ್ಲಿ ಪರಿಣಿತರು. ಆದರೆ ಶಾಸನವನ್ನು ರೈಸ್‌ರವರು ಅರ್ಥೈಸುವಲ್ಲಿ ತಪ್ಪಿದರೆ ಫ್ಲೀಟ್ ಹೆಚ್ಚಿನ ಆಧಾರ ಕೊಟ್ಟು ಸಮರ್ಥಿಸುತ್ತಿದ್ದರು. ಗೋವಿಂದ ಪೈ ಮತ್ತು ಆ.ನೇ ಉಪಾಧ್ಯಾಯರ ಕುರಿತ ಚರ್ಚೆ ಈ ಪ್ರಬಂಧದಲ್ಲಿದೆ.

೫.೩. ವಿಚಾರ ಸಾಹಿತ್ಯ

**'ಅವಿವಾಹಿತೆ'** ಶ್ರೀನಿವಾಸ ಹಾವನೂರ ಅವರು ವಿಚಾರ ಸಾಹಿತ್ಯದ ಮೂಲಕ ಎಲ್ಲಾ ವಯೋಮಾನದ ಮಹಿಳೆಯರ ಕುರಿತು ಚರ್ಚಿಸಿದ್ದಾರೆ. ೧. ಅವಿವಾಹಿತೆ ೨. ಪರಿತ್ಯಕ್ತೆ ೩. ವಿಧವೆ– ಈ ಅಂಶಗಳನ್ನು ಆಧರಿಸಿ ಚರ್ಚೆ ನಿರೂಪಿತಗೊಂಡಿದೆ. ೧. ಮದುವೆಯಾಗದೆ ಉಳಿದವಳು ಅವಿವಾಹಿತೆ ೨. ಮದುವೆಯಾಗಿ ಗಂಡನನ್ನು ಬಿಟ್ಟವಳು ಪರಿತ್ಯಕ್ತೆ ೩. ಮದುವೆಯಾಗಿ ಗಂಡನನ್ನು ಕಳೆದುಕೊಂಡವಳು ವಿಧವೆ. ಈ ರೀತಿಯ ವಿಷಯ ಅನಾವರಣಗೊಂಡಿದೆ. ಮಾನಸಿಕ ವೇದನೆ ಮತ್ತು ಸಾಮಾಜಿಕ ಅವಹೇಳನಗಳನ್ನು ಸಹಿಸಿಕೊಂಡು ಮಹಿಳೆ ಬದುಕುತ್ತಾಳೆ. ಮದುವೆಯಾಗದೆ ಉಳಿಯಲು ಹೊಣೆ ಯಾರು? ಪ್ರೇಮ ಸಂಬಂಧದಿಂದ ಮುರಿಯಿತೋ? ಅವಳ ಮಾನಸಿಕ ಸ್ಥಿತಿಯೋ ಅಥವಾ ಕೌಟುಂಬಿಕ ಸಮಸ್ಯೆಯೋ ಈ ತೆರನಾದ ವಿವರವನ್ನು ಒಳಗೊಂಡಿದೆ. ಭಾರತದ ವಿವಾಹ ವಯೋಮಿತಿ ೧೫–೪೦ ಎಂದು ಹೇಳಬಹುದು. ಈ ಮಾತನ್ನು ಶರೀರಶಾಸ್ತ್ರ ದೃಷ್ಟಿಯಿಂದಲೂ ಸಮರ್ಥಿಸಬಹುದು. ಈ ವಯೋಮಿತಿಯ ಒಳಗಿದ್ದವರನ್ನು ಅವಿವಾಹಿತೆ ಎನ್ನಬಹುದು. ಮಹಿಳೆಗೆ ಮದುವೆ ಅಗತ್ಯವೇ? ಅಥವಾ ಇಲ್ಲವೆ? ಈ ಕುರಿತ ವಿಷಯ ಚರ್ಚೆ ಅವಳಿಗೆ ಸ್ವಾಸ್ಥ್ಯ ಜೀವನ ನಡೆಸಬೇಕಾದರೆ ವಿವಾಹ ಬೇಕು. ಏಕೆಂದರೆ ದೇಹಕ್ಕೆ ಅನ್ನ ನೀರು ನಿದ್ರೆ ಎಷ್ಟು ಮುಖ್ಯವೋ ಅಷ್ಟೆ ಅವಳ ದೈಹಿಕ ಹಸಿವು ಮುಖ್ಯ. ಹೀಗಾಗಿ ಆ ಹಸಿವನ್ನು ಹತ್ತಿಕ್ಕುವುದಾದರೆ ಜೀವನ ಹಿಸುಕಿದಂತೆ ಸರಿ; ಈ ಮಾತನ್ನು ಗಮನಿಸಿದ ಮನು ಮಹರ್ಷಿ ಹೀಗೆ ಹೇಳುತ್ತಾರೆ "ಯೋಗ್ಯ ವಯಸ್ಸಿಗೆ ಬಂದ ಮಗಳನ್ನು ಮದುವೆ ಮಾಡಿಕೊಟ್ಟರೆ ತಂದೆಯ ಹೊಣೆ ಮುಗಿದಂತೆ"[೫] ಎಂದು ಹೇಳುತ್ತಾರೆ. ಈ ಎಲ್ಲಾ ವಿಚಾರಗಳು ಪ್ರಸ್ತುತ ವಿಚಾರ ಸಾಹಿತ್ಯದಲ್ಲಿ ಅಡಕವಾಗಿದೆ.

ಮಹಿಳೆಗೆ ವಿವಾಹವಿಲ್ಲದಿದ್ದರೆ ನಡೆಯುವುದಿಲ್ಲವೆ? ಅಥವಾ ಸ್ವತಂತ್ರ ಜೀವನ ನಡೆಸಲು ಸಾಧ್ಯವಿಲ್ಲವೆ? ಈ ರೀತಿಯ ಸಹಜ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ಹಾಗೆಯೇ ಮಹಿಳೆಯ ವ್ಯಕ್ತಿತ್ವದ ದುರುಪಯೋಗ ಮಾಡಿಕೊಳ್ಳುವ ಎಷ್ಟೋ ಪ್ರಸಂಗಳು ನಡೆದಿವೆ. ಸಂವಿಧಾನ ಸಮಾನ ಸ್ಥಾನಮಾನವನ್ನು ಒದಗಿಸಿಕೊಟ್ಟಿದೆ. ಆದರೆ ಸಮಾಜ ಮಾತ್ರ ನಿಂತಲ್ಲೇ ನಿಂತಿದೆ. ಈ ಬಗೆಯ ಜೀವನದಲ್ಲಿ ಸ್ವಾಸ್ಥ್ಯವಿರುವುದಿಲ್ಲ. ಕಲಿಯಲು ನೌಕರಿ ಸೇರಲು ಮದುವೆ ಅಡ್ಡ ಬರುತ್ತದೆ. ಕಲಿಯುವ ಹಂತದಲ್ಲಿ ಪ್ರೇಮ ಸಂಬಂಧ ಮುರಿದು ಬೀಳುತ್ತದೆ. ಈ ರೀತಿಯ ಪ್ರೇಮ ಸಂಬಂಧ ಪೂರ್ವಾಪರ ಆಲೋಚನೆ ಮಾಡದೆ ಬಯಸುವುದು ದುರಂತವೇ ಸರಿ. ಇಂಥ ದುರಂತ ನಿದರ್ಶನಗಳು ಪ್ರಸ್ತುತ ಪ್ರಬಂಧದಲ್ಲಿ ನಿರೂಪಿತಗೊಂಡಿವೆ.

ಹಾವನೂರ ಅವರು ಕೆಲವು ಪಾತ್ರಗಳಿಗೆ ನಿದರ್ಶನ ಕೊಟ್ಟಿದ್ದಾರೆ. ಶಾರದ, ಮೀನಾಕ್ಷಿ ಕಮಲ, ನಾಗವೇಣಿ, ರಜನಿ, ವಿಮಲ, ಸರೋಜ ಈ ಪಾತ್ರಗಳಿಗೆ ಅನುಗುಣವಾಗಿ

ಜೀವನ ಸ್ವರೂಪ ನಿರೂಪಿತಗೊಂಡಿದೆ. ಶಾರದ ವಿದ್ಯಾರ್ಥಿ ದೆಸೆಯಲ್ಲಿ ಪ್ರೇಮ ಸಂಬಂಧಕ್ಕೆ ಒಳಗಾಗಿದ್ದಳು. ಈ ಸಂಬಂಧ ಮನೆಯವರಿಗೆ ತಿಳಿದಿರಲಿಲ್ಲ. ದಿನ ಕಳೆದಂತೆ ಪ್ರೇಮದ ರಹಸ್ಯ ಊರ ಜನರ ಮೂಲಕ ಬಹಿರಂಗವಾಯಿತು. ಇದರಿಂದ ಪ್ರೇಮ ಸಂಬಂಧ ಮುರಿದುಬಿತ್ತು. ಹೀಗಾಗಿ ಮಾನಸಿಕವಾಗಿ ವಿಚಲಿತಳಾದಳು. ಮೀನಾಕ್ಷಿಗೆ ಕಲಿಯುವ ಹಂತದಲ್ಲಿ ಪ್ರೇಮ ಸಂಬಂಧ ಬೆಳೆದಿತ್ತು. ಆ ಪ್ರೇಮ ಪತ್ರದಲ್ಲಿ ಈ ರೀತಿ ಇತ್ತು. ನಿನ್ನ ಸೌಂದರ್ಯಕ್ಕೆ ಮನಸೋತಿದ್ದೇನೆ. ನೀನು ಒಪ್ಪಿದರೆ ನಿನ್ನ ತಂದೆಯೊಂದಿಗೆ ಮಾತನಾಡುತ್ತೇನೆ. ನಂತರ ಮದುವೆ ಪ್ರಸ್ತಾಪ ಮಾಡುತ್ತೇನೆ ಎಂದು ಪತ್ರದಲ್ಲಿ ಬರೆದಿದ್ದನು. ಈ ಮಾತನ್ನು ಗಮನಿಸಿದ ಅವಳು ದೇಹವನ್ನು ಒಪ್ಪಿಸಿದಳು. ಅದರ ಪ್ರತಿಫಲವೇ ಗರ್ಭವತಿಯಾದಳು. ಈ ಪರಿಸ್ಥಿತಿಯನ್ನು ನಿಭಾಯಿಸದೇ ಬಾವಿಗೆ ಹಾರಿ ಪ್ರಾಣಬಿಟ್ಟಳು. ಮಹಿಳೆಗೆ ಈ ರೀತಿಯ ವಾಮ ಸಂಬಂಧ ಸುಖಕ್ಕಿಂತ ಕಷ್ಟವೇ ಹೆಚ್ಚು; ಹಾಗೆಯೇ ಸಮಾಧಾನಕ್ಕಿಂತ ವಿಷಾದವೇ ಹೆಚ್ಚು ಎನ್ನುವುದು ವೇದ್ಯವಾಗುತ್ತದೆ.

ಈ ಮೇಲಿನ ದುರಂತ ಘಟನೆಗಳನ್ನು ಆಧರಿಸಿ ಪುರುಷನಿಗಿಂತ ಮಹಿಳೆಗೆ ಪ್ರತ್ಯೇಕ ಶಿಕ್ಷಣ ಬೇಕು ಎಂಬುದಾಗಿ ಶಿಕ್ಷಣತಜ್ಞರು ಅಭಿಪ್ರಾಯ ಅಭಿವ್ಯಕ್ತಪಡಿಸುತ್ತಾರೆ. ಸಾಮಾನ್ಯವಾಗಿ ಮಹಿಳೆಗೆ ಎರಡರಿಂದ ಮೂರು ಭಾಷೆಯ ಪರಿಚಯವಿರಬೇಕು, ಗೃಹಿಣಿಯರ ಜೀವನದಲ್ಲಿ ಎಲ್ಲಾ ರೀತಿಯ ವಿದ್ಯೆ ಕಲಿಸಬೇಕು, ಗೃಹ ವಿಜ್ಞಾನ, ಕೈ ಕೆಲಸ, ಕಸೂತಿ, ಹೆಣಿಕೆ, ಹೊಲಿಗೆ, ತೋಟಗಾರಿಕೆ ಶಿಶುಪಾಲನೆ, ವೈದ್ಯಕೀಯ ಇನ್ನು ಮುಂತಾದ ವಿಷಯಗಳನ್ನು ಕಲಿಸುವ ವ್ಯವಸ್ಥೆ ಕಲ್ಪಿಸಬೇಕು. ಅಲ್ಲದೆ ಹಾಡುಗಾರಿಕೆ, ವಾದ್ಯ ವಾದನ, ಚಿತ್ರಕಲೆ ಈ ರೀತಿಯ ಅಭ್ಯಾಸ ಮೈಗೂಡಿಸಿಕೊಳ್ಳಬೇಕು. ಬಿಟ್ಟು ದಾಂಪತ್ಯದ ಮಹತ್ವದ ಸಂಗತಿಗಳು ವಿಷಯ ಚರ್ಚೆಗೆ ಒಳಪಟ್ಟಿರುವುದನ್ನು ಕಾಣಬಹುದು.

**೫.೪. ಜೀವನ ಚರಿತ್ರೆ**

ಶ್ರೀನಿವಾಸ ಹಾವನೂರ ಅವರು ಕನ್ನಡ ನಾಡು ಭಾಷೆ ಸಾಹಿತ್ಯ ಹೀಗೆ ಹತ್ತು ಹಲವು ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದ ಮತ್ತು ವಿಶೇಷ ಸಾಧನೆ ಮಾಡಿದ ಮಹನೀಯರ ಬದುಕಿನ ಚಿತ್ರಣವನ್ನು ಚರಿತ್ರೆಯ ರೂಪದಲ್ಲಿ ನೀಡಿದ್ದಾರೆ. ಗಳಗನಾಥ, ಬಿ.ಜಿ. ಚಿಮ್ಮಲಗಿಯವರು ಮತ್ತು ಫರ್ಡಿನಾಂಡ್ ಕಿಟೆಲ್ ಇವರ ಚರಿತ್ರೆಗಳನ್ನು ಔಚಿತ್ಯಪೂರ್ಣವಾಗಿ ಕಟ್ಟಿಕೊಟ್ಟಿದ್ದಾರೆ.

**'ಗಳಗನಾಥ ಮಾಸ್ತರು'** ಹಾವನೂರ ಅವರು ಗಳಗನಾಥರ ಬದುಕಿನ ವಿಕಾಸ ಘಟ್ಟವನ್ನು ಔಚಿತ್ಯಪೂರ್ಣವಾಗಿ ನಿರೂಪಿಸಿದ್ದಾರೆ. ಆದರ್ಶ ಶಿಕ್ಷಕ, ಶೇಷಾಚಲ ಶಿಷ್ಯ ವೈಭವ, ಗ್ರಂಥೋದ್ಯಮ, ಸಂಚಾರಿ ಮಾರಾಟಗಾರರು ಹೀಗೆ ವರ್ಗೀಕರಿಸುವುದರ ಮೂಲಕ ಸಮಗ್ರ ಚಿತ್ರಣ ನೀಡಿದ್ದಾರೆ. ಗಳಗನಾಥರು ಪ್ರಾಥಮಿಕ ಪ್ರೌಢಶಿಕ್ಷಣ ಮತ್ತು ಕಾಲೇಜು

ಶಿಕ್ಷಣ ಪಡೆದು ಶಿಕ್ಷಕ ವೃತ್ತಿಯ ಬದುಕನ್ನು ಆರಂಭಿಸಿದರು. ಹಾಗೆಯೇ ಜೀವು ಬಾಯಿಯೊಂದಿಗೆ ವಿವಾಹವಾಗಿ ವೈವಾಹಿಕ ಬದುಕನ್ನು ಪ್ರಾರಂಭಿಸಿದರು. ಅವರ ವೃತ್ತಿಯನ್ನು ಮುಂಡರಗಿಯಿಂದ ಆರಂಭಿಸಿ ಉಪ್ಪಿನ ಬೇಟಗೇರಿ, ಬಂಕಾಪುರ, ನರೇಂದ್ರ ಮತ್ತು ಗುತ್ತಲದಲ್ಲಿ ಮಾಸ್ತರಿಕೆ ಮಾಡಿದರು. ಕನ್ನಡ ಭಾಷೆಗೆ ಅಸ್ತಿತ್ವವಿಲ್ಲದ ಕಾಲದಲ್ಲಿ ಕನ್ನಡ ಸಂಘ ಸ್ಥಾಪಿಸಿ ಭಾಷಣ-ಲೇಖನ-ವಿವಿಧ ಸ್ಪರ್ಧೆಗಳನ್ನು ಪ್ರತಿ ವರ್ಷವೂ ನಡೆಸುತ್ತಿದ್ದರು. ಹಾವನೂರ ಅವರು ಗಳಗನಾಥ ಮತ್ತು ಶಿಷ್ಯವರ್ಗ ಕುರಿತು ಮಹತ್ವದ ಚರ್ಚೆ ಮಾಡಿದ್ದಾರೆ. ಗಳಗನಾಥರು ಸುಭೋಧನ ಚಂದ್ರಿಕೆ ಮಾಸ ಪತ್ರಿಕೆಗಳನ್ನು ಸದ್ಗುರುನಾಥ ಕೃಪೆಯಿಂದ ಆನಂದವನದಲ್ಲಿ ಆರಂಭಿಸಿದರು. ಪತ್ರಿಕೆ ಹಾಗೂ ಪಾಠಶಾಲೆಗಳ ಮೂಲಕ ಆನಂದವನವು ಸಂಭ್ರಮದ ಕರ್ಮಭೂಮಿಯಾಯಿತು. 'ಸುರಸ ಗ್ರಂಥಮಾಲೆ' ಎಂಬ ಹೆಸರಿನಿಂದ ಆರಂಭಿಸಿ ಬಿಡಿ ಲೇಖನ ಮಾಡಿದರು. ಸಮಕಾಲೀನ ರಾಜಕೀಯ ಪ್ರಜ್ಞೆ ದೇಶದಲ್ಲಿ ಸ್ವರಾಜ್ಯ ಸ್ಥಾಪನೆ, ಗಾಂಧೀಜಿಯರ ಅಸಹಕಾರ ಚಳುವಳಿ ಕಾರಾಗೃಹ ವಾಸ, ಹರಿಜನೋದ್ಧಾರ ವಿಚಾರಗಳು ಜನತೆಯ ಗಮನ ಸೆಳೆದವು. ಮಾಧವಾಚಾರ್ಯರ ಉಪದೇಶದ ಮೂಲಕ ಸ್ವತಂತ್ರ ವಿಚಾರ ಸರಣಿಯನ್ನು ವ್ಯಕ್ತಪಡಿಸಿದ್ದುದರ ಬಗೆಗೆ ಹಾವನೂರ ಅವರು ಚರ್ಚಿಸಿದ್ದಾರೆ.

**'ಫರ್ಡಿನಾಂಡ್ ಕಿಟೆಲ್'** ಶ್ರೀನಿವಾಸ ಹಾವನೂರ ಅವರು ಕಿಟೆಲ್‌ರವರ ಜೀವನ ಮತ್ತು ಸಾಹಿತ್ಯದ ಕೃಷಿ-ಸಾಧನೆ ಕುರಿತು ವಿಷಯ ನಿರೂಪಿಸಿದ್ದಾರೆ. ಬಾಸೆಲ್‌ನಿಂದ ಬಂದ ಮಿಶನರಿಗಳಲ್ಲಿ ಕಿಟೆಲ್‌ರು ಒಬ್ಬರು. ಕನ್ನಡ ನಾಡಿಗೆ ಬಂದ ಮಿಶನರಿಗಳು ಮೊಗ್ಲಿಂಗ್, ವೈಗಲ್ ವುರ್ತ್ ಕ್ರಿ.ಶ. ೧೮೫೩ರಲ್ಲಿ ಮಂಗಳೂರು, ಧಾರವಾಡ, ಮಡಿಕೇರಿಗಳಲ್ಲಿ ಕಾರ್ಯ ನಿರ್ವಹಿಸಿದರು. ಕೆಲವು ದಿನ ಧಾರವಾಡಕ್ಕೆ ಶಿಕ್ಷಣದ ಕೆಲಸಕ್ಕೆ ವರ್ಗಾಯಿಸಲ್ಪಟ್ಟಿದ್ದರು. ನಂತರದಲ್ಲಿ ಮಂಗಳೂರಿನಲ್ಲಿ ದೈವಜ್ಞಾನ ಶಿಕ್ಷಕರಾಗಿ ಕಾರ್ಯನಿರ್ವಹಿಸಿದರು. ಹಳೆಗನ್ನಡ ಗ್ರಂಥಸಂಪಾದನೆ ಕಾರ್ಯ, ಚಲನೆ ಮತ್ತು ಟಿಪ್ಪಣಿ ರೂಪದಲ್ಲಿ Indian Antiquaryದಲ್ಲಿಯೂ ಲೇಖನ ಬರೆಯಲು ತೊಡಗಿದರು. ತತ್ವಜ್ಞಾನವನ್ನು ಜರ್ಮನ್ ಭಾಷೆಯಲ್ಲಿ ಬರೆದರು.

ಕನ್ನಡ ನಿಘಂಟು ರಚನೆ, ಕನ್ನಡ ಇಂಗ್ಲಿಷ್ ಕೋಶವು ಪ್ರಕಟವಾದಾಗ ಜರ್ಮನ್ ಟ್ಯುಬಿಂಗನ್ ವಿಶ್ವವಿದ್ಯಾಲಯ ಅವರಿಗೆ ಗೌರವ ಡಾಕ್ಟರೇಟ್ ನೀಡಿ ಗೌರವಿಸಿತು. ಅವರು ಸ್ವದೇಶಕ್ಕೆ ತೆರಳಿ ಅಲ್ಲಿ ಕನ್ನಡ ಸೇವೆ ಮಾಡುತ್ತಿದ್ದರು. ಬೈಬಲ್ ಭಾಷೆ ಸುಧಾರಣೆ ಮತ್ತು ಕನ್ನಡ ವ್ಯಾಕರಣ ಹಾಗೂ ಮುದ್ರಣಕ್ಕೆ ಸಂಬಂಧಿಸಿದಂತೆ ಕೆಲಸ ಮಾಡಿದರು. ಇವರಿಗೆ ಧರ್ಮ ನಿಷ್ಠೆಯ ಆಳವಾದ ಜ್ಞಾನವಿತ್ತು. ಕಿಟೆಲ್ ಭಾಷಾ ಆಸಕ್ತರು; ಕನ್ನಡ ನುಡಿ ಮತ್ತು ಕನ್ನಡ ಶಬ್ಧ ಭಂಡಾರವನ್ನು ಕರಗತ ಮಾಡಿಕೊಂಡಿದ್ದರು. ಕಾವ್ಯದ ಹಲವಾರು ಹಸ್ತಪ್ರತಿಗಳನ್ನು ಹುಡುಕುತ್ತಿದ್ದರು. ಅಲ್ಲದೆ ಗ್ರಂಥ ಸಂಪಾದನ ಶಾಸ್ತ್ರದ ಮೊದಲ ಹೆಜ್ಜೆ ರೂಪಿಸಿದರು. ಶಾಲಾ ಪಠ್ಯ ಹಳೆಗನ್ನಡ ಕಾವ್ಯ ಸಂಪಾದನೆ, ಹಿಂದೂ ಧರ್ಮದ ವಿವೇಚನೆ, ಕ್ರಿಸ್ತನ

ಚರಿತ್ರೆ, ಕ್ರೈಸ್ತ ಗದ್ಯ ಬರವಣಿಗೆ, ಕನ್ನಡ ಇಂಗ್ಲಿಷ್ ಕೋಶ ಬೈಬಲ್ ಅನುವಾದ, ಕನ್ನಡ ಭಾಷೆ, ವ್ಯಾಕರಣ, ಶಾಲಾ ಪಠ್ಯ ಮತ್ತು ಇತಿಹಾಸ ವಿಷಯಗಳು ಇಂಗ್ಲಿಷನಲ್ಲಿದ್ದವು ಅವುಗಳನ್ನು ಕನ್ನಡಕ್ಕೆ ತರ್ಜಮೆ ಮಾಡಿದರು.

ಕಾವ್ಯಮಂಜರಿ, ಕನ್ನಡ ಪಂಚತಂತ್ರದ ಕಥೆಗಳನ್ನು ಶಾಲಾ ಮಕ್ಕಳ ಹಿತದೃಷ್ಟಿಯಿಂದ ರಚಿಸಿದರು. ಶಬ್ದಮಣಿದರ್ಪಣವನ್ನು ಸಂಪಾದಿಸಿದರು. ಅದನ್ನು ಗ್ಯಾರೇಟ್ ಪ್ರಕಟಿಸಿದರು. ಕನ್ನಡ ಸಾಹಿತ್ಯ ಚರಿತ್ರೆಯ ಸಂಪಾದನ ಕೆಲಸಕ್ಕೆ ಮೊದಲ ಬಾರಿಗೆ ತೊಡಗಿಕೊಂಡರು. ಹಾಗೆಯೇ ವ್ಯಾಕರಣ ಛಂದಸ್ಸು ಪರಿಚಯಿಸಿದರು. ಕೇಶಿರಾಜ, ನಾಗವರ್ಮ, ರುದ್ರಭಟ್ಟ ಇವರನ್ನು ಕವಿಗಳ ಪಟ್ಟಿಯಲ್ಲಿ ಸೇರಿಸಿದರು. ಶೈವ ವೀರಶೈವ, ವೈಷ್ಣವ, ಜೈನ ಧರ್ಮಗಳನ್ನು ಒಂದೊಂದು ಕ್ರಮದಲ್ಲಿ ಪರಿಚಯಿಸಿದರು. ಮೌಲಿಕ ವಿಚಾರಗಳಿಂದ ಲೇಖನಗಳನ್ನು ಬರೆದರು. ಮಿಶನರಿಗಳು ಮತ್ತು ಹಿಂದೂ ಕೃತಿಗಳನ್ನು ಅಧ್ಯಯನ ಮಾಡಿ ದೋಷ ಹುಡುಕಿ ಕ್ರೈಸ್ತ ಧರ್ಮದ ಮೇಲ್ಮೈಯನ್ನು ಎತ್ತಿ ತೋರಿಸಿದರು.

**"ಬಿ.ಜಿ.ಚಿಮ್ಮಲಗಿ"** ಹೈದ್ರಾಬಾದ್ ಕರ್ನಾಟಕ ಮತ್ತು ಹೈದ್ರಾಬಾದ್ ನಗರದಲ್ಲಿ ಆದಂತಹ ಕನ್ನಡ ಪುನರುಜ್ಜೀವನ ಮತ್ತು ಬೆಳವಣಿಗೆಯಲ್ಲಿ ಚಿಮ್ಮಲಗಿಯವರ ಪಾತ್ರ ಮಹತ್ವದ್ದು. ನಾಡು, ನುಡಿ, ಸಂಸ್ಕೃತಿ ಉಳಿಸಲು ಹೋರಾಟ ಮಾಡಿದವರನ್ನು ಚರಿತ್ರೆಯಲ್ಲಿ ಉಳಿಯುವಂತೆ ಮಾಡಿದರು. ಈ ರೀತಿಯ ಮಹತ್ವದ ಸೇವಾ ಮನೋಭಾವನೆಯಿಂದ ಕಾರ್ಯನಿರ್ವಹಿಸಿದ ಚಿಮ್ಮಲಗಿಯವರ ಜೀವನ ಚರಿತ್ರೆಯನ್ನು ಯುವ ಪೀಳಿಗೆಗೆ ಪರಿಚಯಿಸುವುದು ಹಾವನೂರ ಉದ್ದೇಶವಾಗಿತ್ತು. ಕನ್ನಡ ಪರಿಸರ ಸೃಷ್ಟಿಸಲು ಅವರು ನೃಪತುಂಗ ಶಾಲೆಯನ್ನು ವೇದಿಕೆಯನ್ನಾಗಿ ಮಾಡಿಕೊಂಡಿದ್ದರು. ಅಲ್ಲದೆ ಗಣೇಶೋತ್ಸವ, ನಾಡಹಬ್ಬ ಮುಂತಾದ ಕನ್ನಡದ ಕೆಲಸಗಳೇ ಹೆಚ್ಚು ಜೀವಂತ ಪಡೆಯಲು ಸಾಧ್ಯವಾಯಿತು. ಹೀಗಾಗಿ ಕನ್ನಡ ಚಟುವಟಿಕೆಯ ಕೇಂದ್ರವೆಂದರೆ ಚಿಮ್ಮಲಗಿಯವರು ಎಂದೇ ಜನಜನಿತರಾಗಿದ್ದರು.

ಹೈದ್ರಾಬಾದ್ ಭಾಗದ ಕನ್ನಡಿಗರ ಕಾರ್ಯಗಳಿಗೆ ನೃಪತುಂಗ ಶಾಲೆ ಸಂಪರ್ಕ ಕೇಂದ್ರವಾಗಿತ್ತು. ಮರಾಠಿ ಖ್ಯಾತ ನಾಟಕಕಾರರಾದ ಗಡಕರಿ ಅವರ ಭಾವ ಬಂಧನ ನಾಟಕದಿಂದ ವೈಂ.ಎಂ.ಸಿ.ಎ.ದಲ್ಲಿ ಪ್ರಸ್ತುತಪಡಿಸಿದ "ನಾಟಕದಲ್ಲಿ ಕನ್ನಡ ಪತ್ನಿ ಮಹಾರಾಷ್ಟ್ರಿಯ ಪತಿ (ಮರಾಠಿ) ಆತ ಕನ್ನಡ ಮಾತನಾಡಿದರೆ ಗಡಿಗೆಯಲ್ಲಿ ಹರಳು ಹಾಕಿ ಅಲುಗಾಡಿಸಿದಂತೆ ಶಬ್ದವಾಗುತ್ತದೆ ಎಂದು ತನ್ನ ಪತ್ನಿಗೆ ಹೇಳುವ ಮೂಲಕ ಕನ್ನಡಕ್ಕೆ ಉಪವಾಸ ಮಾಡುತ್ತಾನೆ."[೧೦] ನೃಪತುಂಗ ಶಾಲೆಯಲ್ಲಿ ಹೈದ್ರಾಬಾದಿನಲ್ಲಿ ಕನ್ನಡಿಗರ ಹೆಸರೇ ಇಲ್ಲದ ಕಾಲಘಟ್ಟದಲ್ಲಿ ನೃಪತುಂಗ ಶಾಲೆಯಲ್ಲಿ ಕನ್ನಡ ಸಾಹಿತ್ಯ ಕಾರ್ಯಚಟುವಟಿಕೆ ಏರ್ಪಡಿಸುವುದರ ಮೂಲಕ ಕನ್ನಡ ಕೆಲಸಕ್ಕೆ ಚಿಮ್ಮಲಗಿಯವರು ಚಾಲನೆ ಕೊಟ್ಟರು. ಆ ಮೂಲಕ ಗಡಿನಾಡಲ್ಲಿ ಕನ್ನಡ ಬೆಳೆಸಿ ಉಳಿಸಲು ಸಾಧ್ಯವಾಯಿತು. ಕನ್ನಡಿಗರಲ್ಲಿ ಜಾಗೃತಿ ಉಂಟಾಗುವಂತೆ ಮಾಡಿದ ಶ್ರೇಯಸ್ಸು

ಚಿಮ್ಮಲಗಿಯವರಿಗೆ ಸಲ್ಲುತ್ತದೆ. ಭಾಷೆ ಮತ್ತು ಭಾಷಾ ಸಂಸ್ಥೆಗಳ ಮೂಲಕ ರಾಜಕೀಯ ವೇದಿಕೆ ಲಾಭ ಸಿಗುವುದೆಂದು ಖಾತ್ರಿಯಾದ ಮೇಲೆ ರಾಜಕೀಯ ಮುಖಂಡರು ಇಂಥ ಸಂಸ್ಥೆಗಳಿಗೆ ಮಾನ್ಯತೆ ಕೊಡಲು ಮುಂದಾದರು.

**೫.೫. ವಿಮರ್ಶೆ**

**'ಕನ್ನಡ ಸಾಹಿತ್ಯ ದರ್ಶನ'** (೧೯೫೬) ಕನ್ನಡ ಸಾಹಿತ್ಯ ವಿಕಾಸ ಹೆಜ್ಜೆ ಬದಲಾಗುತ್ತಿರುವ ಕಾಲದಲ್ಲಿ ಈ ಕನ್ನಡ ಸಾಹಿತ್ಯ ದರ್ಶನ ತನ್ನದೇಯಾದ ಸ್ವರೂಪ ಕೊಡುವಲ್ಲಿ ಮಹತ್ವದ ಪಾತ್ರ ನಿರ್ವಹಿಸುತ್ತದೆ. ಕನ್ನಡ ಸಾಹಿತ್ಯ ಕೃಷಿಯು ನಡೆದು ಬಂದ ದಾರಿಯನ್ನು ಹೊರಳಿ ನೋಡಿದರೆ ಶಾಸ್ತ್ರೀಯವಾದ ರೀತಿಯಲ್ಲಿ ಕೃತಿಗಳ ಪ್ರಕಟಣೆ ಸಾಧ್ಯವಾಯಿತು. ಈ ಹಿನ್ನೆಲೆಯಲ್ಲಿ ೧೯೫೬ರಲ್ಲಿ ಪ್ರಕಟವಾದ ಎಲ್ಲಾ ಕನ್ನಡ ಪುಸ್ತಕಗಳ ವಿವರಗಳು ಹತ್ತಾರು ಕಡೆಯಿಂದ ಕ್ರೋಢೀಕರಿಸಲಾದ ಮತ್ತು ಅವುಗಳನ್ನು ಶಾಸ್ತ್ರೀಯವಾದ ರೀತಿಯಲ್ಲಿ ವರ್ಗೀಕರಿಸಿ ಅಕಾರಾದಿಯಾಗಿ ಪುಸ್ತಕಗಳ ಹೆಸರು ವಿವರಗಳು ಪ್ರಸ್ತಾಪಗೊಂಡಿವೆ. ಈ ಗ್ರಂಥ ಸಂಗ್ರಹದಲ್ಲಿ ಪುನರ್‌ಮುದ್ರಣ ಪುಸ್ತಕಗಳು ಅತಿ ಸಣ್ಣ ಪುಸ್ತಕಗಳನ್ನು ಹೊರತುಪಡಿಸಿ ಅದರಂತೆ ಪತ್ತೆದಾರಿ ಕಾದಂಬರಿಗಳು ಮತ್ತು ಅಶ್ಲೀಲವಿರುವ ಕೃತಿಗಳು ಸೇರಿಲ್ಲ. ಉಳಿದ ಎಲ್ಲಾ ಕೃತಿಗಳನ್ನು ಒಳಗೊಂಡಿದೆ.

ಕ್ರಿ.ಶ. ೧೯೫೬ರ ಕಾಲಘಟ್ಟದಲ್ಲಿ ೪೫೦ ಕೃತಿಗಳು ಪ್ರಕಟವಾಗಿವೆ. ಅದರ ಹಿಂದಿನ ವರ್ಷಕ್ಕಿಂತ ಸಂಖ್ಯೆ ಸ್ವಲ್ಪ ಹೆಚ್ಚಿದೆ. ಕನ್ನಡ ಸಾಹಿತ್ಯ ರಚನೆಯ ೩೦೦ ಕೃತಿಗಳು ಮಾತ್ರ ಪರಿಚಿತಗೊಂಡಿವೆ. ೭೦ ತರ್ಜುಮೆ ಗ್ರಂಥಗಳು, ಇಂಗ್ಲಿಷ್ ೨೪ ಸಂಸ್ಕೃತ ೧೩ ಬಂಗಾಲಿ ೧೧, ಹಿಂದಿ ೦೭, ಪ್ರೆಂಚ್ ೫ ಈ ರೀತಿಯ ವಿವರವಾದ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಕಾದಂಬರಿ ಮತ್ತು ಪ್ರಸಿದ್ಧ ಇತಿಹಾಸಕಾರರ ಜೀವನದ ಕಥೆಗಳು ಪ್ರಸ್ತಾಪಗೊಂಡಿವೆ. ಈ ಸಂದರ್ಭದಲ್ಲಿ ಸಂಭಾವನ ಗ್ರಂಥಗಳು ಹೆಚ್ಚು ಪರಿಚಿತಗೊಂಡಿವೆ. ಕ್ರಿ.ಶ. ೧೯೫೫ರವರೆಗೆ ಬಿಡುಗಡೆಗೊಂಡ ಸನ್ಮಾನ ಮತ್ತು ಸ್ಮಾರಕ ಗ್ರಂಥಗಳು ಬಂದವು. ಬಹಳ ವಿಶೇಷವೆಂದರೆ ಹಳೆಗನ್ನಡ ಕೃತಿ ಮತ್ತು ವಿಮರ್ಶೆಗಳು ಪ್ರಕಟಗೊಂಡವು. ಹಳೆಗನ್ನಡ ಕೃತಿ ಮತ್ತು ವಿಮರ್ಶೆಗಳು ಹೆಚ್ಚಾಗಿ ಕಂಡುಬರಲಿಲ್ಲ. ಹೊಸಗನ್ನಡ ಕವನಗಳು ನವ್ಯ ಕವಿತೆ ಜನಪದಗೀತೆ, ಆಧ್ಯಾತ್ಮಿಕತೆ, ಖಂಡಕಾವ್ಯ ಈ ರೀತಿಯ ಕಾವ್ಯ ಪ್ರಕಟವಾದವು. ಸಾಮಾಜಿಕ ಮತ್ತು ಏಕಾಂಕ ನಾಟಕಗಳು ಹೆಚ್ಚು ಪ್ರಕಾಶಿತಗೊಂಡಿವೆ. ಸಣ್ಣಕಥೆ, ನಾಟಕ, ಕಥಾನಕ ಮತ್ತು ಪೌರಾಣಿಕ ವ್ಯಕ್ತಿಗಳ ಕಥೆ ಪ್ರತ್ಯೇಕವಾಗಿ ಬಂದಿವೆ. ಆಧುನಿಕ ಸಾಹಿತ್ಯದ ವಿಮರ್ಶೆ ಮಾಡುವ ಪರಿಸರ ಕಲ್ಪಿಸಿಕೊಟ್ಟರು. ಪ್ರಬಂಧ ಮತ್ತು ಲಲಿತ ಪ್ರಬಂಧ ಕೃತಿಗಳು ಪ್ರಕಟಗೊಂಡ ಸಂಖ್ಯೆ ಬಹಳ ವಿರಳವಾಗಿತ್ತು. ಜೀವನ ಚರಿತ್ರೆ ಅವುಗಳಲ್ಲಿ ಧಾರ್ಮಿಕ ಚರಿತ್ರೆಗೆ ಸಂಬಂಧಿಸಿದ ಕೃತಿಗಳು ಹೆಚ್ಚು ಪರಿಚಿತಗೊಂಡವು. ಅಲ್ಲದೆ ಧರ್ಮ ಮತ್ತು ತತ್ವಜ್ಞಾನಕ್ಕೆ ಸಂಬಂಧಿಸಿದ ಕೃತಿಗಳು ತರ್ಜುಮೆಕೊಂಡಿವೆ.

**'ವಾದಿರಾಜರ ತೀರ್ಥ ಪ್ರಬಂಧ'** ಈ ಕೃತಿಯು ಕನ್ನಡ ಸಾಹಿತ್ಯ ಇತಿಹಾಸದಲ್ಲಿ ತನ್ನದೇಯಾದ ವಿಶೇಷತೆ ಹೊಂದಿದೆ. ಶ್ರೀವಾದಿರಾಜರು ಶ್ರೀವ್ಯಾಸರಾಯರ ಪ್ರಮುಖ ಶಿಷ್ಯರಲ್ಲಿ ಒಬ್ಬರಾಗಿದ್ದರು. ಶ್ರೇಷ್ಠ ಧರ್ಮ ತಜ್ಞರಾಗಿರುವಂತೆ ಅವರು ಉತ್ತಮ ಕವಿಗಳಾಗಿದ್ದರು. ಅದಕ್ಕೆ ಪುರಾವೆಯಾಗಿ 'ತೀರ್ಥ ಪ್ರಬಂಧ' ಕೃತಿಯು ಕಾವ್ಯಾಂಶಗಳನ್ನು ಎತ್ತಿ ತೋರಿಸಿದೆ. ಈ ಕೃತಿಯಲ್ಲಿ ನದಿಗಳು ಸಂಗಮ ಕ್ಷೇತ್ರದ ದೇವತೆಗಳ ಬಗ್ಗೆ ಆ ಮಾಹಿತಿಗಳಿವೆ. ಈ ಕೃತಿಯಲ್ಲಿ ಬರುವ ಕಾವ್ಯಗಳ ವೈಶಿಷ್ಟ್ಯತೆ ಎಂದರೆ ಪದಲಾಲಿತ್ಯ. ಪ್ರತಿ ಶ್ಲೋಕದ ಪ್ರಾಸ, ಅನುಪ್ರಾಸ. ವ್ಯತ್ಯಾಸ ಪ್ರಾಸ ಹೀಗೆ ಯಥೇಚ್ಚವಾಗಿ ಬಳಸಿಕೊಂಡಿದ್ದಾರೆ. ೨೩೫ ಶ್ಲೋಕಗಳಲ್ಲಿ ಭಾರತದ ೧೮-೨೦ ನದಿಗಳು ಮತ್ತು ೬೦ಕ್ಕಿಂತ ಹೆಚ್ಚು ಸಂಗಮ ಸ್ಥಳಗಳು ಉಲ್ಲೇಖಗೊಂಡಿವೆ. ಎಲ್ಲಿಯೂ ಅನಾವಶ್ಯಕ ವಿಚಾರಗಳನ್ನು ಬಳಸಿಲ್ಲ. ಹಾಗೆಯೇ ವಿಷಯ ಔಚಿತ್ಯಕ್ಕೆ ಅನುಗುಣವಾಗಿ ಬಳಕೆಯಾಗಿದೆ. ಯಾತ್ರಾಸ್ಥಳ ದೃಷ್ಟಿಯಿಂದ ಪಶ್ಚಿಮ ಪೂರ್ವ ಮತ್ತು ದಕ್ಷಿಣ ಎಂದು ವರ್ಗೀಕರಿಸಿಕೊಂಡಿದ್ದಾರೆ. ಮಹಾಭಾರತದಲ್ಲಿ ಅರ್ಜುನ ತೀರ್ಥಯಾತ್ರೆ ಹೊರಟ ಕೆಲವು ಸ್ಥಳಗಳು ಮತ್ತು ನದಿಗಳ ವರ್ಣನೆ ಬಂದಿವೆ. ಹೀಗಾಗಿ ಕೃತಿ ಧಾರ್ಮಿಕ ಶ್ರದ್ಧೆ ಹಾಗೂ ದೈವಭಕ್ತಿಗೆ ಪ್ರೇರಣೆಯಾಗಿದೆ.

**'ಗೋವಿಂದ ವಾಙ್ಮಯ ದರ್ಶನ'** ಪೈಯವರ ಐದು ದಶಕಗಳ ಕಾಲದ ಅಧ್ಯಯನದ ಪ್ರತಿಫಲವಾಗಿ ನೂರಾರು ಕೃತಿರೂಪದಲ್ಲಿ ಪ್ರಕಟವಾಗಲು ಸಾಧ್ಯವಾಯಿತು. ಪೈಯವರು ಪ್ರಚಲಿತವಿರುವ ವಿಷಯಗಳ ಕುರಿತು ಪತ್ರಿಕೆಯ ಮೂಲಕ ಬರೆದರು. ಪತ್ರಗಳ ಗಿಳಿವಿಂಡು ಮೂರು ಉಪನ್ಯಾಸ, ಹೆಬ್ಬೆರಳು ಈ ಪತ್ರಿಕೆಗಳ ಮೂಲಕ ಮತ್ತು ಉಳಿದವುಗಳನ್ನು ಸಂಚಿಕೆ ಮತ್ತು ವಿಶೇಷ ಸಂಪುಟಗಳಲ್ಲಿ ಬಿಡಿ-ಬಿಡಿ ಲೇಖನದಲ್ಲಿ ಪ್ರಕಟಗೊಂಡವು. ಹಾವನೂರ ಅವರು ಗೋವಿಂದ ಪೈಯವರ ಬಳಿ ಹೋಗಿ ನಿಮ್ಮ ಕೃತಿಗಳ ಸಂಪೂರ್ಣ ಪರಿಚಯ ಮಾಡಿಕೊಡುವ ಉದ್ದೇಶ ನನ್ನದಾಗಿದೆ ಎಂದು ಹೇಳಿದರು. ಅದಕ್ಕೆ ತಮ್ಮ ಅನುಮತಿ ಮತ್ತು ಸಹಕಾರ ಬೇಕೆಂದು ಕೇಳಿದರು. ಅದಕ್ಕೆ ಅವರು ಒಪ್ಪಲಿಲ್ಲ. ಅಲ್ಲದೆ ನಾನು ತೀರಿದ ಬಳಿಕ ಏನಾದರೂ ಮಾಡಿಕೊಳ್ಳಿ ಎಂದರು.

ಶ್ರೀನಿವಾಸ ಹಾವನೂರ ಅವರು ಗೋವಿಂದ ಪೈಯವರ ಕೃತಿಗಳ ವಿವರವಾದ ಯೋಜನೆ ಹಾಕಿಕೊಂಡಿದ್ದರು. ೧ ಪೈಯವರ ಸಾಹಿತ್ಯ ಸಮೀಕ್ಷೆ ೨. ಅವರ ಬರಹದ ಪಟ್ಟಿ ಮತ್ತು ಕೃತಿಗಳ ಪರಿಚಯ ೩. ಪೈಯವರ ವಿಷಯ ಶೀರ್ಷಿಕೆ ಪ್ರಕಟನೆ ಸೂಚಿ, ಮೌಲ್ಯಯುತ ಬರಹ, ೩ನೇ ಭಾಗದಲ್ಲಿ ಕೃತಿಗಳ ಇತಿಹಾಸ ಧರ್ಮ, ತತ್ವಜ್ಞಾನ, ಹಳೆಗನ್ನಡ, ಕವಿ, ಕಾವ್ಯ ವಿಚಾರ, ನಾಟಕ ಕವಿತೆ ಅವುಗಳ ವಿಭಾಗಿಸಿ ಅಕಾರಾದಿಯಾಗಿ ಕೊಡಲಾಗಿದೆ. ೩ನೇ ಭಾಗದ ಮೂರು ಸೂಚಿಯ ವಿವರ, ಕನ್ನಡ ಇತಿಹಾಸ ಕಾವ್ಯ ಧರ್ಮ ವಿಷಯ ಕುರಿತ ಚರ್ಚೆ, ಪೈಯವರು ೬೨ ವರ್ಷಗಳ ಕಾಲ ಕನ್ನಡ ಸಾಹಿತ್ಯ ಕೃಷಿಯಲ್ಲಿ ತೊಡಗಿದ್ದರು. ಹೊಸಗನ್ನಡದ ಹಿರಿಯ ತಲೆಮಾರಿನ ಸಾಹಿತಿಗಳಲ್ಲಿ ಪೈಯವರು

ಅಗ್ರಗಣ್ಯರು. ಅವರು ಸಾಹಿತ್ಯ ಧರ್ಮ ಮತ್ತು ಚರಿತ್ರೆಗೆ ಸಂಬಂಧಿಸಿದ ಸಂಗತಿಗಳ ಅಧ್ಯಯನ ಮಾಡಿದ್ದಾರೆ. ಒಂದು ವರ್ಷದಲ್ಲಿ ಏಳೆಂಟರಂತೆ ಸಂಶೋಧನ ವಿಷಯಗಳನ್ನು ಆಯ್ದು ಬರೆಯುತ್ತ ಹೋದರು. ಭಾರತೀಯ ಇತಿಹಾಸಕಾರರಿಗೆ ಹೆಚ್ಚು ಹಿಡಿಸಬಹುದಾದ ಲೇಖನಗಳನ್ನು ಇಂಗ್ಲಿಷ್‌ನಲ್ಲಿ ಬರೆದರು. ಅಲ್ಲದೆ ಪ್ರಾಕ್ತನ ಸಂಶೋಧನ ವಿಷಯದಲ್ಲಿ ಸಂಪೂರ್ಣ ತಲ್ಲೀನರಾದರು. ಕವಿತೆ ಮತ್ತು ಸಂಶೋಧನೆಯಲ್ಲಿ ನಿಶ್ಚಿತ ಕ್ರಮವನ್ನು ಅನುಸರಿಸಿದರು ಎಂಬ ಮಾತನ್ನು ಅವರು ತಮ್ಮ ಸಾಹಿತ್ಯಜ್ಞರ ಆತ್ಮಕಥನದಲ್ಲಿ ಹೇಳಿಕೊಂಡಿದ್ದಾರೆ. ಸಂಶೋಧನ ಕ್ಷೇತ್ರಕ್ಕೆ ಅವರ ಅಪಾರ ಕೊಡುಗೆ ನೀಡಿದ್ದಾರೆ. ಅಲ್ಲದೆ ಕೊಂಕಣಿ ಭಾಷೆಯ ಮಹತ್ವ ತುಳುನಾಡಿನ ಪ್ರಾಚೀನತೆ ಧಾರ್ಮಿಕ ಚರಿತ್ರೆ ಮತ್ತು ತುಳು ಗ್ರೀಕ್ ಸಂಬಂಧ ತಳುನಾಡಿನ ಶಾಸನ ಮಹತ್ವವನ್ನು ಪರಿಚಯಿಸಿದ ಕೀರ್ತಿ ಗೋವಿಂದ ಪೈ ಅವರಿಗೆ ಸಲ್ಲುತ್ತದೆ. ಇಂತಹ ಮಹತ್ವದ ಸಂಗತಿಗಳ ಬಗೆಗೆ ಹಾವನೂರ ಅವರು ವಿಶ್ಲೇಷಿಸಿದ್ದಾರೆ ಅಥವಾ ಪೈಯವರನ್ನು ಪರಿಚಯಿಸಿದ್ದಾರೆ ಎಂದು ಹೇಳಬಹುದು.

ಕರ್ನಾಟಕಕ್ಕೆ ಜೈನ ಧರ್ಮದ ಆಗಮನ, ಕೆಲವು ರಾಜಮನೆತನಗಳ ಕುರಿತಾದ ಶೋಧನೆ, ಕನ್ನಡೇತರ ಶಾಸನ, ಪುರಾಣ, ಐತಿಹ್ಯ ಶಾತವಾಹನರು, ಪುನ್ನಚ್ಚ, ಗಂಗ ಕದಂಬ ಇತಿಹಾಸದ ಚಿತ್ರಣ. ವಿಜಯನಗರ ಸಾಮ್ರಾಜ್ಯ ಉತ್ತರಾರ್ಧ ಕಾಲದಲ್ಲಿ ಕನ್ನಡ ರಾಜ್ಯವೇ ಆಗಿತ್ತು; ಆಂಧ್ರವಲ್ಲ ಎಂಬ ಮಾತನ್ನು ಬಳ್ಳಾರಿಯ ಮೇಲಿನ ಲೇಖನದಲ್ಲಿ ಪೈಯವರು ಸ್ಪಷ್ಟಪಡಿಸಿದರು. ವಿಜಯನಗರ ಸಾಮ್ರಾಜ್ಯಕ್ಕೆ ಸಂಬಂಧಿಸಿದ ಪೈಯವರ ಅನೇಕ ಲೇಖನಗಳ ಬಗೆಗೆ ಹಾವನೂರ ಅವರು ಪರಿಚಯಿಸಿದ್ದಾರೆ. ಹಾಗೆಯೇ ಭಾರತದ ಇತಿಹಾಸಕ್ಕೆ ಸಂಬಂಧಿಸಿದ ಲೇಖನ, ಪಲ್ಲವರ ಸಮಗ್ರ ಚರಿತ್ರೆ ಕುರಿತ ಲೇಖನ, ಭಾರತ ಮತ್ತು ಗ್ರೀಕ್ ಸಂಬಂಧಿಸಿದ ವಿಷಯ ಪ್ರಸ್ತಾಪಗೊಂಡಿದೆ. ಕನ್ನಡ ಶಾತವಾಹನರು, ಪ್ರಾಚೀನ ಎರಡು ರಾಜ ಮನೆತನಗಳು ಪರಿಚಯಿಸಿದ ಬಗೆಗೂ ಹಾವನೂರ ಅವರು ಬೆಳಕು ಚೆಲ್ಲಿದ್ದಾರೆ.

ಜೈನ ಪುರಾಣದಲ್ಲಿ ಭರತ ಮತ್ತು ಬಾಹುಬಲಿ ಬಹಳ ಜನಪ್ರಿಯರಾಗಿದ್ದರು. ಹೀಗಾಗಿ ತೀರ್ಥಂಕರರಿಗಿಂತ ಪೂರ್ವದಲ್ಲಿ ಮಹಾತ್ಮರಾದ ಭರತ ತನ್ನ ತಮ್ಮನ ಸವಿನೆನಪಿಗಾಗಿ 'ಪೌದನಪುರ'ದಲ್ಲಿ ಮೂರ್ತಿಯನ್ನು ಪ್ರತಿಷ್ಠಾಪಿಸಿದರು. ಕರ್ನಾಟಕದ ಶ್ರವಣಬೆಳಗೊಳದಲ್ಲಿ ಎತ್ತರದ ಮೂರ್ತಿ ನಿರ್ಮಾಣಗೊಂಡಿದೆ. ಕಾರ್ಕಳ, ವೇಣೂರು, ಗೋಮಟೇಶ್ವರ ಮೂರ್ತಿಯನ್ನು ಪ್ರತಿಷ್ಠಾಪಿಸಿದರು. ಪಾರ್ಶ್ವನಾಥ ತೀರ್ಥಂಕರ ಚರಿತ್ರೆ, ಬುದ್ಧ ಹೀಗೆ ಪ್ರಾಚೀನ ವ್ಯಕ್ತಿಗಳ ಸತ್ಯಾಂಶವನ್ನು ಶೋಧಿಸುವ ಕೆಲಸಕ್ಕೆ ಪೈಯವರು ತಮ್ಮನ್ನು ಅರ್ಪಿಸಿಕೊಂಡರು. ಅನೇಕ ವೀರಶೈವ ಮಹಾತ್ಮರ ಚರಿತ್ರೆಯ ಮೇಲೆ ಬೆಳಕು ಚೆಲ್ಲಿದರು ಎಂದು ಹಾವನೂರ ಅವರು ಪೈಯವರ ಸಾಹಿತ್ಯ, ಅಧ್ಯಯನದ ಬಗೆಗೆ ವಿಶ್ಲೇಷಿಸಿದ್ದಾರೆ.

ಅರ್ಜುನವಾಡ ಶಾಸನವನ್ನು ಅಧ್ಯಯನಕ್ಕೆ ಒಳಪಡಿಸಿ, ಬಸವೇಶ್ವರ ವಂಶಾವಳಿ, ಜೀವನದ ಮಹತ್ವದ ಘಟ್ಟ ಕುರಿತು ಚರ್ಚಿಸಿದರು. ದೇವರ ದಾಸಿಮಯ್ಯ ಕುರಿತು ಚರ್ಚೆ ಒಳಪಡಿಸಿರುವುದು ಕಂಡಬರುತ್ತವೆ. ನಾಲ್ಕು ವೀರಶೈವ ಶರಣರಾದ ರೇವಣಸಿದ್ಧ, ಮರುಳಸಿದ್ಧ, ಏಕೋರಾಮ ತಂದೆ ಮಲ್ಲಿಕಾರ್ಜುನ, ಪಂಡಿತರಾಧ್ಯ ಇವರ ಕಾಲಮಾನವನ್ನು ಖಚಿತ ಪಡಿಸಿದರು. ಪ್ರಾಚೀನ ಕವಿ, ಕಾಲ, ದೇಶ ಮತಗಳ ಕುರಿತ ಚರ್ಚೆ ನಡೆದಿದೆ. ಭಾಷೆ ಸಾಹಿತ್ಯ, ನಾಟಕ ಕುರಿತ ಚರ್ಚೆ ಕಾಣಬಹುದು. ಪೈಯವರು ಶೋಧನೆಯ ಮೂಲಕ ಅರಿಕೇಸರಿಯ ವಂಶಾವಳಿ ದೇಶ ಕಾಲ ಕುರಿತು ಸ್ಪಷ್ಟತೆಯ ಚಿತ್ರಣ ಮೂಡಿಬಂದಿದೆ.

ರನ್ನ ಕವಿ ಇಬ್ಬರು ಎನ್ನುವ ವದಂತಿಗೆ ಪೈಯವರು ಆಧಾರ ಕೊಟ್ಟು ಜಯ ಕರ್ನಾಟಕದ ಪತ್ರಿಕೆಯಲ್ಲಿ (೧೯೩೭) ಸುದೀರ್ಘ ಲೇಖನ ಬರೆದರು. ಗದಾಯುದ್ಧ ಮತ್ತು ಅಜಿತ ಪುರಾಣಗಳ ಕರ್ತೃ ಒಬ್ಬನೇ ಎಂಬುದನ್ನು ಸ್ಪಷ್ಟಪಡಿಸಿದರು. ಮೂವರು ನಾಗವರ್ಮರ ಕುರಿತ ಸ್ಪಷ್ಟ ಚಿತ್ರಣ. ಒಂದನೆಯ ನಾಗವರ್ಮ ಬ್ರಾಹ್ಮಣ (ಕ್ರಿ.ಶ. ೯೫೦–೧೧–೧೫) ಛಂದೋಂಬುದಿ, ಕರ್ನಾಟಕ ಕಾದಂಬರಿ, ಎರಡನೆಯ ನಾಗವರ್ಮ ಜೈನ (ಕ್ರಿ.ಶ. ೧೧೨೦–೧೨೦೦) ವಸ್ತುಕೋಶ, ಕಾವ್ಯವಲೋಕನ ಭಾಷಭೂಷಣ, ಮೂರನೆಯ ನಾಗವರ್ಮ, ಬ್ರಾಹ್ಮಣ ೧೨ನೇ ಶತಮಾನ (೧೧೦೫–೧೨೦೦) ಚಂದಚೂಡಮಣಿ ಶತಕ, ದುರ್ಗಸಿಂಹನ ಪಂಚತಂತ್ರ ಹೀಗೆ ಪೈಯವರ ಕೃತಿಗಳು ಸ್ಪಷ್ಟ ಚಿತ್ರವನ್ನು ಹಾವನೂರ ಅವರು ಪರಿಚಯಿಸಿದರು.

**'ಸಂಶೋಧನದ ರೀತಿ'** ಸತ್ಯ ಶೋಧನೆ ಸಹಜ ಕ್ರಿಯೆ, ಪ್ರವೃತ್ತಿ ಸತ್ಯದ ಅನ್ವೇಷಣೆ ಅಂದರೆ "ಯಾವುದೊಂದು ವಿಷಯದ ಮೂಲ ತಿಳಿಯುವ ಜಿಜ್ಞಾಸೆ ಮತ್ತು ಅದಕ್ಕೆ ಪ್ರಯತ್ನ ೧. ದೈವಿಕತೆಯ ಅನ್ವೇಷಣೆಗೆ ತೊಡಗಿದವನು ತತ್ವಜ್ಞಾನಿ ಎನಿಸಿಕೊಳ್ಳುತ್ತಾನೆ. ೨. ಭೌಗೋಳಿಕ ವಿಷಯದ ಮೂಲ ಶೋಧದಲ್ಲಿ ತೊಡಗಿದವನು ವಿಜ್ಞಾನಿಯಾಗುತ್ತಾನೆ. ೩. ಗತಕಾಲದ ಏನು ನಡೆಯುತ್ತದೆ" ಎಂಬುದನ್ನು ಕುರಿತು ಶೋಧನೆ ಸ್ಪಷ್ಟತೆ ಚಿತ್ರಣಕೊಟ್ಟಿದ್ದಾರೆ. ಸಂಶೋಧಕನ ಲಕ್ಷಣ, ವಿದ್ವತ್, ಶೀಘ್ರ ಗ್ರಹಣಶಕ್ತಿ, ವಿವೇಚನಾ ಸಾಮರ್ಥ್ಯ ಹರಿತವಾದ ತರ್ಕ, ಸ್ಮರಣಶಕ್ತಿ, ಆತನ ಬುದ್ಧಿವಂತಿಕೆ ಮತ್ತು ವ್ಯಾಸಂಗದ ಸಂಗಮವೇ ಸಂಶೋಧನೆ, ಪೈಯವರ ವಿದ್ವತ್, ಬಹುಭಾಷ ಜ್ಞಾನ, ಹಿನ್ನೆಲೆ ವಿವೇಚನ ಶಕ್ತಿ, ಹರಿತವಾದ ತರ್ಕಸರಣಿ, ಇತಿಹಾಸದ ಪ್ರಜ್ಞೆ, ವಸ್ತುನಿಷ್ಠತೆ ಸಂಶೋಧಕನಲ್ಲಿ ಸತ್ಯ ಮತ್ತು ಊಹನಾ ವಿಶಿಷ್ಟ ಗುಣಗಳು ಇರಬೇಕೆನ್ನುವ ಪೈಯವರನ್ನು ಹಾವನೂರ ಪರಿಚಯಿಸಿದ್ದಾರೆ.

ಗೋವಿಂದ ಪೈ ಶ್ರೇಷ್ಠ ಸಂಶೋಧಕರು. ವಿಷಯದ ಆಳವಾದ ಅಧ್ಯಯನ ಮಾಡಿದವರು. ಕನ್ನಡ ಸಂಸ್ಕೃತ ಬಂಗಾಲಿ ಮತ್ತು ಇಂಗ್ಲಿಷ್ ಕಾವ್ಯ, ಗ್ರಂಥಗಳ, ವಿವಿಧ ಧರ್ಮಗಳ ತಾತ್ವಿಕತೆ ಹಾಗೂ ಪುರಾಣ ಗ್ರಂಥಗಳ, ವ್ಯಾಕರಣ, ಜ್ಯೋತಿಷ ಶಾಸ್ತ್ರ ಅಲ್ಲದೆ ಅನೇಕ ನಾಡು-ನುಡಿಗಳ ಚರಿತ್ರೆ ಪೈಯವರ ಬರವಣಿಗೆಯ ಹಿನ್ನೆಲೆಯನ್ನು ಅರಿಯಬಹುದು.

ವಿಚಾರದ ಮಹತ್ವ ತಿಳಿಯುವ ಓದುಗನು ಬುದ್ಧಿಮಟ್ಟವನ್ನು ಹೊಂದಿರಬೇಕು. ಗಾಂಧೀಜಿಯವರ ಮಾರ್ಗವನ್ನು ಅವರ ಅನೇಕ ಅನುಯಾಯಿಗಳು ಹೇಗೆ ಅನುಸರಿಸುವುದು ಅಸಾಧ್ಯವಾಯಿತೋ ಹಾಗೆಯೇ ಪೈಯವರ ಸಂಶೋಧನ ಮಾರ್ಗವು ಸಾಮಾನ್ಯ ವಾಚಕ ವಿದ್ವಾಂಸರಿಗೆ ತುಸು ಕಠಿಣವಾಗಿ ತೋರಿದರೂ ಅದು ಸರಳವಾಗಿದೆ ಎಂದು ಹಾವನೂರ ಅವರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಪೈಯವರ ವಿಷಯ ಜೋಡಣೆ ಮಧ್ಯ ಅಡಿ ಟಿಪ್ಪಣಿಗಳಿಂದ ಅವುಗಳ ಸಮರ್ಥನೆ ಕ್ರಮ ನಿರೂಪಣೆಯು ಜಟಿಲವಾಗಿರುತ್ತದೆ. ಪೈಯವರ ಸಂಶೋಧನೆ ಲೇಖನವೊಂದು ಚಕ್ರವ್ಯೂಹದ ಕೋಟೆಗೆ ಹೋಲಿಕೆಯ ಸ್ವರೂಪ ಕಾಣಬಹುದು.

## ಕೊನೆಯ ಟಿಪ್ಪಣಿ

೧. ಗಂಧ ಮತ್ತು ಕಲ್ಲು ಶ್ರೀನಿವಾಸ ಹಾವನೂರ ಪು.ಸಂ. ೪
೨. ಅದೇ, ಪು.ಸಂ. ೮೧
೩. ಅದೇ, ಪು.ಸಂ. ೧೦೫
೪. ಅದೇ, ಪು.ಸಂ. ೧೦೭
೫. ಕುಚೋದ್ಯ ಕಥೆಗಳು ಶ್ರೀನಿವಾಸ ಹಾವನೂರ ಪು.ಸಂ. ೧೨
೬. ಅದೇ, ಪು.ಸಂ. ೪೬
೭. ಒಂದಷ್ಟು ಲಘು, ಒಂದಷ್ಟು ಗಂಭೀರ, ಶ್ರೀನಿವಾಸ ಹಾವನೂರ, ಪು.ಸಂ. ೧
೮. ಅದೇ, ಪು.ಸಂ. ೮೬
೯. ಅವಿವಾಹಿತೆ, ಶ್ರೀನಿವಾಸ ಹಾವನೂರ, ಪು.ಸಂ. ೦೭
೧೦. ಹೈದ್ರಾಬಾದ್ ವೀರಕನ್ನಡಿಗ, ಬಿ.ಚಿ.ಚಮ್ಮಲಗಿ, ಹಾವನೂರ, ಪು.ಸಂ. ೦೩
೧೧. ಗೋವಿಂದ ವಾಙ್ಮಯ ದರ್ಶನ ಮ.ವಿ.ನಾಯಕ ಶ್ರೀನಿವಾಸ ಹಾವನೂರ ಪು.ಸ. ೩೦

## ಅಧ್ಯಾಯ ಆರು

## ಸಂಪಾದನೆ ಮತ್ತು ಅನುವಾದ ಸಾಹಿತ್ಯ

ಸಂಪಾದನೆಯ ಆಡಿಯಲ್ಲಿ ಪಾಶ್ಚಿಮಾತ್ಯ ಸಾಧಕರ ಚರಿತ್ರೆಯನ್ನು ಈ ನಾಡಿನ ಯುವ ಪೀಳಿಗೆಗೆ ಪರಿಚಯಿಸುವ ಉದ್ದೇಶ ಹಾವನೂರ ಅವರದಾಗಿತ್ತು. ಹೀಗಾಗಿ ಹತ್ತು ಹಲವು ರಾಷ್ಟ್ರಗಳ ಬಹು ವೈವಿಧ್ಯಮಯ ಸಂಗತಿಯು ಭೌಗೋಳಿಕ, ಸಾಮಾಜಿಕ, ಸಾಂಸ್ಕೃತಿಕ ವಿಭಿನ್ನ ದೃಷ್ಟಿಕೋನದ ವಿಚಾರಧಾರೆಯು ಸಂಪಾದನೆ ಮತ್ತು ಅನುವಾದ ಸಾಹಿತ್ಯದಲ್ಲಿ ಅನಾವರಣಗೊಂಡಿದೆ. ಸಾಹಿತ್ಯವೆಂಬುದು ಬದುಕಿನ ಪ್ರತಿರೂಪವಾಗಿದೆ. ಹಾಗೆಯೇ ಆಯಾ ಕಾಲಘಟ್ಟದಲ್ಲಿ ರಚನೆಗೊಂಡ ಕೃತಿಯು ಆಯಾ ಕಾಲದ ಪ್ರತಿನಿಧಿಯಾಗಿ ನಿದರ್ಶನಗೊಂಡಿದೆ. ಸಾಹಿತ್ಯ, ನಾಡು, ನುಡಿ, ಸಂಸ್ಕೃತಿ ಪರಂಪರೆಯ ಸಂಪತ್ತನ್ನು ನಂತರ ಕಾಲದಲ್ಲಿ ಉಳಿಸಿ ಬೆಳೆಸುವ ಕೆಲಸ ನಮ್ಮದಾಗಿರುತ್ತದೆ. ಸೃಜನ ಸಾಹಿತ್ಯ, ಶಾಸ್ತ್ರ, ಅನುವಾದ, ಸಂಪಾದನೆ, ಸಂಶೋಧನೆ, ವಿಶ್ಲೇಷಣೆ ಹೀಗೆ ಅದು ಯಾವುದಿದ್ದರೂ ಜ್ಞಾನಮುಖಿಯಾಗಿ ಮನುಷ್ಯನ ಮನಸ್ಸನ್ನು ಪರಿವರ್ತಿಸಿ ಪ್ರಗತಿಗೆ ಪ್ರೇರಣೆ ನೀಡುತ್ತದೆ.

ಉನ್ನತ ಮೌಲ್ಯ ವಿಚಾರಧಾರೆಯನ್ನು ಹಾಗೂ ಜೀವನದ ರೀತಿ ನೀತಿಗಳನ್ನು ಮೈಗೂಡಿಸಿಕೊಂಡು ಬದುಕನ್ನು ಸಾರ್ಥಕಪಡಿಸಿಕೊಳ್ಳುವ ಮೂಲಕ ಮುಂದಿನ ಯುವ ಪೀಳಿಗೆಗೆ ಧಾರೆಯೆರೆಯುವುದರೊಂದಿಗೆ ಸಾಹಿತ್ಯವು ಮನುಕುಲದ ಬೆಳವಣಿಗೆಗೆ ಸಹಕಾರಿಯಾಗುತ್ತದೆ. ಸಂಪಾದನಾ ಸಾಹಿತ್ಯದ ಕೃತಿಗಳಲ್ಲಿ ವೈವಿಧ್ಯಮಯವಾದ ವಿಷಯ ಅಡಕಗೊಂಡಿದೆ. ಇದಕ್ಕೆ ಒಂದು ನಿದರ್ಶನವೆಂದರೆ ದಾಸ ಸಾಹಿತ್ಯದ ಪ್ರಧಾನ ಸಂಪಾದಕರಾಗಿ ಶ್ರೀನಿವಾಸ ಹಾವನೂರ ಅವರು ಕಾರ್ಯನಿರ್ವಹಿಸಿದ್ದನ್ನು ಕಾಣಬಹುದು. ಇಂದು ಸಂಪಾದನ ಸಾಹಿತ್ಯ ವಿಸ್ತೃತ ರೂಪದಲ್ಲಿ ಪ್ರಕಟಗೊಳ್ಳುತ್ತಿದೆ. ಅಭಿನಂದನ ಗ್ರಂಥ, ಸಂಪಾದನೆ ವಿಷಯ, ವ್ಯಕ್ತಿ, ಘಟನೆಗಳಿಗೆ ಸಂಬಂಧಿಸಿದಂತೆ ಅನೇಕ ವಿದ್ವಾಂಸರ ಲೇಖನ ಸಂಗ್ರಹಿಸಿ ಪ್ರಕಟಿಸಿದರು. ಮಾಹಿತಿ ಸಂಗ್ರಹಿಸಿ ಇಲ್ಲವೇ ಒಬ್ಬ ವ್ಯಕ್ತಿಯ ಕೃತಿಗಳನ್ನು ಒಂದೆಡೆ ಸಂಗ್ರಹಿಸಿ, ಅವುಗಳ ವಿಷಯ ಅಧ್ಯಯನ ಮಾಡಿ ಸಂಪಾದಿಸಿ ಸಂಪುಟ ರೂಪದಲ್ಲಿ ಪ್ರಕಟಿಸಿದರು. ಪಾಶ್ಚಿಮಾತ್ಯ ವಿದ್ವಾಂಸರಾದ ಮೊಗ್ಲಿಂಗ್‌ನ ದಾಸರ ಕೀರ್ತನೆಗಳನ್ನು ಸಂಗ್ರಹಿಸಿ ಸಂಪಾದಿಸಿದರು. ರೆವರೆಂಡ್

ಜಾರ್ಜ್.ಎಫ್. ಕಿಟೆಲ್ ಅವರು ನಾಗವರ್ಮನ 'ಛಂಧೋಂಬುದಿ', ಕೇಶಿರಾಜನ 'ಶಬ್ದಮಣಿದರ್ಪಣ' ಕೃತಿಗಳನ್ನು ಸಂಪಾದಿಸಿ ಸಂಪಾದನ ಕ್ಷೇತ್ರಕ್ಕೆ ಗಟ್ಟಿ ಅಡಿಪಾಯ ಹಾಕಿದರು.

ಈ ಮೇಲಿನ ವಿಷಯ ಆಧರಿಸಿ ಹೇಳುವುದಾದರೆ ಅದರ ಮುಂದುವರಿಕೆಯಾಗಿ ಪಂಪ, ರನ್ನ, ಚಾವುಂಡರಾಯ, ಬಸವಣ್ಣ, ಕುಮಾರವ್ಯಾಸ, ಸರ್ವಜ್ಞ ಮೊದಲಾದವರ ಕೃತಿಗಳನ್ನು ಸಂಪಾದಿಸಿ ಪ್ರಕಟಿಸಿದರು. ಈ ಸಂಪಾದನೆ ವಲಯದ ಚರಿತ್ರೆಯ ಸ್ವರೂಪ ವ್ಯಾಪ್ತಿಯಲ್ಲಿ ವಿಸ್ತಾರವನ್ನು ಕಾಣಬಹುದು. ಪೇಜಾವರ ಶ್ರೀಗಳ ಹಂಬಲಿಕೆ ಸಾಮಾನ್ಯ ಓದುಗರಿಕೆಗೆ ದಾಸ ಸಾಹಿತ್ಯ ತಲುಪಿಸುವ ಉದ್ದೇಶವಾಗಿತ್ತು. ಕರ್ನಾಟಕ ಸರ್ಕಾರದ ಗಮನಕ್ಕೆ ತರುವುದು ಮತ್ತು ಹಿರಿಯ ವಿದ್ವಾಂಸರಾದ ಹಾವನೂರ ಮತ್ತು ಇತರರೊಂದಿಗೆ ಚರ್ಚಿಸಿ ನಂತರ ದಾಸ ಸಾಹಿತ್ಯದ ೫೦ ಸಂಪುಟಗಳನ್ನು ಕರ್ನಾಟಕ ಸರ್ಕಾರದ ಸಹಾಯದೊಂದಿಗೆ ಸಂಪಾದಿಸಿ ಪ್ರಕಟಿಸುವ ಕಾರ್ಯದಲ್ಲಿ ಹಾವನೂರ ಅವರ ಪಾತ್ರ ತುಂಬ ಮಹತ್ವದ್ದು. ಈ ಸಂಪಾದನೆಯಲ್ಲಿ ೧೪೦ ಹರಿದಾಸರ ೧೬೩೭ ಕೀರ್ತನೆಗಳು ಮತ್ತು ಕಿರು ಕಾವ್ಯ ಕಥಾನಕಗಳನ್ನು ಪ್ರಕಟಿಸಿದರು.

ದಾಸ ಸಾಹಿತ್ಯದ ಸಂಪಾದನೆಯ ಕಾರ್ಯದ ಯೋಜನೆ ಸ್ವರೂಪದ ಹಿನ್ನೆಲೆಯು ಉಡುಪಿಯ ಪೇಜಾವರ ಮಠದ ಶ್ರೀಗಳಾದ ವೀಶ್ವೇಶ್ವರತೀರ್ಥರು ೧೯೯೬ರಲ್ಲಿ ದಾಸ ಸಾಹಿತ್ಯದಲ್ಲಿ ಆಸಕ್ತಿ ಇರುವ ೫೦ ಜನರ ಸಮಲೋಚನಾ ಸಭೆಯನ್ನು ಕರೆದಿದ್ದರು. ಆಗ ದಾಸ ಸಾಹಿತ್ಯ ಸಂಪಾದನೆಯ ಕಾರ್ಯ ನಿಭಾಯಿಸುವ ತೀರ್ಮಾನ ಮಾಡಿಕೊಂಡರು. ಈ ವಿಷಯಕ್ಕೆ ಸಂಬಂಧಿಸಿದಂತೆ ಅಂದಿನ ಮುಖ್ಯಮಂತ್ರಿಗಳಾದ ದೇವೇಗೌಡರಲ್ಲಿ ಈ ಬೃಹತ್ ಕಾರ್ಯಕ್ಕೆ ಸರ್ಕಾರವು ಧನಸಹಾಯ ಮಾಡುವಂತೆ ಕೋರಿಕೊಂಡರು. ಮುಧೋಳ ಸಾಹಿತ್ಯ ಸಮ್ಮೇಳನದ ಉದ್ಘಾಟನಾ ಸಂದರ್ಭದಲ್ಲಿ ಸಮಗ್ರ ದಾಸ ಸಾಹಿತ್ಯ ಪ್ರಕಟನೆಗೆ ಅಧಿಕೃತ ಒಪ್ಪಿಗೆ ನೀಡಿದರು.

ಸಂಪಾದಕ ಸಮಿತಿ ನೇಮಕಗೊಂಡಿತು. ನಂತರ ಪೂರ್ವಯೋಜನೆಯಂತೆ ದಾಸ ಸಾಹಿತ್ಯದ ೩೫ ಸಂಪುಟಗಳ ಕಾರ್ಯಕ್ಕೆ ಮತ್ತೆ ಹೊಸದಾಗಿ ೧೫ ಸಂಪುಟ ಆಗುವಷ್ಟು ದಾಸ ಪರಂಪರೆಗೆ ಸಂಬಂಧಿಸಿದ ಹಾಡುಗಳು ದೊರೆತಿದ್ದರಿಂದ ೫ ಸಂಪುಟ ಯೋಜನಾ ವ್ಯಾಪ್ತಿಯ ಗಾತ್ರ ೫೦ ಸಂಪುಟಗಳಾಗಿ ಕಾರ್ಯರೂಪಕ್ಕೆ ಬರಲು ಸಾಧ್ಯವಾಯಿತು. ದ್ವೈತ, ಅದ್ವೈತ, ವಿಶಿಷ್ಟಾದ್ವೈತ ಪರಂಪರೆಗೆ ಸಂಬಂಧಿಸಿದ ಕೀರ್ತನೆಗಳು ಸಂಪುಟಗಳಲ್ಲಿವೆ. ಮಹಿಳಾ ದಾಸರಾದ ಹೆಳವನಕಟ್ಟೆ ಗಿರಿಯಮ್ಮ, ಹರಪನಹಳ್ಳಿ ಭೀಮವ್ವ, ಅಂಬಾಬಾಯಿ, ಜೀವುಬಾಯಿ ಮೊದಲಾದ ಕೀರ್ತನೆಗಳನ್ನೊಳಗೊಂಡ ಆರು ಸಂಪುಟಗಳು ಸಿಧ್ಧವಾಯಿತು. ಭಕ್ತಿಸಾಹಿತ್ಯ, ಸಂಗೀತ, ದಾಸಸಾಹಿತ್ಯ ಮುಖ್ಯಾಂಶಗಳಾಗಿದ್ದು, ನೂರು ಕೀರ್ತನೆಗಳ ಧ್ವನಿ ಮುದ್ರಣವನ್ನು ಕಂಪ್ಯೂಟರೀಕರಣಗೊಳಿಸಿದರು. www dasa Sahitya.org. ಈ

ಅಂತರ್ಜಾಲ ವಿಳಾಸ ಮೂಲಕ ಪರಿಚಯಿಸಿಕೊಳ್ಳಬಹುದಾಗಿದೆ. ದಾಸಸಾಹಿತ್ಯದ ಸಂಪಾದನೆ ಮತ್ತು ಕಂಪ್ಯೂಟರೀಕರಣ ಮಾಡಿದ ಶ್ರೇಯಸ್ಸು ಶ್ರೀನಿವಾಸ ಹಾವನೂರ ಅವರಿಗೆ ಸಲ್ಲುತ್ತದೆ. ಅಖಿಲ ಕರ್ನಾಟಕ ಮಟ್ಟದ ದಾಸ ಸಾಹಿತ್ಯ ಪ್ರಕಟಿಸಿದ ಸಂಪಾದಕ ಮಂಡಳಿಯ ಪ್ರಧಾನ ಸಂಪಾದಕಾಗಿ ಹಾವನೂರ ಅವರ ಕಾರ್ಯ ನಿರ್ವಹಿಸಿದರು. ಅಲ್ಲದೆ ಅವರ ಪರಿಶ್ರಮದ ಪ್ರತಿಫಲವಾಗಿ ಐದು ಸಂಪುಟಗಳ ಸಂಪಾದನೆ ಕಾರ್ಯವನ್ನು ಹಾವನೂರ ಅವರೇ ಮಾಡಿದರು.

## ಸಂಪಾದನಾ ಸಾಹಿತ್ಯ

### 'ಮರೆಯಲಾಗದ ಬರಹಗಾರರು'

ಹಾವನೂರ ಸಂಪಾದನೆಯ ಮುಖಾಂತರ ಹೊಸಗನ್ನಡ ಸಾಹಿತ್ಯದ ಆರಂಭ ಕಾಲಘಟ್ಟದ ಇಂಗ್ಲಿಷ್ ಕವನಗಳನ್ನು ಈ ನಾಡಿಗೆ ಪರಿಚಯಿಸಿದ ಪ್ರಮುಖರಲ್ಲಿ ಹಟ್ಟಿಯಂಗಡಿ ನಾರಾಯಣರಾಯರು ಒಬ್ಬರು. ಹಟ್ಟಿಯಂಗಡಿ ನಾರಾಯಣರಾಯರ ವೃತ್ತಿ ಜೀವನ, ವ್ಯಕ್ತಿತ್ವ, ಬದುಕಿನ ಏಳು-ಬೀಳುಗಳನ್ನು ಒಳಗೊಂಡಂತೆ ಅನೇಕ ಮಗ್ಗಲುಗಳು ಅನಾವರಣಗೊಂಡಿದೆ. ಪತ್ರಿಕಾ ರಂಗದಲ್ಲಿ ಕಾರ್ಯನಿರ್ವಹಿಸುವರಿಗೆ ಸತತಾಭ್ಯಾಸ ಮತ್ತು ಚಿಂತನೆಗಳು ಬೇಕಾಗುತ್ತವೆ. ಹೀಗಾಗಿ ಆ ಕೆಲಸವನ್ನು ಹ.ನಾರವರು ಮೈಗೂಡಿಸಿಕೊಂಡಿದ್ದರು. ಒಂದು ನಿಮಿಷವು ವ್ಯರ್ಥ ಮಾಡಲಿಲ್ಲ. ವಿವಿಧ ಭಾಷೆಗಳ ಪರಿಚಯ ಮತ್ತು ಪರಿಣಿತಿ ಪಡೆದವರಾಗಿದ್ದರು. ಸಂಸ್ಕೃತ, ಪ್ರಾಕೃತ, ಪಾಲಿ, ಮರಾಠಿ, ಗುಜರಾತಿ ಈ ಭಾಷೆಯ ಪರಿಣಿತಿ ಮತ್ತು ಭಾರತೀಯ ಪರಿಸರ ಸಾಂಸ್ಕೃತಿಕ ಪರಂಪರೆ ಬಲ್ಲವರಾಗಿದ್ದರು.

ಹ.ನಾ ಅವರ ಪತ್ನಿ ತೀರಿದ ನಂತರ ಮರುವಿವಾಹ ಮಾಡಿಕೊಳ್ಳಲು ಬಂಧುಗಳು ಒತ್ತಾಯ ಮಾಡಿದರು. ಅದಕ್ಕೆ ಒಪ್ಪದೆ ವಿಧವೆಯಾಗಿದ್ದ ಅಂಬುಬಾಯಿ ಅವರೊಂದಿಗೆ ವೈವಾಹಿಕ ಜೀವನಕ್ಕಾಗಿ ಇಚ್ಛೆ ಪಟ್ಟಿದ್ದರು. ಅದರ ಪ್ರತಿಯಾಗಿ ಸ್ವಜಾತಿಯರ ಮತ್ತು ಮಠಾಧೀಶರ ವಿರೋಧವನ್ನು ಕಟ್ಟಿಕೊಂಡರು. ಸಮಾಜ ಸ್ವಾಸ್ಥ್ಯತೆ ಮಾಡುವುದು ಅವರ ಮುಖ್ಯ ಉದ್ದೇಶವಾಗಿತ್ತು. ಮೇಲಾಗಿ ಅವರು ಬ್ರಹ್ಮ ಸಮಾಜದ ಕಟ್ಟಾನುಯಾಯಿಯಾಗಿದ್ದರು. ಕನ್ನಡ ವಾಙ್ಮಯದ ಅನೇಕ ಬಿಡಿ ಲೇಖನಗಳನ್ನು ಬರೆಯುತ್ತಿದ್ದರು. ಹಳೆಗನ್ನಡ, ಶಾಸನಗಳ ಅಳವಾದ ಅಧ್ಯಯನದ ಪ್ರತಿಫಲವಾಗಿ ಈ ವಿಷಯವನ್ನು ಅಧಿಕಾರಯುತವಾಗಿ ಮಾತನಾಡುವ ಸಾಮರ್ಥ್ಯವನ್ನು ಹೊಂದಿದ್ದರು. ಅಲ್ಲದೆ ಕಿಟೆಲ್ ಕೋಶವನ್ನು ಕರತಲಾಮಲಕ ಮಾಡಿಕೊಂಡಿದ್ದರು. ಹಾಗೆಯೇ ಕನ್ನಡ ಸಾಹಿತ್ಯ ಪರಿಷತ್ತಿಗೆ ಪ್ರೇರಣೆ ನೀಡುವುದರ ಮೂಲಕ ಪರಿಷತ್ತಿನ ಪತ್ರಿಕೆಯ ಮೊದಲ ಸಂಪುಟದಿಂದ ಅವರು ಲೇಖನಗಳನ್ನು ಬರೆಯತೊಡಗಿದರು. ಕರ್ನಾಟಕ ವಿದ್ಯಾವರ್ಧಕ ಸಂಘದ ವಾಗ್ಭೂಷಣ ಪತ್ರಿಕೆಯನ್ನು ಇಂಗ್ಲಿಷ್‌ಗೆ ಅನುವಾದ ಮಾಡಿದರು. ಕನ್ನಡ ನುಡಿ, ಹೊಸ ರೀತಿಯ ಪದ್ಯ ರಚನಾ

ವಿಧಾನ, ಶಬ್ದಮಾಲೆ, ಪ್ರಾಕೃತ ಮತ್ತು ಮರಾಠಿ ಸಮಾನ ಶಬ್ದಗಳು–ಈ ತೆರನಾದ ಸಂಗತಿಗಳ ಕುರಿತು ಚರ್ಚೆ ಕಾಣಬಹುದು.

ಕನ್ನಡ ನಾಡಿನ ಅಭಿವೃದ್ಧಿಗಾಗಿ, ಸ್ವಾತಂತ್ರ್ಯಪೂರ್ವದಲ್ಲಿ ಮಂಗಳೂರು ಭಾಗದ ಜನಸಾಮಾನ್ಯರ ಬದುಕನ್ನು ಮುಖ್ಯವಾಹಿನಿಗೆ ತಂದವರಲ್ಲಿ ಹಾಗೂ ಸಾಮಾಜಿಕ, ಶೈಕ್ಷಣಿಕ ಮತ್ತು ರಾಜಕೀಯ ಪ್ರಗತಿಗೆ ಕಾರಣರಾದವರು. ತ್ರಿಮೂರ್ತಿಗಳು ಎಂದು ಕರೆಯಲ್ಪಡುವ ಸಮಾಜ ಸೇವಕರಾದ ಮ.ರಾ.ಕಾರ್ನಾಡ್ ಸದಾಶಿವರಾವ್, ಕುದ್ಮಲ್ ರಂಗರಾವ್, ಕೆ. ಮಾಧವರವರು. ಈ ಮೂವರನ್ನು ಸಮಾಜಮುಖಿಯಾಗಿ ಯುವ ಸಮುದಾಯಕ್ಕೆ ಪರಿಚಯಿಸುವ ಕಾರ್ಯವನ್ನು ಹಾವನೂರ ಮಾಡಿದ್ದಾರೆ. ಹಾಗೆಯೇ ಹ.ನಾರಾವರು (ಹಟ್ಟಿಯಂಗಡಿ ನಾರಾಯಣ) ನವೋದಯ ಕಾವ್ಯದ ಕನ್ನಡ ಶಬ್ದ ಭಂಡಾರದ ಮೂಲವನ್ನು ಗುರುತಿಸುವ ಮಾರ್ಗ ಪ್ರವರ್ತಕರು. ಅವರು ಬದುಕಿನುದ್ದಕ್ಕೂ ಹೊರನಾಡಿನ ಕನ್ನಡೇತರ ಪರಿಸರದಲ್ಲಿದ್ದುಕೊಂಡು ಕನ್ನಡ ಬಗ್ಗೆ ಅಭಿಮಾನವನ್ನು ಉಳಿಸಿಕೊಂಡು ಕನ್ನಡ ಪ್ರಗತಿಗೆ ಕಾರಣರಾದರು.

ಹೊಸಗನ್ನಡ ಕವಿತೆ, ಇಂಗ್ಲಿಷ್ ಗೀತೆಗಳ ಅನುವಾದ, ಭಾಷೆ, ವಿಚಾರ, ತಾತ್ವಿಕ ಚಿಂತನೆ ಈ ತೆರನಾದ ವಿಷಯಗಳ ಚರ್ಚೆಗೊಂಡು ಇಂಗ್ಲಿಷ್ ಮಾರ್ಗವನ್ನು ಅನುಸರಿಸುವುದರಿಂದ ನಂತರ ಕನ್ನಡ ಕಾವ್ಯಗಳ ಪ್ರಸಾರ ರಚನೆ ಅಲಂಕಾರ ಇವು ಹೊಸ ಸ್ವರೂಪ ಪಡೆದುಕೊಳ್ಳುತ್ತವೆ. ಕವಿಗಳ ಪಾರಮಾರ್ಥಿಕ ವಿಷಯಗಳಿಗಿಂತ ರಾಷ್ಟ್ರೀಯ ಸಾಮಾಜಿಕ ಚಾರಿತ್ರಿಕ ಮುಂತಾದ ಲೌಕಿಕ ಪ್ರೇಮಗಳಿಗೆ ಹೆಚ್ಚು ಒತ್ತು ಕೊಟ್ಟು, ದೀರ್ಘ ಪುರಾಣಗಳ ಬದಲಾಗಿ ಲಘು ಕೃತಿಗಳನ್ನು ರಚಿಸಿದರು. ಛಂದಸ್ಸಿನ ಹೊಸ ಮಾದರಿ ಅನುಸರಿಸುವುದರಿಂದ ಓಡಿದು ಕವಿತಾ ವರ್ಧನ ಕುರಿತು ಚರ್ಚೆ. ಕಾವ್ಯಗಳ ಗುಣ ದೋಷ ಸ್ವರೂಪ ಲಕ್ಷಣ ಕುರಿತು ಪ್ರಸ್ತಾಪಗೊಂಡಿದೆ. ಕವಿಗಳಿಗೆ ಸ್ವಾತಂತ್ರ್ಯ ಇರಬೇಕು. ಕನ್ನಡ ಛಂದೋವಿಚಾರ ಕಂದದ ಬಳಕೆಯ ರೀತಿ ಓದುಗಬ್ಬ ಮತ್ತು ಹಾಡುಗಬ್ಬ ಹೊಸ ಮಾದರಿ ಹಳೆಗನ್ನಡ ಬೆದಂಡೆ, ಚಿತ್ತಾಣ, ದಕ್ಷಿಣೋತ್ತರ ಮಾರ್ಗದ ವಿಷಯಗಳನ್ನು ಹಾವನೂರ ಅವರು ಪ್ರಸ್ತಾಪಿಸಿದ್ದಾರೆ.

ಶೇಕ್ಸ್‌ಪಿಯರನ್ನಿಂದ ಹಿಡಿದು–ಲಾಂಗೊರನವರೆಗೆ ಇಂಗ್ಲಿಷ್ ಕಾವ್ಯಗಳ ಅನುವಾದ ಮಾಡಿದ ಪ್ರಮುಖರಲ್ಲಿ ಹ.ನಾರವರೊಬ್ಬರು. ಎಸ್.ಜಿ.ನರಸಿಂಹಾಚಾರ್, ಬಿ.ಎಂ.ಶ್ರೀ ಮುಂತಾದವರು ಅನುವಾದ ಮಾಡಿದ್ದು ಸ್ವತಂತ್ರ ಕವಿತೆ ರಚಿಸಿದರು. ವಸ್ತು ವಿಷಯ ವೈವಿಧ್ಯಮಯವಾದ ಬದುಕಿನ ಸ್ವರೂಪ ಒಳಗೊಂಡಿದೆ. ಕನ್ನಡದ ಕಥನಗಳು, ಕನ್ನಡದ ಶಬ್ದದ ಸ್ವರೂಪ ಮತ್ತು ದೇಶಿಯ ಭಾಷೆ ಅಲ್ಲದೆ ಸಂಸ್ಕೃತ, ಕೊಂಕಣಿ, ತಮಿಳು, ಪ್ರಾಕೃತ ಶಬ್ದದ ಸ್ವರೂಪ ಮತ್ತು ದೇಶಿಯ ಭಾಷೆ ಅಲ್ಲದೆ ಸಂಸ್ಕೃತ, ಕೊಂಕಣಿ, ತಮಿಳು, ಪ್ರಾಕೃತ ಈ ಭಾಷೆ ಸ್ವರೂಪ ಕುರಿತು ಚರ್ಚೆಗೊಂಡಿದೆ. ಅಚ್ಚ ಗನ್ನಡದ ೭೫೦ ಸಿದ್ಧ ಧಾತುಗಳಲ್ಲಿ ಕೇಶಿರಾಜನ ಧಾತು ಪೀಠಿಕೆಯಲ್ಲಿ ಕೆಲವು ಬಿಟ್ಟುಹೋಗಿವೆ. 'ಲೋಕೋಕ್ತಿ' ೫೫೦ ಗಾದೆಗಳನ್ನು

ಪರೀಕ್ಷಿಸಿದರೆ, ಅದರಲ್ಲಿ ತತ್ಸಮ ತದ್ಭವ ಮತ್ತು ಪ್ರಾಕೃತ ಕುರಿತು ವಿವರಗಳಿವೆ. ಈ ತದ್ಭವ ಕನ್ನಡದವರೇ ಸಿದ್ದ ಮಾಡಿಕೊಂಡ ನಿದರ್ಶನ. ಗಾವುದ–ಗವ್ಯೊ, ಗೋಸೆ–ಗೋರಿದೆನನ್ನ, ಪ್ರಚ್–ಪ್ಲಸು, ಕನ್ನಡದ ತದ್ಭವಗಳಲ್ಲಿ ಮರಾಠಿ ಶಬ್ದಗಳು ಬೆರೆತುಗೊಂಡಿವೆ.

**ಭಾಷಾ ವ್ಯತ್ಯಾಸ :**

ಗ್ರಾಮ್ಯತೆ ಗೌಣಗೊಂಡು ಶಿಷ್ಟತೆ ಚಾಲ್ತಿಗೆ ಬಂದು ಪ್ರಾದೇಶಿಕ ವ್ಯತ್ಯಾಸಗಳು ಪ್ರಸ್ತುತಗೊಂಡಿವೆ. ಬೆಂಕಿಯ್, ತರಿಗಯ್, ಹಳೆಗನ್ನಡದ ಕೆಲವು ರೂಪಗಳು 'ಎ'ಕಾರಗಳು, 'ಇ' ಕಾರಗಳು ಬಳಕೆ ಪರಿಚಿತಗೊಂಡಿದೆ. ಹಳೆಗನ್ನಡದ ಅಪಭ್ರಂಶಗಳೇ ಹೊಸಗನ್ನಡ ವೆನ್ನಬಹುದು. "ಬೆರಲ್ ಕೊರಲ್ ಮಾತು ಗ್ರಾಮ್ಯರರಿಯದುಚ್ಚರಿಸುವ ಕುಳಾಂತ ಭ್ರಮಯಿಂ" ಎಂದು ಕೇಶಿರಾಜನು ದೂಷಿಸಿದ್ದಾನೆ.

ಹೀಗಾಗಿ ಶಿಷ್ಟ ಮಾರ್ಗದಲ್ಲಿ ಪ್ರಯೋಗಳಿರುತ್ತವೆ. ಆದಿ ಸ್ವರದ ಮುಂದೆ ಬರುವಲ್ಲಿ ಪದಾಂತ್ಯದಲ್ಲಿ ದ್ವಿತೀಯ ವಿಭಕ್ತಿ ದೀರ್ಘವು ಸಲ್ಲುತ್ತದೆ ಎಂಬುದು ನೃಪತುಂಗನ ಅಭಿಮತವಾಗಿತ್ತು. ಶಾಸನಗಳಲ್ಲಿ 'ಪಿರಮಾನ್ ಕಿಸುಪಿನ ಕಟ್ಟೆಕೂಟೆಯಾನ' ಈ ರೀತಿಯ ಪ್ರಯೋಗಗಳು ಕಾಣುತ್ತವೆ. ನಾಗವರ್ಮನು ತನ್ನ ಕಾವ್ಯವಲೋಕನದಲ್ಲಿ ಉತ್ತರ–ದಕ್ಷಿಣ ಮಾರ್ಗಗಳನ್ನು ಹೇಳಿ ವೈದರ್ಭಿ ಮತ್ತು ಗೌಡಿ ಮಾರ್ಗ ವಿಭೇದೆಂಬವೊಡೆಗಾನ್ ಎಂಬ ಉಲ್ಲೇಖ ಕಾಣಬಹುದು ಎಂದು ಲೇಖಕರು ವಿಶ್ಲೇಷಿಸಿದ್ದಾರೆ.

ಮೈಸೂರು ಮತ್ತು ಧಾರವಾಡ ಕನ್ನಡದ ಅಂತರ ಮತ್ತು ಪ್ರಾದೇಶಿಕತೆ ಕುರಿತು ಒಂದಷ್ಟು ಚರ್ಚೆ ನಡೆದಿದೆ. ೯–೧೦ನೇ ಶತಮಾನದ ಹಳೆಯ ಮತ್ತು ಹೊಸತರ ರೂಪಾಂತರವಾಗುತ್ತದೆ. ೧೦ನೇ ಶತಮಾನದ ಪಂಪ ರನ್ನರ ಶಬ್ದದ ಬಳಕೆ. "ರನ್ನಮಾತು ದರವುರಂ ಅಂಟಿಸುಂಟಿ ಅರಿವೊರಕ ಎಂಬುವಂತಪ ಮಾತುಗಳು ಪ್ರಯೋಗಿಸ ಕೂಡದೆನು (ಆ.ಪು.೮೯) ಅದಕ್ಕೆ ೫೦ ವರ್ಷಗಳ ಮುಂಚೆ ಪಂಪನ ಮತ ಬೇರೆಯಾಗಿತ್ತು."[೧]

೧. ಆಯಾ ಕಾಲಘಟ್ಟಗಳ ಹಿನ್ನೆಲೆಯಲ್ಲಿ ಶಬ್ದಗಳು ಅರ್ಥವನ್ನು ಪಡೆದುಕೊಳ್ಳುತ್ತವೆ. ನಡುಗನ್ನಡ ಪ್ರಾರಂಭದಲ್ಲಿ ಕನ್ನಡ ಭಾಷೆಯಲ್ಲಿ ಸಂಸ್ಕೃತ ಪದಗಳ ಪ್ರಯೋಗ ಈ ನಯಸೇನನ ಹೀಗೆ ಹೇಳುತ್ತಾನೆ. "ಘೃತವನ್ನೂ ತೈಲವನ್ನು ಬೆರೆಸಿದಂತಾಗುವುದೆಂದು ಮುತ್ತುಂ ಮೆಳಸಂ ಕೋದಂತಾಗುವುದೆಂದು ಇನ್ನೊಬ್ಬ ಕವಿಯು ಹೀಯಾಳಿಸಿದನು. ವಿಚಿತ್ರ ಕರ್ಣಾಟಕವೆಂಬ ದೋಷಣೆಗೆ ಎಡೆಗೊಡದಂತೆ ಸುಗಮ ಪದಗಳನ್ನು ತಾತ್ಕಾಲಿಕ ವ್ಯಾಕರಣ ವಿಧಿಗಳನ್ನು ಪ್ರಯೋಗಿಸಿ ಲೋಕಪ್ರಿಯವಾಗುವ ಹೊಸಗನ್ನಡದಲ್ಲಿ ಗ್ರಂಥಗಳನ್ನು ರಚಿಸಲಿಕ್ಕೆ ೧೨ನೇ ಶತಮಾನದಲ್ಲಿ ಮುಖ್ಯವಾಗಿ ಲಿಂಗಾಯಿತರು ತೊಡಗಿದರೆಂದು ಕಾಣುತ್ತದೆ."[೨] ಹಳೆಗನ್ನಡದದಿಂದ ಹೊಸಗನ್ನಡಕ್ಕೆ ತಿರುಗಿದ್ದ ಶಬ್ದಗಳು ಸಂಸ್ಕೃತ ಸ್ವರ ವ್ಯಂಜನಗಳನ್ನು ಪ್ರಾಕೃತದಲ್ಲಿ ಹೇಗೆ ಬದಲಿಸಬಹುದು ಎನ್ನುವುದಕ್ಕೆ ಕೆಲವು ಪದ ಪ್ರಯೋಗಗಳ

ಈರೀತಿ ನಿದರ್ಶನಗೊಂಡಿವೆ. ಇಸು, ಎಸೆ, ಇಮ, ತೊವತ್, ತೊಗಲ್ ಈ ಪ್ರಯೋಗಗಳನ್ನು ಕಾಣಬಹುದು. ಹ.ನಾರವರ ಹೊಸಗನ್ನಡದ ಕವಿತೆ ಇಂಗ್ಲಿಷ್ ಗೀತೆಗಳ ಅನುವಾದ ಭಾಷಾವಿಚಾರ ತಾತ್ವಿಕ ಚಿಂತನೆ ವಿವಿಧ ಸಂಗತಿಗಳು ಈ ಕೃತಿಗಳಲ್ಲಿ ಅನಾವರಣಗೊಂಡಿವೆ.

**ರಂ.ಶ್ರೀ.ಮುಗಳಿ ಚಿತ್ರಿಸಿದ ಪಂಪ ರನ್ನರು'**

ಕನ್ನಡ ಮೇರು ವಿದ್ವಾಂಸರಲ್ಲಿ ರಂ.ಶ್ರೀ ಮುಗಳಿಯವರೊಬ್ಬರು. ಅವರ 'ಕನ್ನಡ ಸಾಹಿತ್ಯ ಚರಿತ್ರೆ' ಕನ್ನಡ ಸಾಹಿತ್ಯ ಅಭ್ಯಾಸಿಗಳಿಗೆ ಇಂದಿಗೂ ಮೂಲ ಆಕರವಾಗಿದೆ. ಅಧ್ಯಯನದ ವಿಶೇಷ ಪಾಂಡಿತ್ಯ, ಸಂಶೋಧನಾ ಪ್ರವೃತ್ತಿ, ಸರಳ ಶೈಲಿ ಮತ್ತು ಸಹೃದಯ ಮಮತೆಯಿಂದ ತುಂಬಿದ ಮಾತಿನ ಧಾಟಿಯನ್ನು ಮೈಗೂಡಿಸಿಕೊಂಡಿದ್ದರು. ಪಂಪನ ಕವಿತ್ವ 'ನಿಚ್ಚಂ ಪೊಸತು' ಎಂದೆನ್ನಿಸಲು ನಿತ್ಯ ಹೊಸದಾಗಿರುವ, ಕಾಲಕಾಲಕ್ಕೆ ತಲೆದೋರುವ ವಿಶ್ಲೇಷಣೆ, ವಿಮರ್ಶೆಗಳು ಚರ್ಚೆಗೊಂಡಿವೆ. ಈ ಅಂಶಗಳನ್ನು ಗಮನಿಸಿದಾಗ ಹಳೆಗನ್ನಡ ಓದುಗರಿಗೆ ಬಹಳ ಪ್ರಯೋಜನಕಾರಿಯಾಗಿದೆ. ಪಂಪ, ರನ್ನರ ಕಾವ್ಯಗಳಿಂದ ಅಭ್ಯಾಸಿಗರಿಗೆ ಮಹತ್ವದ ಮಾಹಿತಿ ದೊರೆಯುತ್ತದೆ. ಹಾಗೆಯೇ ಹಾವನೂರರ ಈ ಸಂಪಾದನೆಯ ಯುವ ಓದುಗರ ಪ್ರಪಂಚಕ್ಕೆ ವಿಷಯ ಅರಿಯಲು ಬಹಳ ಸಹಕಾರಿಯಾಗಿದೆ. "ಇದು ನಿಚ್ಚ ಪೊಸತು ಅರ್ಣವಂಬೊಲ್ ಅತಿ ಗಂಭೀರ ಕವಿತ್ವಂ ಜಗಕ್ಕೆ ಆದರಿಂದ ಕವಿತಾ ಗುಣಾರ್ಣವಂ ಇಳಾಲೋಕೈಕ ವಿಖ್ಯಾತ (ಆ.ಪು.೧೧೭) ಎಂದು ಅವನ ಕವಿತ್ವ ನಿಚ್ಚ ಪೊಸತು ಎಂದೆನ್ನಿಸಲು ನಿಚ್ಚಪೊಸತಾಗಿರುವ ಕಾಲಕಾಲಕ್ಕೆ ತಲೆದೋರುವ ವಿಶ್ಲೇಷಣೆ ವಿಮರ್ಶೆಗಳು ಕಾರಣವಾಗುತ್ತವೆ."[3] ಪಂಪನ ಈ ಮಾತುಗಳು ಎಲ್ಲಾ ಕಾಲಕ್ಕೂ ಮೌಲ್ಯಯುತವಾದ ಹೊಸ ಸ್ವರೂಪ ಪಡೆದುಕೊಳ್ಳುತ್ತದೆ. ಈ ಸಾಹಿತ್ಯವನ್ನು ಭಾಷೆಯ ಸಂದರ್ಭದಲ್ಲಿ ಹರಿಯುವ ಹೊಳೆಗೆ ಹೋಲಿಕೆ ಮಾಡಲಾಗಿದೆ. ಜನರ ಬದುಕಿನಲ್ಲಿ ಹೊಸತನ ತುಂಬುವ ಶಕ್ತಿ ಪಂಪನ ಕೃತಿಗಳ ಅಭ್ಯಾಸದಿಂದ ಕಂಡುಕೊಳ್ಳಬಹುದು. ಹಾಗೆಯೇ ಇನ್ನೊಂದು ಮಾತನ್ನು ಗಮನಿಸಿದಾಗ ಪಸರಿಪ ಕನ್ನಡಕ್ಕೆ ಒಡೆಯನೋರ್ವನೆ ಸತ್ಕವಿ ಪಂಪಂ ಆವಗಂ' ಎಂದು ನಾಗರಾಜನ ಮಾತನ್ನು ಸ್ವೀಕರಿಸಿ ಈ ಅಧ್ಯಯನದಿಂದ ವ್ಯಕ್ತಿಯ ವ್ಯಕ್ತಿತ್ವಕ್ಕೆ ಮೆರಗು ನೀಡಲು ಸಹಕಾರಿಯಾಗಿದೆ. ಓದುಗನ ದೃಷ್ಟಿಯಿಂದ ಸಾಹಿತ್ಯ ಸತ್ವಯುತವಾದುದೆಂಬುದಕ್ಕೆ ಇದೊಂದು ನಿದರ್ಶನ.

ಈ ಮೇಲಿನ ವಿಚಾರವನ್ನು ಅವಲೋಕಿಸಿದಾಗ ಪಂಪನ ಕುಲದ ಪರಂಪರೆ, ಆಶ್ರಯದಾತನ ವಂಶಾವಳಿ, ಶೌರ್ಯ ಸಾಹಸ, ಜನ್ಮ ದಿನಾಂಕ, ಕೃತಿಯ ಸಮಾಪ್ತಿ ಎರಡು ಕೃತಿಗಳ ರಚನೆಯಾದ ಕಾಲ, ದೈಹಿಕ ಸ್ವರೂಪ, ಈ ಎಲ್ಲಾ ಅಂಶಗಳನ್ನು ಆಧರಿಸಿ ಹೇಳುವ ಚರಿತ್ರೆ ಪರಿಚಯಿಸುತ್ತದೆ. ತೆಲುಗು ನಾಡಿನ ಆತನಿಗೆ ಕನ್ನಡ ಅಭಿಮಾನ ಹುಟ್ಟಿದ್ದು ಹೇಗೆ? ಹಾಗೆಯೇ ಆತನ ಭಾಷೆ ಕನ್ನಡವೇ? ತೆಲುಗೇ? ಎಂಬುದು ಒಗಟಾಗಿದೆ. 'ವಿಕ್ರಮಾರ್ಜುನ ವಿಜಯ' ಬರೆಯುವುದರ ಹಿನ್ನೆಲೆ ಏನು? ಆನಂತರ ಕನ್ನಡ ನಾಡಿನ

ಅರ್ಜುನನ ಮೂಲಕ ಬನವಾಸಿ ಪ್ರಕೃತಿಯ ಸಂಪತ್ತು ಕುರಿತು ಅಭಿಮಾನ ಹುಟ್ಟಿದ್ದು ಹೇಗೆ? ಹೀಗೆ ಕನ್ನಡ ಸಾಹಿತ್ಯದ ಖ್ಯಾತಿ ಪಡೆದಿರುವ ಮನೆತನ ಸಂಬಂಧಿಸಿದ ಸಂಗತಿ ಕನ್ನಡ ಸಾಹಿತ್ಯದ ಅಧ್ಯಯನದಿಂದ ತಿಳಿದು ಬರುತ್ತದೆ. ಮಾರ್ಗ ಕಾವ್ಯ ಶೈಲಿ ಅಚ್ಚಗನ್ನಡ ದೇಶಿಯತೆ ಕಲಿಕೆ 'ಸಾಜದ ಪುಲಿಗೆರೆಯ ತಿರುಳು' ಕನ್ನಡ ಈ ಅಂಶವನ್ನು ಗಮನಿಸಿ ಹೇಳುವುದಾದರೆ ಪಂಪನ ಹುಟ್ಟು ಬನವಾಸಿ ಎಂದು ವೇದ್ಯವಾಗುತ್ತದೆ. ಹಾಗೆಯೇ ಗಂಗಾಧರ ಶಾಸನ(ಕುರಿಕ್ಯಾಲ ಶಾಸನ)ದಿಂದ ಪಂಪನ ತಾಯಿ ಅಬ್ಬಣಬ್ಬೆಯ ತವರೂರು ಪುಲಿಗೇರಿ ಹತ್ತಿರ ಅಣ್ಣಿಗೇರಿ ಎಂದು ತಿಳಿಯುತ್ತದೆ. ಈ ಶಾಸನದಿಂದ ಪಂಪನ ತಾಯಿಯ ತವರೂರು ಕುರಿತು ಸ್ಪಷ್ಟವಾಯಿತು. ಕನ್ನಡದ ಪರಿಸರ ಆತನ ಮೇಲೆ ಪ್ರಭಾವ ಬೀರಿತು. ಕನ್ನಡದ ಅಭಿಮಾನ ಹುಟ್ಟಿಕೊಂಡಿತು. ವಿಶಾಲ ದೃಷ್ಟಿಕೋನ, ಸಮನ್ವಯ ಶೀಲ, ಸವ್ಯಸಾಚಿ ವ್ಯಕ್ತಿಯಾಗಿದ್ದ ಆತನಿಗೆ ಸಮಾಜದ ಅರಿವು ಇತ್ತು. ಹೀಗಾಗಿ ಕಾವ್ಯ ಪುನರ್‌ಮೌಲ್ಯ ಮಾಡಿರುವುದು ನಿರೂಪಿತಗೊಂಡಿದೆ.

ಪಂಪನ ಕೃತಿಗಳ ಅಧ್ಯಯನದಿಂದ ತಿಳಿದು ಬರುವ ಕಾವ್ಯದ ರಚನೆ ಮತ್ತು ಎರಡು ಕೃತಿಗಳಿಂದ ಜೀವನ ಧೋರಣೆ ಪರಿಚಿತಗೊಂಡಿದೆ. ಪಟ್ಟಭದ್ರ ಹಿತಾಸಕ್ತಿಯುಳ್ಳ ರಾಜತ್ವದ ದೃಷ್ಟಿಕೋನ ಸಾಮಾಜಿಕತೆಯ ಅರಿವು ಹೀಗೆ ಹೊಸ ವಿಚಾರ ಸಾಮಗ್ರಿಗಳನ್ನು ಒದಗಿಸುತ್ತದೆ. ಕೃತಿಗೆ ಕವಿಯ ಕಾಲಮಾನ ಮಾನದಂಡವಾಗಿರುತ್ತದೆ. ದೇಶ ಕಾಲಾತೀತ ಸಾಹಿತ್ಯ ಸೃಷ್ಟಿ, ಯುಗ ಧರ್ಮದ ಇತಿಮಿತಿಗಳ ಬಲಾಬಲವನ್ನು ಅರಿತುಕೊಂಡು ವ್ಯವಹರಿಸಬೇಕಾಗುತ್ತದೆ. 'ಮನುಷ್ಯ ಜಾತಿ ತಾನೊಂದೆ ವಲಂ' ಹೇಳುವ ಪಂಪನ ಈ ಮಾತು ಜಾತಿಯೊಳಲ್ಲವು ಉತ್ತಮವಾದ ಜಾತಿ ವಿಪ್ರ ಕುಲ-ಹೀಗೆ ಹೇಳುವರು ಯಾರು? ಈ ರೀತಿ ಸೂಕ್ತಿಗಳ ಬಳಕೆ ಮಾಡುವ ಸಂದರ್ಭದಲ್ಲಿ ತದ್ವಿರುದ್ಧ ಮಾತಿಗೆ ತಿರುಗುತ್ತದೆ.

ಭರತ ಚಕ್ರವರ್ತಿ ಪಟ್ಟಾಭಿಷೇಕವಾಗುವ ಸಂದರ್ಭದ ಉತ್ಸವದಲ್ಲಿ ದಾನಕ್ಕೆ ಯೋಗ್ಯರಾದ ಗೃಹಸ್ಥರನ್ನು ಗುರುತಿಸಿ ಅವರು ಕೇಳಿದ್ದನ್ನು ಕೊಡುವುದರ ಮೂಲಕ ಅವರನ್ನು ಗೌರವಿಸುವುದು, ಆರ್ಯಷಟ್ಕ ಕರ್ಮಗಳನ್ನು ಅವರ ಕುಲಾಚಾರಗಳೆಂದು ಹೇಳಿ ಆ ಅವಧಿಯಲ್ಲಿ ಸಂಗತಿಯ ಕುರಿತು ಹೇಳುವ ಪದ್ಯ ಈ ತೆರನಾಗಿದೆ. "ಆರುಂ ವೃತ್ತಿಗಳನಿವಂ! ಮೀರಿದರಲ್ಲರ್ ದ್ವಿಜರ್ ಈ ವೃತ್ತಿಗಳಿಂ॥ ಬೇರಾದರ್ ದ್ವಿಜರ್ ಉಂತೇಂ॥ ಬೇರುಂಟೆ ಮನುಷ್ಯ ಜಾತಿ ತಾನೊಂದೆ ವಲಂ (ಆ.ಪು.೧೫-೧೪). ಆರು ವೃತ್ತಿಗಳನ್ನು ಮೀರಿದವರು ದ್ವಿಜರಲ್ಲ, ಈ ವೃತ್ತಿಗಳಿಂದ ಬೇರೆಯಾದವರು"[೪] ದ್ವಿಜರು ಮನುಷ್ಯಜಾತಿ ನಿಜವಾಗಿ ತಾನೊಂದೆ ಈ ಪದ್ಯ ಗಮನಿಸಿ ಹೇಳುವುದಾದರೆ ಮನುಷ್ಯ ವೃತ್ತಿಯಿಂದ ಮತ್ತು ಕರ್ಮದಿಂದ ಬೇರೆಯಾಗುತ್ತಾರೆ. ಹುಟ್ಟಿನಿಂದ ಬೇರೆಯಲ್ಲ; ಮನುಷ್ಯಜಾತಿಯ ನಿಜವಾಗಿ ತಾನೊಂದೇ ವರ್ಣವ್ಯವಸ್ಥೆಯ ಮೂಲ ತತ್ವ ಜೈನಧರ್ಮದ ವಿಚಾರಧಾರೆಗೆ ಅನುಗುಣವಾಗಿ ಇಲ್ಲಿ ಬಂದಿದೆ.

ಆದಿ ಪುರಾಣಕ್ಕೆ ಕಥಾ ವಸ್ತು ಪೂರ್ವ ಪುರಾಣದಂಥ ಪುರಾಣ ಭೂಯಿಷ್ಠ ವಸ್ತು ಆಕರವಾದರೆ, ಪಂಪ ಭಾರತಕ್ಕೆ ಇತಿಹಾಸ ಭೂಯಿಷ್ಠ ಹಲವು ಸ್ತರಗಳ ಕೃತಕವಾಗಿ ಬೆಳೆದು ಬಂದವು. ಪಂಪ ಭಾರತಕ್ಕಿಂತ ರನ್ನನ ಗದಾಯುದ್ಧ ಬಹಳ ಚಿಕ್ಕದು, ವಸ್ತು ವಿನ್ಯಾಸ ನಿಯಂತ್ರಿತವಾಯಿತೆಂದು ಹೇಳಿ, ಅದರ ಕಲಾತ್ಮಕ ಮೌಲ್ಯವನ್ನು ತಗ್ಗಿಸಬೇಕೆ? 'ವಿಕ್ರಮಾರ್ಜುನ ವಿಜಯ'ವೆಂದು ಕರೆದು ಪಂಪ ಭಾರತದ ಕಥಾವಸ್ತುವಿಗೂ ಅರ್ಜುನ ಪ್ರಾಶಸ್ತ್ಯ ಕೊಟ್ಟು ರಾಜಕೀಯ ಧ್ವನಿಯನ್ನು ತರುವ ಪ್ರಜ್ಞಾಪೂರ್ವಕವಾಗಿ ಮಾಡಿದ ಪಂಪನ ವಿಷಯದಲ್ಲಿ ಅರ್ಜುನ ಬಗೆಗೆ ವ್ಯಾಸರಿಗೆ ಇದ್ದ ಒಲವು ಪಂಪನಿಗಿಲ್ಲ.

ಇಬ್ಬರ ಕೃತಿಗಳ ಹಿನ್ನೆಲೆಯನ್ನು ಆಧರಿಸಿ ಹೇಳುವುದಾದರೆ ವ್ಯಕ್ತಿಯಿಂದ ವ್ಯಕ್ತಿಗೆ, ಕಾಲದಿಂದ ಕಾಲಕ್ಕೆ, ವಸ್ತು ಬೇರೆ ಬೇರೆ ರೂಪ ಪಡೆಯುತ್ತವೆ. ಉದಾ: ಶಿಖಂಡಿ ಪಾತ್ರವಾಗಿ ಅರ್ಜುನ ಯುದ್ಧ ಮಾಡಿದರೆ ಭೀಷ್ಮನು ಯುದ್ಧ ಮಾಡುವುದಿಲ್ಲ ಎನ್ನುವ ಭರವಸೆ ಕೊಡುತ್ತಾನೆ. ಇದನ್ನು ಕೇಳಿದ ಅರ್ಜುನ ದುಃಖಿತನಾಗುತ್ತಾನೆ. ಏಕೆಂದರೆ ಮನುಷ್ಯ ಸಂಬಂಧಕ್ಕೆ ಪ್ರಾಧಾನ್ಯತೆ ಸಿಗುತ್ತದೆ. ಬಾಲ್ಯದ ಅಕ್ಕರೆ ತೋರಿದ ಹಿರಿಯರ ನೆನಪು, ಮನಸ್ಥಿತಿಯ ಪ್ರಜ್ಞೆ ಜಾಗೃತಿ ಮೂಡಿಸುತ್ತದೆ. ನಂತರದಲ್ಲಿ ಕೃಷ್ಣನಿಗೆ ಕ್ಷತ್ರಿಯ ಧರ್ಮದ ಹಿನ್ನೆಲೆ ಬೋಧನೆಯ ಪ್ರತಿಫಲವಾಗಿ ಯುದ್ಧ ಮಾಡುವಂತೆ ಮನಸ್ಸು ದೃಢವಾಗುತ್ತದೆ. ನಂತರ ಪಂಪನು ಅರ್ಜುನನೊಂದಿಗೆ ಯುದ್ಧ ತಂತ್ರ ಪ್ರಯೋಗಿಸುತ್ತಾನೆ.

ಯುದ್ಧ ತಂತ್ರದಲ್ಲಿ ಹಿಂಸೆ ಹೇಗೆ ಸಹಜವೋ ಹಾಗೆ ಕಪಟವೋ ಅನಿವಾರ್ಯ; ವಾಮಾಚಾರ ಮಾಡಿ ಕೊಲ್ಲುವುದಕ್ಕೆ ಅವನ ಅಂತರಂಗದ ಸೂಕ್ಷ್ಮ ತಂತ್ರಗಳು ಕಾರ್ಯನಿರ್ವಹಿಸುತ್ತವೆ. ನಂತರ ಕರ್ಣನಿಂದ ನೋವುಂಡ ಧರ್ಮರಾಯ, ಅರ್ಜುನ, ಸಂದರ್ಭ ಹೀಗೆ ಮನುಷ್ಯನ ಮಾನಸಿಕ ಸ್ಥಿತಿ ಸ್ವರೂಪ ಅನಾವರಣಗೊಂಡಿದೆ. ಪಂಪ ಭಾರತದಲ್ಲಿ ಸಭ್ಯತೆ ಸಂಯಮಗಳು ನಿರೂಪಿತವಾಗಿವೆ. "ಪಂಪನ ಕಿರಾತಾರ್ಜುನಿಯ ಪ್ರಸಂಗದಲ್ಲಿ 'ಶಿವನನ್ನು ತಿಳಿಸುವಾಗ ಕವಿ ತನ್ನ ಪ್ರತಿಭಾ ಸಾಮರ್ಥ್ಯವನ್ನು ಔಚಿತ್ಯ ಜ್ಞಾನವನ್ನು ಪಾತಾಳಕ್ಕೆ ತುಳಿದುಕೊಂಡಂತೆ ಕಾಣುತ್ತದೆ. ಎಂಬ ಉಕ್ತಿ ತೀರ ಕಟುವಾಗಿದೆ ಎಂದು ನಮಗೆ ಅನಿಸುತ್ತದೆ. 'ನೆಲಕಿಕ್ಕಿ ಗಂಟಲಂ ಮೆಟ್ಟಿದಾಗಳ್' (ವಿ.ವಿ. ೮-೨೨ವ) ಎಂಬ ವರ್ಣನೆಯಲ್ಲಿ ಪಂಪನು ತನ್ನ ಅರಿಗನು ಮೇಲಿನ ಅಭಿಮಾನದಿಂದ ಔಚಿತ್ಯದ ಮೇರೆಯನ್ನು ಸ್ವಲ್ಪ ಮೀರಿ ಹೋಗಿದ್ದಾನೆ ಎಂಬುದು ನಿಜ. ಆದರೆ ಅರಿಗನು ಹೋರಾಡಿದ್ದು ಕಪಟ ಕಿರಾತನೊಡನೆ; ಅವನು ಸಾಕ್ಷಾತ್ ಮೃಡನೆಂದು ತಿಳಿದೊಡನೆ ಅರಿಗನು ಅವನಡಿಗೆ ಎರಗಿದನು. ಅಲ್ಲದೆ 'ನೀನಿರುವುದನ್ನ ಅರಿಯದೆ ನಾನು ಮಾಡಿದ ಪ್ರಮಾದವನ್ನು ಹೇಗೆ ನೀಗಲಿ? ಎಂದು ವಿನಯ ವಿನಮಿತೋತ್ತಮಾಂಗ'ನಾದ ಅವನ ಪರಾಕ್ರಮಕ್ಕೂ ವಿನಯಕ್ಕೂ ಶಿವನು ಮೆಚ್ಚಿದನೆಂಬುದನ್ನು ನೆನೆಯಬೇಕು. ತನಗೆ ಪಾಶುಪತಾಸ್ತ್ರವನ್ನು ಕೊಡಿಸಿದ ತಪೋವನವನ್ನು ಕುರಿತು ವ್ಯಾಸ ಭಾರತದಲ್ಲಿಯ ಅರ್ಜುನನು ಕೃತಜ್ಞತಾಭಾವದಿಂದ

ನೆನೆಯುತ್ತಾನೆ."[೫] ಸಮಸ್ತ ಭಾರತದ ತಂತ್ರ ಮತ್ತು ಗಾತ್ರಗಳಿಗೆ ಅನುಗುಣವಾಗಿ ಕೈಬಿಟ್ಟಿರಬಹುದು. ವ್ಯಾಸ ಭಾರತದ ಆ ಸಿದ್ಧ ವಸ್ತುವನ್ನು ಪಂಪಾದಿಗಳು ಸಿದ್ಧಗೊಳಿಸಿದ್ದಾನೆ. ಈ ಬಗೆಯ ಪಂಪನ ಕಥಾವಸ್ತು ಪಾತ್ರ ಸೃಷ್ಟಿಗಳಲ್ಲಿ ಬಹುಶಃ ವ್ಯಾಸಭಾರತದ ಸಂಕೀರ್ಣತೆ ಸೂಕ್ಷ್ಮತೆಗಳು ಕಂಡುಬರುವುದಿಲ್ಲವೆಂಬ ನಿರ್ದಾಕ್ಷಣ್ಯವಾದ ವಿಮರ್ಶೆ ಮೊದಲು ಬಂದಿರಬಹುದು.

'ವ್ಯಾಸರ ಮಹಾಸತ್ವ ಸ್ತನ್ಯವನ್ನು ವರಿಷ್ಟ ಪ್ರಮಾಣದಲ್ಲಿ ಹೀರಿ' ಹೀಗೆ ಪಂಪ ಭಾಷೆಯನ್ನು ಸಮರ್ಥವಾಗಿ ಬಳಸಿಕೊಂಡು ಮಹಾಕೃತಿ ರಚಿಸಿದ ಎನ್ನುವ ಮಾತು ಎಷ್ಟು ಉಚಿತ? ಮೂಲ ಆಕರವನ್ನು ಜರಿದು ಮಾತನಾಡುವುದು ಎಷ್ಟು ಸರಿ? ಎಂಬುದರ ವಿಶ್ಲೇಷಣೆಗಳು ಇಲ್ಲಿವೆ. ಪಂಪನ ಕಾವ್ಯ ಅತ್ಯಂತ ಮಹತ್ವ ಪಡೆದ ಕಾವ್ಯವಾಗಿದೆ. ಸಮಗ್ರ ವಿವೇಚನೆ, ಮುಕ್ತ ಮನಸ್ಸು ಅವನ ಅನುಭವ ಸಂಕೀರ್ಣ ಸಾಮಗ್ರಿ ಅದರಿಂದ ರೂಪುಗೊಂಡ ವ್ಯಕ್ತಿತ್ವ ಇವುಗಳ ಪ್ರತಿಫಲವಾಗಿ ಕಾವ್ಯ ಸೃಷ್ಟಿ. ಇವುಗಳ ಕಾರ್ಯಕಾರಣ ಸಂಬಂಧವನ್ನು ಹೊಸದಾಗಿ ಮೌಲ್ಯಮಾಪನ ಮಾಡಬೇಕಾದರೆ ಆಯಾ ಕಾಲ, ದೇಶ, ಪರಿಸರ ಮತ್ತು ಸಾಹಿತ್ಯದ ವ್ಯಾಪ್ತಿ ಹಾಗೂ ವರ್ತಮಾನ ಕಾಲದ ಮೌಲ್ಯಗಳ ಮಾನದಂಡವನ್ನಾಗಿ ಅನ್ವಯಿಸಿ ಹೇಳಬೇಕು. ಈ ಪ್ರಯತ್ನದಲ್ಲಿ ವ್ಯತ್ಯಾಸವಾಗಬಹುದು. ಆದಿಪುರಾಣ, ಪಂಪ ಭಾರತ ಕೃತಿಗಳನ್ನು ಯಾವುದೇ ಒತ್ತಡಕ್ಕೆ ಒಳಗಾಗಿ ಬರೆದಿದ್ದಲ್ಲ; ಪೂರ್ವಪುರಾಣವನ್ನು ಬಹುಮಟ್ಟಿಗೆ ಅನುಸರಿಸಿಕೊಂಡು ಹೋಗಬೇಕೆಂದೂ, ಆದರೆ ಧರ್ಮ ಹಾಗೂ ಕಾವ್ಯ ಇವುಗಳನ್ನು ಮೇಳೈಸಬೇಕೆಂದೂ ಅವನು ಉದ್ದೇಶಿಸಿದನು. ಈ ಸಂಗತಿಗಳನ್ನು ತಳುಕು ಹಾಕುವುದು ಸರಿಯಲ್ಲ. ಆತ ಸಂದಿಗ್ಧ ಸ್ಥಿತಿ, ಸಂಕಷ್ಟಕ್ಕೆ ಒಳಗಾಗಿ ಆದಿಪುರಾಣ ಬರೆದಿದ್ದಾನೆ. ಅಂದರೆ ಆತನ ಔಚಿತ್ಯ ಪ್ರಜ್ಞೆ ಮತ್ತು ವಿವೇಚನೆ ಇಲ್ಲದಿದ್ದರೆ ಶ್ರೇಷ್ಠ ಕೃತಿಯಾಗುತ್ತಿರಲಿಲ್ಲ. ಪೂರ್ವ ಕೃತಿಯ ಆಕರ ಮಾಡಿಕೊಂಡು ಕವಿಯ ಶಕ್ತಿಯನ್ನೆಲ್ಲ ಧಾರೆಯೆರೆದು ಒಂದು ಕಾವ್ಯ ನಿರ್ಮಿಸಿದರೆ ಸ್ವಂತಿಕೆಯಿಲ್ಲ. ಹಾಗೆಯೇ ಜೈನ ಧರ್ಮದಲ್ಲಿ ನಿಜವಾದ ನಂಬಿಕೆಯಿತ್ತು, ನಿಷ್ಠೆಯಿತ್ತು. ಪೂರ್ವ ಪುರಾಣ ವಸ್ತುವಿನಲ್ಲಿ ತೀವ್ರ ಆಸಕ್ತಿಯಿತ್ತು. ಕವಿಯ ಅನುಭವ ಮತ್ತು ಅಭಿವ್ಯಕ್ತಿ ಮುಖಗಳಿಗೆ ಗುರುತಿಸುವ ಸ್ವರೂಪವಿತ್ತು. ಹಾಗೆಯೇ ಅನುಭವ ಮತ್ತು ಅಭಿವ್ಯಕ್ತಿಗೆ ಅನ್ಯೋನ್ಯ ಬಂಧವಿತ್ತು. ಇಲ್ಲಿ ಪ್ರಸ್ತಾಪಗೊಂಡ ಮಹತ್ವದ ಸಂಗತಿ ಆಧರಿಸಿ ಹೇಳುವುದಾದರೆ, ಕವಿಯಾದವನಿಗೆ ಇವುಗಳ ವ್ಯತ್ಯಾಸ ತಿಳಿದಿರಬೇಕು. ಜೀವನದ ಶೋಧಕ್ಕಿಂತ ನಡೆದ ಬಂಧ ನಂಬಿಕೆಗಳ ಸ್ವಂತ ಅನುಭವ ಹಿನ್ನೆಲೆಯಲ್ಲಿ ಹೊಸ ಸ್ವರೂಪ ಪಡೆದುಕೊಳ್ಳುತ್ತದೆ. ಹಾಗೆಯೇ ಸಾಮಾಜಿಕ ಮತ್ತು ಸಾಹಿತ್ಯಿಕ ಸನ್ನಿವೇಶಗಳು ಜೀವನ ಹುಡುಕಾಟದ ಜೊತೆಗೆ ನಂಬಿಕೆಯನ್ನು ಅಲುಗಾಡಿಸಬಹುದು. ತನ್ನ ಮನೋಭೂಮಿಕೆಯಲ್ಲಿ ಅನುಭವ ಮತ್ತು ಅಭಿವ್ಯಕ್ತಿಯ ಸಾಮರಸ್ಯ ಕೃತಿಯಲ್ಲಿ ರೂಪುಗೊಂಡಿದೆ. ಬದುಕಿನಲ್ಲಿ ಬರುವ ಜೀವನ ಧೋರಣೆಗಳು, ಕಾವ್ಯಮುಖಿಯಾಗಿ ಅಭಿವ್ಯಕ್ತಗೊಂಡಿದೆ. ಆದಿಪುರಾಣಕ್ಕೆ ತದ್ವಿರುದ್ಧವಾಗಿ ಪಂಪಭಾರತದಲ್ಲಿ ಮೌಲ್ಯಗಳು ಒಳಗೊಂಡಿವೆ.

ಪಂಪನ ಕಾಲದ ಪರಿಸರ ಮತ್ತು ಅವನ ಮನೋಧರ್ಮ ಅರಿತು ಅರಿಯದವರಂತೆ ಆಧುನಿಕ ಪರಿಭಾಷೆಯಲ್ಲಿ ಆತನ ಕೃತಿಗಳ ಮೌಲ್ಯಮಾಪನ ಮಾಡುತ್ತಾರೆ. ಜೈನ ಧರ್ಮದಲ್ಲಿ ಎಷ್ಟು ನಂಬಿಕೆಯಿತ್ತೋ ಅಷ್ಟೇ ಕ್ಷಾತ್ರ ಧರ್ಮದಲ್ಲಿ ನಂಬಿಕೆಯಿತ್ತು. ಈ ಹಿನ್ನೆಲೆ ಅರಿತ ಪಂಪ ಮೋಕ್ಷ ಪ್ರಾಪ್ತಿ, ವೈರಾಗ್ಯ ಮತ್ತು ಜೀವನೋತ್ಸಾಹಕ್ಕೂ ನಡುವೆ ಇರುವ ಸಂಘರ್ಷ ಕಾಣುತ್ತಾನೆ. ಮಹಾಬಲ ಕುಮಾರನಿಗೆ ಮಂತ್ರಿಗಳು ಮಾಡುವ ಉಪದೇಶ, ಲಲಿತಾಂಗ–ಸ್ವಯಂಪ್ರಭೆ, ಶ್ರೀಮತಿ–ವಜ್ರಜಂಘರ, ಕಥಾ ಸಂದರ್ಭ, ನೀಳಾಂಜನೇಯ ನೃತ್ಯ ಸಂದರ್ಭ ಇವು ಪಂಪನ ಸೂಕ್ಷ್ಮ ಕಥನಾತ್ಮಕ ಅಥವಾ ನಾಟ್ಯಾತ್ಮಕ ಸನ್ನಿವೇಶಗಳಲ್ಲಿ ನಿರೂಪಿತಗೊಂಡಿದೆ. ಆದರೆ ಸಂಘರ್ಷ ಸ್ವರೂಪ ಗೌಣಗೊಂಡು ಕವಿಯ ವಸ್ತು, ಅಲ್ಲಲ್ಲಿ ಜೀವನ ಸೌಖ್ಯಭೋಗ ಪ್ರಮೇಯ ದರ್ಶನ ಸಮಯೋಚಿತವಾಗಿ ಅನಾವರಣಗೊಂಡಿದೆ. ಪಂಪನ ಮುಖಾಮುಖಿಯಾಗಿ ಪರಿಚಯವಾಗುವ ಮಹಾಭಾರತದಲ್ಲಿ ತನ್ನ ಸಮಕಾಲೀನ ಭಾರತ ಸ್ಥಿತಿ ಅನುಭವ ಹೊಸರೂಪ ಪ್ರಸ್ತುತಗೊಂಡಿದೆ ಎಂಬ ಮಾತನ್ನು ಸ್ಮರಿಸಿಕೊಳ್ಳಬಹುದು. ಮಾನವನ ಸಂಘರ್ಷದ ವಿವಿಧ ಪಾತ್ರಗಳು ಚಿತ್ರಿತಗೊಂಡಿವೆ.

ಆದಿಪುರಾಣ ಕಾವ್ಯದ ಪ್ರೇರಣೆ ಪಡೆದು ಜೈನ ಪುರಾಣ ತಂತ್ರದಲ್ಲಿ ಕಾವ್ಯಧರ್ಮ ಮತ್ತು ಧರ್ಮಗಳ ಬೆಸುಗೆ ಪಡೆದಿದೆ. ಮೂಲ ಕೃತಿಯನ್ನು ಅನುಸರಿಸಿದರೂ ಮೂಲಕ್ಕಿಂತ ಭಿನ್ನ ನೆಲೆ ಅಭಿವ್ಯಕ್ತಗೊಂಡಿದೆ. ಪುರುದೇವನ ವಿಕಾಸಶೀಲ ಪರಿಮಿತಿ, ಭವಾವಳಿ ವೈರಾಗ್ಯ ಸಂದರ್ಭ, ತಪೋನುಷ್ಠಾನ, ಮಕ್ಕಳಾದ ಭರತ ಮತ್ತು ಬಾಹುಬಲಿ ಕದನ ಸಂಘರ್ಷವಾಗಿರದೆ ಸಂಸಾರ ಸಾರೋದಯವೆನಿಸುವಂಥ ಅರ್ಥವಂತಿಕೆಯನ್ನು ಪಡೆಯುತ್ತದೆ. ಪಂಪಭಾರತವು ಆದಿಪುರಾಣಕ್ಕಿಂತ ಹೆಚ್ಚು ಮುಕ್ತವಾದ ಮತ್ತು ಪರಿಪಕ್ವವಾದ ಕಥನ ತಂತ್ರವನ್ನು ಒಳಗೊಂಡಿದೆ. ಆದಿಪುರಾಣಕ್ಕೆ ಇರುವಂತೆ ಪಂಪಭಾರತಕ್ಕೆ ಅದರ ಇತಿಮಿತಿ ಇರುತ್ತದೆ. ವಸ್ತು, ಪಾತ್ರ, ಶೈಲಿ ತ್ರಿಕೂಟ ಉದ್ದಿಷ್ಟ ಸ್ವಾರಸ್ಯಕ್ಕೆ ಭಂಗ ಉಂಟಾಗುವುದಿಲ್ಲ. ಆದಿಪುರಾಣದಲ್ಲಿ ಆದಿ ತೀರ್ಥಂಕರನಾದ ಪುರದೇವನ ಆತ್ಮವಿಕಾಸದ ಭವಾವಳಿಗಳು ಪರಿಚಿತಗೊಂಡಿವೆ. ಒಂದೇ ನಾಣ್ಯದ ಎರಡು ಮುಖಗಳಾದ ಭೋಗ ಮತ್ತು ತ್ಯಾಗ ಪ್ರಸ್ತುತಗೊಂಡಿದೆ. ಭರತ ಮತ್ತು ಬಾಹುಬಲಿ ಸನ್ನಿವೇಶ, ಮೋಕ್ಷ, ಆತ್ಮ, ಶಾಸ್ತ್ರ ಸಂಪ್ರದಾಯಗಳ ಜಡತೆ ಮತ್ತು ಅಭಿವ್ಯಕ್ತಿ ಸಾಧನೆ ಅನಾವರಣಗೊಂಡಿದೆ. ಮೂಲದೊಡನೆ ಹೋಲಿಸಿ ಪಂಪನ ಸ್ವಂತಿಕೆ ಆದಿಪುರಾಣ ರಸಸ್ಥಾನಗಳೂ ಪೂರ್ವ ಜನ್ಮದ ಸ್ವಯಂಪ್ರಭೆ ನಂತರ ಶ್ರೀಮತಿಯಾಗಿ ಹುಟ್ಟಿದಳು. ಪೂರ್ವಜನ್ಮದ ಲಲಿತಾಂಗ ಎಚ್ಚರ ತಪ್ಪಿ ಏನು ಮಾತನಾಡದೆ ಇರುವ ಸಂದರ್ಭ, ಮಗಳ ಮೌನವನ್ನು ಗಮನಿಸಿದ ತಂದೆ–ತಾಯಿಯರ ದಿಙ್ಮೂಡತೆ, ತೀವ್ರ ಚಿಂತೆ ಈ ಎಲ್ಲಾ ಅಂಶಗಳ ಪೂರ್ವಭವದ ಪತಿಯ ಸ್ಮರಣೆಯಿಂದ ಸತಿಗೆ ಉಂಟಾದ ಮಾನಸಿಕ ಆಘಾತವನ್ನು ಪಂಪನು ಅದ್ಭುತವಾಗಿ ನಿರೂಪಿಸಿದ್ದಾನೆ.

ಪಂಪಭಾರತದಲ್ಲಿ ಅರ್ಜುನ-ಅರಿಕೇಸರಿ ಸಮೀಕರಣದೊಂದಿಗೆ ತ್ರಿಲೋಕ ವೀರನಾದ ಅರ್ಜುನ ಸಾಮಂತ ಚೂಡಾಮಣಿಯಾದ ಅರಿಕೇಸರಿ ಶೌರ್ಯ, ಸಾಹಸ, ಬಿರುದು, ಅರ್ಜುನನಿಗೆ ಸಂದವು. ತಂದೆ-ತಾಯಿಯರ ಹೆಸರು ಅರ್ಜುನ ತಂದೆ-ತಾಯಿಯ ಹೆಸರಾಯಿತು. ಪಂಚ ಪಾಂಡವರ ಏಕಪತ್ನಿ ದ್ರೌಪದಿ-ಅರ್ಜುನನ ಪತ್ನಿಯಾದಳು. ಹಾಗೆಯೇ ಮಾನಭಂಗ ಪ್ರಸಂಗದಲ್ಲಿ ಭೀಮನು ಅರ್ಜುನನಿಗಿಂತ ಹೆಚ್ಚು ಕೇರಳಿ ಭೀಷ್ಮ ಪ್ರತಿಜ್ಞೆ ಮಾಡಿ ಯುದ್ಧದ ಕೊನೆಯಲ್ಲಿ ಅರ್ಜುನನೊಡನೆ ಸುಭದ್ರೆ ಗದ್ದುಗೆಗೇರಿದಳು. ದ್ರೌಪದಿಯಲ್ಲಿ ಈ ಕೃತಿಯ ನಾಯಕ ಅರ್ಜುನನಾಗಿದ್ದದ್ದು ಹಾಗೆಯೇ ಅಂತ್ಯದ ವೇಳೆಗೆ 'ಕರ್ಣನಿಗೆ ವಿಶೇಷ ಸ್ಥಾನಮಾನ ಸಿಕ್ಕಿತು. ಕರ್ಣನ ಪಡೆಮಾತಿನೊಳ್ ಪುದಿದು ಕರ್ಣ ರಸಾಯನ ಮಲ್ತೆ ಭಾರತಂ' ಎಂದು ಪಂಪ ಹೇಳಿದನು. ಪಂಪ ಭಾರತ ತನ್ನ ಉಜ್ವಲ ರಸಪ್ರಜ್ಞೆಯಿಂದ ಆಶ್ಚರ್ಯಗೊಳ್ಳುವಂತೆ ಮಾಡಿತು.

**'ಪಂಪನ ದೇಶಿಯತೆ'**

ಕನ್ನಡ ಭಾಷೆ ಸ್ಥಳೀಯವಾಗಿ ತನ್ನದೇಯಾದ ಚರಿತ್ರೆಯನ್ನು ಹೊಂದಿದೆ. ಪಂಪನಿಗಿಂತ ಮೊದಲು ಕನ್ನಡ ಸಾಹಿತ್ಯ ಸಂಸ್ಕಾರ ಪಡೆದಿತ್ತು ಎನ್ನುವುದು ಸಾಹಿತ್ಯದ ಅಧ್ಯಯನದಿಂದ ವೇದ್ಯವಾಗುತ್ತದೆ. ಹಲ್ಮಿಡಿಯಿಂದ ಹಿಡಿದು ೧೦ನೇ ಶತಮಾನದವರೆಗೆ ಪೂರ್ವಹಳೆಗನ್ನಡ, ನಡುಗನ್ನಡ, ಹೊಸಗನ್ನಡದಂತಹ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿದೆ. ಆದರೆ ಆರಂಭದಿಂದಲೂ ಕನ್ನಡ ಭಾಷೆ ಸಂಸ್ಕೃತದ ಪ್ರಭಾವಕ್ಕೆ ಒಳಗಾಗಿದೆ. ಕನ್ನಡ ಭಾಷೆ ಪ್ರಭೇದಗಳಾದ ಪೂರ್ವ ಹಳೆಗನ್ನಡ, ಹಳೆಗನ್ನಡ, ನಡುಗನ್ನಡ, ಹೊಸಗನ್ನಡ ಇವು ಆಯಾ ಕಾಲದಲ್ಲಿ ಭಾಷಾ ಸ್ವರೂಪವನ್ನು ಬದಲಾಯಿಸುತ್ತ ಬಂದಿದೆ. ಕನ್ನಡ-ಸಂಸ್ಕೃತ ಇವುಗಳ ಸಂಬಂಧ ಪ್ರಾಚೀನವಾದುದು. ಹಾಗೆಯೇ ಲಕ್ಷಣ ಗ್ರಂಥವಾದ ಕವಿರಾಜಮಾರ್ಗವು ಕನ್ನಡ ದೇಶಿಯ ಸ್ವರೂಪ, ಕನ್ನಡ-ಸಂಸ್ಕೃತ ಕುರಿತು ಪೂರ್ವಕಾಲದ ಹಳೆಗನ್ನಡದಲ್ಲಿ ಎರಡು ರೀತಿಯ ದೋಷಗಳು 'ಕವಿರಾಜಮಾರ್ಗ'ದಲ್ಲಿ ಕಾಣುತ್ತವೆ. ೧. ಕನ್ನಡ-ದೇಶಿಯ ಕಟ್ಟುನಿಟ್ಟು. ೨. ಕನ್ನಡ-ಸಂಸ್ಕೃತ ವಿಷಯ ಮಿಶ್ರಣ ಮಾಡಿ ಬಳಸಿದ್ದು ಕಂಡುಬರುತ್ತವೆ. 'ನೆಲಸಿದ ಕಾವ್ಯ ಲಕ್ಷಣಂ ಸತತವೆಂದು ಪಱಕನ್ನಡಮಂ ಪೊಲಗೆಡಿಸಿ ನುಡಿವರಾಗಮ ಬಲಹೀನರ್ ದೇಶಿಯಲ್ಲ ವೆಱೆದುರ್ಱಂ' (೧-೪೮) ಪ್ರಸ್ತುತ ಮಾತು ಸಾಂಪ್ರದಾಯಿಕತೆಯ ಕನ್ನಡ ಕಾವ್ಯದ ದೃಷ್ಟಿಯನ್ನು ಎತ್ತಿ ತೋರಿಸಿದ್ದಾರೆ.

ಕನ್ನಡದಲ್ಲಿ ಸಂಸ್ಕೃತದ ಅತಿಬಳಕೆಯ ಕಾರಣದಿಂದಾದ ದೋಷಗಳ ಕುರಿತು ಚರ್ಚಿಸಲಾಗಿದೆ. 'ಸಮ-ಸಂಸ್ಕೃತ' ತಂಗಳೊಳ್ ತಳ್ತಮರ್ದಿರೆ ಕನ್ನಡಮನೀರೆಂದು ಪೇಲ್ಗೆ ಕನ್ನಡಕ್ಕೆ ಸರಿ ಮಾಡಿದ ಸಮ ಸಂಸ್ಕೃತಗಳಲ್ಲಿ ಕೂಡಿಕೊಳ್ಳುವಂತೆ ಕನ್ನಡವನ್ನು "ಕನ್ನಡಮನಱೆಂದು ಪೇಳ್ಗೆ ಇದಂ ಬೆರಸಲ್ಕ ಮಾಗದಿ ಸಕ್ಕದದೊಳ್ ಕನ್ನಡದೊಡನೆ ಹೊಂದಿಕೆಯಾಗಬಲ್ಲ ಕನ್ನಡಕ್ಕೆ ಸರಿಮಾಡಿದ ಸಮಸಂಸ್ಕೃತಗಳ ಕೂಡಿಕೊಳ್ಳುವಂತೆ ಕನ್ನಡವನ್ನು ಅರಿತು ಹೇಳಬೇಕು."[೬] ಈ ರೀತಿ ಹೇಳಿದರೆ ಯಾವ ಕಾಲಕ್ಕೂ ಭಾಷೆ ತನ್ನ ಮೌಲ್ಯವನ್ನು

ಕಳೆದುಕೊಳ್ಳುವುದಿಲ್ಲ. ಹೀಗಾಗಿ ಕನ್ನಡಕ್ಕೆ ಬೆರೆಸುವ ರೀತಿ ಬಹಳ ಸೂಕ್ಷ್ಮವಾಗಿರಬೇಕು ಎಂಬುದು ತಿಳಿಸುತ್ತದೆ. ದೇಶಿ–ಮಾರ್ಗಗಳ ಶೈಲಿ ಮಾದರಿಯಾಗಿದೆ. ಆತನಲ್ಲಿ ದೇಶಿ–ಮಾರ್ಗಗಳೆರಡಕ್ಕೂ ಮಹತ್ವವಿದೆ. ಪಂಪಭಾರತದಲ್ಲಿ ವ್ಯಾಸಭಾರತ ಸಾರ ಸಂಗ್ರಹವನ್ನು ಮಾಡಲು ಹೊರಟ ಎಂಥ ರಸವಿವೇಕವನ್ನು ಪಂಪನು ಗ್ರಂಥದುದ್ದಕ್ಕೂ ತೋರಿಸಿದ್ದಾನೆ. 'ಕತೆಪಿರಿದಾದೊಡಂ ಕಥೆಯ ಮೆಯ್ಗಿಡಲಯದೆ ಸಮಾಸ್ತ ಭಾರತವನ್ನು ಅಪೂರ್ವವಾಗಿ ಹೇಳುವಲ್ಲಿ ಸಾಮಾನ್ಯವಾಗಿ ಯಾವುದು? ಎಷ್ಟು? ಎಲ್ಲಿ? ಹೇಗೆ ಹಿಗ್ಗಿಸಬೇಕು, ಕುಗ್ಗಿಸಬೇಕು? ಅಗತ್ಯತೆಗೆ ಅನುಸಾರವಾಗಿ ರೂಪುಗೊಂಡಿದೆ.

ಪಂಪಭಾರತದಲ್ಲಿ ಈ ನಾಡಿನ ದುರಂತಕ್ಕೆ ಮೂಲವಾದ ಜೂಜಾಟ ಮತ್ತು ಭೀಮ ಪ್ರತಿಜ್ಞೆ ಸಂದರ್ಭಗಳು ದೇಶಿಯ–ಮಾರ್ಗ ಸಮ್ಮಿಶ್ರಣದೊಂದಿಗೆ ಅಭಿವ್ಯಕ್ತಗೊಂಡಿವೆ. ಕರುಣಾಕ್ರಂದನವು ದೇಶಿಯತೆಯಲ್ಲಿ ಮಾರ್ಗವಾಗಿ ಎದ್ದಿದೆ. ಮಾದ್ರಿಯ ಬಳಲಿಕೆ ಕಟ್ಟೆಂ ಎಂಬುದರಿಂದ ಮೊದಲಾದುದು ಮುಂದೆ ಬರುವ 'ಓ' ಕಾರ ಪರಿಯನ್ನು ದೇಶಿಯತೆಯಲ್ಲಿ ಕಾಣುತ್ತದೆ. ಮಾರ್ಗ ದುಜ್ಯೋದನನದೇನದೆಂ ಮರುಳಾದನೊ ಬಡಿಗಂಡನಿಲ್ಲ ಪಾಲನೆಕಂಡು ಈ ಎಂಬಲ್ಲಿ ಗಾದೆ ಮಾತಿನ ಬಹಳ ಬಳಕೆ ಮಾಡಿಕೊಂಡಿದ್ದಾನೆ. ಅಂದರೆ ಪಂಪನಿಗೆ ಜನಜೀವನ ಹಾಗೂ ಜನವಾಣಿಯ ಪರಿಚಯ ಎಷ್ಟಿಂತ್ತೆಂಬುದಕ್ಕೆ ಇಲ್ಲಿ ಪ್ರಸ್ತಾಪಗೊಂಡಿರುವ ಈ ದುರಂತಗಳೇ ಸಾಕ್ಷಿ. "ಳನೇ ಆಶ್ವಾಸದಲ್ಲಿ ವಜ್ರದಂತನು ಮಗಳನ್ನು ಅಳಿಯನನ್ನು ಕಿರಿದಂತಹವರೆಗೆ ಕಳುಪಿ ಮರಳುವಾಗ 'ಪೊಡೆಮಡುವ ಅಪ್ಪಿಕೊಳ್ವ ನೆನೆಯುತ್ತಿರಿ, ಎಂಬ, ಸಮಸ್ತವಸ್ತುವಂ ಕುಡುವ ಪಲರ್ಮೆಯಿಂ ಪರಸಿ ಸೇನೆಯನಿಕ್ಕುವ ಬುದ್ದಿವೇಳ್ವಿ ಕೈಯಡೆ ನಿಮಗೆ ಎಂದು ಒಡಂಬಡಿಪ ನಲ್ಲರಲ್ಕೆಗೆ ಕಣ್ಣನೀರ್ಗಳಂ ಮಿಡಿವ ಬಹುಪ್ರಕಾರ ಜನಸಂಕಟವೊಪ್ಪಿದುದು ಆ ಪ್ರಮಾಣದೋಳ್ ಎಂಬ ವರ್ಣನೆಯಿದೆ."

ಬಕಾಸುರನ ಕಥೆಯಲ್ಲಿ ಪಂಪನ ಹಾಸ್ಯ ಪರಿಚಿತಗೊಂಡಿದೆ. ಪಾತ್ರಗಳಲ್ಲಿ ದೇಶಿಯತೆ ಕಾಣುತ್ತದೆ. ಉದಾ: ಪೊಡೆವ ಕೂಳಿಂ ಬರೆಯಂ ಪೊಡೆವೆಂ ರಕ್ಕಸನೆಂದು ಸಾಹಸಭೀಮಂ ಮಾತು ಗಂಡುತನವನ್ನು ಪ್ರತಿನಿಧಿಸುತ್ತದೆ. ಖಾಂಡವನದ ಪ್ರಸಂಗದಲ್ಲಿ ಕೃಷ್ಣಾರ್ಜುನರ ಸಂಭಾಷಣೆ ದೇಶಿಯತೆ ಮತ್ತು ಆಯಾ ಪಾತ್ರಗಳ ವ್ಯಕ್ತಿತ್ವ ಪರಿಚಿತಗೊಂಡಿದೆ. ಭರತ–ಬಾಹುಬಲಿಯರ ಚಿತ್ರಣದಲ್ಲಿ ಮೂಲಕ್ಕೆ ಮೆರಗು ಕೊಟ್ಟು ದೇಶಿಯತೆಯನ್ನು ಲೇಸುಗೊಳಿಸಿ ಪಂಪನು ವಾಸ್ತವ ಆದರ್ಶ ಮೆರೆದಿಸಿದ್ದಾನೆ. ಪಂಪಭಾರತ ಉನ್ನತ ಪಾತ್ರ ಪೋಷಣೆಯೊಂದಿಗೆ ಪರಿಚಿತಗೊಂಡಿದೆ.

ಎರಡು ಕೃತಿಗಳಲ್ಲಿ ಸೌಂದರ್ಯ, ಜೀವನದ ಚಿತ್ರಣ ಅಲ್ಲದೆ ದೇಶಿಯ ಐಸಿರಿಯು ಅನಾವರಣಗೊಂಡಿದೆ. ಜನಜೀವನಕ್ಕೆ ಸಂಬಂಧಿಸಿದ ವೇಶ್ಯಾವಾಟಿಕೆ, ಬೇಟೆ, ಕಾಳಗ, ಪ್ರಸಂಗಗಳು ನಿರೂಪಿಸಲ್ಪಟ್ಟಿವೆ. ಜನ ಭಾಷೆಯನ್ನು ಪಂಪನ ದೇಶಿಯತೆ ತುಂಬ ಅದ್ಭುತವಾಗಿ ಚಿತ್ರಿತಗೊಂಡಿದೆ. ಹಾಗೆಯೇ ಗಾದೆ ಮಾತು ಆದಿಪುರಾಣಕ್ಕಿಂತಲೂ ಪಂಪ ಭಾರತದಲ್ಲಿ

ಯಥೇಚ್ಛವಾಗಿ ಬಳಕೆಯಾಗಿದೆ. ಸಂದರ್ಭಕ್ಕೆ ಅನುಸಾರವಾಗಿ ವ್ಯಕ್ತಿಯ ಸ್ವಭಾವಕ್ಕೆ ಹೊಂದಿಕೊಳ್ಳುವ ಔಚಿತ್ಯ ಮೆರೆದಿದೆ. ಅದಕ್ಕೆ ನಿದರ್ಶನವೆಂದರೆ ಹಿಡಿಂಬೆ ಭೀಮನನ್ನು ತಿನ್ನಲು ಬಂದು ಅವನಲ್ಲಿ ಪ್ರಣಯ ಹುಟ್ಟಿ ಮದನನೇ ತನ್ನನ್ನು ತಿನ್ನುವಂತಾಗಲು 'ಪಡನೋಡಲ್ ಬಂದವರಂ ಪೋಜೆಸಿದರ್ ಎಂಬುದಾಯ್ತು' ಎನ್ನುತ್ತಾಳೆ. ತನ್ನದು ಸಹಜ ಪುಲಿಗೆರೆಯ ತಿರುಳ್ಕನ್ನಡ' ಎಂದು ಪಂಪ ತಾನೇ ಹೇಳಿಕೊಂಡಿದ್ದಾನೆ. 'ಪುಲಿಗೆರೆಯ ತಿರುಳ್ ಕನ್ನಡ' ಎಂದರೆ ಕವಿರಾಜಮಾರ್ಗದಲ್ಲಿ ಹೇಳಲಾದ ಪುಲಿಗೇರಿ ಕೂಪಣ ಕಿಸುಮೊಳಲ್, ಒಕ್ಕುಂದ ಈ ನಾಲ್ಕು ಊರುಗಳ ಮಧ್ಯದಲ್ಲಿ ಇರುವುದೆ 'ತಿರುಳ್ ಕನ್ನಡ'. ಕನ್ನಡ ದೇಶಿಯರು ಅನ್ಯ ಭಾಷೆಗಳ ಪ್ರಭಾವಕ್ಕೆ ಒಳಗಾದವರಲ್ಲಿ, ಹಾಗೆಯೇ ಪುಲಿಗೆರೆ ಬನವಾಸಿಗಳ ಅಂತರವು ಹೆಚ್ಚಿದೆ. ರಾಜಕೀಯ, ಸಾಮಾಜಿಕ ಹಿನ್ನೆಲೆ ಹೊಂದಿದೆ. ಭಾಷಾ ದೃಷ್ಟಿಯಿಂದ ವಾಕ್ಯರಚನೆ, ವಿಶಿಷ್ಟ ರಚನೆ, ವಿಶಿಷ್ಟ ಪ್ರಯೋಗ, ಪದಾನುಕ್ರಮ ಯೋಜನೆ ಇವುಗಳಲ್ಲಿ ದೇಶಿಯತೆ ಕಾಣಬಹುದು. ಈ ಹಿನ್ನೆಲೆಯನ್ನು ಅರಿತು ಪಂಪನು ಕನ್ನಡದ ದೇಶಿಯ ಆಸ್ಮಿತೆಯು ಉಳಿದುಕೊಂಡಿದೆ.

**ಭರತ - ಬಾಹುಬಲಿಯರನ್ನು ಪಂಪ ನೋಡಿದ ರೀತಿ**

ಭರತ ಬಾಹುಬಲಿಯ ಪಾತ್ರಗಳಲ್ಲಿ ಪಂಪನ ದೃಷ್ಟಿಕೋನವನ್ನು ಹಾವನೂರ ಅವರು ವಿಶ್ಲೇಷಿಸಿದ್ದಾರೆ. ಈ ಎರಡು ವ್ಯಕ್ತಿತ್ವದ ಸ್ವರೂಪ, ಜೈನ ಪುರಾಣದ ಪರಂಪರೆ ಪ್ರಸ್ತುತಗೊಂಡಿದೆ. ಆದಿಪುರಾಣ ೪ನೇ ಆಶ್ವಾಸದಲ್ಲಿ ಬಂದಿರುವ ಭರತ ಬಾಹುಬಲಿಯ ಸಂಘರ್ಷದ ಸ್ವರೂಪ ಅನಾವರಣಗೊಂಡಿದೆ. ಪಂಪನ ಕಾಲದ ಸಾಮಾಜಿಕ ಮತ್ತು ರಾಜಕೀಯ ಬದುಕಿನ ಚಿತ್ರಣ ಜೈನ ಧರ್ಮದ ಹಿನ್ನೆಲೆ ಆಧರಿಸಿ ಮನುಕುಲಕ್ಕೆ ಕೊಡುವ ಸಂದೇಶ ಬಹಳ ಮಹತ್ವದ್ದಾಗಿದೆ. ಅಧಿಕಾರ ಮತ್ತು ಕೌಟುಂಬಿಕ ಸಂಬಂಧಗಳನ್ನು ತೌಲನಿಕವಾಗಿ ನೋಡುವುದರ ಮೂಲಕ ಮನುಷ್ಯನ ವಿವೇಚನೆ ಹೇಗೆ ದೃಢರೂಪ ತಾಳುತ್ತದೆ ಎಂಬುದರ ಬಗೆಗೆ ವಿವರಣೆಗಳಿವೆ.

ಆರಂಭದ ಸನ್ನಿವೇಶ ಸಂಘರ್ಷ ಸ್ವರೂಪ ಅಂತ್ಯದ ವೇಳೆಗೆ ಮನಸ್ಸಿನ ವಿವೇಚನೆಯ ಮನುಕುಲದ ಸಾಮರಸ್ಯ ಮತ್ತು ಮೌಲ್ಯಯುತ ಸಂಬಂಧ ಮನೋದೃಢತೆಯ ನಿರೂಪಿತಗೊಂಡಿದೆ. ಸನಾತನ ಸಾಂಪ್ರದಾಯದಂತೆ ಹಿರಿಯನಿಗೆ ಅಧಿಕಾರ ಕೊಡುವುದು ವಾಡಿಕೆ. ಹಾಗೆಯೇ ತಂದೆಯ ನಂತರ ಚಕ್ರರತ್ನ ಹುಟ್ಟುವುದರ ಪ್ರತಿಯಾಗಿ ದಿಗ್ವಿಜಯಕ್ಕೆ ಹೊರಟು ಭರತ ಖಂಡದ ಸುತ್ತಿ ಅಯೋಧ್ಯಯ ಹೆಬ್ಬಾಗಿಲ ಬಳಿ ಚಕ್ರರತ್ನ ಬಂದು ನಿಲ್ಲುತ್ತದೆ. ಅಂದರೆ ಪ್ರಬಲವಾದ ಇನ್ನೊಂದು ಶಕ್ತಿಯಿದೆ ಎಂಬುದನ್ನು ಸೂಚಿಸುತ್ತದೆ.

ಒಡಹುಟ್ಟಿದ ಸಹೋದರಲ್ಲಿ ಅಧಿಕಾರಕ್ಕಾಗಿ ಮುಖಾ-ಮುಖಿಯಾಗಿ ಶಕ್ತಿ ಪ್ರದರ್ಶನವಾಗುವುದು ನಿರೂಪಿತಗೊಂಡಿದೆ. ಸದರಿ ವಿಚಾರವು ಅಧಿಕಾರ, ಶಕ್ತಿ, ಅಹಂಕಾರ

ಪ್ರತಿರೂಪ ಇಲ್ಲಿಯ ಸಂಬಂಧ ಗೌಣವಾಗುತ್ತದೆ. ಜಗತ್ತನ್ನೇ ಗೆದ್ದ ಹಿರಿಯ ಸೋದರನಿಗೆ ತನ್ನ ಸೋದರರು ವಿರೋಧ ಪ್ರಸಂಗ, ಅಂತ್ಯದ ಹೊತ್ತಿಗೆ ಭರತನನ್ನು ಬಾಹುಬಲಿ ಸೋಲಿಸುತ್ತಾನೆ. ಈ ಪರಿಸ್ಥಿತಿಯ ಅರಿತವರು ಕುಲವೃದ್ಧರು, ಮಂಡಳಿಯವರು, ಆಡುವ ಮಾತಿಗೆ ಭರತನು ಸರ್ವ ರಾಜ್ಯ ಗೆದ್ದ ರಾಜನಾಗಿದ್ದರು. ಜನಸಾಮಾನ್ಯರ ಮುಂದೆ ವ್ಯಕ್ತಿತ್ವಕ್ಕೆ ಬೆಲೆ ವ್ಯಕ್ತಿತ್ವದ ಸ್ವರೂಪ ಅನಾವರಣಗೊಂಡಿದೆ. ಅಧಿಕಾರ, ಹಣ, ಸಂಪತ್ತು ಎಲ್ಲಾ ಇದ್ದಾಗ್ಯೂ ಕೂಡ ಪರಿಸ್ಥಿತಿ ಅಥವಾ ಕಾಲದ ಮುಂದೆ ಯಾರೂ ದೊಡ್ಡವರಲ್ಲ ಎನ್ನುವುದನ್ನು ಮನನ ಮಾಡಿದ್ದಾರೆ ಹಾವನೂರ ಅವರು.

ಅಧಿಕಾರ ಅಥವಾ ಶಕ್ತಿ ಪಡೆದರೆ ಅಹಮ್ಮಿಕೆಯ ಸ್ವರೂಪ ಒಂದು ಭಾಗವಾದರೆ ಇನ್ನೊಂದು ಸಾಧನೆ ಮಾಡಿದ ವ್ಯಕ್ತಿಯ ಸ್ವರೂಪ, ಬಾಂಧವ್ಯ ಸಂಬಂಧಕ್ಕೆ ಪ್ರಾಮುಖ್ಯತೆ ನೀಡಿರುವುದು ಕಂಡು ಬರುತ್ತದೆ. ಅಂದರೆ ದಿಗ್ವಿಜಯದ ಭ್ರಮರನಿರಸನದಲ್ಲಿ ಇರುವ ಭರತ ವಾಸ್ತವ ಜಗತ್ತನ್ನು ಮರೆತು, ಜಗತ್ತು ಗೆದ್ದನೆಂಬ ಅಹಂಕಾರ ಭಾವ ಆತನಲ್ಲಿ ಇತ್ತು. ಈ ಕಾರಣಕ್ಕೆ ಮಾನವೀಯ ಸಂಬಂಧಗಳು ಗೌಣಗೊಂಡು ಸಾಮಾಜಿಕ, ರಾಜಕೀಯ ಮತ್ತು ಕೌಟುಂಬಿಕ ಬಂಧುತ್ವ ಹಳಸಿತು. ಭರತ ಮತ್ತು ಬಾಹುಬಲಿ ಈ ಎರಡು ಪಾತ್ರ ಆತ್ಮಪ್ರೌಢಿಮೆಯ ಮತ್ತು ಮನಸ್ಸು ನಿರಾಧಾರ ಬಾಹುಬಲಿಯಾದರೆ, ದೈಹಿಕವಾಗಿ ಹಿರಿಯನಾದರೂ ತನ್ನ ಹಿರಿತ್ವವನ್ನು ಕಾಯ್ದುಕೊಳ್ಳುತ್ತಾನೆ. ಪಂಪನು ವ್ಯಕ್ತಿಯ ನಡೆ ಆಯಾ ಕಾಲಮಾನದ ಗುಣಧರ್ಮ ಸಾಮಾಜಿಕ ಮತ್ತು ರಾಜಕೀಯವಾಗಿ ಪ್ರಾಬಲ್ಯ ಪಡೆದುಕೊಳ್ಳುತ್ತದೆ. ಕಾಲದಿಂದ ಕಾಲಕ್ಕೆ ಮನುಷ್ಯ ಅಭಿರುಚಿಯನ್ನು ಬದಲಾಯಿಸುವುದು ಸಾಹಿತ್ಯದಿಂದ ಸಾಧ್ಯ ಎಂಬುದು ದೃಢವಾಗುತ್ತದೆ.

**'ಮಧ್ಯಕಾಲೀನ ಕರ್ನಾಟಕ'**

ಹಾವನೂರ ಅವರು ಜಿ.ಎಸ್.ದೀಕ್ಷಿತರ ಆಯ್ದು ಬಿಡಿ ಬರಹಗಳನ್ನು ಸಂಪಾದಿಸಿದ್ದಾರೆ. ಅಖಿಲ ಭಾರತ ಮಟ್ಟದಲ್ಲಿ ಇತಿಹಾಸ ಸಮ್ಮೇಳನಗಳ ಅಧ್ಯಕ್ಷತೆಯನ್ನು ವಹಿಸಿ, ನೂರಾರು ವಿದ್ಯಾರ್ಥಿಗಳಿಗೆ ಇತಿಹಾಸ ದೀಕ್ಷೆಯನ್ನು ಕೊಟ್ಟವರು ಜಿ.ಎಸ್.ದೀಕ್ಷಿತ್ ಅವರು. ಈ ಸಂಪಾದನೆಯ ಬಿಡಿ ಬರಹಗಳನ್ನು ಮೂರು ಭಾಗಗಳನ್ನಾಗಿ ಶ್ರೀನಿವಾಸ ಹಾವನೂರ ಅವರು ವಿಂಗಡಿಸಿದ್ದಾರೆ.

೧. ಮಧ್ಯಯುಗ

೨. ಐತಿಹಾಸಿಕ ಲೇಖನಗಳ ಸಮೀಕ್ಷೆ

೩. ಅನುಬಂಧ

ಶ್ರೀನಿವಾಸ ಹಾವನೂರ ಅವರು ಮಧ್ಯಯುಗದ ಕಲ್ಯಾಣ ಕ್ರಾಂತಿ ಕಾಲಘಟ್ಟದ ಮತ್ತು ಆಡಳಿತ ಸಂಬಂಧ ಕಲಚೂರಿ, ಚಾಲುಕ್ಯ, ಸೇವುಣ, ಹೊಯ್ಸಳರ ಆಳ್ವಿಕೆಗಳ

ಪ್ರಮುಖ ಸಂಗತಿಗಳಾದ ಬಿಜ್ಜಳ, ಬಸವಣ್ಣನ ಐಕ್ಯ, ಕಲಚೂರಿಗಳ ವಂಶದ ಆಡಳಿತದ, ಅವನತಿಯ ಸನ್ನಿವೇಶ ಕಲ್ಯಾಣ ಕ್ರಾಂತಿ ನಂತರ ಕಲ್ಯಾಣದಿಂದ ಬಸವಣ್ಣ ಮತ್ತು ಶರಣರ ಪುರಾವೆ ಬಿಟ್ಟು ಹೋಗಿರುವ ಸಂಗತಿಗಳನ್ನು ಚರ್ಚಿಸಿದ್ದಾರೆ. ಬಿಜ್ಜಳನ ಕೊಲೆ ಮತ್ತು ಕಲ್ಯಾಣ ಕ್ರಾಂತಿ ಕ್ರಿ.ಶ. ೧೧೬೮ರಲ್ಲಿ ನಡೆಯಿತೆಂದು ಹೇಳುವುದಕ್ಕೆ ಪೂರಕವಾದ ಪುರಾವೆಗಳ ಆಧಾರಗಳಿಲ್ಲದ್ದರಿಂದ ನಿಖರವಾಗಿ ಹೇಳುವುದು ಕಷ್ಟ ಎಂದಿದ್ದಾರೆ. ಮಹಾಮಂಡಳೇಶ್ವರ ಬಿಜ್ಜಳ ಬಲಿಷ್ಠನಾಗಿದ್ದರಿಂದ ಚಕ್ರವರ್ತಿ ಚಾಳುಕ್ಯ ೩ನೇ ತೈಲಪನು ಅಸಮರ್ಥನಾಗಿದ್ದರಿಂದ ಬಿಜ್ಜಳ ಸಿಂಹಾಸನ ಏರುವುದನ್ನು ವಿರೋಧಿಸಿದನು.

ಈ ಎಲ್ಲಾ ಸಂಗತಿಯನ್ನು ಅರಿತ ಚಾಲುಕ್ಯ ವಂಶಜರು ಮತ್ತು ನಿಷ್ಠಾವಂತರು ಅಧಿಕಾರಿ ಬಿಜ್ಜಳನನ್ನು ವಿರೋಧ ಮಾಡಿದರು. ಬಿಜ್ಜಳನ ವಂಶದವರೇ ಆದ ತಮ್ಮ ಕೆಲವು ಮಕ್ಕಳಲ್ಲಿ ಓರ್ವ ಮೊಮ್ಮಗ ಬಿಜ್ಜಳನ ರೀತಿಯನ್ನು ಅನುಸರಿಸಿದನು. ಅವನ ವಿರುದ್ಧವೇ ದಂಗೆ ಎದ್ದರು. ಈ ಪರಿಸ್ಥಿತಿಯನ್ನು ಸರಿಪಡಿಸುವುದು ಕಷ್ಟವಾಗಿತ್ತು. ಹೀಗಾಗಿ ಬಿಜ್ಜಳ ಕ್ರಿ.ಶ. ೧೧೬೭ರಲ್ಲಿ ಪದತ್ಯಾಗ ಮಾಡಿ ತನ್ನ ಮಕ್ಕಳಲ್ಲಿ ಯೋಗ್ಯನಾದ ಸೋವಿದೇವನಿಗೆ ಅಧಿಕಾರ ವಹಿಸಿಕೊಟ್ಟನು. ಈ ಪರಿಸ್ಥಿತಿ ಗಮನಿಸಿದ ದಾಯಾದಿಗಳಲ್ಲಿ ವೈರತ್ವ ಹಾಗೇ ಮುಂದುವರಿಯಿತು. ಆ ಕಾಲಕ್ಕೆ ಬಸವಣ್ಣನ ಚಳುವಳಿ ಪ್ರಾರಂಭಗೊಂಡಿತ್ತು. ಹೀಗಾಗಿ ರಾಜಕೀಯ ಮತ್ತು ಧಾರ್ಮಿಕ ಸಂಘರ್ಷಗಳು ಕಲ್ಯಾಣವನ್ನು ಅಲ್ಲೋಲ-ಕಲ್ಲೋಲ ಮಾಡಿದವು. ಇದರ ಪ್ರಭಾವದಿಂದ ಕಲಚೂರಿಗಳ ಸ್ಥಿತಿ ಅವನತಿಯ ಕಡೆಗೆ ಸಾಗಿತು. ಪರಿಸ್ಥಿತಿಯನ್ನು ಅರಿತ ಬಿಜ್ಜಳ ಧಾರ್ಮಿಕ ವಿರೋಧಿಗಳನ್ನು ಹಿಮ್ಮೆಟ್ಟಲು ನಿರ್ಧಾರ ತೆಗೆದುಕೊಂಡನು ಎಂಬುದನ್ನು ಸಂಪಾದಕರು ವಿವರಿಸಿದ್ದಾರೆ.

ಈ ಸಂದರ್ಭಕ್ಕೇ ಕಲಚೂರಿಗಳ ವಿರೋಧಿಗಳಾದ ಸೇವುಣರು ಮತ್ತು ಹೊಯ್ಸಳರು ಕಾಯುತ್ತಿದ್ದರು. ಅನೇಕ ಬಾರಿ ದಾಳಿ ಮಾಡಿ ಕಲಚೂರಿಗಳನ್ನು ದುರ್ಬಲಗೊಳಿಸುತ್ತಿದ್ದರು. ಈ ಪರಿಸ್ಥಿತಿ ಅರಿತ ಚಾಲುಕ್ಯರ ೩ನೇ ತೈಲಪನ ಮಗ ೪ನೇ ಸೋಮೆಶ್ವರ ಕಲ್ಯಾಣದ ಮೇಲೆ ಕ್ರಿ.ಶ. ೧೧೮೪ರಲ್ಲಿ ದಾಳಿ ಮಾಡಿದನು. ಇನ್ನೊಂದು ಅಂಶವೆಂದರೆ ಕಲಚೂರಿ ಮಹಾಪ್ರಧಾನ ಮತ್ತು ಸೇನಾಪತಿ ಬಮ್ಮರಸ ಅಥವಾ ಬಮ್ಮಯ್ಯ ಬಹಳ ಸಮರ್ಥನೆಂದು ಖ್ಯಾತಿ ಗಳಿಸಿದ್ದನು. ಈತ ಪರಿಸ್ಥಿತಿಯನ್ನು ಅವಲೋಕಿಸಿ ಕಲಚೂರಿಗಳು ಸೋಲುವುದು ಮತ್ತು ಚಾಲುಕ್ಯರ ಗೆಲ್ಲುವುದು ಖಚಿತಪಡಿಸಿಕೊಂಡು, ಕಲಚೂರಿಗಳ ಬಿಟ್ಟು ಚಾಲುಕ್ಯರನ್ನು ಸೇರಿ, ಅವರಲ್ಲಿ ಪ್ರಮುಖನಾದ ೪ನೇ ಸೋಮೇಶ್ವರ ಆ ರಾಜ್ಯ ಸ್ಥಾಪನೆ ಕಾರ್ಯದಲ್ಲಿ ಪ್ರಮುಖ ಪಾತ್ರವಹಿಸಿದನು. "ಕ್ರಿ.ಶ. ೧೧೮೪ರ ಅಣ್ಣಿಗೇರಿ ಶಾಸನದಲ್ಲಿ ಕಲಚೂರಿ ಕುಳ ಕಾಳನಳ ಅಂದರೆ ಕಲಚೂರಿ ಕುಲಕ್ಕೆ ಕಾಡ್ಗಿಚ್ಚು ಎಂದೆನಿಸಿಕೊಂಡನು. ಅಬ್ಬಲೂರು ಶಾಸನದಲ್ಲಿ ತ್ರಿಭುವನಮಲ್ಲ ಸೋಮೇಶ್ವರ ದೇವಂ ಸರಳ ಚಮೂನಾಥ ಶಿರೋಮಣಿಯಂ

ಚಾಲುಕ್ಯ ರಾಜ್ಯ ಪ್ರತಿಸ್ಥಾಪಕನು ಕುಮಾರ ಬಮ್ಮಯ್ಯನೆಂದು ಮೆರೆದಯ ಎಂದಿದೆ. ಕಲಚೂರಿಗಳ ಕುಲ ನಾಶವಾಗಲಿಕ್ಕೆ ಬಮ್ಮಯ್ಯನೇ ಮುಖ್ಯ ಕಾರಣ".[೮] ಎಂಬುದನ್ನು ದಾಖಲೆಗಳ ಮೂಲಕ ಹಾವನೂರ ಅವರು ವಿವರಿಸಿದ್ದಾರೆ.

ಪಂಡಿತರಾಧ್ಯ ಚರಿತ್ರೆ ಮತ್ತು ವೀರಶೈವ ಪುರಾಣಗಳಲ್ಲಿ ಬಿಜ್ಜಳನ ಕೊಲೆ ಮಾಡಿದ ಸಂಗತಿ ಚರ್ಚೆಗೆ ಒಳಪಟ್ಟಿದೆ. ಜಗದೇವಮಲ್ಲ ಮತ್ತು ಬೊಮ್ಮಯ್ಯ ಇಬ್ಬರಲ್ಲಿ ಕೊನೆಯವನು ಬಮ್ಮಯ್ಯನೆಂಬುದು ಹಾವನೂರ ಅವರ ಅಭಿಮತ. ಕ್ರಿ.ಶ. ೧೧೮೪ರ ಅಣ್ಣಿಗೇರಿ ಶಾಸನದಲ್ಲಿ ಉಲ್ಲೇಖಿಸಿದಂತೆ ಕಲಚೂರಿ ಕುಳಕಾಳನೆಂದು ಹೇಳಿರುವುದಲ್ಲದೇ ಅವನ ತಮ್ಮ ನರಸಿಂಹನು ಬಿಜ್ಜಳನನ್ನು ಮಹಾಸಂಕ್ರಮಣದಲ್ಲಿ ಕೊಂದನೆಂದು ತಿಳಿದುಬರುತ್ತದೆ. ಮುಂದೆ ಅದನ್ನು ಹೀಗೆ ಸಮರ್ಥಿಸುತ್ತಾನೆ. 'ಸಮರದೊಳ್' ಎಂಬ ಮಾತು ಸ್ಪಷ್ಟತೆಯನ್ನು ಪರಿಚಯಿಸುತ್ತದೆ. ಈ ಹಿನ್ನೆಲೆಯಲ್ಲಿ ಬಿಜ್ಜಳನ ಕೊಲೆ ಅವನ ಸಂತತಿಯವರಾದ ಬಮ್ಮಯ್ಯ-ನರಸಿಂಹ ಜಗದೇವ ಮತ್ತು ಮಲ್ಲಯ್ಯನವರಿಂದ ನಡೆಯಿತೆಂದು ತಿಳಿಯುತ್ತದೆ. ಇದೇ ಕಾಲಕ್ಕೆ ಅಂದರೆ ಕ್ರಿ.ಶ.೧೧೮೪ರಲ್ಲಿ ಕಲ್ಯಾಣ ಕ್ರಾಂತಿ ಜರುಗಿತು.

ಈ ಮೇಲಿನ ಸಂಗತಿಗಳನ್ನು ಅವಲೋಕಿಸಿದರೆ ಈ ಸಂದರ್ಭಕ್ಕೆ ಕ್ರಿ.ಶ.೧೧೮೪ರ ಕಾಲದವರೆಗೆ ಬದುಕಿದ್ದ ಎನ್ನುವುದು ಒಂದೆಡೆಯಾದರೆ, ಅದಕ್ಕೆ ಪ್ರತಿಯಾಗಿ ಮತ್ತೊಂದು ಕ್ರಿ.ಶ. ೧೧೬೭ರ ಪದತ್ಯಾಗ ಮಾಡಿದನೆಂದು ನಂತರದವರೆಗೆ ಅಂದರೆ ಕ್ರಿ.ಶ.೧೧೮೪ರವರೆಗೆ ಏನು ಮಾಡುತ್ತಿದ್ದ? ಹಾಗೆಯೇ ಬಿಜ್ಜಳ ಜೀವಂತವಿದ್ದ ಮತ್ತು ಬಸವಣ್ಣನ ಐಕ್ಯ ಇವೆರಡಕ್ಕೂ ಅಲ್ಪಕಾಲದ ಅಂತರವಿದೆ; ಒಂದು ವರ್ಷವೆಂದು ಸ್ಪಷ್ಟವಾಗುತ್ತದೆ ಎಂದು ಹಾವನೂರ ವಿಶ್ಲೇಷಿಸಿದ್ದಾರೆ. ಕ್ರಿ.ಶ.೧೧೩೨ರಲ್ಲಿ ಮಂಗಳವಾಡದಲ್ಲಿ ಸಾರ್ವಜನಿಕ ಜೀವನದಲ್ಲಿ ತೊಡಗಿಕೊಂಡಿದ್ದು, ನಂತರ ಮಹಾಮಂಡಳೇಶ್ವರನಾಗಿದ ಬಿಜ್ಜಳನು ಆಸ್ಥಾನದಲ್ಲಿ ಕರಣಿಕನಾಗಿ ಬಸವಣ್ಣ ಕಾರ್ಯನಿರ್ವಹಿಸುತ್ತಿದ್ದನು. ಹಾಗೆಯೇ ವೈಯಕ್ತಿಕವಾಗಿ ಬಹಳ ಆತ್ಮೀಯರಾಗಿದ್ದು ಬಸವಣ್ಣ ಕಾರ್ಯವೈಖರಿಯವನ್ನು ಮೆಚ್ಚಿಕೊಂಡು ಮಂತ್ರಿ ಪದವಿ ನೀಡಿದನು. ನಂತರ ಇಬ್ಬರ ಆಲೋಚನೆಗಳು ವ್ಯತಿರಿಕ್ತವಾದ ಕಾರಣದಿಂದ ಬಸವಣ್ಣ ಕಲ್ಯಾಣ ಬಿಟ್ಟು ಹೊರಟನು. ನಂತರ ಬಿಜ್ಜಳ ಚಕ್ರವರ್ತಿಯಾದನು.

ಬಸವರಾಜ ರಗಳೆ ಮತ್ತು ಪುರಾಣಗಳ ಪ್ರಕಾರ ಬಿಜ್ಜಳನಿಗೆ ಬಸವಣ್ಣ ಸುಧಾರಣ ಚಳುವಳಿ ಮಾಡುವುದು ಬೇಡವಾಗಿತ್ತು. ಹೀಗಾಗಿ ಬಿಜ್ಜಳನ ಚಳುವಳಿಯನ್ನು ನಿಲ್ಲಿಸಲು ಸೂಚನೆ ನೀಡಿದನು. ಅದಕ್ಕೆ ಬಸವಣ್ಣ ಒಪ್ಪಲಿಲ್ಲ. ಚಳುವಳಿ ಮುಂದುವರೆಸಿದ ಪ್ರತಿಫಲವಾಗಿ (ಬಸವಪುರಾಣ ಪ್ರಕಾರ) ಚಳುವಳಿಯ ಸುಧಾರಕನಾದ ಹರಳಯ್ಯ, ಮಧುಮಯ್ಯರು ಬಿಜ್ಜಳನಿಂದ ಕೊಲೆಯಾದರು. ಈ ಕಾಲಘಟ್ಟದಲ್ಲಿ ಚಾಲುಕ್ಯರಿಗೂ ಮತ್ತು ಕಲಚೂರಿಗಳಿಗೂ ಯುದ್ಧ ನಡೆದಿತ್ತು. ಈ ಎಲ್ಲದರ ಸ್ವರೂಪವಾಗಿ ಕಲ್ಯಾಣ ಕ್ರಾಂತಿ ಕ್ರಿ.ಶ. ೧೧೮೪ರಲ್ಲಿ ಜರುಗಿತು.

**ಬಸವಣ್ಣ ಜೀವಿತದ ಕಾಲ**

ಕರ್ನಾಟಕದ ಬಸವಣ್ಣನ ಕಾಲಘಟ್ಟ ಕುರಿತು ಚರ್ಚೆ ಪ್ರಸ್ತಾಪಗೊಂಡಿದೆ. ಅಂದರೆ ಬಸವಣ್ಣ ಜನಿಸಿದ್ದು ಕ್ರಿ.ಶ.೧೧೦೫. ಮತ್ತು ಲಿಂಗೈಕ್ಯರಾಗಿದ್ದು ಕ್ರಿ.ಶ. ೧೧೬೭ರಲ್ಲಿ ಆದರೆ ಅವರು ಬದುಕಿದ್ದು ೬೨ ವರ್ಷಗಳ ಕಾಲ ಇನ್ನೊಂದು ಪ್ರಕಾರದಲ್ಲಿ ಜೀವಿಸಿದ ಕಾಲ ೩೬ ಎಂದಿದೆ. ಹಾಗಾದರೆ ಹುಟ್ಟಿದ್ದು ಕ್ರಿ.ಶ. ೧೧೩೧ರಲ್ಲಿ ಎಂಬುದಾಗಿ ಕಂಡುಬರುತ್ತದೆ.೨ ಕರ್ನಾಟಕ ಮತ್ತು ಆಂಧ್ರದಲ್ಲಿ ಈ ವಿಷಯ ಕುರಿತ ಚರ್ಚೆಗೆ ಕೃತಿ ಮತ್ತು ಶಾಸನಗಳು ಪುರಾವೆಯಾಗಿ ನಿಂತಿವೆ. ತೆಲುಗು ನಾಡಿನ ವಿದ್ವಾಂಸರಾದ ಬಂಡಾರ ತಮ್ಮಯ್ಯನವರು ಕನ್ನಡ ವಿದ್ವಾಂಸರ ನಿಲುವುಗಳನ್ನು ಒಪ್ಪಿಕೊಳ್ಳುತ್ತಾರೆ. ಇತಿಹಾಸಕಾರ ಎನ್.ವೆಂಕಟರಮಣಯ್ಯನವರ 'ಪಾಲ್ಕುರಿಕೆ ಸೋಮನಾಥ' ತೆಲುಗು ಭಾಷೆಯ ಕೃತಿ ಪಂಡಿತರಾದ್ಯ ಚರಿತ್ರೆಯನ್ನು ಅನುಸರಿಸಿ ಬಸವಣ್ಣ ಕ್ರಿ.ಶ. ೧೧೧೮ರಲ್ಲಿ ಲಿಂಗೈಕ್ಯರಾಗಿರಬಹುದು. ನಂತರ ಆಂಧ್ರದ ಕರ್ನೂಲ್ ಜಿಲ್ಲೆಯ ಸಂಗಮೇಶ್ವರದಲ್ಲಿ ತೆಲುಗು ಶಾಸನ 'ಬಸವಣ್ಣ' ಕಾಲಮಾನ ಗುರುತಿಸಲಿಕ್ಕೆ ಪುರಾವೆಯಾಗಿ ನಿಂತಿದೆ. ಈ ಮಹತ್ವದ ಅಂಶವನ್ನು ಗಮನಿಸಿದಾಗ ಪಂಡಿತರಾದ್ಯ ಚರಿತ್ರೆ ಮತ್ತು ಸಂಗಮೇಶ್ವರ ಶಾಸನಗಳ ಕಾಲಮಾನವನ್ನು ಸೂಚಿಸಿ ಅವರು ಬದುಕಿದ ಕಾಲ ೮೦ ವರ್ಷಗಳು ಎಂದು, ಲಿಂಗೈಕ್ಯರಾಗಿದ್ದು ಕ್ರಿ.ಶ. ೧೧೮೫ ಎಂದು ನಿಲುವು ತಾಳಲು ಸಾಧ್ಯವಾಗಿರುವ ಬಗೆಯನ್ನು ಹಾವನೂರ ಅವರು ವಿಶ್ಲೇಷಿಸಿದ್ದಾರೆ.

ಬಸವಣ್ಣ ಮತ್ತು ಮಲ್ಲಿಕಾರ್ಜುನ ಪಂಡಿತರಾಧ್ಯರು ಇಬ್ಬರು ಸಮಕಾಲೀನರಾಗಿದ್ದು, ಅವರುಗಳ ಬದುಕಿನಲ್ಲಿ ನಡೆದ ಘಟನೆಗಳ ಚರಿತ್ರೆ ಕಟ್ಟಿಕೊಳ್ಳಲು ಸತ್ಯಕ್ಕೆ ಹತ್ತಿರವಾದ ಸಂಗತಿ. ಎಂದರೆ ಸೋಮನಾಥ ಕೃತ 'ಪಂಡಿತರಾದ್ಯ ಚರಿತ್ರೆ' ಇದರಲ್ಲಿ ಕೆಲವು ಘಟನೆಗಳನ್ನು, ನಿದರ್ಶನಗಳನ್ನು ಕಾಣಬಹುದು. ವೆಲನಾಡು ಚೋಳ ಗುಂಟೂರು ಜಿಲ್ಲೆಯ ಸದನಪೋಲಿನಲ್ಲಿ ೨ನೇ ಆಳ್ವಿಕೆ ಮಾಡುತ್ತಿದ್ದ. ಪಂಡಿತರಾಧ್ಯರು ಆಸ್ಥಾನದಲ್ಲಿ ಇದ್ದರು. ಅದೇ ಆಸ್ಥಾನದಲ್ಲಿ ಬೌದ್ಧನೆಂಬುವನು ಆಶ್ರಯ ಪಡೆದಿದ್ದರು. ಆಸ್ಥಾನದ ವಾದದಲ್ಲಿ ಬೌದ್ಧನನ್ನು ಪಂಡಿತರಾಧ್ಯರು ಸೋಲಿಸಿದರು. ಇದರಿಂದ ಕುಪಿತಗೊಂಡ ಬೌದ್ಧ ಪೂಜಾ ಸಾಮಗ್ರಿಯಾದ 'ಸಮೇವನ್ನು' ಕಳವು ಮಾಡಿದನೆಂದು ಗೊತ್ತಾಗಿ, ಪಂಡಿತರಾಧ್ಯರ ಶಿಷ್ಯರು ಕೊಪಗೊಂಡು ಬೌದ್ಧನನ್ನು ಕೊಂದನು. ಹೀಗಾಗಿ ಬಸವಣ್ಣನ ಅನುಯಾಯಿಗಳು ಬಿಜ್ಜಳನನ್ನು ಕೊಂದನೆಂದು ಪ್ರಸ್ತಾಪಗೊಂಡಿದೆ.

**ಬಿಜ್ಜಳನ ಸಾವು ಕುರಿತು**

ಜಿ.ಎಸ್.ದೀಕ್ಷಿತರ ಸಾಹಿತ್ಯವನ್ನು ಸಮಾಜಮುಖಿಗೊಳಿಸುವುದು ಹಾವನೂರ ಅವರ ಉದ್ದೇಶ. ಕ್ರಿ.ಶ. ೧೧೮೪ರಲ್ಲಿ ಚಾಲುಕ್ಯರ ೪ನೇ ಸೋಮೇಶ್ವರ ತನ್ನ ಶಾಸನದಲ್ಲಿ ಉಲ್ಲೇಖಗೊಂಡ ಮಾತು ಇದಕ್ಕೆ ಪುಷ್ಠಿ ಕೊಡುತ್ತದೆ. ಅವನು ಬಿಜ್ಜಳನನ್ನು ಕೊಲೆ ಮಾಡಿದವರಲ್ಲಿ ಒಬ್ಬವನೆಂದು ವಾದಿಸಿದನು. ಈ ಮಾತಿಗೆ ವ್ಯತಿರಿಕ್ತ ಅಭಿಪ್ರಾಯ ಹೇಳಿದ

ಬಿ.ಎಲ್. ಸ್ವಾಮಿಯರಿಗೆ ಪೂರಕವಾಗಿ ಹಾವನೂರ ವಿಷಯ ಸ್ಪಷ್ಟತೆಗೆ ಪ್ರಸ್ತುತ ಲೇಖನ ಮಂಡಿಸಿದ್ದಾರೆ.

**ಕಲಚೂರಿ ೨ನೇ ಬಿಜ್ಜಳನ ಸಾವನ್ನು ಕುರಿತು**

ಈ ವಿಷಯ ಕ್ರಿ.ಶ.೧೯೯೪ಳರಲ್ಲಿ ಬಸವ ಪಥದಲ್ಲಿ ಪ್ರಕಟಗೊಂಡಿದೆ. ಬಿಜ್ಜಳನ ಸಾವು ೧೧೬೬–೬೭ರಲ್ಲಿ ಆಯಿತು. ಹಾಗೆಯೇ ಬಿ.ಎಲ್.ಸ್ವಾಮಿಯವರ ಅಭಿಪ್ರಾಯ ಮತ್ತು ವೀರಶೈವ ಅಭಿಪ್ರಾಯ ವ್ಯತಿರಿಕ್ತವಾಗಿದೆ. ಈ ಮಾತನ್ನು ಸಮರ್ಥಿಸಲಿಕ್ಕೆ ಕೆಲವು ನಿದರ್ಶನಗಳನ್ನು ಕೊಡುತ್ತಾರೆ. ತೆಲುಗು ಭಾಷೆ ಶಾಸನ ಮತ್ತು ಅದೇ ಭಾಷೆಯ ಕೇಯಾರು ಬಾಹು ಚರಿತ್ರೆಯು ಪರಿಚಯಿಸುತ್ತದೆ. ಹಾಗೆಯೇ ಬಿಜ್ಜಳನ ಸಾವಿಗೆ ಆಂಧ್ರಪ್ರದೇಶದ ಗುಂಟೂರು ಹತ್ತಿರದ ವೆಲುನಾಡಿನಲ್ಲಿ ಕಲ್ಯಾಣ ಚಾಲುಕ್ಯರಿಗೂ ತಮಿಳುನಾಡಿನ ಚೋಳರಿಗೂ ನಡೆದ ಯುದ್ಧ ಕಾರಣ. ಏಕೆಂದರೆ ೬ನೇ ವಿಕ್ರಮಾದಿತ್ಯ ಗೆದ್ದ ಕಾರಣ ಕುಲೋತುಂಗ ಅದನ್ನು ವಶಪಡಿಸಿಕೊಂಡಿದ್ದ. ಹೀಗಾಗಿ ಚಾಲುಕ್ಯ ಮತ್ತು ಕಲಚೂರಿಗಳು ತಮ್ಮ ಹಕ್ಕನ್ನು ಬಿಟ್ಟು ಕೊಡುವಂತಿರಲಿಲ್ಲ.

'ನಂದೂರ ಶಾಸನ'ದಲ್ಲಿ ಉಲ್ಲೇಖಿಸಿದಂತೆ ವೆಲನಾಡಿನ ರಾಜೇಂದ್ರ ಚೋಳನ ಸೇನಾಪತಿ ಕೆಮ್ಮಣನಿಗೂ ಬಿಜ್ಜಳನ ಅಳಿಯನಾದ ೨ನೇ ಚಾವುಂಡರಾಯನಿಗೆ 'ಕೊರ್ಚೆಲ ಕೋಟೆ' ಎನ್ನುವಲ್ಲಿ ಯುದ್ಧವಾಯಿತು. ಈ ಕದನದಲ್ಲಿ ಚಾವುಂಡರಾಯ ಮಡಿದಿರಬಹುದೆಂದು ಸ್ವಾಮಿಯ ಹೇಳಿಕೆಯಂತೆ, ಅಳಿಯ ಬಿಜ್ಜಳನೂ ಕದನದಲ್ಲಿ ತೊಡಗಿಕೊಂಡು ಯುದ್ಧದಲ್ಲಿ ಗಾಯಗೊಂಡಿರಬೇಕು ಇಲ್ಲವೇ ಕಲ್ಯಾಣಕ್ಕೆ ಬಂದು ತೀರಿಕೊಂಡಿರಬೇಕು. ಮೊಲ್ಲೆ ಬೊಮ್ಮಯ್ಯನ ಮತ್ತು ಜಗದೇವಯ್ಯ ಬಿಜ್ಜಳನ ಕೊಲೆಗಾರರೆಂದು ಹೇಳಿದ ಪುರಾವೆಗಳಿವೆ. ಯಲಬುರ್ಗಾ ಮತ್ತು ರೋಣ ತಾಲ್ಲೂಕಿನ ಐತಿಪ್ಯ, ಶಾಸನಗಳಲ್ಲಿ ಮೊಲ್ಲೆ ಬೊಮ್ಮಯ್ಯನ ಕಾವ್ಯ, ಪಾಲ್ಕುರಿಕೆಯ ಸೋಮನಾಥ ಪಂಡಿತರಾಧ್ಯ ಚರಿತ್ರೆ ಮತ್ತು ಬಸವ ಪುರಾಣಗಳಲ್ಲಿ ಪ್ರಸ್ತಾಪಗೊಂಡಿದೆ. ಬಿಜ್ಜಳನ ಕೊಲೆಯ ಊಹನಾತ್ಮಕ ಅಂಶಗಳನ್ನು ಗಮನಿಸಬಹುದು. ತಂದೆ ಕಾವಣನ ಮಗ ಬೊಮ್ಮರಸ ಸೇನಾಪತಿಗಳಾಗಿದ್ದರೆಂದು ಮತ್ತು ಕಾವಣನಿಗೆ ಮೂರು ಮಕ್ಕಳಿದ್ದರು. ಬೊಮ್ಮರಸ, ಕೇಶವ, ನರಸಿಂಹ ಇದ್ದರೆಂದು ಕಡ್ಲೆವಾಡ ಶಾಸನದಿಂದ ತಿಳಿದುಬರುತ್ತದೆ.

ಕಲಚೂರಿಗಳು ಸಂಶಯ ದೃಷ್ಟಿಯಿಂದ ನೋಡುತ್ತಾರೆ ಅಥವಾ ಅವರಲ್ಲಿ ಸಮರ್ಥ ರಾಜರು ಇಲ್ಲವೆನ್ನುವ ಕಾರಣಕ್ಕೋ ಹೀಗಾಗಿ ಚಾಲುಕ್ಯ ಕಲಚೂರಿಗಳನ್ನು ಸುಲಭವಾಗಿ ಸೋಲಿಸಬಹುದು ಎನ್ನುವ ಸಂಶಯದಿಂದ ಕಲಚೂರಿಗಳ ಬಿಟ್ಟು ೪ನೇ ಸೋಮೇಶ್ವರ ಕಡೆಗೆ ಸೇರಿಕೊಂಡು ಬೊಮ್ಮರಸ ಮುಖ್ಯ ಸೇನಾಪತಿಯಾದ ನಂತರ ತಮ್ಮ ನಾರಸಿಂಹ ಮತ್ತು ಚಾಲುಕ್ಯರನ್ನು ಸೇರಿಸಿಕೊಂಡನು. ಇನ್ನೊಬ್ಬ ಮಗ ಕೇಶವ ಕಲಚೂರಿಯಲ್ಲಿ ಮುಂದುವರಿದನು.

ಕ್ರಿ.ಶ. ೧೧೧೩ರಲ್ಲಿ ಕಲಚೂರಿಗರ ಮುಖ್ಯ ಸೇನಾಪತಿಗೂ ಮತ್ತು ಕಾವಣ ಚಾಲುಕ್ಯರ ಮುಖ್ಯ ಸೇನಾಪತಿ ಬೊಮ್ಮರಸನಿಗೂ ಯುದ್ಧ ನಡೆಯಿತು. ಆ ಯುದ್ಧದಲ್ಲಿ ಕಲಚೂರ್ಯರ ಅರವತ್ತು ಆನೆಗಳು ಚಾಲುಕ್ಯರಿಗೆ ಬರುವಂತೆ ಮಾಡಿ ಅವರನ್ನು ಸೋಲುವಂತೆ ಮಾಡಿದನು. ಈ ಎಲ್ಲಾ ಮಹತ್ವಗಳನ್ನು ಗದುಗಿನ ಒಂದು ಶಾಸನದಿಂದ ಪೀಟರ್ ಊಹೆ ಮಾಡಿದ್ದಾನೆ. ಈ ಹಿನ್ನೆಲೆಯಲ್ಲಿ ಕಾವಣನು ಚಾಲುಕ್ಯರಿಗೆ ಸಹಾಯ ಮಾಡಿದನೆಂದು ಶಂಕಿಸಿ ಈತನನ್ನು ನಮ್ಮ ಸೈನ್ಯದಲ್ಲಿ ಮುಂದುವರಿಸಿದರೆ, ಸೋಲು ನಮಗೆ ಖಚಿತವೆಂದು ತಿಳಿದು ಕಾವಣನನ್ನು ಕೊಂದು ಹಾಕಿದರು. ಈ ಕಾರಣ ಬೊಮ್ಮರಸನು ಕಲಚೂರರನ್ನು ನಾಶ ಮಾಡಬೇಕೆಂದು ನಿರ್ಧರಿಸಿದರು. ಹೀಗೆಂದು ಕ್ರಿ.ಶ. ೧೧೮೪ರ ಅಣ್ಣಿಗೇರಿಯ ಶಾಸನದಲ್ಲಿ ಉಲ್ಲೇಖಗೊಂಡಿದೆ. ಊಹೆಗಳು ಶಾಸನಗಳ ಆ ಕಾಲಘಟ್ಟಗಳಲ್ಲಿ ಯುದ್ಧ ಆಧರಿಸಿ ಕಲಚೂರಿ ನಾಶವಾದರೆಂದು; ಹಾಗೆಯೇ ಬಿಜ್ಜಳ ಹತ್ಯೆಯಾಗಿರಬೇಕು.

**ಬಸವಣ್ಣನ ಇತಿಹಾಸ ವಚನದ ವಿಶ್ಲೇಷಣೆ**

ಬಸವಣ್ಣ ಚಾರಿತ್ರಿಕ ಹಿನ್ನೆಲೆ ಚರ್ಚೆಗೊಂಡಿದೆ. ಕಲ್ಯಾಣ ರಾಜ್ಯದ ಅವನತಿಯ ದಾರಿ ಹಿಡಿಯಿತು. ವ್ಯಕ್ತಿಗೆ ಅಧಿಕಾರ, ಸಂಪತ್ತು, ಸೌಂದರ್ಯ ಶಾಶ್ವತವಲ್ಲ. ಆದರೆ ಈ ನಾಡನ್ನು ಆಳಿದ ದೊರೆ ವಿಕ್ರಮಾದಿತ್ಯನ ಕಾಲದಲ್ಲಿ ಉತ್ತುಂಗ ಕಂಡಿತ್ತು. ನಂತರ ಕಲ್ಯಾಣಿ ಚಾಲುಕ್ಯರ ಕಾಲಕ್ಕೆ ಅವನತಿ ಹೊಂದಿತ್ತು. ವಿಜಯನಗರದ ಅರಸರು ಕನ್ನಡದವರೇ? ತೆಲುಗರೇ? ಎನ್ನುವ ಬಗೆಗಿನ ಚರ್ಚೆ ಇದೆ. ಅದಕ್ಕೆ ಪೂರಕವಾಗಿ ಶಾಸನಗಳ ಆಧಾರ ಕೊಡುತ್ತಾರೆ. ಈ ತೆರನಾದ ವಾದ-ವಿವಾದಗಳನ್ನು ಹಾವನೂರ ಅವರು ವಿಶ್ಲೇಷಿಸಿದ್ದಾರೆ. ಸಂಗಮರು ಕನ್ನಡಿಗರೆಂದು, ಹೇಳಲಿಕ್ಕೆ ಹಂಪಿಯ ಪರಿಸರದವರೆಂದು, ವಿರುಪಾಕ್ಷ ಅವರ ಕುಲದೈವ, ಕನ್ನಡಿಗರ ನಾಡು-ನುಡಿ ಅಪಾರವಾದ ಪ್ರೀತಿ-ಅಭಿಮಾನ ಹೊಂದಿದ್ದರು. ಆ ಕಾರಣಕ್ಕೆ ಅವರನ್ನು ಕನ್ನಡಿಗರೆಂದು ಹೇಳುವುದು ಸೂಕ್ತ ಎಂಬ ಅಂತಿಮ ತೀರ್ಮಾನಕ್ಕೆ ಬರುತ್ತಾರೆ.

ಕನ್ನಡದಲ್ಲಿನ ಕೃತಿಗಳಾದ ವಿದ್ಯಾರಣ್ಯ ಕಾಲಜ್ಞಾನ, ಗುರುವಂಶ ಕಾವ್ಯ ಮತ್ತು ಕೆಳದಿ ನೃಪವಿಜಯ ಗ್ರಂಥಗಳಲ್ಲಿ ವಿಜಯನಗರ ಸ್ಥಾಪನೆಯಾದ ೩೦೦-೪೦೦ ವರ್ಷಗಳ ನಂತರ ರಚನೆಗೊಂಡಿದೆ. ವಿಜಯನಗರ ಅರಸರ ಸಂತತಿಯವರು ಅರವೀಡು ಮನೆತನದ ತೆಲುಗು ಜನರು ಈ ಕೃತಿಗಳ ಲೇಖಕರು ತೆಲುಗರು ಎನ್ನುವ ಕಾರಣದಿಂದ ವಿಜಯನಗರ ಅರಸರು ತೆಲುಗು ಜನರೆಂದು ಬರೆದಿರುವ ಹಾಗೆ ಕಾಣುತ್ತದೆ. ನಂತರ ಅವರ ಓರಂಗಲ್ಲಿನವರು ಎನ್ನುವ ಕಾರಣಕ್ಕೆ ತೆಲುಗರು ಎನ್ನುವುದು ಎಷ್ಟು ಸರಿ.

ಓರಂಗಲ್ಲಿನ ಕಾಕತೀಯ ಆಸ್ಥಾನದಲ್ಲಿ ಸಂಗಮ ಸಹೋದರರು ಭಂಡಾರಿಗಳಾಗಿದ್ದರೆಂಬ ಪ್ರಬಲ ಐತಿಹ್ಯವಿದೆ. ಕೊಡುಮೂರು ಮತ್ತು ಹಳೇಬೀಡು ಎರಡು ಶಾಸನಗಳ ಉಲ್ಲೇಖವಿದೆ. ಈ ಎರಡು ಶಾಸನಗಳು ಇನ್ನೊಂದು ಶಾಸನದಲ್ಲಿ ಪರಿಹರ ಲಿಪಿಯನ್ನು ಆಧರಿಸಿ

ಹೇಳುವ ಕಾರಣ. ವಿಜಯನಗರ ಸ್ಥಾಪನೆಯ ಸಂಬಂಧವಿಲ್ಲವೆನ್ನುವುದು ದೃಢಗೊಂಡಿದೆ. ನಂತರ ಇನ್ನೊಂದು ಶಾಸನ ಹರಿಹರನ ಕಾಲವೆಂದು ಸೀತರಾಮ ಜಾಗೀರದಾರ ಹೇಳಿದ್ದಾರೆ. ನಾಣ್ಯದಲ್ಲಿ ೧ನೇ ಹರಿಹರನನ್ನು ಪ್ರತಾಪ ಹರಿಹರನೆಂದು ಕರೆಯುತ್ತಾರೆ. ಈ ಸಂಗತಿಯು ವಿಜಯನಗರ ಸ್ಥಾಪನೆಗೆ ಸಹಕಾರಿಯಾಗಿದೆ. (ಹರಿಹರನ ಅಳಿಯ ಪುಲ್ಲಖಂಡ ಸಿದ್ಧರಾಮ ಓರಂಗಲ್ಲಿನ ವೀರಭದ್ರ ಒಕ್ಕಲಿಗನಾಗಿರಬೇಕು.

ಓರಂಗಲ್ಲಿನ ಅವಸಾನದ ನಂತರ ಹರಿಹರ ಹೇಗೆ ಪಂಪಪುರಕ್ಕೆ ಬಂದನೋ ಹಾಗೆಯೇ ಸಿದ್ಧರಾಮ ಹೊಯ್ಸಳ ಅಧಿಕಾರಿಯಾಗಿ ಹಳೇಬಿಡಿಗೆ ಬಂದನು. ಈ ಹಿನ್ನೆಲೆಯಲ್ಲಿ ಓರಂಗಲ್ಲಿನಲ್ಲಿ ಇಬ್ಬರು ಜೊತೆಗಿದ್ದರೆಂದು ತಿಳಿದು ಬರುತ್ತದೆ. ಹೀಗಾಗಿ ಹೊಯ್ಸಳರ ಸೇವೆಯನ್ನು ಮಾಡಿದ್ದಾರೆ. ನಂತರ ಕ್ರಿ.ಶ.೧೩೨೩-೨೭ರವರೆಗೆ ಹರಿಹರನ ಬುಕ್ಕರಾಯರು ಕಂಪಿಲರಾಯನಲ್ಲಿ ಭಂಡಾರಿಗಳಾಗಿದ್ದಿರಬಹುದು. ಹೊಯ್ಸಳರ ಜೊತೆಗೆ ಕದನ ಮಾಡಿರಬಹುದು. ನಂತರ ಕಂಪಿಲನು ಹೊಯ್ಸಳರ ಜೊತೆ ಸೇರುವುದು ಅನಿವಾರ್ಯವಾಗಿತ್ತು. ಹರಿಹರ ಮತ್ತು ಪುಲ್ಲಖಂಡರ ಕೌಟುಂಬಿಕ ಸಂಬಂಧವನ್ನು ಹೊಯ್ಸಳರ ಕಾಲದಲ್ಲಿ ಹೊಂದಿದ್ದರು. ಹಳೇ ಬಿಡಿನಲ್ಲಿ ಪುಲ್ಲಖಂಡನ ಪ್ರತಿಷ್ಠೆಯಾಗಿರಬೇಕು. ಅಂದರೆ ಹೊಯ್ಸಳ ಅಥವಾ ಹರಿಹರನ ಸಹಾಯ ಪಡೆದಿದ್ದರು. ಹೀಗಾಗಿ ದೇವಸ್ಥಾನ, ಕೆರೆ ಕಟ್ಟಿಸಿ ಅದರ ಕೆಳಗಿನ ಭೂಮಿಯನ್ನು ಅಥವಾ ಹಳ್ಳಿಗಳನ್ನು ದಾನ ಮಾಡಿರಬೇಕು. ಈ ಮಾತನ್ನು ಆಧರಿಸಿ ಈ ಶಾಸನದಿಂದ ಸಂಗಮರು ಓರಂಗಲ್ಲಿನಲ್ಲಿದ್ದರೆಂದು ಊಹಿಸಿರಬಹುದು. ಕೂಡಮಾರಿನ ಶಾಸನ(೧೩೪೦) ಉಲ್ಲೇಖಗೊಂಡಂತೆ ಹರಿಹರ ಗುತ್ತಿಯನ್ನು ಆಳುತ್ತಿದ್ದನು. ಈತನಿಗೆ ಭಂಡಾರಿ ಎನ್ನುವ ಬಿರುದಿತ್ತು. ಕಾಕತೀಯರಲ್ಲಿ ಸಂಗಮ ಸಹೋದರರು ಭಂಡಾರಿಗಳಾಗಿದ್ದರೆಂದು ತಿಳಿದು ಬರುತ್ತದೆ.

**ಡಿ.ವಿ.ಜಿ ಅವರ ದೃಷ್ಟಿಯಲ್ಲಿ ವಿದ್ಯಾರಣ್ಯ**

ಜಿ.ಎಸ್.ದೀಕ್ಷಿತರ ಸಂಶೋಧನೆಯ ನಿಲುವುಗಳನ್ನು ಡಿ.ವಿ.ಜಿ.ಯವರ ದೃಷ್ಟಿಯಲ್ಲಿ ವಿದ್ಯಾರಣ್ಯರ ಚರಿತ್ರೆಯನ್ನು ಯುವ ಸಮುದಾಯಕ್ಕೆ ಹಾವನೂರ ಪರಿಚಯಿಸಿದ್ದಾರೆ. ಸ್ಪಷ್ಟ ಸ್ವರೂಪ ಕೊಡಲು ವಿಷಯ ವರ್ಗೀಕರಿಸಿದರು. ೧. ವಿದ್ಯಾರಣ್ಯರು ಮತ್ತು ಅವರ ಕಾಲ, ೨. ವಿದ್ಯಾರಣ್ಯರ ಸಮಕಾಲೀನರು, ೩. ಕ್ರಿಯಾ ಶಕ್ತ್ಯಾಚಾರ್ಯ, ಅಂಗೀರಸ, ಮಾಧವ ಇರುಗಪ ದಂಡೇಶ ಮೊದಲಾದ ಪ್ರಮುಖ ಮಹಾ ಪುರುಷರು ವಿದ್ಯಾರಣ್ಯರ ಸಮಕಾಲೀನರಾಗಿದ್ದರು. ಡಿ.ವಿ.ಜಿಯವರ 'ವಿದ್ಯಾರಣ್ಯ ವಿಜಯ' ಅಥವಾ 'ವಿಜಯನಗರ' ಕೃತಿಯಲ್ಲಿ ಮೂಲಕ ರಾಜ್ಯ ಸ್ಥಾಪನೆಯ ಹಾಗೂ ಪರರು ದಾಳಿ ಮಾಡಿದ ಸಂದರ್ಭದಲ್ಲಿನ ಚಿತ್ರಣ ಕಾಣಬಹುದು. ಅಲ್ಲಿಯ ಐಕ್ಯತೆಯ ಮತ್ತು ಧೈರ್ಯ ಸಾಹಸಗಳಿಂದ ಹೇಗೆ ತೊಡಗಿಕೊಳ್ಳುತ್ತಾರೆ ಎನ್ನುವುದು ಸದರಿ ಕೃತಿಯಲ್ಲಿ ಪ್ರಸ್ತಾಪಗೊಂಡಿದೆ. ವಿದ್ವಾಂಸರು ಕನ್ನಡ ನಾಡಿನ ೧೪ನೇ ಶತಮಾನದ ಕಾಲಘಟ್ಟದಲ್ಲಿ ಸಂದರ್ಭದಲ್ಲಿ ಮಾರ್ಗದರ್ಶಕರಾದರು.

ವಿದ್ಯಾರಣ್ಯರು ಪೂರ್ವಾಶ್ರಮದಲ್ಲಿ ಮಾಧವಾಚಾರ್ಯರೆಂದು, ಸನ್ಯಾಸಾಶ್ರಮದಲ್ಲಿ ವಿದ್ಯಾರಣ್ಯರೆಂದು ಪ್ರಖ್ಯಾತಿ ಪಡೆದರೆಂದು 'ಮಣಿಮಂಜರಿ ಭೋದಿನ' ಎಂಬ ಕೃತಿಯಲ್ಲಿ ಉಲ್ಲೇಖಗೊಂಡಿದೆ.

ಬಾಲ್ಯದ ಮಾಧವಾಚಾರ್ಯರು ತಮ್ಮಂದಿರೊಂದಿಗೆ ಕಾಂಚಿಪುರಕ್ಕೆ ತೆರಳಿ ವಿದ್ಯಾತೀರ್ಥರ ಶಿಷ್ಯರಾದರು. ವೇದಾಂತ ದೇಶಿಕರು ಅವರ ಸಹದ್ಯಾಯಿಗಳೆಂಬ ಐತಿಹ್ಯವಿದೆ. ಕಂಚಿಯಲ್ಲಿ ವಿದ್ಯಾತೀರ್ಥರ ಮಾಧವಚಾರ್ಯರು ಮತ್ತು ಅವರ ಸಹೋದರ ಮೊದಲ ಗುರು ಮತ್ತು ಭಾರತೀ ಕೃಷ್ಣತೀರ್ಥರು ೨ನೇ ಗುರು ಕಂಚಿಯವರಾದ ಶ್ರೀ ಕಂಠನಾಥ ಇವರ ಮೂರನೆಯ ಗುರು. ಅವರು ವಿದ್ಯಾರ್ಜನೆ ಮುಗಿದ ನಂತರ ಮಾಧವಾಚಾರ್ಯರು ಹಂಪೆಗೆ ಬಂದು ವಿರೂಪಾಕ್ಷ ಕ್ಷೇತ್ರದಲ್ಲಿ ಭುವನೇಶ್ವರಿ ಸಾನ್ನಿಧ್ಯದಲ್ಲಿ ತಪಸ್ಸು ಮಾಡಿದರಂತೆ ನಂತರ ಸನ್ಯಾಸ ದೀಕ್ಷೆ ಪಡೆದುಕೊಳ್ಳುವ ನಿಮಿತ್ಯ ಶೃಂಗೇರಿಗೆ ಪ್ರಯಾಣ ಮಾಡಿದರು.

ಕೃಷ್ಣ ತೀರ್ಥರಿಂದ ಸನ್ಯಾಸವನ್ನು ಸ್ವೀಕರಿಸಿ ವಿದ್ಯಾರಣ್ಯರೆಂಬ ನಾಮವನ್ನು ಬದಲಾಯಿಸಿಕೊಂಡರೆಂಬ ಈ ಸಂಗತಿ 'ಮಣಿ ಮಂಜರೀ ಭೋದಿನಿ'ಯಲ್ಲಿ ಉಲ್ಲೇಖಗೊಂಡಿದೆ. ಕ್ರಿ.ಶ. ೧೩೩೧ರಲ್ಲಿ ಸನ್ಯಾಸ ದೀಕ್ಷೆ ಪಡೆದಿದ್ದು, ಅವರ ವಯಸ್ಸು ೬೩-೬೪. ಹೀಗಾಗಿ ಶೃಂಗೇರಿ ಮಠಾದಿಪತಿ ಪಂಕ್ತಿಯಲ್ಲಿದ್ದರು. ಆದರೆ ಶೃಂಗೇರಿಯಲ್ಲಿ ಉಳಿಯಲಿಲ್ಲ. ನಂತರ ಹಂಪೆ ರಾಜ್ಯವನ್ನು ಕಾರ್ಯಕ್ಷೇತ್ರ ಮಾಡಿಕೊಂಡರು. ಆ ಕಾಲದ ರಾಜರುಗಳಲ್ಲಿ ಒಬ್ಬರನ್ನು ಕಂಡರೆ ಮತ್ತೊಬ್ಬರಿಗೆ ಆಗುತ್ತಿರಲಿಲ್ಲ. ಈ ಮತ್ಸರ ಲಾಭವನ್ನು ವಿದೇಶಿಯರು ಬಳಸಿಕೊಂಡು ಎಲ್ಲರನ್ನು ಹತ್ತಿಕ್ಕಿದರು. ಈ ಸಂದರ್ಭದಲ್ಲಿ ಧೈರ್ಯವಾಗಿ ದೇಶಭಿಮಾನ ಹುಟ್ಟಿಸುವ ಕಾರ್ಯವನ್ನು ಮಾಡುವುದು ಅನಿವಾರ್ಯವಾಗಿತ್ತು. ಹೀಗಾಗಿ ವಿದ್ಯಾರಣ್ಯ ಸಂಗಮ ವಂಶದ ಹರಿಹರರನ್ನು ಪ್ರತಾಪರುದ್ರರ ಸೇವಕನೆಂದು ಕರೆದರು. ಹೊಯ್ಸಳರ ಮಹಾಮಂಡಳೇಶ್ವರ ಅಥವಾ ಅನೆಗುಂದಿ ಸಂಸ್ಥಾನದ ಪ್ರಜೆಯಾದ ಕಾರಣದಿಂದ ಅವರು ಕನ್ನಡಿಗರೆಂದು ತಿಳಿದು ಬರುತ್ತದೆ.

ಮುಳಬಾಗಿಲ ಶಾಸನದಲ್ಲಿ ಉಲ್ಲೇಖಗೊಂಡಂತೆ ವಿದ್ಯಾರಣ್ಯರು ವಿದ್ಯಾನಗರ ಮತ್ತು ವಿಜಯನಗರ ರಾಜ್ಯವನ್ನು ಸ್ಥಾಪಿಸಿದರೆಂದು ತಿಳಿದು ಬರುತ್ತದೆ. ಹಾಗೆಯೇ ೧ನೇ ಶಾಸನದಿಂದ ಹರಿಹರನ ದಿಗ್ವಿಜಯವು ಅತ್ಯಂತ ಯಶಸ್ವಿಯಾಗಿರುವುದರ ಹರಿಹರನ ಕಾಲ ಕ್ರಿ.ಶ. ೧೩೫೪ಕ್ಕೆ ಅಂತ್ಯಗೊಂಡಿತು. ನಂತರ ಬುಕ್ಕರಾಯರ ಆಳ್ವಿಕೆ ಪ್ರಾರಂಭಗೊಂಡು ನಂತರ ಕಾಶಿಯಲ್ಲಿದ್ದ ವಿದ್ಯಾರಣ್ಯರನ್ನು ಪತ್ರ ಬರೆಯುವುದರ ಮೂಲಕ ವಿಜಯನಗರಕ್ಕೆ ಬುಕ್ಕರಾಯನು ಕರೆಸಿಕೊಂಡನು. ಈ ವಿಷಯ ಶೃಂಗೇರಿ ಮಠದಲ್ಲಿನ ಕಡತಗಳಲ್ಲಿ ಉಲ್ಲೇಖಗೊಂಡಿದೆ. ಹೀಗಾಗಿ ಈತನ ಆಳ್ವಿಕೆಯಲ್ಲಿ ವಿದ್ಯಾರಣ್ಯ ಸಹಾಯ ಮಾಡಲು ಸಾಧ್ಯವಾಯಿತು. ವಿದ್ಯಾತೀರ್ಥ ಮತ್ತು ಭಾರತೀಕೃಷ್ಣ ತೀರ್ಥರ ಸೇವೆ ಮಾಡಲಿಕ್ಕೆ ಆಗಾಗ

ಶೃಂಗೇರಿಗೆ ಬುಕ್ಕರಾಯನು ಹೋಗಿ ಬರುತ್ತಿದ್ದನು. ಅಲ್ಲದೆ ಮಠಕ್ಕೆ ಭೂದಾನ, ಸುವರ್ಣ ದಾನ ಮಾಡುತ್ತಿದ್ದನು. ಈತನು ತೀರಿಕೊಂಡ ಮೇಲೆ ಮಗನಾದ ಇಮ್ಮಡಿ ಹರಿಹರನು ರಾಜ್ಯ ಆಳ್ವಿಕೆಯ ಹೊಣೆಯನ್ನು ಹೊತ್ತುಕೊಂಡನು. ನಂತರ ಅಂದರೆ ಕ್ರಿ.ಶ. ೧೩೮೬ರಲ್ಲಿ ವಿದ್ಯಾರಣ್ಯರು ವಿಧಿವಶರಾದರು. ಅವರ ಸವಿನೆನಪಿಗಾಗಿ ಇಮ್ಮಡಿ ಹರಿಹರನು 'ವಿದ್ಯಾರಣ್ಯ' ಎಂಬ ಅಗ್ರಹಾರವನ್ನು ಶೃಂಗೇರಿ ಬಳಿ ಕಟ್ಟಿಸಿದನು.

ವಿದ್ಯಾರಣ್ಯರು ತಮ್ಮ ಜೊತೆಗೆ ಪಂಡಿತರನ್ನು ಮತ್ತು ಸನ್ಯಾಸಿಗಳನ್ನು ಕೂಡಿಸಿಕೊಂಡು ಧರ್ಮ ರಕ್ಷಣೆಯ ಕಾರ್ಯದಲ್ಲಿ ತೊಡಗಿಕೊಂಡಿದ್ದರು. ಅದಕ್ಕೆ ವಿದ್ಯಾತೀರ್ಥರರು ಪ್ರೇರಕರಾಗಿದ್ದರು. ದೇಶ ಮತ್ತು ಧರ್ಮದ ಉನ್ನತಿಗಾಗಿ ಮಹಾ ಸಮಾರಂಭದ ವೇದಿಕೆಗೆ ಮಹಾ ಪುರುಷರ ಭೋದನೆ ಅಗತ್ಯವಿದೆಯೆಂದು ಮನಗಂಡಿದ್ದರು. ವಿದ್ಯಾತೀರ್ಥರು ಪೂರ್ವದಲ್ಲಿ ಆಶ್ರಯವಿದ್ದ ಶೃಂಗೇರಿ ಮಠದ ಅಧಿಕೃತ ಅಧಿಪತಿಗಳಾದ ನಂತರ ಅಲ್ಲಿಯೇ ವಿಧಿವಶರಾದರು. ಹೀಗಾಗಿ ಸಮಾಧಿ ಮಾಡಿದರು. ವಿದ್ಯಾರಣ್ಯ ವಿದ್ಯಾಶಂಕರ ದೇವಸ್ಥಾನ ನಿರ್ಮಿಸಿದರು. ಅಲ್ಲದೆ ಲೋಹದ ಶಾರದೆಯ ಪ್ರತಿಮೆ ಮಾಡಿಸಿಕೊಟ್ಟರು.

ವಿದ್ಯಾತೀರ್ಥರ ನಂತರ ಭಾರತೀಕೃಷ್ಣ ತೀರ್ಥರು ಕಂಚಿಯನ್ನು ಬಿಟ್ಟು ಶೃಂಗೇರಿಗೆ ಬಂದು ನೆಲೆಸಿದರು. ನಂತರ ಭಾರತೀಕೃಷ್ಣ ತೀರ್ಥರು ವಿದ್ಯಾರಣ್ಯರಿಗೆ ಪರಿನ್ಯಾಶ್ರಮವನ್ನು ಕೊಟ್ಟರು. ಆ ಹೊತ್ತಿಗೆ ವಿದ್ಯಾರಣ್ಯರು ವಿಜಯನಗರದ ರಾಜಕೀಯ ಲೌಕಿಕ ಕಾರ್ಯದಲ್ಲಿ ತೊಡಗಿಕೊಂಡಿದ್ದರು. ಮಠದ ಪೂರ್ವ ಕಾರ್ಯಕ್ರಮಗಳನ್ನು ಭಾರತೀಕೃಷ್ಣ ತೀರ್ಥರೇ ನಿರ್ವಹಿಸುತಿದ್ದರು. 'ಪರಿಚಯದರ್ಶನ' ಕೃತಿಯನ್ನು ಇವರೇ ಪ್ರಾರಂಭಿಸಿದರು. ಆಕಸ್ಮಿಕವಾಗಿ ಪೂರ್ಣಗೊಳಿಸಲು ಆಗಲಿಲ್ಲ. ಅದರ ಮುಂದುವರಿದ ಭಾಗವನ್ನು ವಿದ್ಯಾರಣ್ಯರು ಮಾಡಿದರು.

ಪ್ರಸ್ತುತ ಪ್ರಬಂಧದಲ್ಲಿ ವಿದ್ಯಾರಣ್ಯ ಕುರಿತ ವಾದ ವಿವಾದಗಳು ಪ್ರಸ್ತಾಪಗೊಂಡಿದೆ. ವಿಜಯನಗರ ಸ್ಥಾಪನೆಗೆ ವಿದ್ಯಾರಣ್ಯ ಮತ್ತು ಶೃಂಗೇರಿ ಮಠ ಹಾಗೆಯೇ ಮಾಧವ ವಿದ್ಯಾರಣ್ಯ ಒಬ್ಬರೇ. ಹೀಗಾಗಿ ಕ್ರಿಯಾಶಕ್ತಿ ಹೇಳುವುದು ವಿಜಯನಗರ ಸ್ಥಾಪನೆಯಲ್ಲಿ ಅಲ್ಲದೆ ಶೃಂಗೇರಿ ಮಠದ ಪಾತ್ರವಿಲ್ಲ. ಅಂದರೆ ಆ ದಾಖಲೆಗಳು ಕೃತಕವಾದವು. ಅದರ ಲಾಭಕ್ಕಾಗಿ ಆ ದಾಖಲೆಗಳ ಕುರಿತು ಶ್ಲಾಘಿಸಿದ್ದಾರೆ. ಫಾದರ್ ಹೆರಾಸ್ ವಾದಕ್ಕೆ ಪ್ರತಿಯಾಗಿ ಶ್ರೀಕಂಠಯ್ಯನವರು ಪ್ರತಿವಾದ ಮಂಡಿಸಿದರು.

**ವಿಜಯನಗರ ಕಾಲದಲ್ಲಿ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿ**

ಹಾವನೂರ ಅವರು ದೀಕ್ಷಿತರ ಆಯ್ದ ಬರಹಗಳ ಮಹತ್ವದ ಸಂಗತಿಯಾದ ವಿಜಯನಗರದ ಕಾಲದ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿ ಕುರಿತು ಮಾತನಾಡಿದ್ದಾರೆ. ವಿಜಯನಗರ ಸಾಮ್ರಾಜ್ಯ ೧೩೩೬ರಲ್ಲಿ ಅಸ್ತಿತ್ವಕ್ಕೆ ಬಂದಿತು. ನಂತರ ಕ್ರಿ.ಶ. ೧೫೬೫ರ ಹೊತ್ತಿಗೆ ಅವಸಾನ ಹೊಂದಿತ್ತು. ೧೫-೧೬ನೇ ಶತಮಾನದ ಪಾಶ್ಚಿಮಾತ್ಯ (ರಷ್ಯಾ,

ಇಟಲಿ, ಪೋರ್ಚುಗೀಸ್) ಪ್ರವಾಸಿಗರು ಈ ನಾಡನ್ನು ಕಂಡು ಆಶ್ಚರ್ಯಪಡುತ್ತಾರೆ. ಏಕೆಂದರೆ ಯುರೋಪಿಯನ್ನರ ಬಹುದೊಡ್ಡ ನಗರವೆಂದರೆ ರೋಮ್. ಆದರೆ ವಿಜಯನಗರವನ್ನು ನೋಡಿ ಅವರು ನಿಬ್ಬೆರಗಾಗುತ್ತಾರೆ. ಏಕೆಂದರೆ ವಿಜಯನಗರ ೬೪ ಮೈಲಿ ಸುತ್ತಳತೆಯನ್ನು ಹೊಂದಿತ್ತು.

ಇಟಲಿಯಾದ ಪ್ರವಾಸಿಗ ಕೊಂಟಿ ಪರ್ಷಿಯಾದ ಅಬ್ದುಲ್ ರಜಾಕ್ ವಿಜಯನಗರ ದೃಶ್ಯ ನೋಡಿ ತುಂಬ ಆಶ್ಚರ್ಯಪಡುತ್ತಾರೆ. ಈ ನಗರದ ಯಾವುದೇ ಬೀದಿಗೆ ಹೋದರೂ ಜನ ಸಂದಣಿ ತುಂಬಿರುತ್ತದೆ ಎಂದು ಪೋರ್ಚುಗೀಸ್ ರಾಯಭಾರಿ ಹೇಳುತ್ತಾನೆ. ಈ ನಗರಕ್ಕೆ ಎಲ್ಲಾ ರಾಷ್ಟ್ರಗಳಿಂದಲೂ ಬರುತ್ತಿದ್ದರು. ಏಕೆಂದರೆ ಇಲ್ಲಿ ಅಮೂಲ್ಯವಾದ 'ಹರಳು ಮತ್ತು ವಜ್ರದ' ವ್ಯಾಪಾರವು ನಡೆಯುವುತ್ತಿತ್ತು. ಹೀಗಾಗಿ ಜನಾಕ್ಷಣೀಯ ಕೇಂದ್ರವಾಗಿತ್ತು. "ನಗರದ ವೈಭವನ್ನು ಕುರಿತು 'ಮಧುರ ವಿಜಯಂ'(೧೩೬೦-೭೦) ಕೃತಿಯಲ್ಲಿ 'ಗಂಗಾದೇವಿಯ ವಿಜಯನಗರವೆಂದು ಇಂದ್ರನ ರಾಜಧಾನಿಯಾದ ಅಮರಾವತಿಗೆ ಹೋಲಿಸುತ್ತಾರೆ. ನಗರದ ಹೆಬ್ಬಾಗಿಲುಗಳಲ್ಲೊಂದಾದ ಮೇರು ಪರ್ವತವಿದ್ದು ಉದ್ಯಾನವನಗಳು ನಿತ್ಯ ಶೋಭಿಸುತ್ತಿದ್ದವು. ಗಿರಿಗಳು ಕ್ರೀಡಾಶೀಲರಿಂದ ಕಿಕ್ಕಿರಿದಿದ್ದವು. ಅಲ್ಲಿಯ ಸರೋವರದ ನೀರು ನಿರ್ಮಲವಾಗಿತ್ತು. ದವಳಗಳು ಕಣ್ಣಿಗೊಂದು ಹಬ್ಬ; ಅದೊಂದು ಸಮಸ್ತ ಸಂಪತ್ತಿನ ನೆಲೆ."[೫] ಈ ಮಹತ್ವದ ಸಂಗತಿಯನ್ನು ಗಮನಿಸಿದರೆ ನಗರ ಸ್ವರೂಪ ಹೇಗಿತ್ತೆಂದು ತಿಳಿಯುತ್ತದೆ. ಅದರ ವ್ಯಾಪ್ತಿ ಉತ್ತರಕ್ಕೆ ಆನೆಗುಂದಿ, ದಕ್ಷಿಣಕ್ಕೆ ಹೊಸಪೇಟೆಯವರಿಗೂ, ಪಶ್ಚಿಮಕ್ಕೆ ಹಂಪೆಯಿಂದ ಪೂರ್ವ ಕಮಲಾಪುರದವರೆಗೆ ವಿಸ್ತರಿಸಿತ್ತು. ಅಲ್ಲದೆ ಸಣ್ಣಪುಟ್ಟ ಉಪನಗರಗಳಿದ್ದವು.

ವಿರೂಪಾಕ್ಷ ದೇವಾಲಯದ ಸುತ್ತಮುತ್ತ ದೇವಾಲಯದ ಎದುರಿಗೆ ಪೇಟೆಯ ಬೀದಿಗಳಿದ್ದವು. ನದಿಯ ದಕ್ಷಿಣದಿಂದ ಪೂರ್ವಕ್ಕೆ ಬಂದರೆ ಅಚ್ಯುತರಾಯನ ಪುರವಿದೆ. ಪಶ್ಚಿಮಕ್ಕೆ ಪರ್ವತ, ಪೂರ್ವಕ್ಕೆ ತಿಪ್ಪರಾಜನ ವಿದ್ಯಾಸನ, ಉತ್ತರಕ್ಕೆ ತುಂಗಭದ್ರ ನದಿಯ ಮತ್ತೊಂದು ಸೀತಾಕುಂಡ, ದಕ್ಷಿಣಕ್ಕೆ ಭೂಪತಿ ತಟಾಕೆ ನೀರಿನ ಪೂರೈಕೆಗಾಗಿ ದೊಡ್ಡ ನಾಲೆಯಿತ್ತು. ಹಾಗೆಯೇ ಎರಡು ಉಪನಗರಗಳಿದ್ದವು. ೧. ತಿರುಮಲ ದೇವಿಯ ಪಟ್ಟಣ ೨. ನಾಗಲಾಪುರ ಈ ನಗರ ಕೃಷ್ಣರಾಯನಿಂದ ಕಟ್ಟಲ್ಪಟ್ಟಿತ್ತು. ಕಮಲಾಪುರ ಭಾಗದಲ್ಲೊಂದು ಉಪನಗರವಿತ್ತು. ಅದು ವರದರಾಜಮ್ಮ ಪಟ್ಟಣ; ಹೀಗೆ ಮಹತ್ವ ಸಂಗತಿಗಳ ಬಗ್ಗೆ ದೀಕ್ಷಿತರು ಬೆಳಕು ಚೆಲ್ಲಿದ್ದಾರೆಂದು ಹಾವನೂರ ಅವರು ಹೇಳುತ್ತಾರೆ.

"ದಕ್ಷಿಣಕ್ಕೆ ರಾಯರಕೆರೆ; ಇದನ್ನು ಕೃಷ್ಣದೇವರಾಯ ತಟಾಕವೆಂದು ಕರೆಯುತ್ತಿದ್ದರು. ತಿರುಮಲ ಪಟ್ಟಣಕ್ಕೆ ಈ ಕೆರೆಯಿಂದ ನೀರು ಸರಬರಾಜಾಗುತ್ತಿತ್ತು. ಪೂರ್ವಕ್ಕೆ ಕೊನೆಯ ಪ್ರವೇಶದ ದ್ವಾರವಿದ್ದು ವಿಜಯನಗರದ ವಿವಿಧ ಭಾಗಗಳಿಗೆ ತುಂಗಭದ್ರ ನಾಲೆಗಳಿಂದ ನೀರಿನ ಪೂರೈಕೆಯಾಗುತ್ತಿತ್ತು. ಅಲ್ಲದೆ ಬಾವಿ ಕೆರೆಗಳಿದ್ದವು. ವಿಜಯನಗರ ಸುತ್ತಾಮುತ್ತ

ಇತರೆ ಮುಖ್ಯ ಪಟ್ಟಣಗಳೆಂದರೆ ಪಶ್ಚಿಮದ ಕರಾವಳಿಯ ಅಂಕೋಲ, ಮೀರಜ್, ಹೊನ್ನಾವರ, ಭಟ್ಕಳ, ಬೈಂದೂರು, ಬಾರಕೂರು, ಮಂಗಳೂರು, ಕುಂಬಳ, ರಾಯಚೂರು ಅದವಾನಿ, ಪೆನುಗೊಂಡ, ಶ್ರೀರಂಗಪಟ್ಟಣ, ಇಕ್ಕೇರಿ, ಬಂಕಾಪುರ"[೧೦] ಹೀಗೆ ವಿವಿಧ ಪಟ್ಟಣಗಳನ್ನು ಹೊಂದಿದ್ದವು.

ಬೊರ್ಬೋಸ್ ಹೇಳಿದ ಈ ವಿಜಯನಗರ ಸಾಮ್ರಾಜ್ಯದಲ್ಲಿ ಹಿಂದೂ ಮತ್ತು ಮುಸ್ಲಿಂ ಇದ್ದರೆಂದು ತಿಳಿದುಬರುತ್ತದೆ. ಕ್ಷತ್ರಿಯರು ಬ್ರಾಹ್ಮಣರು, ವೀರಶೈವರು, ಹೀಗೆ ಹಿಂದೂಗಳ ಒಳಪಂಗಡಗಳಿದ್ದವು. ಬಾರ್ಬೋಸ್ ಹೇಳಿಕೆಯಂತೆ ಸ್ತ್ರೀಯರು ಕೌಟುಂಬಿಕ ಜೀವನಕ್ಕೆ ಸಿಮಿತವಾಗಿರಲಿಲ್ಲ. ಅವರು ಗೀತೆ, ವಾದ್ಯ, ನರ್ತನವನ್ನು ಕಲಿಸುತ್ತಿದ್ದರು. ಅಲ್ಲದೆ ರಾಣಿಯರು ಕೂಡ ಸಂಗೀತ ಪ್ರವೀಣೆಯರಾಗಿದ್ದರು. ಅರಮನೆ ಒಳಭಾಗದಲ್ಲಿ ಪುರುಷರು ನಿರ್ವಹಿಸಬಹುದಾದ ಕೆಲಸಗಳನ್ನು ಸ್ತ್ರೀಯರು ಮಾಡುತ್ತಿದ್ದರು. ಕತ್ತಿ, ಗುರಾಣಿ ಹಿಡಿದು ಕಾದಾಡಬಲ್ಲರು, ಮಲ್ಲಯುದ್ಧ ಮಾಡಬಲ್ಲರು. ಹಾಗೆಯೇ ಅರಮನೆಯ ಒಳಗಿನ ಎಲ್ಲಾ ವ್ಯವಹಾರ ಲೆಕ್ಕಪತ್ರಗಳನ್ನು ಮಾಡಬಲ್ಲವರಾಗಿದ್ದರು. ಅಲ್ಲದೆ ಪಾಯಸ್ ಮತ್ತು ಮ್ಯೂನಿಚ್ ಹೇಳಿಕೆ ಆಧರಿಸಿ ಹೇಳುವುದಾದರೆ ಅರಮನೆಯ ಒಳಗಿನ ಕಾರ್ಯವನ್ನು ದಕ್ಷತೆಯಿಂದ ಕಾರ್ಯನಿರ್ವಹಿಸುತ್ತಿದ್ದರು. ಅಲ್ಲದೆ ಸ್ತ್ರೀಯರ ವಿಷಯವಾಗಿ ಶಾಸನಗಳಲ್ಲಿ ಉಲ್ಲೇಖಗೊಂಡಿದೆ. ಪ್ರೌಢದೇವರಾಯನ ಕಾಲದ(ಕ್ರಿ.ಶ.೧೪೫೮) ಅರಮನೆಯಲ್ಲಿ 'ಹೊನ್ನಮ್ಮಳೆಂಬ' ವರದಿಗಾರಳಿದ್ದಳು. ಅಲ್ಲದೆ ತಿರುಮಲಮ್ಮ ಎಂಬ ಸಂಸ್ಕೃತ ಕವಿಯತ್ರಿ ಇದ್ದಳು. ಅವಳ ಕಾವ್ಯವನ್ನು ಮೆಚ್ಚಿಕೊಂಡು ರಾಜ ಪ್ರಶಸ್ತಿ ನೀಡಿದನು. ಹಾಗೆಯೇ ವಾಣಿಜ್ಯ ಕ್ಷೇತ್ರದಲ್ಲಿಯೂ ಸ್ತ್ರೀಯರು ಕಾರ್ಯನಿರ್ವಹಿಸುತ್ತಿದ್ದರು. ಇದಲ್ಲದೆ ವೇಶ್ಯಾವೃತ್ತಿ, ದೇವದಾಸಿ, ಸತಿ ಹೋಗುವ ಕುರಿತು ರಜಾಕ್ ಮತ್ತು ಬಾರ್ಬೋಸ್ ವೈಭವೀಕರಿಸಿದ್ದಾರೆ.

ವಿಜಯನಗರ ಕಾಲಘಟ್ಟದಲ್ಲಿ ಆಹಾರ ಕುರಿತ ಚರ್ಚೆ ಇಲ್ಲಿದೆ. ಜೈನರು, ವೈಷ್ಣವರು, ವೀರಶೈವರು ಸಸ್ಯಹಾರಿಗಳಾಗಿದ್ದರು. ಕುಮಾರವ್ಯಾಸ ಮಾಂಸಹಾರ ಭಕ್ಷ್ಯಗಳನ್ನು ಕುರಿತು ತನ್ನ ಕೃತಿಯಲ್ಲಿ ಹೇಳಿದ್ದಾನೆ. 'ಆಮುಕ್ತಮಾಲ್ಯದ' ಕಾವ್ಯದಲ್ಲಿ ಸಸ್ಯಹಾರ ಕುರಿತು ಉಲ್ಲೇಖವಿದೆ. ಪುರಂದದಾಸರ ಕೀರ್ತನೆಯಲ್ಲಿ ಜನಸಾಮಾನ್ಯರ ಉಡುಗೆ-ತೊಡುಗೆ ಸಂಬಂಧಿಸಿ ಪ್ರಸ್ತಾಪಗೊಂಡಿದೆ. ಬಾರ್ಬೋಸ್, ಪಾಯಸ್, ನ್ಯೂನಿಜ್ ಇವರು ಕೃಷಿ ಕುರಿತು ಹೇಳಿದ್ದಾರೆ. ಭೂಮಿ, ದನಕರುಗಳಿಗೆ ಸಂಬಂಧಿಸಿದ ಸಂಗತಿ ನಿರೂಪಿತಗೊಂಡಿದೆ. ವಿಜಯನಗರ ಕಾಲಕ್ಕೆ ಧಾರವಾಡ ಜಿಲ್ಲೆ ಬಂಕಾಪುರದಲ್ಲಿ ಬೀಜೋತ್ಪಾದನೆಯ ಮತ್ತು ಪಶುಸಂಗೋಪನ ಕ್ಷೇತ್ರವು ಬಹಳ ಪ್ರಗತಿಯಲ್ಲಿತ್ತು.

ವಿಜಯನಗರ ಕಾಲದ ರಾಯಲಸೀಮೆಯ ಜಿಲ್ಲೆಗಳಾದ ಬಳ್ಳಾರಿ, ಅನಂತಪುರ ನೀರಾವರಿ ಕುರಿತು ಸರ್ ಥಾಮಸ್ ಈ ರೀತಿ ಹೇಳುತ್ತಾರೆ. "ಈ ಪ್ರದೇಶದಲ್ಲಿ ಹೊಸ ಕೆರೆಗಳನ್ನು ಕಟ್ಟಿಸುವುದು ತೀರ ನಿರರ್ಥಕವಾದದ್ದು; ಅದರ ಬದಲು ಕೆರೆಗಳನ್ನು ರಿಪೇರಿ

ಮಾಡಿಸುವುದು ಉತ್ತಮವೆಂದರು. ಈ ಪ್ರದೇಶದಲ್ಲಿ ನೀರಾವರಿ ಉದ್ದೇಶಕ್ಕಾಗಿ ಕಟ್ಟಿದ ಕೆರೆಗಳೇ ಬಹಳಷ್ಟಿವೆ. ಹೀಗಿರುವಾಗ ಬೇರೆ ಕೆರೆಗಳಿಗೆ ನಿರ್ಮಾಣಕ್ಕೆ ಸ್ಥಳವೇ ಇಲ್ಲದಾಗಿದೆ."[೧೧]

ವಿಜಯನಗರ ಕಾಲದ ಕೈಗಾರಿಕೆ, ವ್ಯಾಪಾರ, ವ್ಯವಹಾರ ಸಂಪರ್ಕಕ್ಕೆ ಸಂಬಂಧಿಸಿದಂತೆ ದೀಕ್ಷಿತರು ಚರ್ಚಿಸಿದ್ದಾರೆ. ವಿದೇಶಿ ಮತ್ತು ವ್ಯಾಪಾರ, ಆರ್ಥಿಕ ಸ್ಥಿತಿಗತಿ ಸುಧಾರಿಸಲಿಕ್ಕೆ ಸಹಕಾರಿಯಾದವು. ಅಬ್ದಲ್ ರಜಾಕ್‌ನ ಹೇಳಿಕೆ ಆಧರಿಸಿ ಹೇಳುವುದಾದರೆ ೩೦೦ ಬಂದರುಗಳಲ್ಲಿ ಕಲ್ಲಿಕೋಟೆ ಪ್ರಮುಖ ಬಂದರಾಗಿತ್ತು. ಅಲ್ಲದೆ ಹಿಂದೂ ಸಾಗರ ದ್ವೀಪಗಳೊಂದಿಗೆ ಬರ್ಮಾ, ಚೀನಾ, ಅರೇಬಿಯಾ, ಪರ್ಷಿಯಾ, ದಕ್ಷಿಣ ಆಫ್ರಿಕಾ, ಪೋರ್ಚುಗೀಸ್ ವಾಣಿಜ್ಯ ಸಂಪರ್ಕಗಳಾಗಿದ್ದವು. ಹಾಗೆಯೇ ಈ ರಾಜ್ಯವು ಅನೆ, ಕುದುರೆ ಮತ್ತು ದವಳ, ತಾಮ್ರ, ಹವಳ, ಪಾದರಸ, ಚಿನ್ನದ ಆಭರಣ, ರೇಷ್ಮೆ ಮತ್ತು ವೆಲ್ವೆಟ್ ಬಟ್ಟೆಗಳನ್ನು ಆಮದು ಮಾಡಿಕೊಳ್ಳುತ್ತಿದ್ದರು.

ಶಾಸನಗಳ ಪ್ರಕಾರ ವಿಜಯನಗರ ಜನರು ಹಡಗು ಕಟ್ಟುವ ಕಲೆಯನ್ನು ಪೋರ್ಚುಗೀಸ್‌ಗಿಂತ ಮೊದಲು ಕಲಿತ್ತಿದ್ದರು. ಜವಳಿ ಉತ್ಪಾದನೆ, ಗಣಿಯಿಂದ ಅದಿರು ತೆಗೆಯುವುದು, ಲೋಹ ಮಾಡುವುದು, ಸುಗಂಧ ದ್ರವ್ಯ ತಯಾರಿಸುವುದು ರಾಜ್ಯದ ಪ್ರಮುಖ ಕೈಗಾರಿಕೆಗಳಾಗಿದ್ದವು. ಕಾಸ್‌ಪಾಮಾಯ ಎಂಬುದು (ಈಗಿನ ತಮಿಳುನಾಡಿನ ಕೊಯಮತ್ತೂರು) ಹತ್ತಿ ಮತ್ತು ರೇಷ್ಮೆಗೆ ಬಹುದೊಡ್ಡ ಕೇಂದ್ರವಾಗಿತ್ತು. ಗೋವಾದಲ್ಲಿ ಬಟ್ಟೆ ತಯಾರಾಗುತ್ತಿತ್ತು ಹಾಗೂ ವಿಜಯನಗರ ರತ್ನ ವ್ಯಾಪಾರದ ಕೇಂದ್ರವಾಗಿತ್ತು. ಹೀಗಾಗಿ ಇತರೆ ನಾಡಿನಿಂದ ರಾಜರು ಮತ್ತು ವರ್ತಕರು ವಜ್ರದ ವ್ಯಾಪಾರಕ್ಕೆ ಬರುತ್ತಿದ್ದರು. ಭಟ್ಕಳದಿಂದ ಕಬ್ಬಿಣ ಅದಿರು ರಫ್ತು ಮಾಡುತ್ತಿದ್ದರು. ಮಹತ್ವದ ಸಂಗತಿ ಎಂದರೆ ವಿಜಯನಗರ ರಾಜ್ಯದ ಚಿಹ್ನೆ 'ವರಾಹ'ವಾಗಿತ್ತು. ನಾಣ್ಯಗಳ ಮೇಲೆ ಹನುಮಾನ್. ಗರುಡ ಮತ್ತು ಆನೆಗಳ ಲಾಂಛನವನ್ನು ಕಾಣಬಹುದು. ೧ನೇ ಹರಿಹರ ಕಾಲಕ್ಕೆ ನಾಣ್ಯಗಳ ಮೇಲೆ ಗರುಡ, ಹನುಮಾನ್ ಚಿತ್ರ ಇರುವುದಲ್ಲದೆ; ಕನ್ನಡ ದೇವನಾಗರಿ ಲಿಪಿಯು ಮತ್ತು 'ಶ್ರೀ ವೀರಹರಿಹರ'ನ ಅಂಕಿತವು ಕಂಡು ಬರುತ್ತದೆ. ಬುಕ್ಕರಾಯನ ಕಾಲಕ್ಕೆ ಶ್ರೀ ವೀರಬುಕ್ಕ ಶ್ರೀ ವೀರಭೂಪತಿರಾಯ ಬರುತ್ತದೆ. ಬುಕ್ಕರಾಯನ ಕಾಲಕ್ಕೆ ಅರ್ಧ ವರಹಗಳ ಶಿವ, ಪಾರ್ವತಿ, ಸರಸ್ವತಿ, ಬ್ರಹ್ಮ, ಲಕ್ಷ್ಮಿನರಸಿಂಹ ಚಿತ್ರಗಳಿಗೆ ಇನ್ನೊಂದು ಮುಖ ಶ್ರೀಪ್ರತಾಪ ಹರಿಹರ ಎಂದು ನಾಗರಿ ಲಿಪಿಯಲ್ಲಿ ಕೆತ್ತಲಾಗಿದೆ.

**ಮಧ್ಯಕಾಲೀನ ಕರ್ನಾಟಕ ಶಿಕ್ಷಣ**

ಹಾವನೂರ ಅವರು ಮಧ್ಯಕಾಲೀನ ಕರ್ನಾಟಕದ ಶಿಕ್ಷಣ ಕುರಿತು ಜಿ.ಎಸ್.ದೀಕ್ಷಿತರ ಬರಹ ವೈವಿಧ್ಯಮ ವಿಷಯಗಳ ಅನಾವರಣಗೊಂಡಿದೆ. ಆ ಕಾಲಘಟ್ಟದ ಶಿಕ್ಷಣದ ವಿವಿಧ ಅಂಗಗಳಾದ ಘಟಿಕಾ, ಅಗ್ರಹಾರ, ಬ್ರಹ್ಮಪುರಿ, ಮಠ ಮತ್ತು ದೇವಸ್ಥಾನ ಇವುಗಳಲ್ಲಿ ಶಿಕ್ಷಣ ಕಲಿಸುತ್ತಿದ್ದರು.

**ಶೈಕ್ಷಣಿಕ ಸಂಸ್ಥೆಗಳು ಮೂರು ವರ್ಗಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದವು.**

೧. ವಿದ್ಯಾರ್ಥಿ

೨. ಗುರುಗಳು,

೩. ಆಡಳಿತ ವರ್ಗ

'ವಿದ್ಯಾರ್ಥಿಗಳಿಗೆ' ಸಂಬಂಧಿಸಿದಂತೆ ಸ್ನಾತಕ ಮತ್ತು ಸ್ನಾತಕೋತ್ತರ, ಮಣಿ, ಛಾತ ಹಾಗೂ ವಿದ್ಯಾರ್ಥಿಗಳೆಂದು ಕರೆಯುತ್ತಿದ್ದರು. ಇವರಲ್ಲಿ ಯತಿ ವಿದ್ಯಾರ್ಥಿಗಳು ಕೂಡ ಇರುತ್ತಿದ್ದರು. ಅವರನ್ನು ತಪೋದನರು ಎನ್ನುವರು. ಪರಮಹಂಸರು ಏಕದಂತ ಎಂಬುದಾಗಿ ವಿದ್ಯಾರ್ಥಿಗಳನ್ನು ಕರೆಯುತ್ತಿದ್ದರು. ಅಲ್ಲದೆ ಊರೂರು ತಿರುಗುವ ವಿದ್ಯಾರ್ಥಿಗಳು ಕೂಡ ಇರುತ್ತಿದ್ದರು. ಅಂಥವರನ್ನು ಚಾರಕರು ಎಂದು ಕರೆಯುತ್ತಿದ್ದರು. ಇದಕ್ಕೆ ನಿದರ್ಶನವೆಂಬಂತೆ ಗದಗ, ಲಕ್ಕುಂಡಿಯಲ್ಲಿ ಮೀಮಾಂಸೆ ಶಾಲೆಯಲ್ಲಿ ಛಾತ್ರರೆಂದು ಕರೆಯುತ್ತಿದ್ದರು.

ಶಿಕ್ಷಕರನ್ನು ಆಚಾರ್ಯ, ಭಟ್ಟ, ಉಪಾಧ್ಯಾಯ ಅಥವಾ ಚಟ್ಟೋಪಾಧ್ಯಾಯ ಮತ್ತು ಅಕ್ಕಂಗ ಎಂದು ಕರೆಯುತ್ತಿದ್ದರು. ಬಳ್ಳಿಗಾವಿಯಲ್ಲಿ ಬೋಧಿಸುವ ಶಿಕ್ಷಕರು ಬೌದ್ಧಿಕ, ಆಧ್ಯಾತ್ಮಿಕ, ಲಲಿತಕಲೆ ಕಲಿಸುತ್ತಿದ್ದರು. ವ್ಯಾಕರಣಕ್ಕೆ ಪಾಣೀನಿಯ, ತತ್ವಜ್ಞಾನಕ್ಕೆ ಭೂಷಣಾಚಾರ್ಯ, ನಾಟ್ಯಕ್ಕೆ ಭರತ ಶಾಸ್ತ್ರ, ಕಾವ್ಯರಚನೆ ಬಂದವು. ಒಬ್ಬ ವಿಜ್ಞಾನಿ ಶೋಧ ಮಾಡುತ್ತಾನೆ. ಮತ್ತೊಬ್ಬ ಆ ಶೋಧನೆಗೆ ಒಂದು ಆಕಾರ ಕೊಡುತ್ತಾನೆ. ಮಗದೊಬ್ಬ ಶೋಧನೆ ವಿಕಾಸಗೊಳಿಸಿ ಪಕ್ವಗೊಳಿಸುತ್ತಾನೆ. ಶಾಸ್ತ್ರ ಗೊತ್ತಿಲ್ಲದವರಿಗೆ ಬೋಧಿಸುವ ಅಧ್ಯಾಪನ ಮಾಡುತ್ತಾನೆ. ಯಾವ ಶಿಕ್ಷಕ ತಮ್ಮ ವಿಚಾರಗಳನ್ನು ಸರಳ ಭಾಷೆಯಲ್ಲಿ ತಿಳಿಯುವಂತೆ ಹೇಳುತ್ತಾನೋ ಆತನನ್ನು ವಿದ್ಯಾರ್ಥಿಗಳು ಆರಾಧಿಸುತ್ತಾರೆ.

**ಶೈಕ್ಷಣಿಕ ವರ್ಗದ ಐದು ಹಂತ ಈ ಕೆಳಗಿನಂತಿದ್ದವು.**

೧. ಮಹಾವಿದ್ಯಾಲಯ. ದೇವಸ್ಥಾನ-ಭೂಮಿಯ ಮೇಲ್ವಿಚಾರಕ.

೨. ಎಲ್ಲಾ ಕಾರ್ಯಗಳು ಸರಿಯಾಗಿ ನಡೆಯುತ್ತವೆಯೋ ಅದರ ಮೇಲ್ವಿಚಾರಣೆ, ಸಂಸ್ಥೆಗೆ ಸಂಬಂಧಿಸಿದಂತೆ ನಿಗಾ ವಹಿಸುವುದು.

೩. ವಾಚನಾಲಯದ ಅಧಿಕಾರಿಗಳ ಬಗ್ಗೆ ಗಮನಿಸುವುದು.

೪. ವಾಸ್ತುಶಿಲ್ಪ, ಇಮಾರತ್ತಗಳ ದುರಸ್ತಿ ಕೆಲಸ ನೋಡಿಕೊಳ್ಳುವುದು.

೫. ವಿದ್ಯಾರ್ಥಿ ನಿಲಯದಲ್ಲಿ ಪಾಲಕರಂತೆ ಇರುವುದು. ಹಾಗೂ ಅಭ್ಯಾಸ ಮಾಡುತ್ತಾರೋ ಅಥವಾ ಇಲ್ಲವೋ ಎಂಬುದಾಗಿ ನೋಡಿಕೊಳ್ಳುವುದು. ವಿದ್ಯಾರ್ಥಿಗಳ ದುರ್ನಡತೆ ಅಥವಾ ಉತ್ತಮ ನಡತೆಗಳನ್ನು ಗಮನಿಸುವುದು. ನಡತೆ ಸರಿ ಇಲ್ಲದ ವಿದ್ಯಾರ್ಥಿಗಳ ಮೇಲೆ ಕ್ರಮ ಜರುಗಿಸುವುದು. ವಿದ್ವಾಂಸರಿಗೆ ಹೆಚ್ಚಿನ ನೈಪುಣ್ಯತೆ ಪಡೆಯಲು ಅನುವು ಮಾಡುವುದು.

ಹ್ಯೂಯನ್ ತ್ಸಾಂಗನು ಹೇಳಿದ ಹಾಗೆ ಧರ್ಮಶಾಲೆ, ಛತ್ರಗಳು ಅನ್ನ ಮತ್ತು ಔಷಧಗಳನ್ನು ಒದಗಿಸುತ್ತಿದ್ದರು. ತಾಳಿಗುಂದಿ ಅಗ್ರಹಾರದಲ್ಲಿ ಅನ್ನ ವಸ್ತ್ರಗಳ ಜೊತೆಗೆ ಪ್ರತಿ ಶನಿವಾರ ಎಣ್ಣೆ ಸ್ನಾನದ ವ್ಯವಸ್ಥೆ ಮಾಡಿಕೊಡುತ್ತಿದ್ದರು. ವಿದ್ಯಾರ್ಥಿಗಳಿಗೆ ಹೆಚ್ಚು ಪಾಠಗಳನ್ನು ಮೌಖಿಕವಾಗಿ ಕಲಿಸುತ್ತಿದ್ದರು. ದಾಖಲೆಗಳಲ್ಲಿ ಓದುವ ಮತ್ತು ಕೇಳುವ ವಿದ್ಯಾರ್ಥಿಗಳ ಶಬ್ದ ಪ್ರಯೋಗ ಸಿಗುತ್ತಿತ್ತು. ಪಾಠ ಓದುವುದು ಮತ್ತು ಕೇಳುವುದು ಅಷ್ಟೇ ಮುಖ್ಯವಾಗಿತ್ತು. ನಾಗಾವಿಯಂಥ ಸಂಸ್ಥೆಯಲ್ಲಿ ಕಂಠಪಾಠಕ್ಕೂ ವಿಶೇಷ ಪಡಸಾಲೆಗಳಿದ್ದವು. ಇವುಗಳಿಗೆ 'ಪಠಣಮಠ' ಎಂದು ಕರೆಯುತ್ತಿದ್ದರು.

ಓದು ಕಲಿಯುವ ವಿದ್ಯಾರ್ಥಿಗಳಿಗಾಗಿ ಮೌಖಿಕ ಪರೀಕ್ಷೆ ನಡೆಸುತ್ತಿದ್ದರು. ಶಿವಮೊಗ್ಗ ಜಿಲ್ಲೆಯ ತಾಳಗುಂದಿ ದೇವಾಲಯ ಮತ್ತು ಮಹಾವಿದ್ಯಾಲಯದಲ್ಲಿ ಆರು ವಿಜ್ಞಾನ ಶಾಖೆಗಳಿದ್ದವು. ಅರ್ಹತಾ ಪರೀಕ್ಷೆಯ ನಂತರ ಪ್ರತಿಯೊಂದು ಶಾಲೆಯಲ್ಲಿ ಎಂಟು ವಿದ್ಯಾರ್ಥಿಗಳನ್ನು ಸೇರಿಸಿಕೊಳ್ಳುತ್ತಿದ್ದರು. ಹಾಗೆಯೇ ಗುಲ್ಬರ್ಗಾದ ಹತ್ತಿರದ ನಾಗಾವಿಯ ಮಹಾವಿದ್ಯಾಲಯದ ಆವರಣದಲ್ಲಿ ೨೫೭ ವಿದ್ಯಾರ್ಥಿಗಳಿಗೆ ಅವಕಾಶವಿತ್ತು. ಒಂದೊಂದು ಮಹಾವಿದ್ಯಾಲಯ ನೂರು ವಿದ್ಯಾರ್ಥಿಗಳಂತೆ ಇರುತ್ತಿದ್ದರು. ವಿದ್ಯಾರ್ಥಿಗಳಿಗೆ ಪೂರ್ವಕಾಲಕ್ಕೆ ಪರೀಕ್ಷೆ ನಡೆಸಿ ಯೋಗ್ಯತೆ ಆಧಾರದ ಮೇಲೆ ಪ್ರವೇಶ ಕೊಡುತ್ತಿದ್ದರು. ಆ ಕಾಲಘಟ್ಟದಲ್ಲಿ ನಿರ್ದಿಷ್ಟ ತರಗತಿಗಳಾಗಲಿ, ಶ್ರೇಣೀಕರಣ ವ್ಯವಸ್ಥೆಯಾಗಲಿ ಇರಲಿಲ್ಲ. ಬಿರುದು ಕೂಡ ಇರುತ್ತಿರಲಿಲ್ಲ. ಅವರ ಪಡೆದ ವಿದ್ವತ್ ವಾದ ಮಂಡಿಸುವಲ್ಲಿ ಅವರು ತೋರುವ ಜಾಣ್ಮೆ-ಯೋಗ್ಯತೆಯನ್ನು ನಿರ್ಧರಿಸುತ್ತಿದ್ದರು.

**ಪ್ರಾಥಮಿಕ ಶಿಕ್ಷಣ**

ಮೇಲ್ದರ್ಜೆಯ ಶಿಕ್ಷಣ ಸಂಸ್ಕೃತ ಭಾಷೆಯಲ್ಲಿದ್ದರೆ, ಪ್ರಾಥಮಿಕ ಶಿಕ್ಷಣ ಕನ್ನಡದಲ್ಲಿ ಇರುತ್ತಿತ್ತು. ಅದಕ್ಕೆ ಕರ್ನಾಟಕ ಶಿಕ್ಷಣ, ಬಾಲಶಿಕ್ಷಣ ಎಂದು ಕರೆಯುತ್ತಾರೆ. ಹಾಗೆಯೇ ಪುರಾಣ ವಾಚಕರು ಕೂಡ ಪ್ರಾಥಮಿಕ ಶಾಲೆಯ ಶಿಕ್ಷಕರಾಗಿರುತ್ತಿದ್ದರು. ಹುಬ್ಬಳ್ಳಿ ಉಪನಗರವಾದ ಉಣಕಲ್ಲಿನ ದೇವಾಲಯದ ಅವರಣದಲ್ಲಿ ಇಂಥ ಶಾಲೆ ಇತ್ತು. ಈ ಶಾಲೆಯನ್ನು ಎಲಿಯ ಪುರಬಳ್ಳಿ (ಹುಬ್ಬಳ್ಳಿ ಮತ್ತು ಧಾರವಾಡ) ಉಪನಗರ ನವಲೂರಿನಲ್ಲಿ ಕುರುಬ ಸಮಾಜದವರ ಸಂಯುಕ್ತ ಆಶ್ರಯದಲ್ಲಿ ನಡೆಯುತ್ತಿತ್ತು.

**ಉನ್ನತ ಶಿಕ್ಷಣ**

ಉನ್ನತ ಶಿಕ್ಷಣ ಪಡೆಯಬೇಕಾದರೆ ಹೆಚ್ಚು ಕಾಲಾವಧಿ ಬೇಕಾಗುತ್ತಿತ್ತು. ವೇದಶಾಸ್ತ್ರ, ಕಲೆಗಳು ಅಭ್ಯಾಸ ಮಾಡಿ ಅವುಗಳ ಮೇಲೆ ಪ್ರಭುತ್ವ ಪಡೆಯುತ್ತಿದ್ದರು. ಈ ಅಭ್ಯಾಸ ಕ್ರಮಕ್ಕೆ ಹನ್ನೆರಡು ವರ್ಷಗಳ ಕಾಲ ಬೇಕಾಗುತ್ತಿತ್ತು. ರಾಜಕುಮಾರರು ಹತ್ತು ವರ್ಷಗಳವರೆಗೆ ಅಭ್ಯಾಸ ಮಾಡುತ್ತಿದ್ದರು. ಶಿಕ್ಷಣ ಕೊಡುವಲ್ಲಿ ವ್ಯಕ್ತಿಗತವಾಗಿ ಹೆಚ್ಚು ಗಮನ ಕೊಡುತ್ತಿದ್ದರು.

**ಕಲಿಸುವ ವಿಷಯಗಳು**

ವೇದಗಳು, ವೇದಾಂಗಗಳು, ವ್ಯಾಕರಣ, ತತ್ವಜ್ಞಾನ, ಪುರಾಣ, ಕಾವ್ಯ, ನಾಟಕ, ಸಂಗೀತ ಅಲ್ಲದೆ ಮೂಲಗ್ರಂಥ ಕರ್ತೃಗಳಾದ ಪಾಣಿನೀಯ ಕುಮಾರವ್ಯಾಸ, ವ್ಯಾಕರಣ ಪ್ರಭಾಕರ ಮೀಮಾಂಸೆ, ತತ್ವಜ್ಞಾನ, ಪಠ್ಯಕ್ರಮದಲ್ಲಿ ಕಲಿಸುವ ಪದ್ಧತಿಗಳಲ್ಲಿ ವ್ಯತ್ಯಾಸವಾಗುತ್ತಿತ್ತು. ಧಾರವಾಡ ಜಿಲ್ಲೆಯ ಲಕ್ಕುಂಡಿಯಲ್ಲಿ ಪ್ರಭಾಕರ ಮೀಮಾಂಸೆ, ತತ್ವಜ್ಞಾನಕ್ಕೆ ಮಾತ್ರ ಅವಕಾಶವಿತ್ತು. ಹಾಗೆಯೇ ಶಿವಮೊಗ್ಗ ಜಿಲ್ಲೆಯ ಬಳ್ಳಿಗಾವಿ ಕೋಡಿಮಠ, ಭಾರತೀಯ ತತ್ವಜ್ಞಾನ ಆರು ಪದ್ಧತಿಗಳ ಜೊತೆಗೆ ತತ್ವಜ್ಞಾನ ಹಾಗೂ ಲಕುಲನ 'ಯೋಗ ಸೂತ್ರಗಳನ್ನು' ಕಲಿಸಲಾಗುತ್ತಿತ್ತು. ಪ್ರಾಧ್ಯಾಪಕರಿಗೆ ಅನೇಕ ಭಾಷೆ ಮತ್ತು ಶಿಲಾಶಾಸನದಲ್ಲಿ ಜ್ಞಾನವಿತ್ತು. ಶಿವಮೊಗ್ಗ ಜಿಲ್ಲೆಯ ಕುಪ್ಪಟೂರಿನ ಮಹಾಜನರು ಅಥವಾ ಶಿಕ್ಷಕರು ಬೇರೆ ಬೇರೆ ವಿಷಯಗಳಲ್ಲದೆ ವಾತ್ಸಾಯನ ಕಾಮಸೂತ್ರದಲ್ಲಿ ಪರಿಣಿತಿ ಹೊಂದಿದ್ದರು.

ಮಹಿಳೆಯರ ಶಿಕ್ಷಣ ಅಭ್ಯಾಸದ ಕ್ರಮವೂ ಉಲ್ಲೇಖಗೊಂಡಿದೆ. ಸಂಗೀತ, ನೃತ್ಯ, ಹೆಚ್ಚಿನ ಪ್ರಾವಿಣ್ಯತೆ ಅಲ್ಲದೆ ಆಡಳಿತದಲ್ಲಿ ಪರಿಣಿತಿ ಪಡೆದಿದ್ದರು. ಔದ್ಯೋಗಿಕ (ಕಸುಬು) ಶಿಕ್ಷಣಕ್ಕೆ ಸಂಬಂಧಿಸಿದ ಚರ್ಚೆ ಇಲ್ಲಿ ನಿರೂಪಿತಗೊಂಡಿದೆ. ಮಧ್ಯಕಾಲೀನ ಅವಧಿಯಲ್ಲಿ ಸಾಕಷ್ಟು ದೇವಾಲಯಗಳು ನಿರ್ಮಾಣಗೊಂಡವು. ಅಂದರೆ ವಾಸ್ತು ನೈಪುಣ್ಯತೆ ಅವರಿಗೆ ಗೊತ್ತಿತ್ತು. ಹೀಗಾಗಿ ನಾಡಿನಲ್ಲಿ ಕೆತ್ತನೆಯ ಕಲೆ ಇಂದಿಗೂ ಜೀವಂತವಾಗಿವೆ. ಶಿವಮೊಗ್ಗ ಜಿಲ್ಲೆ ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಗಳಲ್ಲಿ ಚಂದ್ರನ ಮೂರ್ತಿಕಾರರು ಪ್ರಾಚೀನ ದೇವಾಲಯಗಳನ್ನು ಸುಂದರವಾಗಿ ಕೆತ್ತನೆ ಮಾಡಲು ಕಲಾಕಾರರ ವಂಶದವರೇ ಇದ್ದರೆಂದು ತಿಳಿದು ಬರುತ್ತದೆ. ಈ ಕಾರಣದಿಂದ ಕಲಾಕಾರರನ್ನು ಗುಡಿಕಾರರು ಅಥವಾ ದೇವಾಲಯಗಳ ನಿರ್ಮಾಣಕಾರರೆಂದು ಕರೆಯುತ್ತಾರೆ. ಈ ಕಲೆಯು ತಂದೆಯಿಂದ ಮಗನಿಗೆ ಕಲಿಸಿಕೊಡುವ ಪದ್ಧತಿ ಚಾಲ್ತಿಯಲ್ಲಿತ್ತು.

ಜನಸಾಮಾನ್ಯರು ಶಿಕ್ಷಣ ಕಲಿಯಲು ದೇವಾಲಯಗಳು ಶಿಕ್ಷಣ ಕೇಂದ್ರಗಳಾಗಿದ್ದವು. ಪುರಾಣಭಟ್ಟರು ಮಹಾಭಾರತ, ರಾಮಾಯಣ ಕಥೆಗಳಲ್ಲಿ ಬರುವ ಕೆಲವು ದೃಶ್ಯಗಳನ್ನು ದೇವಾಲಯದ ಗೋಡೆಯ ಮೇಲೆ ಕೆತ್ತಿಸಿ; ಸನ್ನಿವೇಶಕ್ಕೆ ಅನುಗುಣವಾಗಿ ಆ ದೃಶ್ಯಗಳನ್ನು ತೋರಿಸಿ, ವಿದ್ಯಾರ್ಥಿಗಳಿಗೆ ಮನವರಿಕೆಯಾಗುವಂತೆ ಹೇಳಿಕೊಡುತ್ತಿದ್ದರು. ಇದಕ್ಕೆ ನಿದರ್ಶನ ಹಾವೇರಿ, ಮಗಧ, ನಾಗಾಯಿಯ ದೇವಾಲಯಗಳಲ್ಲಿ ಕಂಡುಬರುವ ಚಿತ್ರಗಳು. ನಾಟ್ಯಗೃಹದಲ್ಲಿ ಪ್ರದರ್ಶಿಸಿದ ಚಿತ್ರಗಳ ಮೂಲಕ ನೃತ್ಯ, ಸಂಗೀತ ಮತ್ತು ನಾಟಕ ಈ ಕಲೆಗಳಲ್ಲಿ ಜನರಿಗೆ ಆಸಕ್ತಿ ಹುಟ್ಟುವಂತೆ ಮಾಡಿದರು. ೧೨ನೇ ಶತಮಾನದ ಕಾಲಘಟ್ಟದಲ್ಲಿ ಹಲವು ಚಳುವಳಿಗಳು ಘಟಿಸಿದವು. ಶೈಕ್ಷಣಿಕವಾಗಿ ಕ್ರಾಂತಿ ಮೊಳಗಿತ್ತು. ಬಸವಣ್ಣ ಧಾರ್ಮಿಕ ರೂವಾರಿಗಳಾಗಿದ್ದರು.

**ಮಧ್ಯಕಾಲೀನ ಶಿಕ್ಷಣ ಮತ್ತು ವಿಜ್ಞಾನ**

ವಿಜಯನಗರ ರಾಜರು ಶಿಕ್ಷಣಕ್ಕೆ ಪ್ರಸಾರ ಪ್ರೋತ್ಸಾಹ ನೀಡುತ್ತಿದ್ದರು. ಮೊದಲನೇ ಬುಕ್ಕನು ಭಾರತೀತೀರ್ಥರ ಮತ್ತು ವಿದ್ಯಾರಣ್ಯರ ಶಿಷ್ಯನಾಗಿದ್ದನು. ಅಲ್ಲದೆ ಹರಿಹರ ಮೊದಲನೆಯ ದೇವರಾಯನ ಆಚಾರ್ಯನಾಗಿದ್ದನು. ರಾಜಕುಮಾರ ವಿದ್ಯಾಭ್ಯಾಸವು ಹೀಗೆ ಮುಂದುವರಿದಿತ್ತು. "ಕೆಳದಿಯ ಅರಸನಾದ ಚಿಕ್ಕ ಸಂಕಣ್ಣ ನಾಯಕನ ಉತ್ತರಾಧಿಕಾರಿಯಾದ ವೆಂಕಟಪ್ಪ ನಾಯಕನಿಗೆ ಸಪ್ತಾಂಗದ ಓನಾಮವನ್ನು (ಬೀಜರೂಪವನ್ನು) ಹೇಳಿಕೊಟ್ಟರು. ಅಲ್ಲದೆ ವೆಂಕಟಪ್ಪ ನಾಯಕನು ವಿದ್ವಾಂಸರಿಂದ ಕಾವ್ಯ, ನಾಟಕ, ಧರ್ಮಶಾಸ್ತ್ರಗಳನ್ನು ಕುರಿತು ಅನೇಕ ಗ್ರಂಥಗಳನ್ನು ಬರೆಸಿದ್ದಲ್ಲದೆ ತಾನು ಕೆಲವನ್ನು ರಚಿಸಿದರು"[೧೨] ಎಂಬುದು ದಾಖಲೆಗಳಿಂದ ತಿಳಿದು ಬರುತ್ತದೆ. ಹೀಗೆ ಅನೇಕ ರಾಜ ಸಂಸ್ಥಾನಗಳ ಕಲಿಕೆಯ ಕ್ರಮವನ್ನು ಪ್ರಸ್ತಾಪಗೊಂಡಿದೆ. "ಕೆಳದಿಯ ರಾಣಿಯಾದ ಚೆನ್ನಮ್ಮಾಜಿಯ ಉತ್ತರಾಧಿಕಾರಿಯನ್ನಾಗಿ ಬಸಪ್ಪನನ್ನು ಆಯ್ಕೆ ಮಾಡಿದಾಗ ಆತನಿಗೆ ವಿದ್ಯಾಶಾಸ್ತ್ರ ಹಾಗು ದೈಹಿಕ ಶಿಕ್ಷಣ ಕೊಡಿಸಿದಲ್ಲದೆ ಆತನು ರಾಜನಾಗಲು ಬೇಕಾಗುವ ಶಿಕ್ಷಣ ಕ್ರಮವಾಗಿ ಆತನಿಗೆ ತರಬೇತಿ ಕೊಡಿಸಿದಳು."[೧೩]

ಸಮರ್ಥವಾಗಿ ಆಡಳಿತ ಕಾರ್ಯ ನಿರ್ವಹಿಸಲಿಕ್ಕೆ ಆತ ಕಲಿತ ಶಿಕ್ಷಣ ಸಹಕಾರಿಯಾಗಿದೆ. ಆ ಕಾಲಕ್ಕೆ ಪ್ರಾಥಮಿಕ ಶಿಕ್ಷಣಕ್ಕೆ ಬಾಲಬೋಧೆ ಎಂದು ಕರೆಯುತ್ತಿದ್ದರು. ಹಾಗೆಯೇ ಭಾರತದ ಕಲಿಕಾ ಕ್ರಮ ತುಂಬ ವಿಶಿಷ್ಟವಾಗಿತ್ತು. "ಮಕ್ಕಳ ಆರಂಭದ ಕಲಿಕೆ ಮಣ್ಣಿನ ಅಥವಾ ಮರಳಿನ ಮೇಲೆ ಅಕ್ಷರಾಭ್ಯಾಸ ಮಾಡುವುದರ ಮೂಲಕವಾಗುತ್ತಿತ್ತು. ನಂತರ ಕಾಗುಣಿತ, ನೂರರ ತನಕ ಅಂಕೆ, ಮಗ್ಗಿ, ಪೂರ್ಣಾಂಕಾ-ಭಿನ್ನಾಂಕ, ಗುಣಿಸುವುದು ನಾಣ್ಯ, ಅಳತೆ ಮತ್ತು ತೂಕಗಳಿಗೆ ಸಂಬಂಧಿಸಿದ ಕೋಷ್ಟಕಗಳನ್ನು ಕಲಿಸುತ್ತಿದ್ದರು: ಇದನ್ನು ದೂಳಾಕ್ಷರವೆಂದು ಕರೆಯುತ್ತಿದ್ದರು."[೧೪] ಈ ದೇಶದ ಕಲಿಕೆಯ ಪದ್ಧತಿ ತುಂಬ ಪರಿಣಾಮಕಾರಿಯಾಗಿದೆ ಎಂದು ಹೇಳುತ್ತ ಪುನರಾವರ್ತನೆ ಮಾಡುತ್ತಾರೆ. ಅದನ್ನು ಮರಳಿ ಅಥವಾ ಮಣ್ಣಿನ ಮೇಲೆ ಬರೆಯುತ್ತ ಹೇಳುತ್ತಿದ್ದರು. ಪಾಶ್ಚಾತ್ಯ ಶಿಕ್ಷಣತಜ್ಞರಾದ ಪಿಯಟ್ರೋಡೆಲ್ಲಾ ವಾಲ್ಲೆ ಈ ರೀತಿಯ ಸರಳ ಕಲಿಕೆಯ ಕ್ರಮ ಮೆಚ್ಚಿಕೊಂಡಿದ್ದಾರೆ. ವಿದ್ಯಾರ್ಥಿಗಳ ಕಾಗದ ಮತ್ತು ಮಸಿಯನ್ನಾಗಲಿ ವ್ಯರ್ಥ ಮಾಡದೇ ಓದು ಕಲಿಯುತ್ತಿದ್ದರು"

ಈ ನಾಡಿನ ಶಿಕ್ಷಣ ವೈಶಿಷ್ಟ್ಯತೆಯನ್ನು ಪಾಶ್ಚಿಮಾತ್ಯರು ಶ್ಲಾಘಿಸಿದ್ದಾರೆ. ಈ ಮೇಲಿನ ಸಂಗತಿ ಆಧರಿಸಿ ಹೇಳುವುದು ಆ ವಿಷಯಕ್ಕೆ ಪುಷ್ಠಿ ನೀಡುತ್ತದೆ. ಪಿಯಟ್ರೋಡೆಲ್ಲಾ ವಾಲ್ಲೆ ವರದಿಯಲ್ಲಿ 'ಈ ಶಿಕ್ಷಣ ಪಾಶ್ಚಿಮಾತ್ಯ ಶಿಕ್ಷಣ ಶಾಸ್ತ್ರಕ್ಕೆ ಭಾರತೀಯರ ಕೊಡುಗೆ ಎನ್ನುವುದು ಆ ವರದಿಯಲ್ಲಿ ದಾಖಲುಗೊಂಡಿದೆ. ಅಗ್ರಹಾರ, ಮಠಗಳು, ದೇವಸ್ಥಾನ, ಬ್ರಹ್ಮಪುರಿ, ಘಟಿಕಾ ಇವು ಆ ಕಾಲಕ್ಕೆ ಪ್ರೌಢ ವಿದ್ಯಾ ಕೇಂದ್ರಗಳಾಗಿದ್ದವು. ಹಾಗೆಯೇ

ಬ್ರಹ್ಮಪುರಿ, ದೇವಸ್ಥಾನಗಳು ವಿದ್ಯಾಪ್ರಸಾರದ ಕೇಂದ್ರವಾಗಿದ್ದವು. ಹಾಗೆಯೇ ಮಠಗಳು ವಿದ್ಯಾಕೇಂದ್ರವಾಗಿದ್ದವು. ಮಠ ಧರ್ಮದ ಆಚಾರ್ಯ ಧೋರಣೆಯ ಪೀಠಗಳಾಗಿದ್ದವು. ಗುರುವಿನ ಸುತ್ತ ಹಲವು ಬಗೆಯ ಚಟುವಟಿಕೆಗಳ ಕೇಂದ್ರಗಳಾಗಿದ್ದವು. ನಂತರದ ದಿನಮಾನಗಳಲ್ಲಿ ವಿದ್ಯಾಕೇಂದ್ರವಾಗಿದ್ದ ಮಠಗಳು ಮತ ಕೇಂದ್ರಗಳಾದ ಹಿನ್ನೆಲೆಯಲ್ಲಿ ರಾಜರು ಆಯಾ ಪೀಠದ ಉತ್ತರಾಧಿಕಾರಗಳನ್ನಾಗಿ ಗೊತ್ತು ಮಾಡಿದರು.

ಈ ಮೇಲಿನ ಮಾತನ್ನು ಸಮರ್ಥಿಸಲಿಕ್ಕೆ ಒಂದು ನಿದರ್ಶನ ಕೊಡುತ್ತಾರೆ. ಕೆಳದಿಯ ಅರಸನೊಬ್ಬನು ಈ ರೀತಿಯ ವಿಚಾರ ಪರಿಚಯಿಸುತ್ತಾನೆ. ಇಂಥ ಮಠಗಳ ಮುಖ್ಯಸ್ಥರಾಗಿರುವ ರಾಜನೊಂದಿಗೆ ಏಕಾಭಿಪ್ರಾಯ ಉಳ್ಳವರಾಗಿರಬೇಕು. "ಇಕ್ಕೇರಿ ಸಂಸ್ಥಾನದಲ್ಲಿ ಬೇರೆ ಬೇರೆ ಮಠಗಳು ವಶೀಕೃತ ಮಠ, ಮಹತ್ತು ಮಠ, ವಿರಕ್ತಮಠ ಹೀಗೆ ಮಠಗಳ ಬೇರೆ ಬೇರೆ ಸ್ವರೂಪ ಪ್ರಸ್ತಾಪಗೊಂಡಿದೆ. ಅಲ್ಲದೆ ಮಧ್ಯಕಾಲೀನ ಅಧ್ಯಯನದ ವಿಷಯ ಕುರಿತು ನಿರೂಪಿತಗೊಂಡಿದೆ."[೧೫] ರಾಜಸಭೆಯಲ್ಲಿ ಕವಿಗಳು, ಗಾಯಕರು, ಪೌರಾಣಿಕರು, ಹಾಸ್ಯಗಾರರು, ಚರಿತ್ರೆಗಾರರು, ವಾಗ್ಮಿಗಳು ಮತ್ತು ಯುದ್ಧ ಕಲಾ ನಿಪುಣರು–ಇವರುಗಳಿಗೆ ಮಾತ್ರ ಅವಕಾಶವಿತ್ತು. ಹಾಗೆಯೇ ಸೋಮೇಶ್ವರ ಶತಕದಲ್ಲಿ ಎಲ್ಲಾ ಕಲಿಕೆಗಳಿಗೆ ಕಲಿಯಲು ಅವಕಾಶವಿತ್ತೆಂದು ಉಲ್ಲೇಖಗೊಂಡಿದೆ. ಮಂತ್ರಿಯ ಅರ್ಹತೆಗೆ ಸಂಬಂಧಿಸಿದಂತೆ 'ಸೋಮೇಶ್ವರ ಶತಕದಲ್ಲಿ' ಉಲ್ಲೇಖವಾಗಿದೆ. "ಕೃಷ್ಣ ದೇವಾರಾಯನ ಮಂತ್ರಿಯಾದ ಕೊಂಡಮರಸನು ಬಹುಭಾಷಾ ಲಿಪಿಗಳನ್ನು ಓದುವುದರಲ್ಲಿ ಪರಿಣತಿ ಪಡೆದಿದ್ದನು"[೧೬]

ವೇದ, ಮೀಮಾಂಸೆ, ನ್ಯಾಯ, ವ್ಯಾಕರಣ, ಪುರಾಣ, ಧರ್ಮಶಾಸ್ತ್ರ, ಸಂಗೀತ, ವೈದ್ಯವಿದ್ಯೆ ಕುರಿತು ಚರ್ಚೆಗೊಂಡಿದೆ. ಅಧ್ಯಯನ ಪದ್ಧತಿಗೆ ಸಂಬಂಧಿಸಿದ ಸಂಗತಿಯೂ ಸೋಮೇಶ್ವರ ಶತಕದಲ್ಲಿ ಪ್ರಸ್ತಾಪಗೊಂಡಿದೆ. ಕೆಲವನ್ನು ಬಲ್ಲವರಿಂದ ಕಲಿತು, ಕೆಲವನ್ನು ಶಾಸ್ತ್ರಗಳಿಂದ ಕಲಿತು, ಕೆಲವನ್ನು ಇತರ ಕೃತಿಗಳಿಂದ, ಮತ್ತೆ ಕೆಲವನ್ನು ಸಜ್ಜನರ ಸಂಗದಿಂದ ಅರಿಯಬೇಕು. ಹೀಗೆ ವ್ಯಕ್ತಿಯ ವಿಕಾಸ ಸ್ವರೂಪಗಳ ಬಗ್ಗೆ ಹಾವನೂರ ಅವರೂ ವಿಮರ್ಶಿಸಿದ್ದಾರೆ.

೧೨ನೇ ಶತಮಾನದಲ್ಲಿ ವೀರಶೈವ ಚಳುವಳಿ ಆರಂಭಗೊಂಡು ನಂತರ ೧೩ನೇ ಶತಮಾನದ ಹೊತ್ತಿಗೆ ಕ್ಷೀಣಿಸುವ ಹಂತವನ್ನು ತಲುಪಿತು. ಹಾಗೆಯೇ ೧೪ನೇ ಶತಮಾನದ ಅವಧಿಗೆ ಪುನರುಜ್ಜೀವನದ ಕೇಂದ್ರಗಳಾಗಿದ್ದವು. ಈ ಹಿನ್ನೆಲೆಯಲ್ಲಿ ವಚನಸಾಹಿತ್ಯ ರಚನೆಗೆ ದಾರಿಯಾಯಿತು. ನಂತರ ನಿಜಗುಣ ಶಿವಯೋಗಿ, ಸರ್ವಜ್ಞರು ಸಾಮಾನ್ಯ ಜನತೆಯ ಒಲವು ಶಿಕ್ಷಣದ ಕಡೆಗೆ ಹುಟ್ಟುವಂತೆ ಪರಿಸರ ಸೃಷ್ಟಿಸಿದರು. ೧೨ನೇ ಶತಮಾನದ ಪೂರ್ವದಲ್ಲಿ ವೀರಶೈವರು ಧಾರ್ಮಿಕ ಚಳುವಳಿಯು ಆರಂಭಗೊಂಡಾಗಿನಿಂದಲೂ ಜನರ ಮಾತಿಗೆ ಹೆಚ್ಚು ಪ್ರಾಶ್ಯಸ್ತ್ಯಕೊಟ್ಟರು. ೧೩ನೇ ಶತಮಾನದ ಹೊತ್ತಿಗೆ ಚಳುವಳಿಯ ಸ್ವರೂಪ

ಕಡಿಮೆಯಾಯಿತು. ನಂತರ ೧೪ನೇ ಶತಮಾನದ ಹೊತ್ತಿಗೆ ವಿಜಯನಗರ ಮತ್ತು ಎಡೆಯೂರು ಪುನರುಜ್ಜೀವನದ ಕೇಂದ್ರಗಳಾಗಿದ್ದವು. ಬ್ರಾಹ್ಮಣರು ಜನಸಾಮಾನ್ಯರ ಭಾಷೆಯಲ್ಲಿ ಸಾಹಿತ್ಯ ರಚಿಸಲು ಹಿಂಜರಿಯುತ್ತಿದ್ದರು. ಜನರು ಆ ಕಾಲಕ್ಕೆ "ಮೇಲೆನ್ನದೆ ಕೀಳೆನ್ನದೆ ಸರ್ವರ ಉದ್ಧಾರಕ್ಕಾಗಿ ತಮ್ಮ ಪವಿತ್ರ ಗ್ರಂಥಗಳ ಭಂಡಾರವನ್ನು ತೆರೆಯಲು ನಿರ್ಧರಿಸಿದರು."[೧೭]

ಈ ಪಂಥವೇ ಹರಿದಾಸ ಪಂಥವೆನಿಸಿಕೊಂಡಿತು. ಹೀಗಾಗಿ ವೀರಶೈವರ ವಚನ ಮತ್ತು ಹರಿದಾಸರ ಪದಗಳು ಸಂಗೀತ ಸಂವಾದ ಹಾಗೂ ಹಾಸ್ಯವನ್ನೊಳಗೊಂಡ ಕೀರ್ತನೆಗಳು ವಿಜಯನಗರ ಕಾಲಕ್ಕೆ ಸಾರ್ವತ್ರಿಕವಾಗಿ ಶಿಕ್ಷಣದ ಸಾಧನಗಳಾಗಿದ್ದವು. ನಂತರ ೧೮ನೇ ಶತಮಾನದ ಜಾನಪದ, ನಾಟಕ ಪ್ರಕಾರ ತನ್ನ ಅಸ್ತಿತ್ವವನ್ನು ಕಂಡುಕೊಂಡಿತು. ದಿನ ನಿತ್ಯದ ಜೀವನ ದೃಶ್ಯಗಳನ್ನು ನಾಟ್ಯ ರೂಪದಲ್ಲಿ ತೋರಿಸುತ್ತಿದ್ದರು. ಜಾದುಗಾರ ಮತ್ತು ವೇಷಗಾರರು ಇದ್ದರು.

ಮುಸ್ಲಿಮ್ ಶಿಕ್ಷಣ ಮಧ್ಯಕಾಲದಲ್ಲಿ ತನ್ನದೇಯಾದ ಸ್ವರೂಪ ಪಡೆದುಕೊಂಡಿದೆ. ತಮ್ಮ ಪ್ರಜೆಗಳಿಗೆ ಶಿಕ್ಷಣ, ಕಲಿಕೆ, ಕಲಿಯಲು ವ್ಯವಸ್ಥೆ ಕಲ್ಪಿಸಿದರು. ಈ ಸಂಗತಿಗೆ ನಿದರ್ಶನವಾಗಿ ಮಸೀದಿಗಳಿಗೆ ಲಗತ್ತಾದ ಮುಕ್ತಾಜ್ ಮತ್ತು ಮದರಸಾಗಳ ಶಿಕ್ಷಣ ಮಾಧ್ಯಮಗಳಾಗಿದ್ದವು. ಬಹುಮನಿ ರಾಜ್ಯ ಪ್ರವಾಸ ಮಾಡಿದ ಇಬನ್ ಬತೂತನ ಈ ರೀತಿ ಅಭಿಪ್ರಾಯಪಡುತ್ತಾನೆ. "ಹೀಲಿ ಎಂಬ ಊರಿನ ಮಸೀದಿಯಲ್ಲಿ ಮಸೀದಿಯ ನಿಧಿಯಿಂದ ಪೋಷಿತವಾದ ವಿದ್ಯಾರ್ಥಿ ವೇತನ ಪಡೆದು ಅನೇಕ ಶಾಸ್ತ್ರಗಳನ್ನು ಅಭ್ಯಸಿಸುತ್ತಿದ್ದ ಅನೇಕ ವಿದ್ಯಾರ್ಥಿಗಳ ಕಂಡು ಇನ್ನೊಂದು ಸಂಗತಿಯನ್ನು ಹೇಳುತ್ತಾನೆ. ಹೊನ್ನಾವರದಲ್ಲಿ ಹುಡುಗಿಯರಿಗಾಗಿ ಶಾಲೆಯನ್ನು ತೆರೆದಿದ್ದನ್ನು ಬೇರೆಲ್ಲೂ ಕಂಡಿರಲಿಲ್ಲ. ಈ ಮಾದರಿಯೆ ಅಲ್ಲದೆ ಖುರಾನನ್ನು ಬಾಯಿಪಾಠ ಮಾಡುತ್ತಿದ್ದ ಮುಸ್ಲಿಮ್ ಮಹಿಳೆಯರ ಕುರಿತು ವಿಶೇಷವಾಗಿ ಹೊಗಳಿದ್ದಾನೆ."[೧೮] ಇತ್ಯಾದಿ ಮಾಹಿತಿಗಳ ಕುರಿತು ಹಾವನೂರ ಅವರು ವಿಶ್ಲೇಷಿಸಿದ್ದಾರೆ.

ಬಹಮನಿ ರಾಜರುಗಳಲ್ಲಿ ವಿದ್ಯಾಪ್ರಸಾರವನ್ನು ಮಾಡಿದದವರಲ್ಲಿ ೨ನೇ ಮಹಮ್ಮದನು ಮೊದಲಿಗನು. ತನ್ನ ತಂದೆಯಾದ ೧ನೇ ಅಲ್ಲಾವುದ್ದೀನ್‌ನು ಉತ್ತಮ ಶಿಕ್ಷಣ ಕೊಟ್ಟಿದ್ದನು. ಹೀಗಾಗಿ ಆತನು ಅನಾಥರಿಗಾಗಿ ಮದರಸಾ ಸ್ಥಾಪಿಸಿದನು. ಆ ಮಕ್ಕಳಿಗಾಗಿ ಆಸನ, ವಸತಿ, ಉಚಿತ ಶಿಕ್ಷಣ ನೀಡುತ್ತಿದ್ದನು. ಈ ಸಂಸ್ಥೆಯ ಶಿಕ್ಷಕ ವರ್ಗವು ಕೂಡ ಸುಶಿಕ್ಷಿತರಾಗಿತ್ತು. ಗುಲ್ಬರ್ಗ, ಬೀದರ್ ಮತ್ತು ಇತರ ಕಡೆಗಳಲ್ಲಿ ಶಾಲೆ ಮತ್ತು ಅನಾಥಾಲಯಗಳು ಸ್ಥಾಪಿತವಾಗಿದ್ದವು. ಅಲ್ಲದೆ ಸೈನಿಕ ಶಾಲೆಯನ್ನು ಸ್ಥಾಪಿಸಿದರು. ಬಹಮನಿ ಅರಸನಾದ ಮಹಮ್ಮದ್ ಗವಾನ್ ಹೆಚ್ಚಿನ ಪ್ರೋತ್ಸಾಹ ನೀಡಿದನು. ಅಲ್ಲದೆ ಬಹಮನಿ ರಾಜವಂಶ ಸೂತ್ರದಾರನಾಗಿದ್ದ ಎನ್ನುವುದಕ್ಕೆ ಇಂದಿಗೂ ಪುರಾವೆಯಾಗಿದೆ. ತನ್ನ ಹಣದಿಂದಲೇ ಕಾಲೇಜು ಕಟ್ಟಿಸಿದನು. ಅಲ್ಲದೆ ಇಸ್ಲಾಂ ರಾಷ್ಟ್ರಗಳ ಮಾದರಿಯಲ್ಲಿ ನಿರ್ಮಿಸಿದನು. ಹಾಗೆಯೇ

ತತ್ವಶಾಸ್ತ್ರ ಮತ್ತು ವಿಜ್ಞಾನ ಅಧ್ಯಯನ ಮಾಡಿದ. ಪ್ರಾಧ್ಯಾಪಕನಾಗಿ ಕಾರ್ಯ ನಿರ್ವಹಿಸಿದನು. ಇದಲ್ಲದೆ ಮೂರು ಸಾವಿರ ಹಸ್ತಪ್ರತಿಗಳ ಪುಸ್ತಕ ಭಂಡಾರ ಮಾಡಿದನು.

"ವಿಜಾಪುರ ಸುಲ್ತಾನನು ಅರೇಬಿಕ್ ಮತ್ತು ಪರ್ಷಿಯನ್ ವಿದ್ವಾಂಸರಿಗೆ ತನ್ನ ಆಸ್ಥಾನದಲ್ಲಿ ಆಶ್ರಯ ನೀಡಿದನು. ಹೀಗಾಗಿ ಇದು ವಿದ್ವತ್‌ಕೇಂದ್ರವಾಗಿದೆ. ಅಲ್ಲದೆ ಸುಂದರ ನಗರವಾಗಿ ಮಾರ್ಪಡಿಸಿದನು. ಹಾಗೆಯೇ ಶಿಲ್ಪ, ವಾಸ್ತುಶಿಲ್ಪದಲ್ಲಿ ಮತ್ತು ವೈಜ್ಞಾನಿಕ ವಿದ್ಯೆಯಲ್ಲಿ ಪ್ರಸಿದ್ಧರಾಗಿದ್ದನು. ಈ ಸುಲ್ತಾನ್ ಹೊರನಾಡಿನವರಾಗಿದ್ದರೂ ಸ್ಥಳೀಯರ ಜೊತೆಗೆ ಹೊಂದಿಕೊಂಡಿದ್ದನು. ಹೀಗಾಗಿ ಸ್ಥಳೀಯರು ಅವನನ್ನು ಸ್ಮರಿಸಿಕೊಳ್ಳುವಂತಾಗಿದೆ. ಸಾಯಣನ ಅಪ್ಪಣೆ ಮೇರೆಗೆ ಏಕನಾಥ 'ಆಯುರ್ವೇದ ಸುಧಾನಿಧಿ' ಎನ್ನುವ ಗ್ರಂಥ ಬರೆದನು. ಇದು ಮೊಟ್ಟಮೊದಲ ವೈದ್ಯಗ್ರಂಥ ಅಲ್ಲದೇ ಆತನ ಮೊಮ್ಮಗ ಶ್ರೀ ಶೈಲನಾಥನು ಪ್ರಶ್ನೋತ್ತರ ಮಾಲೆ ಎಂಬ ವೈದ್ಯಕೀಯ ಗ್ರಂಥವನ್ನು ಬರೆದನು. ನಂತರ ಕ್ರಿ.ಶ. ೧೧೫೦ರಲ್ಲಿ ಶ್ರೀಧರದೇವನು 'ವೈದ್ಯಾಮೃತ' ಎಂಬ ಗ್ರಂಥವನ್ನು ಬರೆದನು."[೯] ಹೀಗೆ ವೈದ್ಯಕೃತಿಗಳ ಮಹತ್ವ ಇಲ್ಲಿ ಪ್ರಸ್ತಾಪಗೊಂಡಿದೆ.

ಸ್ವಾಳ ದೇಹದ ಬೇನೆಗಳಿಗೆ ಔಷಧಿಯಾಗಿ ಚೂರ್ಣವನ್ನು ತಯಾರಿಸುವ ಕ್ರಮವನ್ನು ವಿವರಿಸಿದ್ದಾನೆ. ನಂತರದಲ್ಲಿ ನರಸಿಂಹ ಶಾಸ್ತ್ರೀ 'ವೈದ್ಯ ಸಾರಸಂಗ್ರಹ' ಕೃತಿಯನ್ನು ಕ್ರಿ.ಶ. ೧೫೭೦ರಲ್ಲಿ ರಚಿಸಿದ್ದಾರೆ. ಚಿಕ್ಕದೇವರಾಯನ ಆಳ್ವಿಕೆಯಲ್ಲಿ ಜೈನ ವಿದ್ವಾಂಸರು ವೈದ್ಯ 'ನಿಘಂಟು ಸಾರ' ಶಬ್ದಕೋಶವನ್ನು ರಚಿಸಿದ್ದಾರೆ. ತಿಮ್ಮರಾಜಗೌಡನು 'ಸ್ತ್ರೀ' ವೈದ್ಯ ಕೃತಿಯನ್ನು ರಚಿಸಿದ್ದು ಇದು ಸ್ತ್ರೀ ಸಂಬಂಧಿಸಿದ ರೋಗಗಳ ಕುರಿತು ತಿಳಿಸುತ್ತದೆ. ಮಧ್ಯಕಾಲದಲ್ಲಿ ಪಶುವೈದ್ಯ ವಿಜ್ಞಾನಕ್ಕೆ ಸಂಬಂಧಿಸಿದ ಹಾಗೂ ಕುದುರೆಗೆ ಸಂಬಂಧಿಸಿ ವಿಷಯಗಳ ಕುರಿತ ಕೃತಿಗಳನ್ನು ಹೊರತರಲಾಗಿತ್ತು. ಅಲ್ಲದೆ ಯುದ್ಧದಲ್ಲಿ ಬಳಕೆಯಾಗುವ ಪ್ರಾಣಿಗಳ ಕುರಿತು ಮತ್ತು ಅವುಗಳ ರಕ್ಷಣೆ ಕುರಿತು ಕೃತಿರೂಪದಲ್ಲಿ ವಿವರಗಳಿವೆ. ಚಾಮರಸನು 'ಅಶ್ವವೈದ್ಯ'ವನ್ನು ಬರೆದನು. ಕ್ರಿ.ಶ. ೧೬೦೫ರಲ್ಲಿ ರಾಮಚಂದ್ರನು ಅಶ್ವಶಾಸ್ತ್ರವನ್ನು ರಚಿಸಿದನು. ಕ್ರಿ.ಶ. ೧೬೩೨ರಲ್ಲಿ ಪದ್ಮಣ ಪಂಡಿತ 'ಹಯಸಾದ ಸಮುಚ್ಚಯ' ಎಂಬ ಕೃತಿಯನ್ನು ರಚಿಸಿದನು.

ವಿದ್ಯಾಮಾಧವ ಸೂರಿ ಎಂಬ ಖಗೋಳ ವಿಜ್ಞಾನಿಯು 'ಮಹೂರ್ತದರ್ಶನ' 'ವಿದ್ಯಾಮಾಧವ' ಎಂಬ ಕೃತಿಯನ್ನು ರಚಿಸಿದನು. ಆತನ ಮಗನಾದ ವಿಷ್ಣುಪೂರಿಯ 'ಮಹೂರ್ತದೀಪಿಕಾ' ಎಂಬ ವ್ಯಾಖ್ಯಾನ ಬರೆದನು. ಈತನು ಬುಕ್ಕರಾಯನ ಮಗನಾದ ಮಲ್ಲಪ್ಪನ ಸಮಕಾಲೀನನಾಗಿದ್ದನು. "ಶಿವತತ್ವ ರತ್ನಾಕರನಲ್ಲಿ ರಸಾಯನಶಾಸ್ತ್ರ ಕುರಿತು ಮಹತ್ವದ ವಿಷಯಗಳು ಅಡಕಗೊಂಡಿದೆ. 'ರಸವಿದ್ಯೆ' ಪಾದರಸದ ಮೂಲತಯಾರಿಕೆಗಳಿಂದ ಚಿಕಿತ್ಸೆ ಮಾಡುವುದರ ವಿವರ ಮತ್ತು ಲೋಹಗಳಾದ ಅಭ್ರಕ, ಸುವರ್ಣ ಮುಖಿ ಮೈಲುತುತ್ತು ಚಿಕಿತ್ಸೆ ... ಹರಿದಾಳ ಸಿಂಧೂರ ಶರಿಕ ಪಾಷಣ ಸುರಮ ಅಥವಾ ಅಂಜನ ಕಲ್ಲು ಕಂದು ಬಣ್ಣದ

ವಸ್ತುಗಳ ಮೂಲ ಗುಣ ಸ್ವಭಾವ ವರ್ಣಗಳು ಮತ್ತು ಅವುಗಳ ಉಪಯೋಗಗಳಿವೆ."[೨೦] ಈ ರೀತಿಯ ಮಹತ್ವದ ವಿವರವಿದೆ.

ಮಧ್ಯಕಾಲಿನ ಬದುಕಿನ ಸ್ವರೂಪ ಚರಿತ್ರೆಯ ಅನೇಕ ಮಹತ್ವ ಸಂಗತಿ ದೇಶಿಯ ಸಂಸ್ಥಾನಗಳ ಅಳ್ವಿಕೆಯ ಆಗು-ಹೋಗುಗಳು ಶಿಕ್ಷಣ, ವಿಜ್ಞಾನ ನಿರೂಪಿತಗೊಂಡಿದೆ. ವಿಜಯನಗರ ಅರಸರು, ಕೆಳದಿಯ ಅರಸರು, ಮೈಸೂರು ಅರಸರು, ಬಹಮನಿ ಸುಲ್ತಾನ ಆದಿಲ್ ಷಾಹಿಗಳು ಶಿಕ್ಷಣಕ್ಕೆ ಪ್ರೋತ್ಸಾಹ ಮತ್ತು ವ್ಯಕ್ತಿಯ ವ್ಯಕ್ತಿತ್ವದ ಬದಲಾಗಬೇಕಾದರೆ ಆತನಿಗೆ ಶಿಕ್ಷಣ ಬೇಕು. ಆಳು-ಅರಸ ಶಿಕ್ಷಣ ಪ್ರೋತ್ಸಾಹ ಹೀಗೆ ಹತ್ತು ಹಲವು ಮಹತ್ವ ಸಂಗತಿಯು ನಿರೂಪಿತಗೊಂಡಿದೆ.

**ಭಾರತೀಯ ಹಿನ್ನೆಲೆಯಲ್ಲಿ ಕರ್ನಾಟಕದ ಧಾರ್ಮಿಕ ಸಾಮಾಜಿಕ ಜೀವನ**

ಉತ್ತರ ಭಾರತದ ಚರಿತ್ರೆಯ ಕ್ರಿ.ಶ. ೧೬೦೦-೧೮೫೭ರವರೆಗಿನ ಕಾಲಘಟ್ಟವನ್ನು ಅವಲೋಕಿಸುತ್ತ ಹೋದರೆ ಕೆಲವು ಮಹತ್ವ ಸಂಗತಿಗಳು ಅನಾವರಣಗೊಂಡಿವೆ. ಆ ಕಾಲಘಟ್ಟವನ್ನು ಅಧ್ಯಯನ ದೃಷ್ಟಿಯಿಂದ ವರ್ಗೀಕರಣ ಮಾಡಬಹುದು. ಮೊಗಲರ ಕಾಲ (೧೬೦೭-೧೭೭೭), ಮರಾಠರ ಕಾಲ(೧೭೦೭-೧೮೦೦) ಹಾಗೆಯೇ ನಂತರದ ಕಾಲವನ್ನು ಬ್ರಿಟಿಷರ ಕಾಲವೆಂದು ಕರೆಯಬಹುದು. ಮೊಗಲರ ಆಳ್ವಿಕೆಯು ಔರಂಗಜೇಬನ ನಂತರ ಅವಸಾನವಾಯಿತು. ಈ ಅವಧಿಯಲ್ಲಿ ರಜಪೂತರು, ಸಿಖ್ಖರು, ಜಾಟರು ಮತ್ತು ಮರಾಠರು ಹೋರಾಟ ಮಾಡಿದರು. ಅಂದರೆ ಮೂರನೆಯ ಪಾಣಿಪತ್ ಯುದ್ಧದಲ್ಲಿ (೧೭೬೧) ಮರಾಠರ ಮತ್ತು ಮುಸ್ಲಿಮ್ ಇಬ್ಬರ ಹೋರಾಟದ ಪ್ರತಿಫಲವಾಗಿ ಬ್ರಿಟಿಷರಿಗೆ ಭಾರತದ ಆಡಳಿತ ಚುಕ್ಕಾಣಿ ಹಿಡಿಯಲು ಸಾಧ್ಯವಾಯಿತು.

ದಕ್ಷಿಣ ಭಾರತದ ಚರಿತ್ರೆಯನ್ನು ಅಧ್ಯಯನ ಮಾಡುತ್ತ ಹೋದರೆ ಮಹತ್ವ ಸಂಗತಿಯು ಪರಿಚಿತವಾಗುತ್ತದೆ. ತಾಳಿಕೋಟೆಯ ಯುದ್ಧ(ರಕ್ಕಸ ತಂಗಡಿ ೧೫೬೫) ಹೊತ್ತಿಗೆ ವಿಜಯನಗರ ಸಾಮ್ರಾಜ್ಯ ಅವನತಿಯ ಕಡೆಗೆ ಸಾಗಿತ್ತು. ನಂತರ ಆದಿಲ್‌ಷಾಹಿ ಮತ್ತು ಕುತುಬ್‌ಷಾಹಿ ರಾಜ್ಯಗಳು ದಖ್ಖನಿನಲ್ಲಿ ಬಲವಾಗಿ ಬೆಳೆದವು. ಇದನ್ನು ಗಮನಿಸಿದ್ದ ಔರಂಗಜೇಬನು ಆ ಪ್ರದೇಶ ಗೆದ್ದು ವಶಪಡಿಸಿಕೊಂಡು ಮರಾಠ ಮತ್ತು ನಿಜಾಮರ ಆಳ್ವಿಕೆಗೆ ಅವಕಾಶ ಮಾಡಿಕೊಟ್ಟನು. ವಿಜಯನಗರದ ಸಾಮಂತ ಅರಸರು, ಕೆಳದಿಯ ನಾಯಕರು, ಮೈಸೂರು ಒಡೆಯರು, ಚಿಕ್ಕಪುಟ್ಟ ಪಾಳೆಗಾರರು ಯುದ್ಧದ ನಂತರ ಕರ್ನಾಟಕದಲ್ಲಿ ಆಳ್ವಿಕೆ ಮಾಡಿದರು. ಇದನ್ನು ಗಮನಿಸಿದ ಹೈದರ್ ಸಂಸ್ಥಾನವನ್ನು ಮೈಸೂರು ಆಳ್ವಿಕೆಗೆ ಒಳಪಡಿಸಿ ನೂತನ ರಾಜ್ಯವನ್ನು ಸ್ಥಾಪಿಸಿದನು. ಹೈದರನ ಮಗನಾದ ಟಿಪ್ಪು ಬ್ರಿಟಿಷರ ಆಕ್ರೋಶಕ್ಕೆ ತುತ್ತಾದನು. ಮರಾಠರು ಮತ್ತು ನಿಜಾಮರು ಆಂತರಿಕ ಕಲಹದಿಂದ ಬ್ರಿಟಿಷರಿಗೆ ಶರಣಾದರು. ಹೀಗಾಗಿ ೧೯ನೇ ಶತಮಾನದ ಆರಂಭದ ಹೊತ್ತಿಗೆ ಇಡಿ ದಕ್ಷಿಣ ಕರ್ನಾಟಕ ಬ್ರಿಟಿಷರ ಆಳ್ವಿಕೆಗೆ ಒಳಪಟ್ಟಿತ್ತು.

ಮುಸ್ಲಿಮರು ಭಾರತಕ್ಕೆ ಬಂದಾಗಿನಿಂದಲೂ ಅರಬರು ಭಾರತದಲ್ಲಿ ಎಲ್ಲಿ ಆಳ್ವಿಕೆ ಮಾಡಿದ್ದರೋ ಅಲ್ಲಿ ತಮ್ಮ ಧರ್ಮ-ಸಂಸ್ಕೃತಿ ಆ ಜನರೊಡನೆ ಬೆರೆಯುವಂತೆ ಮಾಡಿದರು. ಭಾರತದಲ್ಲಿ ಮೊದಲ ಬಾರಿಗೆ ಆಳ್ವಿಕೆ ಮಾಡಿದ ಅರಸರೆಂದರೆ ತುರುಕರು ಮತ್ತು ಆಫ್‌ಘನ್ನರು. ತಮ್ಮ ಸಂಸ್ಕೃತಿ ಕೊಡುವುದರ ಮೂಲಕ ಹಾಗೆಯೇ ಈ ನಾಡಿನ ಸಂಸ್ಕೃತಿಯನ್ನು ಪಡೆದುಕೊಂಡರು . ಆದರೆ ತಮ್ಮತನವನ್ನು ಬಿಡಲಿಲ್ಲ. ಹಾಗೂ ಈ ದೇಶವನ್ನು ಮುಸ್ಲಿಮ್ ರಾಷ್ಟ್ರವನ್ನಾಗಿ ಮಾಡುವ ಪ್ರಯತ್ನ ಫಲ ನೀಡಲಿಲ್ಲ. ಎರಡು ಮತದವರು ಆ ಕಾಲಘಟ್ಟದಲ್ಲಿ ಒಂದೇ ದೇಶದಲ್ಲಿ ಇರುವುದರಿಂದ ಅವರಿಬ್ಬರ ನಡುವೆ ಒಂದು ಸೇತುವೆ ಅನಿವಾರ್ಯವಾಗಿತ್ತು. ಆ ಕಾರ್ಯ ಮಡಿವಂತ ಮುಸ್ಲಿಮ್ ಮತ್ತು ಮಡಿವಂತ ಹಿಂದೂಗಳು ಮಾಡಲಿಲ್ಲ. ಆದರೆ ಹಿಂದೂ ಭಕ್ತರು ಮತ್ತು ಮುಸ್ಲಿಮ್ ಸೂಫಿಗಳು ತಮ್ಮ ಬದುಕನ್ನು ಆ ಎರಡು ವರ್ಗಗಳನ್ನು ಒಂದುಗೂಡಿಸುವ ಆ ಕಾರ್ಯಕ್ಕೆ ಅವರು ಅರ್ಪಿಸಿಕೊಂಡರು. ಅಂಥ ಮಹಾಮಹಿಮರಾದ 'ದಾರ' ೧೧ನೇ ಶತಮಾನದಲ್ಲಿ ಕಬೀರ, ೧೫ನೇ ಶತಮಾನದಲ್ಲಿ ಅಕ್ಬರ್, ೧೬ನೇ ಶತಮಾನದಲ್ಲಿ: ಹೀಗೆ ಎರಡು ಧರ್ಮಗಳ ಬಾಂಧವ್ಯ ಉತ್ತಮವಾಗಿರಬೇಕು. ಈ ನೆಲದಲ್ಲಿ ವಾಸಿಸುವ ಸರ್ವರ ಮೂಲ ಒಂದೇಯಾಗಿರಬೇಕು ಎನ್ನುವುದು ದಾರನ ಉದ್ದೇಶವಾಗಿತ್ತು.

ಕುರಾನ್ ಮೂಲಧಾರಕ್ಕೆ 'ಉಮ್ಮ-ಉಲ್-ಕಿತಾಬ್' ಎಂಬುದನ್ನು ಶೋಧಿಸಲು ಹೊರಟ. ಆತನ ಶೋಧನೆ ಉಪನಿಷತ್ತಿನ ಕಡೆಗೆ ಸೆಳೆಯಿತು. ಈ ವಿಷಯವಾಗಿ ಇತರ ಧರ್ಮದವರೊಡನೆ ಬಹಳ ಆತ್ಮೀಯವಾಗಿ ಚರ್ಚಿಸಿದರು. ಹೀಗೆ ಮಾಡುವುದರ ಪ್ರತಿಫಲವಾಗಿ ಈ ಎರಡು ಪಂಗಡಗಳ ಮಡಿವಂತ ವರ್ಗದವರ ಕೋಪಕ್ಕೆ ತುತ್ತಾದರು. ಹಾಗೆಯೇ ಸಿಂಹಾಸನಕ್ಕಾಗಿ ಹೋರಾಟ ಮಾಡಿದ ಔರಂಗಜೇಬ ಮತ್ತು ದಾರನಿಗೆ ಯುದ್ಧವಾಯಿತು. ಅದರಲ್ಲಿ ಔರಂಗಜೇಬನು ಗೆದ್ದನು. ಈ ಕಾರಣದಿಂದ ದಾರನ ಉದ್ದೇಶ ಎರಡು ಧರ್ಮವನ್ನು ಒಂದು ಮಾಡಲು ಸಾಧ್ಯವಾಗಲಿಲ್ಲ. ಔರಂಗಜೇಬನ ನಂತರ ಬಂದವರು ದುರ್ಬಲ ಸಂತತಿಯವರಾಗಿರುವುದರಿಂದ ಆ ಕಾಲಘಟ್ಟದಲ್ಲಿ ಹಿಂದೂ ಮುಸ್ಲಿಮ್ ಸೌಹಾರ್ದ ಸಂಪರ್ಕ ಏರ್ಪಟ್ಟಿತ್ತು. “ಮೊಗಲ್ ಮಂತ್ರಿಯಾದ ಅಬ್ದುಲ್‌ಖಾನ್ ಮತ್ತು ಬಸಂತ ಹೋಳಿ ಹಬ್ಬವನ್ನು ಆಚರಿಸುತ್ತಿದ್ದರು. ಸಿರಾಜ್ ಉದ್ದಿನ್‌ದ್ದೌಲ್ ಮತ್ತು ಮೀರ್‌ಜಾಫರ್ ತಮ್ಮ ಅಪ್ತರಿಷ್ಠರೊಡನೆ ಹೋಳಿ ಹಬ್ಬದಲ್ಲಿ ಭಾಗವಹಿಸುತ್ತಿದ್ದರು. ತಾನು ಸಾಯುವ ಪೂರ್ವದಲ್ಲಿ ಮೀರ್ ಜಾಫರ್ ಕಿರೀಟೇಶ್ವರ ತೀರ್ಥವನ್ನು ತೆಗೆದುಕೊಂಡರು. ದೌಲತ್ ಶಿಂಧ್ ಮತ್ತು ಅವಧ್ ಅಧಿಕಾರಿಗಳು ಹಸಿರಂಗಿಯನ್ನು ತೊಟ್ಟು ಮೊಹರಂ ಮೆರವಣಿಗೆಯಲ್ಲಿ ಪಾಲ್ಗೊಳ್ಳುತ್ತಿದ್ದರು. ಕ್ರಿ.ಶ. ೧೮೨೫ರವರೆಗೆ ಮೊಗಲ್ ಅರಮನೆಯಲ್ಲಿ ದುರ್ಗಾ ಪೂಜೆ ಮಾಡುತ್ತಿದ್ದರು.”[೨೧] ಹೀಗಾಗಿ ನಂತರದ ದಿನಗಳಲ್ಲಿ ಹಿಂದೂ ಮತ್ತು ಮುಸ್ಲಿಮ್ ಸಾಮಾಜಿಕವಾಗಿ ಸಾಮರಸ್ಯ ಪಡೆಯಲು ಸಾಧ್ಯವಾಯಿತು.

ಈ ಅವಧಿಯಲ್ಲಿ ಬ್ರಿಟಿಷರು ಬಾರದಿದ್ದರೆ ಸೌಹಾರ್ದತೆಯಾಗುತ್ತಿತ್ತು. ಬ್ರಿಟಿಷರ ಸಿಪಾಯಿ ದಂಗೆ ಪ್ರಬಲ ವಿರೋಧಿಗಳೆಂದು ಭಾವಿಸಿ 'ಖಾಯಂ ಗುತ್ತೆ' ಪದ್ಧತಿಯನ್ನು ಜಾರಿಗೆ ತಂದರು. ಹೀಗಾಗಿ ಅವರ ಆಸ್ತಿಯನ್ನು ಕೊಂಡದ್ದು ಅಲ್ಲದೆ ಆಡಳಿತ ಭಾಷೆಯಾಗಿದ್ದ ಪರ್ಷಿಯನ್ ಭಾಷೆಯ ಬದಲಾಗಿ ಇಂಗ್ಲಿಷ್ ಭಾಷೆಯೆಂದು ಘೋಷಿಸಿದರು. ಇದರ ಪರಿಣಾಮವಾಗಿ ಮುಸ್ಲಿಮರು ಮಾಡುವ ನೌಕರಿ ಇಲ್ಲದಾಯಿತು. ಹಾಗೆಯೇ ಕ್ರಿ.ಶ. ೧೮೫೭ರ ದಂಗೆ ಏಳಲು ಇವರೇ ಪ್ರಮುಖರೆಂದು ಅವರ ಮೇಲೆ ದಬ್ಬಾಳಿಕೆ ಮಾಡಿದರು. ಕರ್ನಾಟಕ ಪರಿಸರದಲ್ಲಿ ಬಂದುಹೋದ ಮುಸ್ಲಿಮ್ ಆಳ್ವಿಕೆಯಲ್ಲಿ ಈ ಪಂಥವನ್ನು ಕಾಣಬಹುದು. ಉತ್ತರ ಕರ್ನಾಟಕ ಆಳ್ವಿಕೆ ಮಾಡಿದ ಆದಿಲ್‌ಷಾಹಿ ಅರಸರು ಸರ್ವದೃಷ್ಟಿಯಿಂದ ಉತ್ತಮರೆಂದು ಚರಿತ್ರೆ ಪರಿಚಯಿಸುತ್ತದೆ. ಏಕೆಂದರೆ ಹಿಂದೂ ಅರಸರ ದತ್ತಿಯನ್ನು ಮುಂದುವರಿಸಿದರು. ಅಲ್ಲದೆ ಆಡಳಿತದಲ್ಲಿ ಹಿಂದೂಗಳನ್ನು ನೇಮಕ ಮಾಡಿಕೊಂಡರು. ಹಿಂದೂಗಳ ಮನೆತನ ನಾಶ ಮಾಡಿದ ಔರಂಗಜೇಬನು ಭೀಮಾ ನದಿಯ ದಂಡೆಯ ಮೇಲಿನ ಮಾತಂಗ ಕ್ಷೇತ್ರ ಅಥವಾ ಬ್ರಹ್ಮಪುರಿಯಲ್ಲಿ ತಂಗಿದ್ದನು. ಆಗ ಚಿತ್ರದುರ್ಗದ ಮದಕರಿ ಭರ್ಮಪ್ಪನಾಯಕ ಮೊಗಲರ ಸೈನ್ಯವನ್ನು ಎದುರಿಸಿದನು. ಅದರ ಪರಿಣಾಮವಾಗಿ ದೇವಸ್ಥಾನವನ್ನು ನಾಶ ಮಾಡಿದರು.

ಮರಾಠರು ಮತ್ತು ಪಾಳೆಗಾರರು ಪ್ರಬಲವಾದ ವಿರೋಧಿಸಿದ್ದರ ಹಿನ್ನೆಲೆಯಲ್ಲಿ ಕರ್ನಾಟಕಕ್ಕೆ ನಷ್ಟವಾಗಲಿಲ್ಲ. ಈ ನಾಡಿನಲ್ಲಿ ಆಳ್ವಿಕೆ ಮಾಡಿದ ಮುಸ್ಲಿಮ್ ದೊರೆಗಳಲ್ಲಿ ಸರ್ವಮತ ಸಹಿಷ್ಣುನಾಗಿದ್ದನು. ಅಂದರೆ ಶೃಂಗೇರಿ ಮತ್ತು ಇನ್ನು ಹಲವು ಹಿಂದೂ ದೇವರ ಕ್ಷೇತ್ರಗಳಿಗೆ ದತ್ತಿ ಕೊಟ್ಟಿದ್ದನು. ಹಾಗಾದರೆ ಆತನು ಅಕ್ಬರನ ಹಾಗೆ ಉದಾರಿಯಲ್ಲ ಔರಂಗಜೇಬನ ಹಾಗೆ ಮತಾಂಧನಲ್ಲ; ಪರಿಸ್ಥಿತಿಗೆ ಅನುಗುಣವಾಗಿ ವರ್ತಿಸುತ್ತಿದ್ದನು.

ಬಹಮನಿ ಸುಲ್ತಾನರು ಆಳ್ವಿಕೆಯಲ್ಲಿ ಉತ್ತರ ಭಾರತದಿಂದ ಮುಸ್ಲಿಮ್ ಹಿಂದೂಗಳು ಪರ್ಷಿಯನ್ನರ ತುರುಕರು ಅಫಘನ್ನರು ಕರ್ನಾಟಕದಲ್ಲಿ ನೆಲೆನಿಂತರು. ೧. ಪರ್ಷಿಯನ್ನರು ಮತ್ತು ತುರುಕರು ೨. ಉತ್ತರ ಭಾರತ ಹಿಂದೂ ಮತ್ತು ಮುಸ್ಲಿಮ್ ಆಫ್ರಿಕನ್ನರು ಇವರನ್ನು ದಖನ್ನಿಗಳೆಂದು ಕರೆಯುತ್ತಾರೆ. ಪರ್ಷಿಯನ್ನರ ಕಲೆಯ ದಖ್ಖನಿಯರ ಮೇಲೆ ಪ್ರಭಾವ ಬೀರಿತು. ಈ ಆದಿಲ್‌ಷಾಹಿ ಕಲೆಯ ಒಂದು ಭಾಗವಾಗಿರುವುದರಿಂದ ಈ ಕಲೆಯು ವಿಜಯನಗರದ ಮೇಲೆ ಪ್ರಭಾವ ಬೀರಿತು. ಅದಕ್ಕೆ ನಿದರ್ಶನ ಹಂಪೆಯ ಕಮಲ್ ಮಹಲ್, ಚಂದ್ರಗಿರಿಯ ಅರಮನೆ ಈ ಶೈಲಿಯಲ್ಲಿದೆ. ಗೊಂಬೆ ತಯಾರಿಕಾ ಕಲೆ ವಿಜಾಪುರದಿಂದ ಬಂದು ಚನ್ನಪಟ್ಟಣ ಮತ್ತು ಕರ್ನಾಟಕದ ಹಾಗೂ ಇತರ ಊರುಗಳಲ್ಲಿ ಉಳಿದುಕೊಂಡಿದೆ. ಕಾಫಿ ಉದ್ಯಮವು ಅರೇಬಿಯಾದಿಂದ ಮಧ್ಯಯುಗದಲ್ಲಿ ಭಾರತಕ್ಕೆ ಬಂದಿದೆ. ಹಾಗೆಯೇ ಲೋಬಾನ ಅದೇ ಕಾಲದಲ್ಲಿ ಬಂತು. ಬಹಮನಿಯ ಕಾಲದಲ್ಲಿ

ಮೈಸೂರಿನಲ್ಲಿ ಊದುಬತ್ತಿಯ ಉದ್ಯಮ ಆರಂಭವಾಗಿದೆ. ಮೈಸೂರು ರೇಷ್ಮೆ ಉದ್ಯಮ ಟಿಪ್ಪುವಿನ ಕಾಲದಲ್ಲಿ ಆರಂಭವಾಗಿದೆ.

ಗುಲ್ಬರ್ಗದ ಬಂದಾ ನವಾಜ್ ಮತ್ತು ೧೯ನೇ ಶತಮಾನ ಆದಿಭಾಗದಲ್ಲಿ ಶಿಶುನಾಳ ಷರೀಫನನ್ನು ಕರ್ನಾಟಕದ ಕಬೀರನೆಂದು ಕರೆದರು. ದಕ್ಷಿಣ ಭಾರತಕ್ಕೆ ರೋಮನ್ ಕ್ಯಾಥೋಲಿಕ್ ಪಾದ್ರಿ ಇಟಾಲಿಯನ್ ರಾಬರ್ಟ್ ದಿನೋಬಲ್ ಕ್ರಿ.ಶ. ೧೬೦೫ರಲ್ಲಿ ಬಂದನು. ಸ್ಥಳೀಯ ಭಾಷೆಗಳಾದ ತೆಲುಗು, ತಮಿಳು ಮತ್ತು ಸಂಸ್ಕೃತ ಭಾಷೆಗಳ ಕುರಿತು ಧರ್ಮಗ್ರಂಥಗಳನ್ನು ರಚಿಸಿದನು. ಭಾರತೀಯರಂತೆ ವೇಷ ಧರಿಸಿ ಸಸ್ಯಹಾರವನ್ನು ತೆಗೆದುಕೊಳ್ಳುತ್ತಿದ್ದನು. ಅವನು ಮಾಹಿತಿಗಳನ್ನು ಧಾರವಾಡದ ಸಂತ ಮೇರಿಯ ಜೀವನ ಕಥೆಗಳನ್ನೊಳಗೊಂಡ ತಾಳೆಗರಿಗಳಲ್ಲಿ ಕಾಣಬಹುದು.

ಕರ್ನಾಟಕದ ಅನೇಕ ಪ್ರದೇಶಗಳಲ್ಲಿ ಕ್ರೈಸ್ತ ಸಾರ್ವಜನಿಕರ ಅನುಕೂಲಕ್ಕಾಗಿ ಪಾದ್ರಿಗಳ ಚರ್ಚ್, ಶಿಕ್ಷಣಸಂಸ್ಥೆ, ಆಸ್ಪತ್ರೆಗಳ ಅವಕಾಶ ಕಲ್ಪಿಸಿದರು. ಕ್ರಿ.ಶ. ೧೮೧೦ರಲ್ಲಿ ಲಂಡನ್ ಮಿಶನ್ನಿನವರು ಬಳ್ಳಾರಿಗೆ ಬಂದರು. ರೀವ್ ಇಂಗ್ಲಿಷ್ ಕನ್ನಡ ನಿಘಂಟನ್ನು ತಯಾರಿಸಿದರು. ಅಲ್ಲದೆ ಕ್ರಿ.ಶ. ೧೮೪೬ರಲ್ಲಿ ಇಂಗ್ಲಿಷ್ ಶಾಲೆಯನ್ನು ಬಳ್ಳಾರಿಯಲ್ಲಿ ತೆರೆದರು.(ಆ ಶಾಲೆಯನ್ನು ವಾರ್ಡಲ್ ಎಂದು ಕರೆಯುತ್ತಾರೆ.)ಬೆಳಗಾವಿಯಲ್ಲಿ ಮಿಶನರಿಯವರು ಕ್ರಿ.ಶ. ೧೮೨೦ರಲ್ಲಿ ಶಾಲೆಯನ್ನು ತೆರೆದರು. ಆ ಶಾಲೆಯ ನಂತರ ಬೆನನ್ ಸ್ಮಿತ್ ಶಾಲೆಯೆಂದು ಜನಪ್ರಿಯಗೊಂಡಿದೆ. ಅದೇ ಕಾಲಕ್ಕೆ ಬೆಂಗಳೂರಿನಲ್ಲಿ ಶಾಲೆ ಮತ್ತು ಪ್ರೆಸ್ ತೆರೆದರು.

ಧಾರವಾಡ ಮತ್ತು ಬೆಂಗಳೂರಿನಲ್ಲಿ ಬಾಸೆಲ್‌ನವರು ಶಾಲೆ ಮತ್ತು ಪ್ರೆಸ್ ತೆರೆದರು. ಹೀಗೆ ಉತ್ತರ ಕರ್ನಾಟಕದ ಪ್ರಮುಖ ಸ್ಥಳಗಳಾದ ಹುಬ್ಬಳ್ಳಿ, ಬೆಟಗೇರಿ, ಗುಳೇದಗುಡ್ಡ, ಬಿಜಾಪುರ, ಉಣಕಲ್‌ಗಳ ಶಾಲೆಗಳನ್ನು ತೆರೆದರು. ಆಧುನಿಕ ರೀತಿಯ ಶಾಲೆ ಛಾಪಖಾನೆ ಮತ್ತು ಆಸ್ಪತ್ರೆಗಳನ್ನು ಪ್ರಾರಂಭಿಸಿದರು. ಕೆಳದಿಯ ನಾಯಕರು, ವೀರಶೈವರು ಮತ್ತು ಇತರ ಮತದವರನ್ನು ಪ್ರೋತ್ಸಾಹಿಸಿದರು. ವೀರಶೈವ ಮಠಗಳಿಗೆ, ಅಗ್ರಹಾರಗಳಿಗೆ, ವೈಷ್ಣವ ಮಠಗಳಿಗೆ, ಮಸೀದಿಗಳಿಗೆ ದತ್ತಿ ನೀಡಿದರು. ಹಿಂದೂ ಪಂಥಗಳಿಗೆ ಪ್ರೋತ್ಸಾಹ ಕೊಟ್ಟರು. ಅಲ್ಲದೆ ಉಪದೇಶ ಮಾಡಲು ಅವಕಾಶ ಕಲ್ಪಿಸಿ ಕೊಟ್ಟರು. ಮೈಸೂರು ಒಡೆಯರು ಮತ್ತು ಕೆಳದಿ ನಾಯಕರು ಎಲ್ಲಾ ಧರ್ಮಗಳ ಸಹಿಷ್ಣುಗಳಾಗಿದ್ದರು. ವೀರಶೈವ ಆಚರಣೆಗಳನ್ನು ಅನುಸರಿಸುತ್ತಿದ್ದರು.

ಭಾರತೀಯ ಮುಸ್ಲಿಮ್ ಅರಸರಲ್ಲಿ ಹೈದರನು ಧಾರ್ಮಿಕ ವಿಷಯಗಳಲ್ಲಿ ಅತ್ಯಂತ ಉದಾರಿಯಾಗಿದ್ದನು."ದೇವರು ದೃಷ್ಟಿಯಲ್ಲಿ ಸರಿಸಮಾನವೆಂದು ತನಗೆ ಶ್ರೀರಂಗಪಟ್ಟಣದ ಆಧಿದೇವರಾದ ರಂಗನಾಥ ಸ್ವಾಮಿಯಲ್ಲಿ, ಎಲ್ಲಾ ಇಮಾಂರಲ್ಲಿ ಇದ್ದಕ್ಕಿದ್ದಂತೆ ಹೆಚ್ಚು ನಂಬಿಕೆ ಬಂತೆಂದು ವಿಲ್ಕ್ಸರು ಹೇಳುತ್ತಾರೆ."[೨೨]

ಧಾರ್ಮಿಕವಾಗಿ ಉದಾರ ಭಾವನೆಯನ್ನು ಹೊಂದಿದ್ದರು ಎನ್ನುವುದಕ್ಕೆ ನಿದರ್ಶನವನ್ನು ಗಮನಿಸುವುದಾದರೆ, ಹೈದರಾಲಿಯು ತನ್ನ ಗುರುಗಳನ್ನು ಕುರಿತು ಹೇಳುತ್ತಾನೆ. "ಶೃಂಗೇರಿ ಜಗದ್ಗುರುಗಳು ಲೋಕೋದ್ಧಾರಕರು. ಮಾನವ ಕಲ್ಯಾಣಕ್ಕೆ ನೀವು ಯಾವಾಗಲೂ ತಪಸ್ಸನ್ನು ಆಚರಿಸುತ್ತಿದ್ದೀರಿ. ನಮ್ಮ ಏಳಿಗೆ ಮತ್ತು ಅಭಿವೃದ್ಧಿಗಾಗಿ ಪ್ರಾರ್ಥಿಸಿ; ನಿಮ್ಮಂಥ ಪವಿತ್ರ ಜೀವಿಗಳು ಯಾವ ನಾಡಿನಲ್ಲಿಯೇ ವಾಸಿಸುತ್ತಿರಲಿ ಆ ನಾಡು ಮಳೆ ಬೆಳೆಗಳಿಂದ ವರ್ಧಿಸುತ್ತದೆ".[೨೨] ಹಾಗೆಯೇ ಮುಸ್ಲಿಮರು ಇತರ ಧರ್ಮಗಳೊಂದಿಗೆ ಸ್ನೇಹಮಯವಾಗಿದ್ದರು. ಈ ನಾಡಿನ ಚರಿತ್ರೆ ಅಧ್ಯಯನ ಮಾಡಿ ಅವಲೋಕಿಸಿದರೆ ಸ್ಥಳೀಯ ವೀರ ಮಹಿಳೆಯರು ಶತ್ರುಗಳನ್ನು ಸದೆಬಡಿದು ಅಲ್ಲದೆ ಅವರೊಂದಿಗೆ ಹೋರಾಡಿದ ರೀತಿ ಮೈನವಿರೇಳುವಂತೆ ಮಾಡುತ್ತದೆ. ಕಿರಿಯರಾಣಿ ಅಬ್ಬಕ್ಕ ಪೋರ್ಚುಗೀಸರೊಂದಿಗೆ, ಬೆಳವಡಿಯ ಮಲ್ಲಮ್ಮ ಶಿವಾಜಿಯೊಂದಿಗೆ, ಕೆಳದಿಯ ಚೆನ್ನಮ್ಮ ಔರಂಗಜೇಬನ ಸೈನ್ಯದೊಂದಿಗೆ ಕೆಳದಿಯ ವೀರಮ್ಮ ಹೈದರ ವಿರುದ್ಧ ಹೋರಾಡಿದಳು. ಮತ್ತು ಕೊನೆಯದಾಗಿ ಕಿತ್ತೂರು ಚನ್ನಮ್ಮ ಬ್ರಿಟಿಷರ ವಿರುದ್ಧ ಹೋರಾಡಿದ ದೀಮಂತಿಕೆಯು ಚರಿತ್ರೆಯ ಪುಟದಲ್ಲಿ ದಾಖಲಾಗಿದೆ. ಮರಾಠ–ಮುಸ್ಲಿಮ್ ಕದನದಿಂದ ಬ್ರಿಟಿಷರಿಗೆ ಭಾರತದಲ್ಲಿ ಚಕ್ರಾದಿಪತ್ಯವನ್ನು ಸ್ಥಾಪಿಸಲು ಸಾಧ್ಯವಾಯಿತು.

**ಪಾ.ವೆಂ ಆಚಾರ್ಯ ಹರಟೆಗಳು**

ಹಾವನೂರ ಅವರು ಪಾ.ವೆಂ.ಆಚಾರ್ಯರ ಬಹು ವೈವಿದ್ಯಮಯ ಸಾಹಿತ್ಯ ಕುರಿತು ಪ್ರಸ್ತಾಪಿಸಿದ್ದಾರೆ. ಅವರ ಸಾಹಿತ್ಯ ಕೃಷಿ ಆರಂಭವಾದಾಗಿನಿಂದ ಹಿಡಿದು ಶಾಲಾಮಾಸ್ತರರಾಗಿ ಮುದ್ರಣಾಲಯದ ಮೇನೇಜರ್‌ರಾಗಿ, ಪತ್ರಿಕಾ ಸಂಪಾದಕರಾಗಿ, ಹೋಟೆಲ್ ಬಿಲ್‌ರೈಟರ್‌ರಾಗಿ ಹೀಗೆ ಅವರ ವೈವಿಧ್ಯಮಯ ಬದುಕು, ಸಾಹಿತ್ಯ ಕ್ಷೇತ್ರ ಅನಾವರಣಗೊಂಡಿದೆ. ಪತ್ರಕರ್ತರಾಗಿ ಹಲವು ಭಾಷೆಗಳನ್ನು ಬಲ್ಲವರಾಗಿ ಪಾ.ವೆಂ.ಆಚಾರ್ಯರ ಸಾರವತ್ತವಾದ ಲೇಖನಗಳನ್ನು ಅನುವಾದ ಮಾಡಿದರು. ಆಚಾರ್ಯರಿಗೆ ವಿಷಯದಲ್ಲಿ ಆಳವಾದ ಜ್ಞಾನವಿತ್ತು. ಹಾಗೆಯೇ ಯಾವುದೇ ವಿಷಯವನ್ನು ನಿರರ್ಗಳವಾಗಿ ಮಾತನಾಡಬಲ್ಲ ವಿದ್ವತ್ ಅವರಾದಗಿತ್ತು. ಕನ್ನಡದ ಭಾಷಾ ಪ್ರಭೇದಗಳ ಆಳವಾದ ತಿಳುವಳಿಕೆಯಿತ್ತು. ಹಳೆಗನ್ನಡ ಅಧ್ಯಯನ, ಸಂಸ್ಕೃತ, ಕನ್ನಡ, ಇಂಗ್ಲಿಷ್ ಕಾವ್ಯಗಳ ತಲಸ್ಪರ್ಶಿಯಾದ ಜ್ಞಾನ ಹೊಂದಿದ್ದರು. ಹೀಗಾಗಿ ಈ ಭಾಷೆಗಳ ವಿಷಯವನ್ನು ಹೇಗೆ ಬೇಕಾದರೂ ತಿರುಚಬಲ್ಲ ಶಕ್ತಿ ಅವರಲ್ಲಿತ್ತು. ಈ ಹಿನ್ನೆಲೆಯಲ್ಲಿ ಪ್ರಬಂಧ, ಹರಟೆಗಳನ್ನು ಬರೆಯಲು ಸಾಧ್ಯವಾಯಿತು. ಪಾ.ವೆಂ.ಆಚಾರ್ಯರ ಸೃಜನಶೀಲ ಸಾಹಿತ್ಯವನ್ನು ಓದುಗರಿಗೆ ತಿಳಿಸುವುದು ಹಾವನೂರ ಉದ್ದೇಶವಾಗಿತ್ತು. ಪಾ.ವೆಂ. ಆಚಾರ್ಯರು 'ಅಂತರಂಗ' ಪತ್ರಿಕೆಯ ಸಂಪಾದಕರಾಗಿ, ಸಂಯುಕ್ತ ಕರ್ನಾಟಕ ಮೇಲ್ವಿಚಾರಕರಾಗಿ ಕಾರ್ಯನಿರ್ವಹಿಸಿದ್ದರು. ಹಾಗೆಯೇ ಕರ್ಮವೀರ, ಸಂಯುಕ್ತ ಕರ್ನಾಟಕ ಪತ್ರಿಕೆಗಳಲ್ಲಿ ಲೇಖನ ಬರೆಯತೊಡಗಿದರು. ಪಾ.ವೆಂ.ಹರಟೆಗಳ ಸಂಪಾದಕರಾಗಿ ಮತ್ತು

ಸಹಾಯ ಸಂಪಾದಕರಾಗಿ ಮತ್ತು ಪುಸ್ತಕ ವಿಮರ್ಶೆ, ರಾಜಕೀಯ ಟೀಕೆ ಟಿಪ್ಪಣಿಗಳನ್ನು ಬರೆಯುತೊಡಗಿದರು. ಅವರ ಸಾಹಿತ್ಯ ಕೃಷಿಯುನ್ನು ಮೂರು ಹಂತಗಳಲ್ಲಿ ವರ್ಗೀಕರಿಸಬಹುದೆಂದು ಹಾವನೂರ ಅವರು ತಿಳಿಸುತ್ತಾರೆ. ೧೯೩೨-೧೯೪೨ರವರೆಗೆ ಅಂದರೆ 'ಅಂತರಂಗ', 'ಜಯಕರ್ನಾಟಕ' ಮುಂತಾದ ಪತ್ರಿಕೆಗಳಲ್ಲಿ ಕಲೆ, ಕವನ, ಪ್ರಕಟವಾಯಿತು. ಹಾಗೆಯೇ ಪ್ರಥಮ ಸಣ್ಣಕಥೆ 'ಮಧುವನ' ಕಥಾ ಸಂಗ್ರಹದಲ್ಲಿ ಬಂದಿವೆ. ಅಲ್ಲದೆ ರಷ್ಯಾದ ಕ್ರಾಂತಿ ಮತ್ತು ಸ್ವತಂತ್ರ ಭಾರತ ಎರಡು ವಿಶ್ಲೇಷಣೆ, ನಾಲ್ಕು ಹರಟೆಯ ಸಂಗ್ರಹ, ಎರಡು ಕವನ ಸಂಗ್ರಹ, 'ಸುಭಾಷಿತ ಚಮತ್ಕಾರ' ಈ ರೀತಿಯ ಸಾಹಿತ್ಯದ ಸ್ವರೂಪ ಪರಿಚಿತಗೊಂಡಿದೆ.

ಪಾ.ವೆಂ.ಆಚಾರ್ಯರ ಪ್ರಬಂಧಗಳು ಧಾರ್ಮಿಕ, ಶೈಕ್ಷಣಿಕ ಸಮಸ್ಯೆಗಳನ್ನು ಗಮನಿಸುವುದಾದರೆ ಕೆಲವು ಶಾಸ್ತ್ರಗಳನ್ನು ಏಕೆ ಪಾಲಿಸಬೇಕು? ಎಂಬ ಪ್ರಶ್ನೆಗಳು ಎತ್ತುತ್ತವೆ. ಶಿಕ್ಷಣ ಜೀವನ ಮೌಲ್ಯಗಳು ಸಾಮಾಜಿಕ ಬದಲಾವಣೆ ಹಾಗೂ ಮನೋವೃತ್ತಿಗಳನ್ನು ಪರಿಶೀಲಿಸಿದಾಗ ಪಾ.ವೆಂ.ಆಚಾರ್ಯರು ಶ್ರೇಷ್ಠ ಚಿಂತಕರೆಂಬುದು ತಿಳಿದುಬರುತ್ತದೆ. ಅವರ ಹರಟೆಯ ರಚನಾಕ್ರಮ ತುಂಬ ವಿಶಿಷ್ಟತೆಯನ್ನೊಳಗೊಂಡಿದೆ. ಐದುನೂರಕ್ಕಿಂತ ಹೆಚ್ಚು ಹರಟೆಗಳು ಪ್ರಕಟಗೊಂಡಿವೆ. ಪಾ.ವೆಂ.ಆಚಾರ್ಯ ಆಯ್ದ ಹರಟೆಗಳ ಹಾವನೂರ ಸಂಪಾದನೆ ಮಾಡುವಲ್ಲಿ ಅವರ ಜಾಣ್ಮೆಯನ್ನು ಕಾಣಬಹುದು. 'ಸಮಗ್ರ ಸಂಪುಟ(೧)' ಮೂವತ್ತಾರು ಹರಟೆಗಳನ್ನು ಒಳಗೊಂಡಿದೆ. ಸಂಗೀತದ ಮಹಿಮೆಯಿಂದ ಆರಂಭವಾದ ಸುದ್ದಿ ಸ್ವಾರಸ್ಯದವರೆಗೆ ವ್ಯಾಪಿಸಿಕೊಂಡಿದೆ.

ಕಾಯಿಲೆಗೆ ಒಳಗಾಗಿರುವ ವ್ಯಕ್ತಿಗೆ ಮಾನಸಿಕ ದೃಢತೆ ಬರಲು ಸಂಗೀತ ಪ್ರೇರಕವಾಗುತ್ತದೆ. "ಅಣ್ಣಾಮಲೈ ವಿಶ್ವವಿದ್ಯಾಲಯದ ಎಂ.ಎಸ್ ಸಿಂಗರು ಹಿಂದೆ ಸಸ್ಯಗಳ ಮೇಲೆ ಸಂಗೀತ ಪ್ರಭಾವ ಕುರಿತ ಶೋಧನೆ ಮಾಡಿ ಕೆಲವು ರಾಗಗಳ ಮೂಲಕ ಹಾಡಿದರೆ ಒಂದು ಗಿಡ ಬೆಳೆಯುತ್ತದೆ."[೪] ಎಂಬುದನ್ನು ನಿರೂಪಿಸಿದಂತೆ ಹೀಗೆ ಸಂಗೀತ ಕುರಿತು ಹತ್ತು ಹಲವು ಹೊಳಹುಗಳ ವಿವರಣೆಗಳಿವೆ.

**'ಚಂದ್ರಲೋಕಕ್ಕೆ ಹೋಗಬೇಕು'** ಚಂದ್ರಲೋಕದ ದೃಶ್ಯಾವಳಿ, ಪ್ರಾಚೀನ ಮತ್ತು ಪೌರಾಣಿಕ ಭಾರತೀಯ ಹಿನ್ನೆಲೆಯಲ್ಲಿ ಹರಟೆ ಪರಿಚಿತಗೊಂಡಿದೆ. ವಿಜ್ಞಾನ ದೃಷ್ಟಿಕೋನ ಈ ಭೂಮಂಡಲ ಮತ್ತು ಚಂದ್ರಮಂಡಲ ಸಂಪರ್ಕ ಕಲ್ಪಿಸುವ ಕುರಿತು ವಿಜ್ಞಾನಿಗಳು ಪ್ರಥಮ 'ಶ್ವಾನ' ಪ್ರಯೋಗ, ಸ್ಪರ್ಧೆಗೊಂಡಿರುವ ಪ್ರಯೋಗಕ್ಕೆ ಅಮೇರಿಕಾ ಸಮರ್ಥವೇ ಅಥವಾ ರಷ್ಯಾ ಸಮರ್ಥವೇ ಎನ್ನುವ ಸಂಗತಿಯಗಳು ಪರಿಚಿತಗೊಂಡಿದೆ. ಭಾರತೀಯ ಪ್ರಾಚೀನರ ದೃಷ್ಟಿಕೋನದಲ್ಲಿ ಕೈಲಾಸ, ಇಂದ್ರಲೋಕ, ವೈಕುಂಠ ಹಾಗೂ ವಿಜ್ಞಾನ ದೃಷ್ಟಿಯಿಂದ ಗಮನಿಸುವುದಾದರೆ ಗಾಳಿ, ನೀರು, ಆಹಾರ, ಪರಿಸರ, ಇತ್ಯಾದಿ ವಿಷಯಗಳು ಹರಟೆಯಲ್ಲಿ ಪಾಲುಪಡೆದಿವೆ.

**'ಆನೆಯ ಚರ್ಮ'** ವ್ಯಕ್ತಿ ಮತ್ತು ಪ್ರಾಣಿಗಳ ಕುರಿತು ತೌಲನಿಕ ಚರ್ಚೆ ಈ ಹರಟೆಯಲ್ಲಿದೆ. ಖಡ್ಗಮೃಗ, ಜಿರಾಫೆ, ಆನೆಗಳಂಥ ಪ್ರಾಣಿಗಳ ಚರ್ಮ ದಪ್ಪ; ಮನುಷ್ಯ ಚರ್ಮ ತೆಳುವಾಗಿದೆ. ರಾಜಕೀಯ ವಲಯದಲ್ಲಿ ಕಾರ್ಯ ಮಾಡುವರ ಅವರ ಸ್ವಭಾವ ಕುರಿತು ದಪ್ಪ ಚರ್ಮದವರೆಂಬ ಆಡುನುಡಿಯೊಂದಿಗೆ ಹರಟೆ ಮುಂದುವರಿದಿರುವುದನ್ನು ಇಲ್ಲಿ ಗಮನಿಸಬಹುದಾಗಿದೆ. ಮೈಸೂರು ವಿಧಾನಸಭೆಯಲ್ಲಿ ಮಾನ್ಯ ಸಭಾಪತಿಗಳು ಕಮುನಿಸ್ಟ್ ಸದಸ್ಯರೊಬ್ಬರನ್ನು ಪ್ರಶಂಸಿಸಿದರು. ಹಾಗೆಯೇ ರಾಜಕೀಯ ವ್ಯಕ್ತಿಗಳಿಗೆ ಒಳ್ಳೆಯ ಆಲೋಚನೆ ಹೊಳೆಯುವುದಿಲ್ಲ. ಸಾಮಾಜಿಕ ಪರಿಸರದಲ್ಲಿ ರಾಜಕೀಯ ಕಲುಷಿತಗೊಂಡಿವೆ. ಹೀಗಾಗಿ ಅಂತಹ ಸಂದರ್ಭದಲ್ಲಿ ಈ ರೀತಿಯ ಪ್ರಾಣಿಯ ಚರ್ಮದ ನಿದರ್ಶನ ಕೊಡುತ್ತಾರೆ ಎಂಬುದು ಪಾ.ವೆಂ. ಆಚಾರ್ಯರ ಅಭಿಪ್ರಾಯ.

**'ದೇವರ ಕೆಲಸ'** ಮನುಕುಲದ ಪ್ರಗತಿಯಾಗಬೇಕಾದರೆ ವ್ಯಕ್ತಿಯ ಮನೋಸ್ಥಿತಿ ಬದಲಾಗಬೆಕು. ಈ ನಾಡು ಪ್ರಗತಿಯಾಗಬೇಕಾದರೆ ಆಡಳಿತ ಕ್ಷೇತ್ರದಲ್ಲಿ ಕಾರ್ಯ ನಿರ್ವಹಿಸುವವರು ಪ್ರಾಮಾಣಿಕರಾಗಿರಬೇಕು. ಅಂದರೆ ಈ ನಾಡಿನ ಆಡಳಿತಕ್ಕೆ ರೂಪುರೇಷೆ ಹಾಕಿಕೊಟ್ಟ ಮೊದಲ ಮುಖ್ಯಮಂತ್ರಿ 'ಕೆಂಗಲ್ಲ ಹನುಮಂತರಾಯ' ವಿಧಾನಸಭೆಯ ಮುಂಭಾಗದಲ್ಲಿ 'ಕಾಯಕವೇ ಕೈಲಾಸ' ನುಡಿಯನ್ನು ಶಾಸನದಂತೆ ಕೆತ್ತಿಸಿದರು. ಈ ದೃಷ್ಟಿ ಇತಿಹಾಸದಲ್ಲಿ ಆದರ್ಶವಾದರೂ ನಂತರದಲ್ಲಿ ಬಂದ ಮುಖ್ಯಮಂತ್ರಿ 'ನಿಜಲಿಂಗಪ್ಪನವರು' ಹಿಂದೆ ಇದ್ದ ಶಾಸನದ ನುಡಿಯನ್ನು ಬದಲಾಯಿಸಿ 'ಸತ್ಯಮೇವ ಜಯತೆ' ಎಂದು ಶಾಸನದಲ್ಲಿ ಕೆತ್ತಿಸಿದರು ಎಂಬುದರ ಬಗೆಗಿನ ಹರಟೆ ಗಮನಾರ್ಹ. 'ಎಕಬತ್ತಿ ಎಕರಸ್ತಾ' ಈ ಹರಟೆಯಲ್ಲಿ ಈ ನಾಡಿನ ಭಾಷೆ. ಸಂಸ್ಕೃತಿ ವೈವಿಧ್ಯಮಯವಾದ ಚಿತ್ರಣ ಇದೆ. ಚಲನಚಿತ್ರ ನಿರ್ದೇಶಕರಾದ ವಿ.ಶಾಂತರಾಮ 'ತೀನಬತ್ತಿ ಚಾರರಸ್ತ' ಎಂಬ ಚಲನಚಿತ್ರದ ಮೂಲಕ ಜಾತಿ, ಭಾಷೆ, ಸಂಸ್ಕೃತಿಯನ್ನು ಕೌಟುಂಬಿಕ ಸ್ವರೂಪದಲ್ಲಿ ಸಾರ್ವತ್ರಿಕಗೊಳಿಸುವ ಪ್ರಯತ್ನ ಮಾಡಿರುವುದನ್ನು ಉಲ್ಲೇಖಿಸಿದ್ದಾರೆ. ಇದು ಮನುಷ್ಯ ಜಾತಿಗೆ ಅಂಟಿಕೊಳ್ಳಬಾರದು ಎನ್ನುವ ಸಂದೇಶವನ್ನು ಕೊಡುತ್ತದೆ. ಈ ಕೌಟುಂಬಿಕ ಸಂಬಂಧ ತಂದೆಯಿಂದ ಮಗನಿಗೆ, ಮಗನಿಂದ ಮೊಮ್ಮಗನಿಗೆ ಕುಟುಂಬ ಸ್ವರೂಪ ಪಡೆದುಕೊಳ್ಳುತ್ತದೆ.

**'ಬುದ್ಧಿವಂತರು'** ಎಂಬ ಹರಟೆಯಲ್ಲಿ ಕ್ರಿಶ ೧೯೪೨ರ ಚಳುವಳಿ ನಂತರ ಹೊರಬಂದ ಮೇಲೆ ಕಾಂಗ್ರೆಸ್ ಸಂಸ್ಥೆಯನ್ನು ಬಲಪಡಿಸಿರುವ ಮಾಹಿತಿಗಳಿವೆ. ವೈದ್ಯನಾಥ ಪಾಟೀಲರು 'ಆಯುರ್ವೇದ' ಕುರಿತು ಮಹತ್ವ ಸಂಗತಿಯನ್ನು ಪರಿಚಯಿಸಿದರು. ಹಾಗೆಯೇ ಕಾಂಗ್ರೆಸ್ ನಿರ್ಬಂಧ ಸಂಬಂಧಿಸಿ ವಿಷಯದ ಪ್ರಸ್ತಾಪ, ಸರ್ಕಾರ ಉತ್ತಮ ಆಡಳಿತ ನೀಡಬೇಕು, ಆಡಳಿತಾತ್ಮಕ ಮತ್ತು ಸಾಮಾಜಿಕ ಪ್ರಗತಿಯಾಬೇಕಾದರೆ ವ್ಯಕ್ತಿಯ ಬುದ್ಧಿವಂತನಾಗಬೇಕು. ಎಸ್.ಕೆ.ಪಾಟೀಲರಿಗಿಂತ ಮುರಾರ್ಜಿಯವರು ಬುದ್ಧಿವಂತರು ಎಂಬ ನಿರ್ಧಾರವನ್ನು

ಪಾ.ವೆಂ.ಆಚಾರ್ಯ ಅವರು ಬುದ್ಧಿವಂತರು ಹರಟೆಯಲ್ಲಿ ನೀಡಿದ್ದಾರೆ. ಹಾಗೆಯೇ ಧಾರ್ಮಿಕ ರಾಜಕೀಯ ಮತ್ತು ಆಡಳಿತಾತ್ಮಕವಾದ ವಿಷಯಗಳು ಇಲ್ಲಿ ಪ್ರಸ್ತಾಪಗೊಂಡಿದೆ.

**'ಬೆಂಗೇರಿಯರ ಬರಹ'**

ಹಾವನೂರ ಅವರು ಬೆಂಗೇರಿಯವರ ಚದುರಿ ಹೋಗಿದ್ದ ಬಿಡಿ ಬರಹಗಳನ್ನು ಸಂಪಾದಿಸಿದ್ದಾರೆ. ಸಾಮಾಜಿಕ ಚಿಂತನೆ, ಭಾಷೆ, ಸಾಹಿತ್ಯ, ಶಾಸನ ಸಂಪಾದನೆ ಈ ರೀತಿ ವಿಷಯಗಳನ್ನು ಒಳಗೊಂಡಿದೆ. ಬೆಂಗೇರಿಯರು ಶಿಕ್ಷಣ, ವೃತ್ತಿಗಳ ನಂತರ ನಿವೃತ್ತಿ ಹುಬ್ಬಳ್ಳಿಯಲ್ಲಿ ಜೀವನವನ್ನು ಕಳೆದರು. (೧೯೫೩) ದಾಸರ ಕೀರ್ತನೆಗಳನ್ನು ಶಾಸ್ತ್ರೀಯವಾಗಿ ಸಂಪಾದಿಸಿದರು. 'ಕರ್ನಾಟಕ ಭಾರತಿ' 'ಪ್ರಪಂಚ' ಮುಂತಾದ ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆಯುತ್ತಿದ್ದರು. ಕಾಲಾನುಕ್ರಮದಲ್ಲಿ ದಾಸಕೂಟದ ಚರಿತ್ರೆಯನ್ನು ಇಂಗ್ಲಿಷ್‌ನಲ್ಲಿ ಬರೆದರು. 'Journal of the Bhandarkar oriental keseorch Instute', ಪತ್ರಿಕೆಯಲ್ಲಿ ಪ್ರಕಟಿಸಿದರು. ಅಲ್ಲದೆ ಕನ್ನಡಾನುವಾದವು ನಂತರ ವರ್ಷದಲ್ಲಿ 'ಜಯ ಕರ್ನಾಟಕ' ಪತ್ರಿಕೆಯಲ್ಲಿ ಲೇಖನ ಮಾಲೆಯಲ್ಲಿ ಬೆಳಕು ಕಂಡಿತು. ಹಾಗೆಯೇ ಬೆಂಗೇರಿ ಮಾಸ್ತರರು ಹಿಂದೂಸ್ತಾನ ಸಂಗೀತದ ಉಸ್ತಾದ್ ಮುಸ್ತಾಕ್ ಹುಸೇನ್, ಪಲುಸ್ಕರ ವಝೆ ಮುಂತಾದವರ ಜೀವನ ಚರಿತ್ರೆಯನ್ನು ಕನ್ನಡಕ್ಕೆ ತರ್ಜುಮೆ ಮಾಡಿ 'ಜಯ ಕರ್ನಾಟಕ' ಪತ್ರಿಕೆಯಲ್ಲಿ ಪ್ರಕಟಿಸಿದರು.

**ಕನ್ನಡ ಅಡ್ಡ ಹೆಸರುಗಳಲ್ಲಿ ಕಾಣುವ ದ್ರಾವಿಡ ಸಂಸ್ಕೃತಿಯ ಪರಂಪರೆ**

ಮುಂಬಯಿಯ ನ್ಯಾಯವಿಧೇಯಕ ಮಂಡಳಿಯ ೧೯೪೬ರ ಮತದಾರ ಪಟ್ಟಿಯಲ್ಲಿ ಧಾರವಾಡ ಜಿಲ್ಲೆಯ ಹುಬ್ಬಳ್ಳಿ, ಶಿಗ್ಗಾಂವಿಯಲ್ಲಿ ಕನ್ನಡದ ಅಡ್ಡ ಹೆಸರಿನ ಗೌರಮ್ಮನವರ ಹೆಸರುಗಳು ನಿರೂಪಿತಗೊಂಡಿವೆ. ದ್ರಾವಿಡ ಸಂಸ್ಕೃತಿಯ ಪರಂಪರೆಯ ಪತ್ರ ವ್ಯವಹಾರವು ಉಲ್ಲೇಖವಾಗಿದೆ. ಈ ಅಂಶಗಳು ಆರ್ಯ ಮತ್ತು ದ್ರಾವಿಡ ಮೂಲದಿಂದ ಬಂದವೆಂದು ತಿಳಿಯುತ್ತದೆ. ಹಾಗೆಯೇ ಉತ್ತರ ಧರ್ಮದ ಸಂಸ್ಕೃತಿಗಳ ಕೆಲವೊಂದು ಉತ್ತಮ ಗುಣಗಳು ಇರುವ ಕಾರಣ ದ್ರಾವಿಡ ಸಂಸ್ಕೃತಿ ಗೌಣವಾಗಿ ಆರ್ಯ ಸಂಸ್ಕೃತಿಯು ಚಾಲ್ತಿಗೆ ಬಂತು. ಆರ್ಯರ ಪಿತೃಪದ್ಧತಿ, ಮಾತೃಪದ್ಧತಿ, ಅಳಿಯ ಸಂತಾನ ಅಂದರೆ ಮಾವನಿಂದ ಅಳಿಯನಿಗೆ ಅಧಿಕಾರ ಹಸ್ತಾಂತರ ಕಾರವಾರ, ಮಂಗಳೂರು, ತಮಿಳುನಾಡು, ಕೇರಳಗಳಲ್ಲಿ ಮುಂದುವರಿದುಕೊಂಡು ಬಂದಿದೆ. ಹಾಗೆಯೇ ಆರ್ಯರ ಪದ್ಧತಿಯಂತೆ ಮನೆಯ ಜವಾಬ್ದಾರಿ ತಂದೆಯ ನಂತರ ಮಗನಿಗೆ ಹೀಗೆ ಸಾಗುತ್ತದೆ.

**ಸಾಮಾಜಿಕ ಟಿಪ್ಪಣೆ**

ಮೂಗು ಗಾಳಿಯ ಮೂಲಕ ಉಸಿರಾಟ ಮಾಡುವ ಮಹತ್ವವನ್ನು ಪರಿಚಯಿಸುತ್ತದೆ.

೧. ವೈದ್ಯ ಜ್ಯೋತಿಷ ದೃಷ್ಟಿ

೨. ಸಾಮಾಜಿಕ ದೃಷ್ಟಿ

೩. ಜೀವಶಾಸ್ತ್ರ ದೃಷ್ಟಿ

ಕಾಲಮಾನಕ್ಕೆ ಅನುಗುಣವಾಗಿ ಮನುಷ್ಯನ ನಂಬಿಕೆಯ ಸ್ವರೂಪಗಳು ಬದಲಾಗುತ್ತವೆ. ಶಾಸ್ತ್ರೀಯ ನೆಲೆಯಲ್ಲಿ ಗಮನಿಸುವುದಾದರೆ ವೈದ್ಯಕೀಯ ಮತ್ತು ಜ್ಯೋತಿಷ ದೃಷ್ಟಿಯಲ್ಲಿ ಹೇಳುವುದಾದರೆ ವ್ಯಕ್ತಿಯ ವದನದ ಲಕ್ಷಣ ನೋಡಿ ರೋಗಿಯ ಮನೋಸ್ಥಿತಿ ತಿಳಿಯಬಹುದು. ಹಾಗೆಯೇ ವದನ ನೋಡಿ ಜ್ಯೋತಿಷ ಹೇಳಬಹುದು. ಸಾಮಾಜಿಕವಾಗಿ ಹೇಳುವುದಾದರೆ ವದನದ ಚೆಲುವು ಹೆಚ್ಚಿಸಬೇಕಾದರೆ ಮೂಗು ಅವಲಂಬಿಸಿರುತ್ತದೆ. ಹೀಗಾಗಿ ಮೂಗು ಪ್ರತಿಷ್ಠೆಯನ್ನು ಹೆಚ್ಚಿಸುತ್ತದೆ. 'ಕೊಯ್ಯ ಅವಳ ಮೂಗು' ಎನ್ನುವ ಮಾತು ಚಾಲ್ತಿಯಲ್ಲಿದೆ. ಮೂಗು ವದನಕ್ಕೆ ಹೆಚ್ಚು ಮೆರಗು ಕೊಡುತ್ತದೆ. ಇಲ್ಲವಾದರೆ ವದನ ವಿಕಾರ ರೂಪ ತಾಳುತ್ತದೆ. ಹಬ್ಬಿ ಮೂಗು, ಗಡಿಗೆ ಮೂಗು, ಲಂಡ ಮೂಗು, ಈಳಿಗೆ ಮೂಗು, ಎರು ಮೂಗು, ಇಳಿ ಮೂಗು, ದುಂಡು ಮೂಗು ಈ ರೀತಿಯ ಮೂಗಿನ ಪ್ರಕಾರಗಳು ಕಂಡು ಬರುತ್ತದೆ. ಹಾಗೆಯೇ 'ಮರಿದ ಮೂಗಿನಾಕೆ ಕೊಂಡು ಜಗಳ ತಂದಾಗಿ' ಎಂಬ ಮಾತು ಬದುಕಿನಲ್ಲಿ ಹಾಸುಹೊಕ್ಕಾಗಿದೆ.

ಜೀವಶಾಸ್ತ್ರ ದೃಷ್ಟಿಯಲ್ಲಿ ಮೂಗಿನ ಮಹತ್ವವನ್ನು ಹೇಳುವುದಾದರೆ "ಭೂಮಿಯ ಮೇಲ್ಮೈಯನ್ನು ಉಷ್ಣಕಟಿ ಬಂಧ ಸಮಶೀತೋಷ್ಣಕಟಿಬಂಧ, ಶೀತ ಕಟಿಬಂಧ ಎಂದು ಮೂರು ಭಾಗಗಳನ್ನು 'ಫೆಯರ್‌ಗ್ರೀವ್ ಮತ್ತು ಯಂಗ' ಎಂಬ ಕೃತಿಯಲ್ಲಿ ಉಲ್ಲೇಖಗೊಂಡಿದೆ. ತಂಪು ಅಥವಾ ಚಳಿಯ ಗಾಳಿಯನ್ನು ಒಳಗೆ ಬಿಡದೆ ಅದನ್ನು ಕಾಯಿಸಿ ಒಳಗೆ ಬಿಡುತ್ತದೆ. ಈ ಕಾರ್ಯವನ್ನು ಮೂಗಿನ ಮೇಲ್ಭಾಗದಲ್ಲಿ ಸುರುಳಿಯಿಂದ ಮೆತ್ತನೆ. ಕರುಳುಗಳ ಬಳ್ಳಿಯಿದ್ದು ಹೋಗುವ ಗಾಳಿ ಕಾಯದೇ ಬಿಡುವುದಿಲ್ಲ. ನೆಗಡಿಯಾದರೆ ಮೂಗಿನಿಂದ ನೀರು ಸೋರಿ ಮೂಗಿನ ತಿಂಡಿಯನ್ನು ತಡೆಯುತ್ತದೆ"[೨೫] ಹೀಗೆ ವಿಶೇಷ ಸಂಗತಿ ಪರಿಚಿತಗೊಂಡಿದೆ.

**'ಬುದ್ಧಿ ಬಲಿಕೆಯ ಆಟ ಗಂಜೀಪ'**

ಕ್ರೀಡೆ ಮನುಷ್ಯನ ದೈನಂದಿನ ಬದುಕಿನಲ್ಲಿ ಬಹಳ ಮಹತ್ವ ಪಡೆದುಕೊಂಡಿದೆ. ಹಾಗೆಯೇ ಕಾಲ ಬದಲಾದಂತೆ ಕ್ರೀಡೆಯ ಸ್ವರೂಪ ಬದಲಾಗುತ್ತದೆ. ಕ್ರೀಡೆಯು ತನ್ನದೇಯಾದ ಚಾರಿತ್ರಿಕ ಹಿನ್ನೆಲೆಯನ್ನು ಹೊಂದಿದೆ. ಚದುರಂಗ ಮತ್ತು ಗಂಜೀಪ ಆಟಗಳು ಇವು ಹುಲಿಕಟ್ಟಿನ ಆಟದ ಮಾದರಿಯಲ್ಲಿವೆ. ಇತ್ತೀಚೆಗೆ ಈ ಕ್ರೀಡೆಗಳು ತಮ್ಮ ಅಸ್ತಿತ್ವವನ್ನು ಕಳೆದುಕೊಂಡಿವೆ. ಆದರೆ ಚದುರಂಗದಾಟವು ಎಲ್ಲಾ ರಾಷ್ಟ್ರಗಳಲ್ಲಿ ತನ್ನದೇಯಾದ ಮಹತ್ವ ಪಡೆದುಕೊಂಡಿದೆ. ಆದರೆ ಗಂಜೀಪ ಆಟವು ಕಣ್ಮರೆಯಾಗಿದೆ. ಹೀಗಾಗಿ ಈ ಕ್ರೀಡೆಯನ್ನು ಪರಿಚಯಿಸುವುದು ಹಾವನೂರ ಅವರ ಉದ್ದೇಶವಾಗಿತ್ತು. ಗಂಜೀಪ ಶಬ್ದವು ಗಂಜೀಫಾ

ಎಂಬ ಪಾರಸಿ ಮೂಲದಿಂದ ಬಂದಿದೆ. ಹಾಗೆಯೇ ದಕ್ಷಿಣದವರು ಇದನ್ನು 'ದಶವತಾರ'ವೆಂದು ಕರೆಯುತ್ತಾರೆ. "ಮೊಗಲ್ ಚಕ್ರವರ್ತಿಯಾದ ಬಾಬರನು ಕ್ರಿಶ ೧೫೨೭ರಲ್ಲಿ ಜನವರಿ ತಿಂಗಳಲ್ಲಿ ಹೀಗೆ ಉಲ್ಲೇಖಿಸಿಕೊಂಡಿದ್ದಾನೆ. ಸಿಂಧವನ್ನಾಳುತ್ತಿರುವ ಶಾಹ ಹುಸೇನನು ಗಂಜೀಪ ಆಟವನ್ನು ಬಹಳ ಇಷ್ಟಪಡುತ್ತಿದ್ದ. ಹೀಗಾಗಿ ಮಿರ್ ಅಲಿ ಕೋರ್ಟಿಯ ಸಂಗಡ ಕಳಿಸಿಕೊಟ್ಟನು."[೨೬] ಇದಕ್ಕೆ ಇನ್ನೊಂದು ಪುಷ್ಟಿ ಕೊಡುವ ನಿದರ್ಶನ ಕಾಣಬಹುದು; ಅಬ್ದುಲ್ ಫಜಲ್ "ತನ್ನ ದಿನಚರಿಯಲ್ಲಿ ಹೀಗೆ ಹೇಳಿಕೊಂಡಿದ್ದಾನೆ. ತನ್ನ ಪ್ರಜೆಗಳ ಬುದ್ಧಿ ಹಾಗೂ ಜಾಣ್ಮೆಯನ್ನು ಒರಗೆ ಹಚ್ಚಲು ಅವರ ಜೊತೆ ರಾಜನು ಆಟ ಆಡುತ್ತಿದ್ದನು."[೨೭]

**ಒಕ್ಕಲಿಗರ ಅನುಭವದ ಕೋಶ**

ಈ ದೇಶ ಕೃಷಿ ಪ್ರಧಾನವಾಗಿದ್ದರಿಂದ ಒಕ್ಕಲಿಗರ ಸಂಖ್ಯೆ ಹೆಚ್ಚು; ಇವರು ಭೂಮಿಯನ್ನು ಅವಲಂಬಿಸಿ ಬದುಕುತ್ತಾರೆ. ಕೃಷಿಕರು ಈ ದೇಶದ ಆರ್ಥಿಕ ಅಭಿವೃದ್ಧಿಗೆ ಕಾರಣರಾಗುತ್ತಾರೆ. ದೈಹಿಕ ಶ್ರಮ ಪಡುವುದರ ಮೂಲಕ ದುಡಿಯುವ ಸಂಸ್ಕೃತಿ ಹುಟ್ಟು ಹಾಕಿದರು. 'ಕೋಟಿ ವಿದ್ಯೆಗಿಂತ ಮೇಟಿ ವಿದ್ಯೆ ಲೇಸು' ಎನ್ನುವುದು ಅನುಭವದ ಮಾತು ಗಾಳಿ, ಮಳೆ, ಬಿಸಿಲು ರೈತನಿಗೆ ಪಂಚಪ್ರಾಣ. ಹೀಗಾಗಿ ಪ್ರಕೃತಿಯನ್ನು ಅವಲಂಬಿಸಿ ಬದುಕುತ್ತಾರೆ. ಜ್ಯೋತಿಷ ಪ್ರಕಾರ ೨೭ ಮಳೆಗಳು, ೨೭ ನಕ್ಷತ್ರಗಳಿವೆ. ಅಶ್ವಿನಿ ಮಳೆಯೊಂದಿಗೆ ಆರಂಭಗೊಂಡು ರೇವತಿಗೆ ಕೊನೆಗೊಳ್ಳುತ್ತದೆ.

ಜ್ಯೋತಿಷ ಪ್ರಕಾರ ೨೭ ಮಳೆಗಳಲ್ಲಿ ೭ ಕಳೆದರೆ ೨೦ ಮಾತ್ರ ಉಳಿಯುತ್ತದೆ. ಒಕ್ಕಲಿಗರಿಗೆ ಭರವಸೆ ಕೊಟ್ಟ ಮಳೆಗಳೆಂದರೆ ೭ ಮಾತ್ರ; ಹೀಗಾಗಿ ಉಳಿದವುಗಳನ್ನು ನಂಬುವುದು ಕಷ್ಟ. ಕೃಷಿಕರಲ್ಲಿ ಮಳೆಯ ಕುರಿತು ಸಾಂಪ್ರದಾಯಿಕ ನಂಜಿಕೆಗಳಿವೆ. ಅಶ್ವಿನಿ ಮಳೆಯಾದರೆ 'ಹಸುವಿಗೆ ಮೇವಿಲ್ಲ. ಶಿಶುವಿಗೆ ಹಾಲಿಲ್ಲ' ಎನ್ನುವ ನಂಜಿಕೆ. ಮೃಗಶಿರ(ಮಿರುಗ) ಮಿರುಗ ಗುಡಿಗಿದರೆ ಮುಂದಿನ ಆರು ಮಳೆ ಹೋಗುತ್ತವೆ ಎಂಬ ನಂಜಿಕೆ ಜೀವಂತವಾಗಿದೆ. ಅರಿದ್ರಾ ಅಂದರೆ ಅದರ 'ಅರಿದ್ರಾ ಆಗದಿದ್ರಾ ದರಿದ್ರಾ' ಎನ್ನುವ ಮಾತು ಚಾಲ್ತಿಯಲ್ಲಿದೆ. ಮೇಘ(ಮಗಿ) ಆದರೆ ಮಗಿ ಆಗದಿದ್ದರೆ ಹೊಗಿ ಉತ್ತರ(ಉತ್ತರಿ) 'ಮಳೆ ಬಿದ್ದರೆ ಬಿತ್ತರಿ ಇಲ್ಲದಿದ್ದರೆ ಕಿತ್ತರಿ' ಈ ತೆರನಾದ ನಂಬಿಕೆಗಳು ಈಗಲೂ ಚಾಲ್ತಿಯಲ್ಲಿರುವುದನ್ನು ಇಲ್ಲಿ ಗಮನಿಸಲಾಗಿದೆ.

**ದಾಸಕೂಟ ಇತಿಹಾಸದ ರೂಪುರೇಷೆಗಳು**

ದಾಸರ ಮತ್ತು ದಾಸಕೂಟದ ಇತಿಹಾಸ ಪೂರ್ವಕರಿಗೆ ಸಂಬಂಧಿಸಿದ ಕಟ್ಟುಕಥೆಯೆಂದೂ, ಕನ್ನಡ ಭಾಷೆಯ ಇತಿಹಾಸದ ಮತ್ತು ಸಾಹಿತ್ಯ ಕುರಿತ ಚರ್ಚೆ ಇದೆ. ಪಾಶ್ಚಾತ್ಯ ಸಂಶೋಧಕರಾದ ಕಿಟೆಲ್, ಫ್ಲೀಟ್ ಮತ್ತು ರೈಸ್ ಅವರು ದಾಸಕೂಟದ ಇತಿಹಾಸವನ್ನು ಪ್ರಕಟಿಸಿದರು. ದಾಸಕೂಟ ಶಬ್ದವು ಕರ್ನಾಟಕದಲ್ಲಿ ಬಳಕೆಯಾದ ಕುರಿತು

ಸರಳವಾಗಿ ಹೇಳುವುದಾದರೆ, ವೈಷ್ಣವ ಭಗವತ್ಪಾದರ ಪಂಥ ಭಕ್ತಿ ಪಂಥದ ಪರ್ಯಾಯ ಶಬ್ದವಾಗಿ ದಾಸ ಶಬ್ದ ಬಳಕೆಯಾಗಿದೆ. ೧೩ನೇ ಶತಮಾನದ ಪೂರ್ವದಲ್ಲಿ ಹಿಂದೂಸ್ಥಾನದ ಬಹುಭಾಗ ಭಕ್ತಿಯ ಬಿರುಗಾಳಿ ಎದ್ದಾಗ; ಆ ಸಂದರ್ಭದಲ್ಲಿ ಅದ್ವೈತ, ವಿಶಿಷ್ಟಾದ್ವೈತ ಮತ್ತು ದ್ವೈತ ಪಂಥದ ಉಗಮಕ್ಕೆ ಕಾರಣವಾಯಿತು. ಈ ಭಕ್ತಿ ಪಂಥದ ನಂತರ ಇದು ಆರಂಭದಲ್ಲಿ ತಮಿಳುನಾಡಿನಲ್ಲಿ ಅಸ್ತಿತ್ವ ಪಡೆದುಕೊಂಡಿತು. ಕರ್ನಾಟಕದಲ್ಲಿ ಪ್ರಗತಿ ಕಂಡು ಮಹಾರಾಷ್ಟ್ರದಲ್ಲಿ ಮುಂದುವರಿದು ಗುಜರಾತಿನಲ್ಲಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿತು.

೧೩ನೇ ಶತಮಾನದ ದ್ವೈತ ಮತದ ಸ್ಥಾಪಕರಾದ ಮಧ್ವಾಚಾರ್ಯರ ಭಕ್ತಿ ಸೂತ್ರ ಇಲ್ಲವೇ ದ್ವೈತ ಪಂಥಕ್ಕೆ ಭಾಗವತರೇ ಮೂಲ. ಹೀಗೆ ಉಪನಿಷತ್ತು ಕಾಲದಿಂದ ಜನರ ನಂಬಿಕೆ 'ದೇವರು ಮತ್ತು ಸತ್ಯ' ಮನುಷ್ಯ ಪ್ರತಿನಿತ್ಯ ಕಾಯಕ ಮಾಡುತ್ತ ದೇವರಲ್ಲಿ ಭಕ್ತಿ ಮತ್ತು ಜ್ಞಾನದಿಂದ ಮೈಮರೆಯುವುದರಿಂದ ವ್ಯಕ್ತಿಗೆ ಮೋಕ್ಷ ಸಿಗುತ್ತದೆ. ದಾಸರ ಪದಗಳು ಮಹತ್ವದ ಸಂಗತಿ ಎಂದರೆ ಜನರಾಡುವ ಆಡುಭಾಷೆಯಲ್ಲಿ ಇರುವುದರಿಂದ ಜನರಿಗೆ ಸರಳವಾಗಿ ಅರ್ಥವಾಗುತ್ತದೆ. ಆ ಪರಂಪರೆಯ ಬುದ್ದಗಿಂತ ಭಾಷೆಯು ಮೂಲ ತತ್ವಗಳನ್ನು ಜನರಿಗೆ ತಿಳಿಸುವುದರ ಮೂಲಕ ಪ್ರಚಾರ ಮಾಡಿದರು.

ಕರ್ನಾಟಕದಲ್ಲಿ ವೀರಶೈವ ಪಂಥದವರು ಅವರ ಮತ ತತ್ವಗಳನ್ನು ತಿಳಿಗನ್ನಡದಲ್ಲಿ ಮೊದಲು ತಿಳಿಸಿದರು. ವೀರಶೈವ ಪಂಥದವರ ನಂತರ ದಾಸಕೂಟವು ಪ್ರಗತಿ ಹೊಂದಿತು. ಸಮಾಜ ಪ್ರಗತಿಯಾಗಬೇಕಾದರೆ ದಾಸರು ಜನಸಾಮಾನ್ಯರಲ್ಲಿ ಕುರುಡು ನಂಬಿಕೆಗಳಾದ ದುರುಗವ್ವ, ದ್ಯಾಮವ್ವ ಹೆಸರಿನಲ್ಲಿ ಮತ್ತು ದೇವರ ಹೆಸರಿನಲ್ಲಿ ಅಡ್ಡ ದಾರಿ ಹಿಡಿಸುವ ಸಮಾಜಘಾತುಕ ಶಕ್ತಿಗಳನ್ನು ದೂಷಿಸುವಂತೆ ಮಾಡಿದರು. ಸ್ವಾರ್ಥಕ್ಕಾಗಿ ಜನಸಾಮಾನ್ಯರನ್ನು ಬಲಿ ಕೊಡುವ ಕಾರ್ಯ ನಡೆಯುತ್ತಿತ್ತು. ಆದರೆ ದಾಸರ ಹಾಡುಗಳ ಮೂಲಕ ದೇವರ ಜ್ಞಾನ ಮತ್ತು ಭಕ್ತಿಯಿಂದ ಮಾಡಿಕೊಂಡಾಗ ಸಾಧ್ಯವೆಂದು ಮನಗಂಡರು.

ಪುರಂದರದಾಸರು ಹಾಡುಗಳಲ್ಲಿ ಭಕ್ತಿ, ಜ್ಞಾನಗಳಿಗೆ ಪ್ರಾಧ್ಯಾನತೆ ಕೊಟ್ಟು ಪೋಷಣೆ ಮಾಡಿದರು. ೧೮ನೇ ಶತಮಾನದ ಉತ್ತಾರಾರ್ಧ ಮತ್ತು ೧೯ನೇ ಶತಮಾನದ ಪೂರ್ವಾರ್ಧ ದಾಸಕೂಟ ಪುನರ್ ಪ್ರವರ್ತಕರಾದ ವಿಜಯದಾಸರು ಹಾಡುಗಳಲ್ಲಿ ನೀತಿ ಪ್ರಾಧ್ಯಾನತೆಗೆ ಆದ್ಯತೆ ಕೊಟ್ಟರು. ಅದ್ವೈತ ತತ್ವ ಕೊನೆಗೆ ವಿಶಿಷ್ಟಾದ್ವೈತ ಮತಗಳ ಹುಟ್ಟಿಗೆ ಪುರಾವೆಯಾಗಿ ನಿಂತಿದೆ.

ಉಡುಪಿ, ಬಳ್ಳಾರಿ, ಬೆಂಗಳೂರು ಮುಂತಾದ ಸ್ಥಳಗಳಲ್ಲಿ ಪದಸಂಗ್ರಹ ಅಚ್ಚಾಗಿದೆ. ಅಲ್ಲದೆ ಮದ್ರಾಸ್ ಓರಿಯಂಟಲ್ ಲೈಬ್ರರಿ ಮತ್ತು ಓರಿಯಂಟಲ್ ಲೈಬ್ರರಿ ಮೈಸೂರು ಇಲ್ಲಿ ಹಸ್ತಪ್ರತಿಗಳು ದೊರೆಯುತ್ತವೆ. ದಾಸಕೂಟಕ್ಕೆ ಸಂಬಂಧಿಸಿದ ಹಾಗೆ ವಿಚಾರ ಕಂಡು ಬಂದಿದೆ. ಕವಿಚರಿತೆಕಾರರು, ಕವಿಚರಿತೆ ೨ರಲ್ಲಿ ನರಹರಿ ತೀರ್ಥರೆಂದು ಮೊದಲು ಉಲ್ಲೇಖಗೊಂಡಿದೆ. ಈ ಎಲ್ಲಾ ಅಂಶಗಳನ್ನು ಆಧರಿಸಿ ಹೇಳುವುದಾದರೆ ಮಧ್ವಾಚಾರ್ಯರ

ನಾಲ್ಕು ಶಿಷ್ಯರಲ್ಲಿ ಪದ್ಮನಾಭ ತೀರ್ಥರ ನಂತರ ವೈಷ್ಣವ ಪೀಠವನ್ನು ಏರಿದ ಶಾಮಶಾಸ್ತ್ರೀ (ಅವರ ಪೂರ್ವಾಶ್ರಮದ ಹೆಸರು) ದೀಕ್ಷೆಯ ಬಳಿಕ ಇವರ ನರಹರಿ ತೀರ್ಥರಾದರು ಎಂದು "The Life and Teaching of Sri Madhv" ಎಂಬ ಕೃತಿಯಲ್ಲಿ ಕುಂಭಕೋಣಂಮನ ಎಂ ಪದ್ಮನಾಭಾಚಾರ್ಯರು ಬರೆದಿದ್ದಾರೆ. ಪಟ್ಟಕ್ಕೆ ಬರುವುದಕ್ಕಿಂತ ಮುಂಚೆ ಗಂಜಾಮ್‌ದ(ಒರಿಸಾ) ಅರಸರಲ್ಲಿ ಅಲ್ಪವೇತನದಲ್ಲಿ ಅಮಲ್ದಾರಾಗಿ ೧೨ ವರ್ಷ ಕೆಲಸ ಮಾಡಿದರು. ಅಲ್ಲಿಯ ಆಡಳಿತವನ್ನು ಸುಧಾರಿಸಿದರು. ಅರಸ ಶುಭಶರ್ಮ ಒರಿಸ್ಸಾ ರಾಜ್ಯದ ಈಗಿನ ಆಂಧ್ರ ಪ್ರದೇಶದ ಈಶಾನ್ಯದ ಕೊನೆಗಿದೆ.

**ಜಗದ್ವಿಖ್ಯಾತರು**

ಹಾವನೂರ ಅವರು ಪಾ.ವೆಂ.ಆಚಾರ್ಯರ ವೈವಿಧ್ಯಮಯ ಸಾಹಿತ್ಯ ಕೃಷಿಯನ್ನು ಯುವ ಜನಾಂಗಕ್ಕೆ ಪರಿಚಯಿಸುವ ಹಿನ್ನೆಲೆಯಲ್ಲಿ ಹತ್ತು ಹಲವು ರಾಷ್ಟ್ರಗಳ ಬಹುವೈವಿಧ್ಯಮಯವಾದ ಸಮಾಜ ಸಂಸ್ಕೃತಿ ಮತ್ತು ವಿಭಿನ್ನ ವಿಚಾರಧಾರೆಗಳನ್ನು ಪರಿಚಯಿಸಿದ್ದಾರೆ. ಈ ಕೃತಿಯ ಮೂಲಕ ವ್ಯಕ್ತಿಗಳ ವೈಯಕ್ತಿಕ ಬದುಕಿನ ಚಿತ್ರಣ ಹಾಗೂ ಒಂದೊಂದು ಕ್ಷೇತ್ರದಲ್ಲಿ ಮಾಡಿದ ಸಾಧನೆಗಳನ್ನು ವಿಶ್ಲೇಷಿಸಿದ್ದಾರೆ. ದಾರ್ಶನಿಕ ಪ್ಲೇಟೊ ಯುರೋಪಿನ ಕ್ರಾಂತಿಯ ದೂತ ರೂಸೊ, ಸಂಗೀತ ಬಾಲಾದ್ಭುತ, ಮೊಜಾರ್ಟ್ ಹ್ಯಾನ್ಸ ಆಂಡರಸನ್ ಮಕ್ಕಳ ಕಥೆಗಳ ರಾಜ ಉಡಾಳ ಹುಡುಗರ ಶ್ರೇಷ್ಠ ಸಾಹಿತಿ ಐನ್‌ಸ್ಟನ್ನರ ಬಾಲ್ಯಜೀವನ ಜಾನ್‌ಬಾರ್ಡಿಸ್, ಚದುರಂಗ ಚಕ್ರವರ್ತಿ ಬಾಬಿ ಫಿಷರ್ ಇನ್ನು ಮುಂತಾದವರ ಜೀವನದ ಬದುಕಿನ ಸ್ವರೂಪಗಳು ನಿರೂಪಿತಗೊಂಡಿದೆ.

ಯುರೋಪಿನ ಮತ್ತು ಪಶ್ಚಿಮ ಏಷಿಯಾಗಳಲ್ಲಿ 'ದಾರ್ಶನಿಕ ಪ್ಲೇಟೊ' ವಿಚಾರಧಾರೆ, ಸಾಮಾಜಿಕ, ರಾಜಕೀಯ ಮತ್ತು ವೈಚಾರಿಕವಾಗಿ ತನ್ನದೇಯಾದ ಪ್ರಭಾವವನ್ನು ಬೀರಿದೆ. ಅಲ್ಲದೆ ಜಗತ್ತಿನ ಹತ್ತು ಹಲವು ರಾಷ್ಟ್ರಗಳಲ್ಲಿ ಆತನ ವಿಚಾರವನ್ನು ಗೌರವಿಸುತ್ತಾರೆ. ಅವನ ನೀತಿಶಾಸ್ತ್ರ, ರಾಜಕೀಯಶಾಸ್ತ್ರ, ಮನಶಾಸ್ತ್ರಗಳ ಚಿಂತನೆ ಮತ್ತು ಯೋಚನೆ, ಯೋಜನೆಗಳು ಎಲ್ಲಾ ಕಾಲಕ್ಕೂ ಮೌಲ್ಯವನ್ನು ಪಡೆದುಕೊಂಡಿವೆ. ಈತನಿಗೆ ತತ್ವಜ್ಞಾನಿಯಾಗುವ ಲಕ್ಷಣವಿರಲಿಲ್ಲ. ಆದರೆ ಗಣಿತ ವಿಷಯದಲ್ಲಿ ಹೆಚ್ಚು ಆಸಕ್ತಿ ಇತ್ತು. ವಾಕ್ಚಾತುರ್ಯತನಾಗಿದ್ದನು. ಸಂಗೀತದಲ್ಲಿ ಹೆಚ್ಚು ಆಸಕ್ತಿ ಅಲ್ಲದೆ ಕಾವ್ಯಭ್ಯಾಸ ಮಾಡುತ್ತಿದ್ದನು. ಹೀಗಾಗಿ ಕವಿ ಅಥವಾ ನಾಟಕಕಾರನಾಗಬಹುದಿತ್ತು. ಆದರೆ ಗಾಯಕಿ ಸಾಪೋಳ ವೀಣಾವಾದಕ್ಕೆ ಮೋಹಿತನಾಗಿದ್ದನು. ಇದರಿಂದ ಹೊರಬರಲು ಸಾಕ್ರೆಟಿಸ್ ಪ್ರಭಾವ; ಆತನ ಮನಸ್ಸನ್ನು ತತ್ವ ಚಿಂತನೆಯ ಕಡೆಗೆ ತಿರುಗಿತು. ಸಮಕಾಲೀನ ರಾಜಕೀಯ, ಧಾರ್ಮಿಕ ನೈತಿಕತೆಯನ್ನು ಪ್ರಶ್ನಿಸುವ ಹೊಸ ಆಲೋಚನೆಯ ಕಡೆಗೆ ತಿರುಗಿತು.

ಸಾಕ್ರೆಟೀಸ್ ಈ ರೀತಿ ಹೇಳುತ್ತಾನೆ. 'ನಿನ್ನನ್ನು ನೀನು ಅರಿತುಕೊ'; ಇದರ ಪ್ರತಿಯಾಗಿ ಪ್ಲೇಟೊ ಸಾಕ್ರೆಟೀಸ್‌ನ ಶಿಷ್ಯನಾದನು. ಆ ಕಾಲಕ್ಕೆ ಗ್ರೀಕ್‌ನಲ್ಲಿ ಸಂಧಿ ಕಾಲವಾಗಿತ್ತು.

ಅಥೆನ್ಸ್‌ನ ಜನರ ಚಾರಿತ್ರ್ಯ ಶಿಥಿಲಗೊಂಡಿತ್ತು. ದೇವತೆಯ ನಂಬಿಕೆಯ ಅಥೆನ್ಸ್ ಪ್ರಜಾ ತಂತ್ರವಾಗಿತ್ತು. ಹೀಗಾಗಿ ನಿರಕ್ಷರಿಗಳು, ಅಜ್ಞಾನಿಗಳು ಅಳ್ವಿಕೆಗೆ, ಬಾಯಬಡಕರು, ಕುತಂತ್ರಿಗಳ ವ್ಯವಸ್ಥೆಗೆ ಒಳಪಟ್ಟಿತ್ತು. ಪಳಗಿದ ಆಡಳಿತಗಾರರು, ಶೂರಸೇನ ಪಡೆಗಳನ್ನು ನ್ಯಾಯಾಲಯವು, ಮರಣದಂಡನೆಗೆ ಗುರಿಪಡಿಸಿತ್ತು. ಇದರ ಪ್ರತಿಯಾಗಿ ಈ ಕಾಲಘಟ್ಟದಲ್ಲಿ ಮೂಲಭೂತ ಪ್ರಶ್ನೆಗಳನ್ನೆತ್ತಿವೆ. ಅಥೆನ್ಸ್ ಪ್ರಜಾತಂತ್ರ ವ್ಯವಸ್ಥೆಯಲ್ಲಿ ಸಾಕ್ರಟೀಸ್ ವಿಚಾರಕ್ಕೆ ಹೆಚ್ಚು ಬೆಲೆ ಬಂತು. ಅಲ್ಲಿಯ ಅಧಿಕಾರಿಗಳಿಗೆ ಸಾಂಪ್ರದಾಯಸ್ಥರಿಂದ ಬರಬಹುದಾದ ಗಂಡಾಂತರಗಳನ್ನು ಮನಗಂಡು ಯುವ ಸಮುದಾಯವನ್ನೇ ಸಂಘಟಿಸುವುದರ ಮೂಲಕ ಹುಟ್ಟು ಹಾಕಿದರು. ನ್ಯಾಯದ ಹೆಸರಿನಲ್ಲಿ ಸಾಕ್ರಟೀಸ್‌ನ ಕೊಲೆ ಕಂಡು ಪ್ರಜಾತಂತ್ರದ ಬಗ್ಗೆ ಪ್ಲೇಟೊಗೆ ತಿರಸ್ಕಾರ ಬಂತು. ಹೀಗಾಗಿ ಪ್ರಜಾತಂತ್ರ ನಾಶವಾಗಬಾರದಾದರೆ ಶ್ರೇಷ್ಠ ಜ್ಞಾನಿಗಳು ರಾಜ್ಯಕ್ಕೆ ಬರಬೇಕು. ಆಗ ಮಾತ್ರ ನ್ಯಾಯಕ್ಕೆ ಜಯ ಸಿಗಲು ಸಾಧ್ಯ ಎಂದು ಹೇಳಿದನು.

**ಕ್ರಾಂತಿದೂತ ರೂಸೋ**

ಹಾವನೂರ ಅವರು ವಿಶ್ವ ಸಾಹಿತ್ಯವನ್ನು ಪ್ರತಿನಿಧಿಸುವ ಫ್ರೆಂಚ್ ತತ್ವಜ್ಞಾನಿ ರೂಸೋ ಕುರಿತು ಮಹತ್ವದ ಸಂಗತಿಯನ್ನು ವಿವರಿಸಿದ್ದಾರೆ. ಶಿಕ್ಷಣ, ರಾಜಕೀಯ ಕ್ಷೇತ್ರದಲ್ಲಿ ತನ್ನದೇಯಾದ ಕ್ರಾಂತಿಯನ್ನು ಹುಟ್ಟುಹಾಕಿದವನು. ರೂಸೋ ಬೋಲ್‌ಲೆರ್, ಸೇನಾಸ್ಕರ್, ರಿವಾಂಡ್ ಮೊದಲಾದವರು ಪ್ರಭಾವ ಬೀರಿದರು. ಹೀಗಾಗಿ ೧೬ನೇ ಲೂಯಿ ಫ್ರಾನ್ಸ್ ಹಾಳುಗೆಡವಿದನು ಎಂದು ರೊಸೋನ ದುರಂತ ಕ್ಷಣಗಳನ್ನು ನೆನಪಿಸಿಕೊಳ್ಳುತ್ತಾನೆ.

೧. ಹುಟ್ಟಿದ ೯ ದಿನಗಳಲ್ಲಿ ತನ್ನ ತಾಯಿಯನ್ನು ಕಳೆದುಕೊಳ್ಳುತ್ತಾನೆ.

೨. ಆತನ ತಂದೆ ಮುಂಗೋಪಿತನದಿಂದ ನೆರೆಯವರೊಡನೆ ಜಗಳವಾಡಿ ಆತನ ಸೋದರಮಾವನ ಕೈಯಲ್ಲಿ ಎರಡು ಮಕ್ಕಳನ್ನು ಕೊಟ್ಟು ಪಲಾಯನ ಮಾಡಿದನು.

ರೂಸೋ ತನ್ನ ೧೨ನೇ ವರ್ಷದಲ್ಲಿ ಧರ್ಮೋಪದೇಶಕ್ಕಾಗಿ ಲ್ಯಾಂಬರ್ಶಿಯನ್ ಎಂಬಲ್ಲಿಗೆ ತರಬೇತಿಗಾಗಿ ತೆರಳಿದನು. ಆದರೆ ಧರ್ಮೋಪದೇಶ, ನೋಟರಿ, ಕೆತ್ತನಿ ಈ ಮೂರಲ್ಲಿ ಆಸಕ್ತಿ ಇರಲಿಲ್ಲ. ಆತನ ಕಿರಿಯ ವಯಸ್ಸಿನಲ್ಲಿ ಅನುಭವಿಸಿದ ಅನಾಥತೆ, ಕ್ರೂರತನ, ಕ್ರೌರ್ಯ ಮತ್ತು ದಬ್ಬಾಳಿಕೆಯ ಪ್ರಭಾವಗಳ ಬಗ್ಗೆ ಬರವಣಿಗೆ ಮೂಲಕ ದ್ವೇಷವನ್ನು ಹೊರಹಾಕಿದನು. ಜೀನಿವಾದಿಂದ ಅಥೆನ್ಸ್‌ಗೆ ಹೋದಾಗ ಮದರ್ ವಾರನ್ಸ್ ಆಶ್ರಯವಿತ್ತಳು. ಅದೇ ಕಾಲಕ್ಕೆ ಗಂಡನನ್ನು ಬಿಟ್ಟು ಪ್ರೊಟಸ್ಟೆಂಟ್ ಪಂಥವನ್ನು ಸೇರಿದ್ದಳು. ಹೀಗಾಗಿ ರೂಸೋನ್ನ ಮತಾಂತರಗೊಳಿಸಿದಳು ಹಾಗೂ ಒಂಬತ್ತು ವರ್ಷ ವೈವಾಹಿಕ ಬದುಕು ನಡೆಸಿ ಅವಳೊಂದಿಗೆ ಕದನ ಮಾಡಿಕೊಂಡು ಪ್ಯಾರಿಸಿಗೆ ಹೋದನು. ಆಗ ಅವಳಿಗಿಂತ ೨೦ ವರ್ಷ ಕಿರಿಯಳಾದ ಮದಾಂ ಹುದೇಳಾನ್ನ ಪ್ರೇಮಿಸಿ, ಅವಳೊಂದಿಗೆ ವಿವಾಹವಾದರೂ ಕೌಟುಂಬಿಕ ಸಂಬಂಧಗಳು ಆಗಲೂ ಸರಿಯಾಗಿ ಇರಲಿಲ್ಲ.

ಜ್ಞಾನಕೋಶ ಸಂಪಾದಕರಾದ ಡೆನಿಸ್‌ಡಿಡರೋ ಸೆರೆಮನೆಯಲ್ಲಿ ಇರುವಾಗ ಅವರನ್ನು ರೂಸೋ ಕಾಣಲು ಹೋಗುತ್ತಾನೆ. ಆ ಸಂದರ್ಭದಲ್ಲಿ ಕಾಲ್ನನಡಿಗೆಯಲ್ಲಿ ಹೋಗುವಾಗ ಫ್ರಾನ್ಸ್‌ನಲ್ಲಿ ಮರ್ಕ್ಯುರ್ ಪತ್ರಿಕೆ ತೆಗೆದುಕೊಂಡು ಓದುತ್ತಾನೆ. ಡಿಜಾನ್ ವಿಶ್ವವಿದ್ಯಾಲಯದಲ್ಲಿ ವಿಜ್ಞಾನ ಮತ್ತು ಕಲೆಗಳಲ್ಲಿ ಪ್ರಗತಿಯಿಂದ ನೀತಿ ಕೆಟ್ಟಿತೋ? ಸುಧಾರಿಸಿತೋ? ಎಂಬ ಲೇಖನ ಸ್ಪರ್ಧೆಯನ್ನು ಆಯೋಜಿಸಿದ್ದರು. ಆ ಸ್ಪರ್ಧೆಯಲ್ಲಿ ಭಾಗವಹಿಸಿ ಪ್ರಥಮ ಸ್ಥಾನ ಪಡೆದ. ಮಾನವನ ಆಂತರಿಕ ಸಜ್ಜನಿಕೆ, ಮಾನವನ ಸಮಾನತೆ, ದಬ್ಬಾಳಿಕೆಯ ವಿರೋಧ ಆತನ ರಾಜಕೀಯ ತತ್ವದ ತಿರುಳುಗಳಾಗಿದ್ದವು. ವ್ಯಕ್ತಿ ಸ್ವಾತಂತ್ರ್ಯವನ್ನು ಬಲವಾಗಿ ವಿರೋಧಿಸಿದವರು. ಆತನ ಸಮಕಾಲೀನ ತತ್ವಜ್ಞಾನಿಗಳೊಡನೆ ತಿಕ್ಕಾಟಕ್ಕೆ ಕಾರಣವಾಗಿತ್ತು. ರೂಸೋ ವೈಯಕ್ತಿಕ ಚಾರಿತ್ರ್ಯ ಕಾಯ್ದುಕೊಂಡನು. ಹಣ, ಅಧಿಕಾರದ ಮೋಹವಿರಲಿಲ್ಲ. ರಾಜಕೀಯ ಶಿಕ್ಷಣಕ್ಕೆ ಹೊಸ ಸ್ವರೂಪ ಕೊಟ್ಟನು.

**'ಸಂಗೀತದ ಮೊಜಾಟ್'**

ಸಂಗೀತ ಕ್ಷೇತ್ರದ ಶ್ರೇಷ್ಠ ಸಾಧಕರಾದ ಮೊಜಾರ್ಟ್‌ರ ಸಾಧನೆ ಇಲ್ಲಿ ನಿರೂಪಿತಗೊಂಡಿದೆ. ಆತಂಕ, ಅವನತಿ ಒಲವುಗಳನ್ನು ಗುರುತಿಸಿ ಓದುಗನಿಗೆ ಸಾಧನೆಯ ಹಿಂದೆ ಆ ವ್ಯಕ್ತಿಯ ಪರಿಶ್ರಮವನ್ನು ಪರಿಚಯಿಸುತ್ತದೆ. ಕಲಾವಿದನ ಆರಾಧಕ ಗುಣಗಳು, ಆತನ ವ್ಯಕ್ತಿಗತ ಬದುಕು, ಕಷ್ಟ ಕಾರ್ಪಣ್ಯ, ವೃತ್ತಿಯನ್ನು ಗೌರವಿಸುವುದು. ಈ ರೀತಿಯ ವ್ಯಕ್ತಿಗತ ನೆಲೆಯಲ್ಲಿ ಸಂಪಾದನೆಯ ಮಾಡುವುದರೊಂದಿಗೆ ಸಮಾಜಕ್ಕೆ ಹಾವನೂರ ಅವರು ಸಂದೇಶ ಕೊಟ್ಟರು. ಮೊಜಾಟ್ ಪ್ರತಿಭಾವಂತ ಎನ್ನುವುದರಲ್ಲಿ ಎರಡು ಮಾತಿಲ್ಲ. ಅಂದರೆ ಕಲಿಕೆಯ ಆಸಕ್ತಿ ಸಾಧನೆಗೆ ದಾರಿಯಾಯಿತು. ಹೀಗಾಗಿ ಆತನ ೩ನೇ ವಯಸ್ಸಿನಲ್ಲಿ ಹಾರ್ಪಿಕೊರ್ಡ್ ವಾದ್ಯ ಅಲ್ಲದೆ ೪ನೆಯ ವಯಸ್ಸಿನಲ್ಲಿ ಕೃತಿಗಾಗಿ ನೃತ್ಯಕ್ಕೆ ಸಂಗೀತ ರಚಿಸುತ್ತಿದ್ದ ನುಡಿಸಿದ ೫ನೇ ವಯಸ್ಸಿನಲ್ಲಿ ಪಿಟಿಲಿನ ಬಗ್ಗೆ ಕನಿಷ್ಠ ತಿಳುವಳಿಕೆ ಇಲ್ಲದಿದ್ದಗ್ಯೂ ಅದನ್ನು ಚೆನ್ನಾಗಿ ನುಡಿಸಿದನು. ಹಾಗೆಯೇ ಯುರೋಪಿನ ಅರಮನೆಯಲ್ಲಿ ಸಂಗೀತ ಕಾರ್ಯವನ್ನು ನಡೆಸಿ ಕೊಟ್ಟದನ್ನು ಗಮನಿಸಿದ ವಿಯೆನ್ನಾದಲ್ಲಿ ಆಸ್ಟ್ರೀಯ ಚಕ್ರವರ್ತಿ ಕೇಳಿ ಶ್ಲಾಘಿಸಿದನು. ಅಲ್ಲದೆ ಪೋಪ್‌ನಿಂದ ಗೊಲ್ಡನ್ ಸ್ಪಾರ್ ಪದವಿ ನೀಡಿದರು.

ಆತನ ತಂದೆಯು ಗುರುವಾಗಿ ಮಾರ್ಗದರ್ಶನ ಮಾಡುತ್ತಿದ್ದ. ಹೀಗಾಗಿ ಆತನ ೧೫ನೇ ವಯಸ್ಸಿನಲ್ಲಿ ೯ ಸಿಂಫನೀ, ೯ ಒಪೇರಗಳನ್ನು ರಚಿಸಿದನು. ಹಿನ್ನೆಲೆ ಇರುವ ಕಾರಣ ಶ್ರೇಷ್ಠ ಬರಹಗಾರರ ಸಾಲಿನಲ್ಲಿ ಮೊಜಾಟ್ ಬರುತ್ತಾರೆ. ಪಾಲ್ಸ್‌ಬರ್ಗ್ ಆರ್ಚ್ ಬುಶಫ್ ತೀರಿಕೊಂಡ ನಂತರ ಬಂದ ಪಾದ್ರಿ ಸಂಗೀತದ ಶತ್ರುವಾಗಿದ್ದ ಅರಮನೆಯ ಸಂಗೀತಗಾರರಿಗೆ ಮತ್ತು ಕಲಾವಿದರಿಗೆ ಹೆಚ್ಚು ಪ್ರಾಮುಖ್ಯತೆ ಕೊಡುತ್ತಿರಲಿಲ್ಲ. ಹೀಗಾಗಿ ಮೊಜಾರ್ಟ್ ಹೆಚ್ಚು ಸ್ಥಾನಮಾನಗಳು ಇಲ್ಲದ ಕಾರಣ ಶ್ರೀಮಂತರು ಗೌರವಿಸುತ್ತಿರಲಿಲ್ಲ.

ಈ ಮೊದಲು ಗೌರವಿಸುವ ಜನರು ಈಗ ಜನರ ಗೌರವಿಸುವುದಿಲ್ಲವೆಂದರೆ ಆಡಳಿತಾತ್ಮಕವಾಗಿ ಪ್ರಾಮುಖ್ಯತೆ ಇಲ್ಲವೆಂದು ತಿಳಿದು ಗೌರವಿಸುವುದಿಲ್ಲ. ಹೀಗಾಗಿ ಆಸ್ಟ್ರೀಯಾ ಚಕ್ರವರ್ತಿ ಮತ್ತು ಪ್ರಾನ್ಸ್ ಕೂಡ ಆತನನ್ನು ಗೌರವಿಸಲಿಲ್ಲ. ಅಂದರೆ ಒಂದು ಕಾಲಕ್ಕೆ ಜಗತ್ತು ಗೆದ್ದ ವ್ಯಕ್ತಿ ಮತ್ತೊಂದು ಕಾಲಕ್ಕೆ ಕನಿಷ್ಠ ಬದುಕಿಗೂ ಅವಕಾಶ ಕಲ್ಪಿಸಲಿಲ್ಲ. ಎಲ್ಲವನ್ನು ಕಾಲವೇ ನಿರ್ಧರಿಸುತ್ತದೆ ಎಂಬುದನ್ನು ಪ್ರಸ್ತುತ ಲೇಖನ ದೃಢಪಡಿಸುತ್ತದೆ.

**ಹ್ಯಾನ್ ಅಂಡರ್‌ಸನ್ ಮಕ್ಕಳ ಕಥೆಗಳ ರಾಜ**

ಪಾಶ್ಚಿಮಾತ್ಯ ಕಥಾ ಸಾಹಿತ್ಯಲೋಕದ ಜನರ ಬದುಕಿನ ವಿಕಾಸ ಚರಿತ್ರೆ ಹಾಗೆಯೇ ಕಥಾ ಸಾಹಿತ್ಯ ಲೋಕದ ಸಾಧನೆ ಪ್ರತಿಯಾಗಿ ಆತನಿಗೆ ಹುಟ್ಟೂರಿನಲ್ಲಿ ದೀಪೋತ್ಸವವನ್ನು ಮಾಡಿದರು. ಆತನು ಹಳ್ಳಿಯ ಬಡ ಕುಟುಂಬದಿಂದ ಬಂದವನು. ಅಲ್ಲದೆ ಯಕ್ಷಣಿ ಕಥೆಗಳು ಹೆಚ್ಚು ಪರಿಚಿತವಾಗಿದ್ದವು. ಯದನ ಯಾಮಿನೀ ಕಥೆಯನ್ನು ರಾತ್ರಿ ಓದುತ್ತಿದ್ದಾಗ ನಿದ್ರೆ ಬಂದವರಂತೆ ನಟಿಸಿ ಆ ಕಥೆಗಳನ್ನು ಚೆನ್ನಾಗಿ ಕೇಳಿಕೊಳ್ಳುತ್ತಿದ್ದನು. ಹಾಗೆಯೇ ಶೇಕ್ಸ್‌ಪಿಯರ್ ನಾಟಕವನ್ನು ಓದಿ ಮಹಾಕವಿಯಾಗಬೇಕೆಂಬ ಹಂಬಲಿಕೆಯಾಗಿತ್ತು. ಅಲ್ಲದೆ ತಂದೆ ತೀರಿದ ನಂತರ ಮಲತಂದೆಯ ದುರ್ವನೆಯಿಂದ ಬೇಸರಗೊಂಡು ಮನೆಬಿಟ್ಟು ಹೊರಟನು. ನಂತರ ನಾಟಕ ಬರೆದು ವಿಮರ್ಶಕರ ಬಳಿ ತೋರಿಸಿದಾಗ ಅದನ್ನು ನೋಡಿ ಅಪಹಾಸ್ಯ ಮಾಡಿದರು. ಹೀಗಾಗಿ ನಟನಾಗಬೇಕೆಂಬ ಬಯಕೆಯನ್ನು ಬಿಟ್ಟನು. ಆತನಿಗೆ ಈ ರೀತಿ ಸಲಹೆ ಕೊಟ್ಟರು. 'ನಿನ್ನ ಕುಟುಂಬದ ಬಡಿಗೆ ಕೆಲಸ ಮುಂದುವರಿಸುವುದು ಬಹಳ ಒಳ್ಳೆಯದು'.

ಹ್ಯಾಡ್ಸ್‌ನು ತನ್ನ ಮನದ ಆತಂಕವನ್ನು ಸಂಗೀತ ಪ್ರೊಫೆಸರ್ ಸಿಭೋಗಿ ಬಳಿ ಹೇಳಿಕೊಂಡರು. ಈ ಓನ್ನೆಲೆಯಲ್ಲಿ ಸಂಗೀತ ಹೆಚ್ಚು ಕಲಿಕೆಯಾಗಿ ನಿಧಿ ಸಂಗ್ರಹಿಸಿದರು. ಅದೇ ಅವಧಿಯೊಳಗೆ ಗಂಟಲು ಕಾಯಿಲೆ ಬಂತು. ಆ ಕಾಯಿಲೆ ವಾಸಿಯಾಗುವುದರೊಳಗೆ ಧ್ವನಿ ಕಳೆದುಹೋಗಿತ್ತು. ಹೀಗಾಗಿ ನಟನಾಗುವ ಬದಲು ನಾಟಕಕಾರನಾದನು. ಹೀಗಾಗಿ ಕವಿತೆ ಬರೆಯಲು ಪ್ರಾರಂಭಿಸಿದ. ಅವು ಕೂಡ ಹೆಚ್ಚು ಪ್ರಗತಿ ಕಾಣಲಿಲ್ಲ. ಆದರೆ ಆತನ ಸ್ನೇಹಿತರು, ಹೆಂಡತಿ ಆತನನ್ನು ಕವಿಗಳೆಂದು ಸಂಭೋದಿಸಿದ್ದನ್ನು ಕೇಳಿ ಕಣ್ಣೀರು ಹಾಕಿದನು. ಆತನು ನಾಟಕವನ್ನು ರಾಯಲ್ ಥಿಯೇಟರ್‌ನವರೆಗೆ ಕಳುಹಿಸಿದ್ದನು. ಆದರೆ ಸ್ವೀಕರಿಸುವ ಬದಲು ತಿರಸ್ಕರಿಸಿದ ಹಾಗೆ ಅದನ್ನು ಮತ್ತೆ ಕೆಲವು ಬಿಟ್ಟು ಕಳುಸಿದನು. ಆದರೆ 'ಆಲ್‌ಸೂಲ್' ಎಂಬ ನಾಟಕ ಪತ್ರಿಕೆ ಪ್ರಕಟವಾಯಿತು. ನಂತರ ಪ್ರೀವಿ ಕೌನ್ಸಿಲ್ ಸದಸ್ಯರಾದ ರಾಯಲ್ ಥಿಯೇಟರಿನಲ್ಲಿ ಡೈರಕ್ಟರಾದ ಬೋನಿಸ್ ಕಾಲೀಸ್‌ನನ್ನು ಭೇಟಿಯಾದ ಅಂಡರ್‌ಸನ್ ಪ್ರತಿ ಕಂಡು ಕಾಲಿಸ್ ಈತನಿಗೆ ಆಶ್ರಯ ನೀಡಿದನು. ಕಾಲೀಸ್ ಅವನಿಗಾಗಿ ಶಿಕ್ಷಣ ನಿಧಿ ಸ್ಥಾಪಿಸಿದರು. ಸೈಮನ್ ಮೈನಿಂಗ್ ಶಾಲೆಗೆ ಸೇರಿದ. ಪ್ರಾಯಕ್ಕೆ ಬಂದರು. ೩ ಮಕ್ಕಳೊಡನೆ

ವಿದ್ಯಾಭ್ಯಾಸ ಮಾಡಿದನು. ಆ ಶಾಲೆಯಲ್ಲಿ ಮಕ್ಕಳು ಅಪಹಾಸ್ಯ ಮಾಡಿದರು. ಬೀಜಗಣಿತ, ಜಾಮಿಟ್ರಿ, ಗ್ರೀಕ್, ಹಿಬ್ರು ಭಾಷೆಯಲ್ಲಿ ಇದ್ದುದರಿಂದ ಅವು ಬೇಗ ಅರ್ಥವಾಗುತ್ತಿರಲಿಲ್ಲ. ಆಗ ಮಕ್ಕಳು ತಮಾಷೆ ಮಾಡುತ್ತಿದ್ದರು. ಆದರೂ ಶಿಕ್ಷಣ ಮುಂದುವರಿಸಿದರು. ಆದರೆ ಮಕ್ಕಳಿಗೆ ಬಕಪಕ್ಷಿ, ಮರಗಿಡ, ದೈವಗಳು ಸೈನಿಕರು ಈ ತೆರನಾದ ಕಥೆಗಳನ್ನು ಮಕ್ಕಳಿಗೆ ಹಿಡಿಸುವ ರೀತಿಯಲ್ಲಿ ಪರಿಚಯಿಸಿದರು.

**ಉಡಾಳ ಹುಡುಗ ಶ್ರೇಷ್ಠ ಸಾಹಿತಿಯಾದ**

ಅಮೇರಿಕ ಪರಿಸರದ ಬಾಲನ ಬದುಕಿನ ಚಿತ್ರಣ ಹಾಗು ಮಿಸೂರಿಯ ರಾಜ್ಯದ ಪೋರ್ಲ್ಲಿಡ್ ನಗರದ ಜಾನ್ ಮಾರ್ಶಲ್ ಎಂಬ ವ್ಯಾಪಾರಸ್ಥನ ಮಗನ ಕಥೆ. ಇದರ ವಸ್ತು ಬಾಲಕ ಕಪಿಚೇಷ್ಟೆ ಮತ್ತು ಕಿಡಿಗೇಡಿತನ ಸ್ವರೂಪ ಚಿತ್ರಣ. ಮಿಸಿಸಿಪಿಯ ನದಿಯ ದಂಡೆಯ ಮೇಲೆ ಕುಳಿತು ಹಡುಗುಗಳ ದಿಟ್ಟಿಸುತ್ತ ನೋಡಿದ. ಆತನ ಕಪಿ ಸ್ವಭಾವ ನದಿಗೆ ದುಮಿಕಿ ಸತ್ತು ಬದುಕಿ ಬಂದ ಬಾಲನ ಚಿತ್ರಣ ಅನಾವರಣಗೊಂಡಿದೆ. ೧೨ ವರ್ಷದಲ್ಲಿ ತಂದೆಯನ್ನು ಕಳೆದುಕೊಂಡು, ನಂತರ ತನ್ನ ತಪ್ಪುಗಳ ತಾನೇ ತಿದ್ದಿಕೊಳ್ಳುವ ಸ್ವರೂಪ. ಈತನನ್ನು ಶಾಲೆ ಕಳುಹಿಸುವಷ್ಟು ಶಕ್ತಿ ತಾಯಿಗೆ ಇರಲಿಲ್ಲ. ಹಾಗೆಯೇ ಆತನಿಗೆ ಶಾಲೆಗೆ ಹೋಗಲು ಇಷ್ಟವಿರಲಿಲ್ಲ. ಹೀಗಾಗಿ ಮುದ್ರಣ ಕೆಲಸಕ್ಕೆ ತಾಯಿ ಕಳುಸಿದಳು. ಇದರಿಂದ ಊಟ ಮತ್ತು ವಸತಿ ಮಾತ್ರ ಸಾಕಾಗುತ್ತಿತ್ತು. ಆದರೆ ಸಂಬಳವಿರುತ್ತಿರಲಿಲ್ಲ. ಕ್ಲೆಮನಿಗೆ ೧೪ನೇ ವಯಸ್ಸಿನಲ್ಲಿ ಫ್ರೆಂಚ್ ಹುತಾತ್ಮಳಾದ ಜೋನ್ಸ್ ಆಫ್ ಆರ್ಕ್‌ಳ್' ರೋಮನ್ ಕೋಟೆಯಲ್ಲಿ ಬಂಧಿಯಾಗಿ ಅತ್ಯಾಚಾರ ಕಥೆ ಓದಿ ಅವಳ ಚರಿತ್ರೆ ಬರೆಯುವಷ್ಟು ಹುಚ್ಚು. ಆತನ ಸಹೋದರ ಓರಿಯಸ್ ಮುದ್ರಣ ಮತ್ತು ಪತ್ರಿಕೆ ನಡೆಸುತ್ತಿದ್ದನು. ಅಲ್ಲಿ ಸಹಾಯಕನಾಗಿ ಕೆಲಸ ಮಾಡುತ್ತಿದ್ದನು. ಈತನು ಕೂಡ ಹಾಸ್ಯವನ್ನು ಚೆನ್ನಾಗಿ ಮೈಗೂಡಿಸಿಕೊಂಡಿದ್ದನು. ನಂತರ ದಿನಗಳಲ್ಲಿ ಸಹೋದರನ ಮುದ್ರಣಾಲಯ ದಿವಾಳಿಯ ಹಂತ ತಲುಪಿತು. ಈ ಪರಿಣಾಮವಾಗಿ ಮುದ್ರಣ ಕೆಲಸಕ್ಕಾಗಿ ಊರು ಅಲೆಯುವಂತಾಯಿತು. ಆಗ ಪತ್ರಿಕೆಗೆ ಲೇಖನ ಬರೆಯುತ್ತಿದ್ದನು. ಹೀಗಾಗಿ ಬದುಕು ಬಡತನದಲ್ಲಿ ಕಳೆಯುವಂತಾಯಿತು. ನಂತರ ಆತನ ತಲೆಯಲ್ಲಿ ಹಣ ಮಾಡುವ ಆಲೋಚನೆ ಬಂತು. ಅಮೇರಿಕಾದ ಅಮೇಜಾನ್ ನದಿಯ ತೀರದಲ್ಲಿ ಹಕ್ಕಿಗಳ ಕೊಕ್ಕೊ ಸಂಗ್ರಹವಿದೆ. ಅವುಗಳನ್ನು ತೆಗೆದುಕೊಂಡರೆ ಲಕ್ಷಾಂತರ ಹಣ ಗಳಿಸಬಹುದು. ಆಕಸ್ಮಿಕವಾಗಿ ದಾರಿಯಲ್ಲಿ ನಡೆಯುವಾಗ ಹತ್ತು ಪೌಂಡು ಸಿಕ್ಕಿದ್ದೇ ತಡ ಅಮೇಜಾನ್ ನದಿಗೆ ಹೊರಟ. ಆದರೆ ಹಣ ಮಧ್ಯದ ದಾರಿಯಲ್ಲಿ ಮುಗಿಯಿತು. ಹೀಗಾಗಿ ಬಂದ ದಾರಿಗೆ ಸುಂಕವಿಲ್ಲವೆನ್ನುವಂತೆ ಹಿಂತಿರುಗಿದನು.

ಆತನ ತಲೆಯಲ್ಲಿ ಹೊಸ ಹೊಸ ಯೋಚನೆಗಳು ಬಂದವು. ಆದರೆ ವ್ಯವಹಾರಿಕ ಜ್ಞಾನವಿರಲಿಲ್ಲ. ಉಗಿಯಂತ್ರ ತಯಾರಿಸುವ ಕಂಪನಿ ಮಾಡತೊಡಗಿಸಿದನು. ಅದು

ದಿವಾಳಿಯಾಯಿತು. ನಂತರ ಗಡಿಯಾರ ಕಂಪನಿಗೆ ಶೇರು ಬಂಡವಾಳ ಹಾಕುತ್ತಾನೆ. ಅದು ಕೂಡ ಅಸ್ತಿತ್ವ ಕಳೆದುಕೊಳ್ಳುತ್ತದೆ. ನಂತರ ಪ್ರಕಾಶನ ಸಂಸ್ಥೆ ಪ್ರಾರಂಭಿಸುತ್ತಾನೆ. ಆಗ ಪುಸ್ತಕ ಪ್ರಕಟಿಸಿ ಲಕ್ಷಾಂತರ ಹಣ ಗಳಿಸುತ್ತಾನೆ. ಕ್ಲೆಮನು ಮಾಡುವ ವ್ಯವಹಾರ ಯಶಸ್ಸು ಪಡೆಯಲಿಲ್ಲ. ಹಡಗು ಕಂಪನಿಯಲ್ಲಿ ನೌಕರಿ ಹಿಡಿದು ಅಲ್ಲಿಯ ತಂತ್ರಗಳನ್ನು ತಿಳಿದುಕೊಂಡು ಮಿಸಿಸಿಪಿ ನದಿಯ ದಂಡೆಯ ಮೇಲೆ ಆದ ಅನುಭವಗಳನ್ನು ಪಾತ್ರ ಸೃಷ್ಟಿಸಿದೆ. ಅವುಗಳಿಗೆ ಜೀವಂತಿಕೆ ತುಂಬುತ್ತಾನೆ. ಈ ರೀತಿಯ ವ್ಯಕ್ತಿಗತ ಚರಿತ್ರೆಯ ಚಿತ್ರಣವನ್ನು ಹಾವನೂರ ಪರಿಚಯಿಸಿದ್ದಾರೆ. ಎಂತಹ ಸಮಸ್ಯೆ ಬಂದರೂ ಅವನ್ನು ಮೆಟ್ಟಿ ನಿಲ್ಲುವ ಮನೋಸ್ಥಿತಿ ಪ್ರಸ್ತಾಪಗೊಂಡಿದೆ. ಹೀಗಾಗಿ ಓದುಗನಲ್ಲಿ ಹೊಸ ಅಲೋಚನೆಗಳು ಬರುವಂಥ ಪ್ರೇರಣೆ ನೀಡುತ್ತವೆ.

**'ಅನುವಾದ ಸಾಹಿತ್ಯ'**

ಅನುವಾದ ಸಾಹಿತ್ಯದಿಂದ ಭಾಷೆಯ ಪ್ರಗತಿ ಕಾಣುತ್ತದೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಕನ್ನಡ ಪ್ರಥಮ ಗ್ರಂಥ 'ಕವಿರಾಜಮಾರ್ಗ' ದಂಡಿಯ ಕಾವ್ಯದರ್ಶಿ ಬಾಣನ ಗದ್ಯ ಕೃತಿಯಿಂದ ಸಂಸ್ಕೃತ ಕವಿ. ಭಾಷಾಂತರ ಮಾಡಿಕೊಂಡನೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಚಂಪೂ ಕೃತಿಯಾಗಿದೆ. ಕನ್ನಡ ಭಾಷೆಗೆ ಅನುವಾದಿಸಿದ್ದು ಮೌಲ್ಯಯುತ ಕೃತಿಗೆ ನಿದರ್ಶನವಾಗಿದೆ. ಆದರೆ ಕನ್ನಡದಲ್ಲಿ ಅನುವಾದ ಸಾಹಿತ್ಯ ಅಷ್ಟೊಂದು ಮಹತ್ವ ಪಡೆದುಕೊಳ್ಳಲಿಲ್ಲ. ಇತರ ಭಾಷೆಗಳಿಂದ ಕನ್ನಡಕ್ಕೆ ಅನೇಕ ಕೃತಿಗಳು ಅನುವಾದಗೊಂಡವು.

ಸೃಜನಾತ್ಮಕ ಕೃತಿಗಳಿಗಿಂತ ವಿಜ್ಞಾನ-ತಂತ್ರಜ್ಞಾನ ಕೃತಿಗಳು ಹೆಚ್ಚು ಹೆಚ್ಚು ಅನುವಾದಗೊಂಡವು. ಆ ಕ್ಷೇತ್ರದ ಜ್ಞಾನವರ್ಧನೆಗೆ ಅನುವಾದ ಅವಶ್ಯವಾಗಿದೆ. ಆದರೆ ವಿಜ್ಞಾನ ಮತ್ತು ತಂತ್ರಜ್ಞಾನದ ವಿಷಯಗಳ ಸಮಂಜಸ ಸಮಾನ ಪದಗಳ ಹೊಂದಿಕೆ ಇರದಿರುವುದು ಅನುವಾದ ಕಾರ್ಯಕ್ಕೆ ಹಿನ್ನಡೆ ಉಂಟಾಗುತ್ತದೆ. ಬೇರೆ ಬೇರೆ ಭಾಷೆಯ ಸೃಜನಾತ್ಮಕ ಕೃತಿಗಳು ಕನ್ನಡದಲ್ಲಿ ಅನುವಾದಗೊಂಡರೆ ಕನ್ನಡ ಸಾರಸ್ವತ ಲೋಕ ಶ್ರೀಮಂತವಾಗುವುದರಲ್ಲಿ ಸಂದೇಹವಿಲ್ಲ. ಆಧುನಿಕ ಕನ್ನಡ ಕಾದಂಬರಿ ಯುಗ ಪ್ರಾರಂಭವಾದ ಬಂಗಾಳಿ, ಮರಾಠಿ ಭಾಷೆಯ ಕಾದಂಬರಿಗಳು ಕನ್ನಡದಲ್ಲಿ ಹೆಚ್ಚು ಪ್ರಮಾಣದಲ್ಲಿ ಅನುವಾದಗೊಂಡವು. ನಮ್ಮ ಕಣ್ಣ ಮುಂದಿನ ಕನ್ನಡದ ಹಲವಾರು ಕೃತಿಗಳು ಬೇರೆ ಬೇರೆ ಭಾಷೆಗಳಿವೆ ಅನುವಾದಗೊಂಡಿವೆ.

ಹಾವನೂರ ಅವರ ಕನ್ನಡ ಸಾಹಿತ್ಯದ ಮಹತ್ವ ಭಾಷೆ, ಸಾಹಿತ್ಯ ಸಂಸ್ಕೃತಿ ಹೀಗೆ ವಿವಿಧ ವಿಷಯಗಳನ್ನು ಇತರ ನಾಡಿನ ಜನರಿಗೆ ಮತ್ತು ಸ್ಥಳೀಯ ಇತರ ಭಾಷೆಗಳಿಗೆ ತಿಳಿಸುವ ಉದ್ದೇಶದಿಂದ ಅನುವಾದ ಸಾಹಿತ್ಯಕ್ಕೆ ತಮ್ಮನ್ನು ತೊಡಗಿಸಿಕೊಂಡರು. ಇನ್ನೊಂದು ಮಹತ್ವದ ಸಂಗತಿಯೆಂದರೆ ಆಡಳಿತಾತ್ಮಕ ಸಂಸ್ಥಾನ, ದೇವಾಲಯ ಗ್ರಂಥ ಭಂಡಾರ

ಮತ್ತು ಸಾಧನೆ ಮಾಡಿದ ವ್ಯಕ್ತಿಗಳ ವ್ಯಕ್ತಿತ್ವದ ಪ್ರತಿಭೆಯ ಚಿತ್ರಣ ನಿರೂಪಿತಗೊಂಡಿದೆ. ಇಂಗ್ಲಿಷ್ ಬಿಡಿ ಲೇಖನಗಳ ವಿಶೇಷವಾದ ವಿಷಯ ಮತ್ತು ಹಲವು ಕ್ಷೇತ್ರಗಳ ಸಾಧನೆ ಮಾಡಿದ ವ್ಯಕ್ತಿಗಳ ಚಾರಿತ್ರಿಕ ಹಿನ್ನೆಲೆಯನ್ನು ಪರಿಚಯಿಸಿದ್ದಾರೆ. ಅಣುಶಾಸ್ತ್ರದ ಪ್ರಸಿದ್ಧ ವಿಜ್ಞಾನಿಯ ಜೀವನ ಚರಿತ್ರೆ, ಭಾರತ 'ಕಾಲಮಾನ ವರ್ಷ ಋತು' ಕನ್ನಡ ಕಾವ್ಯದ ಪ್ರಾಮುಖ್ಯತೆ ಗ್ರಂಥಪಾಲಕರಾದ ಹೊನ್ನಾವರ ಅವರು ವಿಜಾಪುರ ಆದಿಲ್ ಶಾಹಿಯ ಗ್ರಂಥ ಭಂಡಾರದ ಪರ್ಷಿಯನ್ ಮತ್ತು ಉರ್ದು ಭಾಷೆಯ ಕೃತಿಗಳು ಮಹತ್ವ ಕುರಿತು ಚರ್ಚೆ ಪ್ರಸ್ತಾಪಗೊಂಡಿದೆ.

ಬಾಸೆಲ್ ಮಿಶನಿನ್ ಮೂರು ಪ್ರಬಂಧಗಳ ಮತ್ತು ಮೊಗ್ಲಿಂಗ್‌ರವರಿಗೆ ಇರುವ ಕನ್ನಡ ನಾಡು ಮತ್ತು ಭಾಷೆ ಅಭಿಮಾನವನ್ನು ತಮ್ಮ ಕೃತಿಯಲ್ಲಿ ಅಭಿವ್ಯಕ್ತಪಡಿಸಿದ ರೀತಿಯನ್ನು ಕನ್ನಡ ನಾಡಿನ ಜನರಿಗೆ ಶ್ರೀನಿವಾಸ ಹಾವನೂರ ಅವರು ಗಮನಿಸುವಂತೆ ಮಾಡಿದರು. ಮಿಶನರಿಗಳ ಕ್ರಿಯಾಶೀಲತೆಯನ್ನು ಪರಿಚಯಿಸಿದರು. ಅಲ್ಲೇ ಕಿಟೆಲ್‌ರವರ 'ಡ್ರಾವಿಡಿಯನ್ ಅಧ್ಯಯನ' ಮಹತ್ವದ ಲೇಖನ ಅವರನ್ನು ಜನಪ್ರಿಯಗೊಳಿಸಿತು. ಅಲ್ಲದೆ ಕಾಲ್ಡ್‌ವೆಲ್‌ರವರು ಕಿಟೆಲ್ ಕುರಿತು ಬಹು ಚಾಣಕ್ಷರೆಂದು ಹೇಳಿದರು. ಪ್ರಕೃತಿಯ ಸ್ವಯಂ ಮುದ್ರಣ(Netures self priniting) ಈ ವಿಷಯ ಕುರಿತು ಲೇಖನ ಪರಿಚಯಿಸಿದರು. ಹಾವನೂರ ಸ್ಟೂಟ್ ಗೂರ್ಟ್‌ನಲ್ಲಿ ಕಿಟೆಲ್‌ರವರ ಕುರಿತು ಅಂತಾರಾಷ್ಟ್ರೀಯ ವಿಷಯ ಮಂಡಿಸಿದ್ದಾರೆ.

**'ಭೂಮಿ ಮತ್ತು ಆಕಾಶದ ಸಂಬಂಧ'**

'ವರ್ಷಋತು' ಲೇಖನದಲ್ಲಿ ಪಾಶ್ಚಿಮಾತ್ಯ ಮತ್ತು ಭಾರತೀಯರ ಕಾಲಮಾನಕ್ಕೆ ಸಂಬಂಧಿಸಿದ ವಿಷಯ ನಿರೂಪಿತಗೊಂಡಿದೆ. ಪಾಶ್ಚಿಮಾತ್ಯರ ಪ್ರಕಾರ ನಾಲ್ಕು ಎಂದು ಭಾರತೀಯರ ಪ್ರಕಾರ ಆರು ಎಂದು ವಿಭಾಗಿಸಲಾಗಿದೆ. ಪಾಶ್ಚಿಮಾತ್ಯ ಪ್ರಕಾರ–

೧. ವಸಂತ ಕಾಲ

೨. ಬೇಸಿಗೆ ಕಾಲ

೩. ಮಳೆಗಾಲ

೪. ಚಳಿಗಾಲ

ಈ ರೀತಿ ವಿಭಾಗಿಸಲಾಗಿದೆ.

ಹಿಂದೂ ಪ್ರಕಾರ,

೧. ಚೈತ್ರ ಮತ್ತು ವೈಶಾಖ=ವಸಂತ ಋತು

೨. ಜೇಷ್ಠ+ಆಷಾಡ=ಗ್ರಿಷ್ಮ ಋತು

೩. ಶ್ರಾವಣ+ಬಾದ್ರಪದ=ವರ್ಷಋತು.

ಎರಡು ಮಾಸಗಳು ಸೇರಿ ಒಂದು ಋತುವಾಗುತ್ತದೆ. ಈ ರೀತಿಯಲ್ಲಿ ಕಾಲಮಾನವನ್ನು ವರ್ಗೀಕರಿಸಲಾಗಿದೆ. ಅಲ್ಲದೆ ಮಳೆಗಾಲದ ದೃಶ್ಯವರ್ಣನೆ ಪ್ರಸ್ತಾಪಗೊಂಡಿದೆ. ಕೃಷಿ ಭೂಮಿಯ ಬಿತ್ತನೆ, ಬೆಳೆ, ಕಟಾವು ಈ ಸಂಗತಿಗಳು ಅನಾವರಣಗೊಂಡಿವೆ. ಮನುಷ್ಯನ ಬದುಕಿನ ಏಳು-ಬೀಳುಗಳನ್ನು ಪರಿಚಿತಗೊಂಡಿದೆ. ಅಲ್ಲದೆ ಆರು ಋತುಗಳ ಜೊತೆಗೆ ಋತುಗಳ ರಾಜನೆಂದು ಕರೆಯುವ ವಸಂತ ಋತುವಿನ ಕುರಿತು ಪ್ರಸ್ತಾಪಗೊಂಡಿದೆ. ಅಲ್ಲದೆ ಕಾಳಿದಾಸನ ಋತು ಸಂಹಾರ ಕುರಿತು ಕಾವ್ಯಗಳು ಮತ್ತು ಪ್ರೇಮ ಸಂಬಂಧಿಸಿದ ಚಿತ್ರಣ ಇದರ ಜೊತೆ ಸಿಡಿಲು, ಕಾಮನಬಿಲ್ಲು ವರ್ಣನೆಗಳು ಅನಾವರಣಗೊಂಡಿವೆ.

ವರ್ಷಋತು, ಶ್ರಾವಣ ಮಾಸ ಕುರಿತು ಕನ್ನಡ ಕವಿಗಳು ಬೇಂದ್ರೆ, ಸಿದ್ದಯ್ಯ ಪುರಾಣಿಕ, ಎಸ್.ಆರ್.ಎಕ್ಕುಂಡಿ, ಅರವಿಂದ ನಾಡಕರ್ಣಿ, ಎಚ್.ಎಸ್.ವೆಂಕಟೇಶಮೂರ್ತಿ ಮತ್ತು ಇತರರು ಅಲ್ಲದೆ ಮಳೆಯ ಭೂತಾಯಿ ಮಡಿಲ ಹಚ್ಚಹಸಿರು ದೃಶ್ಯಗಳನ್ನು ವರ್ಣನೆ ಮಾಡಿರುವ ವಿಷಯ ನಿರೂಪಿತಗೊಂಡಿದೆ. ಹಿಂದೂಗಳ ಕಾಲ ಮತ್ತು ಹಬ್ಬ ನಡುವೆ ಅವಿನಾಭಾವ ಸಂಬಂಧವಿದೆ. ಹಾಗೆಯೇ ಜಾತಿ ಮತ್ತು ಧರ್ಮ ಆಧರಿಸಿ ಮನುಷ್ಯನ ಒಳಿತಿಗಾಗಿ ಆಚರಣೆ ಮಾಡುತ್ತಾರೆ. ಹಿಂದೂಗಳು ಆಚರಿಸುವ ಹಬ್ಬಗಳು ಎರಡು ರೀತಿಯಾಗಿವೆ. ೧. ಕಾಲಮಾನ, ೨. ದೇವರ ಹೆಸರಿನಲ್ಲಿ; ಕಾಲಮಾನ ಪ್ರಕಾರ ನಾಗರ ಪಂಚಮಿ, ನೂಲ ಪೂರ್ಣಿಮ ಮತ್ತು ಉಯ್ಯಾಲೆ ಹಬ್ಬಗಳು ಆಚರಿಸಲ್ಪಟ್ಟರೆ. ದೇವರ ಹೆಸರಿನಲ್ಲಿ ಕೃಷ್ಣ, ಗೌರಿ, ಗಣೇಶ ಮುಂತಾದ ಹಬ್ಬಗಳು ಈ ರೀತಿಯ ನಿದರ್ಶನ ಕಾಣಬಹುದು.

**'ಪೂರ್ವ ವೇದದ ಆಚರಣೆ'**

ವೇದ ಕಾಲದ ಜನರ ಆಚರಣೆ ಮತ್ತು ಸಂಪ್ರದಾಯಗಳು ಪರಿಚಿತಗೊಂಡಿವೆ. ಹುಣಸೆಕಾಯಿ, ಜೋಳದ ತೆನೆಗಳು ದೇವರಿಗೆ ನೈವೇದ್ಯ ಕೊಡುವುದು. ನಾಗ(ನಾಶದ ಸಂಕೇತ) ಹೆಚ್ಚು ಸಿಟ್ಟು ಹೊಂದಿರುತ್ತದೆ. ನಾಗರಹಾವಿನ ಮೂರ್ತಿಗೆ ಸಾಂಕೇತಿಕವಾಗಿ ಹಾಲು ಎರೆಯುವ ಸಂಪ್ರದಾಯ ಪದ್ಧತಿ ಪರಿಚಿತಗೊಂಡಿದೆ. ಸಾಮಾಜಿಕ ಆಚರಣೆ ಧಾರ್ಮಿಕ ಸ್ವರೂಪ ಪಡೆದುಕೊಂಡಿದೆ. ಈ ಹಬ್ಬದ ಸಂದರ್ಭದಲ್ಲಿ ಮದುವೆಯಾದ ಹೊಸತರಲ್ಲಿ ಗಂಡನ ಮನೆಯಿಂದ ತವರುಮನೆಗೆ ಕರೆದೊಯ್ಯುವುದು ಗ್ರಾಮೀಣ ಪ್ರದೇಶದಲ್ಲಿ ಜೀವಂತಿಕೆ ಪಡೆದುಕೊಂಡಿದೆ. ಈ ಹಬ್ಬದ ಕುರಿತು ಜನಪದ ಗೀತೆಯ ದೃಶ್ಯಗಳು ಅನಾವರಣಗೊಂಡಿವೆ.

'ತೆಂಗು ಹಬ್ಬ' ಶ್ರಾವಣ ಮಾಸದ ಮಧ್ಯದಲ್ಲಿ ಬರುವ ಹಬ್ಬ. ಇದು ನೈರುತ್ಯ ಭಾಗದಲ್ಲಿ ಕಂಡು ಬರುತ್ತದೆ. ಈ ಮಾಸ ಬಂದಾಗ ಸಮುದ್ರ ವ್ಯಾಪಾರವು ಪುನಾರಂಭಗೊಂಡ ಕಾರಣಕ್ಕಾಗಿ ಆಚರಣೆ ಪ್ರಚಲಿತದಲ್ಲಿದೆ. ಬ್ರಾಹ್ಮಣ ಸಮುದಾಯದವರು ಜನಿವಾರ ಹಾಕಿಕೊಳ್ಳುವುದು (ಈ ಹಿನ್ನೆಲೆಯಲ್ಲಿ ನೂಲ ಹುಣ್ಣಿಮೆ ಎನ್ನುತ್ತಾರೆ. ಅಂದರೆ ನೂಲ-ದಾರ) ಹಾಗೆಯೇ ಇತರೆ ವರ್ಗದವರಾದ ದೇವಾಂಗ ಮತ್ತು ನೇಕಾರರು ಈ ಪದ್ಧತಿ ಅನುಸರಿಸುತ್ತಾರೆ. ಅಲ್ಲದೆ ಗೌರಿ ಮತ್ತು ಮಹಾಲಕ್ಷ್ಮಿ ಹಬ್ಬಗಳಲ್ಲಿ ಹೆಣ್ಣು ಮಕ್ಕಳು ಸಕ್ರಿಯವಾಗಿ ಭಾಗವಹಿಸುತ್ತಾರೆ.

**ದೊಡ್ಡ ಹಬ್ಬ :** ಈ ನಾಡಿನಲ್ಲಿ ಗಣೇಶ ಹಬ್ಬವನ್ನು ವಿಶೇಷವಾಗಿ ಆಚರಣೆ ಮಾಡುತ್ತಾರೆ. ಹಾವನೂರ ಅವರ ಪ್ರಕಾರ ವರ್ಷ ಋತುವಿನ ಜನಪ್ರಿಯತೆ ಪಡೆದುಕೊಂಡಿದೆ. ಜೊತೆಗೆ ವಿಷ್ಣುವಿನ ಅವತಾರ ಪ್ರಸ್ತಾಪಗೊಂಡಿದೆ. ಹತ್ತು ಅವತಾರಗಳಲ್ಲಿ ನಾಲ್ಕು ಅವತಾರಗಳು ಕೃಷ್ಣ ವರಾಹ, ವಾಮನ ಮತ್ತು ಕಲ್ಕಿ ಇವುಗಳು ಪರಿಚಿತಗೊಂಡಿವೆ. ಅವತಾರದ ರೂಪಗಳು ಕೃಷ್ಣನನ್ನು ಹೊರತುಪಡಿಸಿದರೆ ಇನ್ನಾವ ಅವತಾರಗಳು ಆಚರಣೆಯಲ್ಲಿರುವುದಿಲ್ಲ.

**'ಭೂಮಿ ಮತ್ತು ಆಕಾಶ ಸಂಬಂಧ'**

ಪ್ರಸ್ತುತ ಲೇಖನದ ಮೂಲಕ ಕಾಲಮಾನದ ಮಹತ್ವವನ್ನು ವಿವರಿಸಲಾಗಿದೆ. ಮಳೆಗಾಲವನ್ನು ಆಧರಿಸಿ ಕಾಲಮಾನ ವರ್ಗೀಕರಿಸಲಾಗಿದೆ. ಮಳೆಗಾಲ ಆಧರಿಸಿ ಹಬ್ಬಗಳು ಮತ್ತು ಆಚರಣೆಗಳು ಹೇಗೆ ಹೊಸ ಸ್ವರೂಪ ಪಡೆದುಕೊಳ್ಳುತ್ತವೆ. ಭಾರತೀಯರಲ್ಲಿ ಯಾವುದೇ ಆಚರಣೆ ಮತ್ತು ಹಬ್ಬಗಳು ಇರಲಿಲ್ಲ. ಪೂರ್ವಿಕರನ್ನು ಗಮನಿಸಿದಾಗ ವೈಜ್ಞಾನಿಕ ತಳಹದಿಯಾಗಿದ್ದನ್ನು ಕಾಣಬಹುದು. ಅವರ ಪ್ರಕೃತಿಯ ನಡುವಿನ ಅವಿನಾಭಾವ, ಸಂಬಂಧ ಇರುವುದನ್ನು ಸೋದಾಹರಣವಾಗಿ ಈ ಲೇಖನ ವಿವರಿಸುತ್ತದೆ.

**'ಕನ್ನಡ ಸಾಹಿತ್ಯಕ್ಕೆ ಬಾಸೆಲ್ ಮಿಶನರಿಗಳ ಕೊಡುಗೆ'**

ದಕ್ಷಿಣ ಭಾರತದಲ್ಲಿ ಪ್ರೊಟೆಸ್ಟಂಟ್ ಮಿಶನರಿ ಸಂಸ್ಥೆಯವರು ೧೯ನೇ ಶತಮಾನದ ಹೊತ್ತಿಗೆ ಸಾಹಿತ್ಯದ ಮೂಲಕ ಧರ್ಮವನ್ನು ಬಹಳ ಸುಲಭವಾಗಿ ನೆಲೆಗೊಳಿಸಬಹುದು ಎಂದು ನಂಬಿದ್ದರು. ಮಿಶನರಿಗಳು ಧರ್ಮದ ಜೊತೆಗೆ ಈ ನಾಡಿನ ಸಾಹಿತ್ಯವನ್ನು ಮೇಳೈಸಿಕೊಂಡು ಇನ್ನೊಂದು ಧರ್ಮವನ್ನು ಪ್ರಗತಿಯಾಗಲು ಸಾಧ್ಯವೆಂಬುದು ಮನಗಂಡಿದ್ದರು. ಮುದ್ರಣದ ಕೆಲಸಗಾರರು ಮತ್ತು ಶಾಲಾ ಶಿಕ್ಷಣವು ಸಾಹಿತ್ಯ ಪ್ರಗತಿಯಾಗಲು ಕಾರಣವಾಯಿತು. ಕ್ರಿ.ಶ. ೧೮೪೨ರಲ್ಲಿ ಬಾಸೆಲ್ ಮಿಶನಿನ್ ಮುದ್ರಣ ಕಾರ್ಯ ಪ್ರಾರಂಭಿಸುವ ಪೂರ್ವದಲ್ಲಿ ಬಳ್ಳಾರಿ, ಲಂಡನ್ ಮತ್ತು ಬೆಂಗಳೂರಿನ ವೆಸ್ಲಿಯನ್ ಮಿಶನರಿಯವರು ಮುದ್ರಣ ಕಾರ್ಯವನ್ನು ಆರಂಭಿಸಿದರು. ಆದರೆ ಕನ್ನಡ ಮುದ್ರಣದ ಕಾರ್ಯವನ್ನು ಪರಿಚಯಿಸಿದ ಕೀರ್ತಿ ಬಾಸೆಲ್

ಮಿಶನಿನವರಿಗೆ ಸಲ್ಲುತ್ತದೆ. ಥಿಯೋಲಾಜಿಕಲ್ ಪ್ರೆಸ್ ಆರಂಭವಾಯಿತು. ಹಾಗೆಯೇ ಕನ್ನಡ, ಮಲಯಾಳಂ, ತುಳು ಭಾಷೆಗಳ ಪುಸ್ತಕಗಳು ಮುದ್ರಣಗೊಂಡವು. ಲಿಥೋಗ್ರಾಫಿಕ್ಸ್ ಮುದ್ರಣಗೊಂಡಿತು. ಹತ್ತು ವರ್ಷಗಳ ಮುದ್ರಿಸಲ್ಪಟ್ಟ ಪುಸ್ತಕ ಪ್ರಕಟಪಡಿಸಿದರು. ಪ್ರಕಟಗೊಂಡ ಹಳೆಗನ್ನಡ ಕೃತಿಗಳಾದ ಕುಮಾರವ್ಯಾಸಭಾರತ, ಬಸವಪುರಾಣ, ಜೈಮಿನಿ ಭಾರತ ಅಲ್ಲದೆ ದಾಸರ ಮತ್ತು ಯಕ್ಷಗಾನ ಪ್ರಸಂಗಗಳ ಕೃತಿಗಳು ಮುದ್ರಣಗೊಂಡಿವೆ.

ಜರ್ಮನ್ ಇಂಜಿನಿಯರ್ ಪ್ಲೇಲೆಮಸ್ಟೇರ್ ಕ್ರಿ.ಶ.೧೮೫೧ರಲ್ಲಿ ಕನ್ನಡದ ವಿವಿಧ ಅಕ್ಷರಗಳನ್ನು ಪರಿಚಯಿಸಿದರು. ಮುದ್ರಣದ ಹೊಸ ಸ್ವರೂಪ ಪರಿಚಯಿಸಿದರು. ಕ್ರಿ.ಶ. ೧೮೫೨ರಲ್ಲಿ ಮುದ್ರಣಕ್ಕೆ ಸ್ಟೀಮ್‌ನು ಯಂತ್ರವನ್ನು ಬಳಸಿದನು, ಚಿತ್ರಗಳು ಮತ್ತು ಎಲೆಗಳ ಮೇಲೆ ನೈಸರ್ಗಿಕ ಬಣ್ಣಗಳಿಂದ ಮುದ್ರಿಸಲು ಪ್ರಾರಂಭಿಸಿದರು. ಇದರ ಪ್ರತಿಯಾಗಿ ಕ್ರಿ.ಶ.೧೮೮೫ರಲ್ಲಿ ಮದ್ರಾಸ್ ಸರ್ಕಾರದಿಂದ ದೇಶಾದ್ಯಂತ ಮುದ್ರಣ ಆರಂಭಗೊಂಡಿತು. ಮಿಶನರಿಗಳು ಶಾಲಾ ಶಿಕ್ಷಣ, ಶೈಕ್ಷಣಿಕ, ಸಾಹಿತ್ಯ ಕೃತಿಗಳನ್ನು ಮುದ್ರಿಸಲು ಪ್ರೋತ್ಸಾಹಿಸಿದರು. ಬೇರೆ ಬೇರೆ ಮಿಶನರಿಗಳು ಬಾಸೆಲ್ ಮಿಶನರಿಗಳು ಶಿಕ್ಷಣಕ್ಕೆ ಆದ್ಯತೆ ನೀಡಿದರು. ಹೀಗಾಗಿ ೧೮೩೬ರಲ್ಲಿ ಮಂಗಳೂರಿನಲ್ಲಿ ಶಾಲೆಯನ್ನು ತೆರೆದರು. ಮೊಗ್ಲಿಂಗ್ ಧಾರವಾಡದಲ್ಲಿ ಶಾಲೆಯನ್ನು ಆರಂಭಿಸಿದರು. ಕ್ರಿ.ಶ. ೧೮೫೩ರ ಹೊತ್ತಿಗೆ ಬಾಸೆಲ್ ಮಿಶನ್ ತನ್ನ ಪ್ರಗತಿಯನ್ನು ಕಂಡಿತು. ಹೀಗಾಗಿ ಸಾಹಿತ್ಯಿಕವಾಗಿ ಮತ್ತು ಶೈಕ್ಷಣಿಕವಾಗಿ ಮಂಗಳೂರು ಪ್ರಗತಿಯಾಗಲು ಸಾಧ್ಯವಾಯಿತು.

ಇತಿಹಾಸ, ಗಣಿತ ಮತ್ತು ಬೇರೆ ವಿಷಯಗಳಿಗೆ ಸಂಬಂಧಿಸಿದ ಹೆಚ್ಚು ಕೃತಿಗಳು ಮುದ್ರಣಗೊಂಡವು. ಸಾಮಾನ್ಯ ಓದುಗರನ್ನು ತಲುಪುವಂತೆ ಪರಿಸರ ಸೃಷ್ಟಿಸಿದರು. ಮುದ್ರಣಗೊಂಡ ಪುಸ್ತಕ ಮದ್ರಾಸ್ ಮತ್ತು ಬಾಂಬೆ ಪ್ರಾಂತ್ಯಗಳಲ್ಲಿ ಪಠ್ಯ ಪುಸ್ತಕವಾದವು. ಮಿಶನರಿಗಳು ಭಾಷೆಯನ್ನು ಕಲಿಯಬೇಕಾದರೆ ನಿಘಂಟು ವ್ಯಾಕರಣ, ಪುಸ್ತಕ ಮುದ್ರಿಸಿ ಅಲ್ಲದೆ ಪ್ರಾಚೀನ ಕನ್ನಡ ಕೃತಿಗಳ ಪುನರ್‌ಮುದ್ರಣಗೊಂಡವು. ಆಧುನಿಕ ವಿಜ್ಞಾನ ವಿಷಯಗಳಲ್ಲಿ ಬರುವ ತಾಂತ್ರಿಕ ಶಬ್ದಗಳ ಪುಸ್ತಕ ಈ ಪಠ್ಯ ಪುಸ್ತಕಗಳಿಗಾಗಿ ಬರೆಯಲಿಲ್ಲ. ಮನುಷ್ಯ ಮೌಲ್ಯಯುತವಾದ ಸಂದೇಶವನ್ನು ಪರಿಚಯಿಸಿ ಪ್ರಕಟಿಸಿದರು. ಕನ್ನಡ ಇರುವ ಬೈಬಲ್ ಅದರ ಉಪನ್ಯಾಸಗಳು ಅಷ್ಟೇ ಮಹತ್ವ ಪಡೆದಿವೆ.

**ಮೊಗ್ಲಿಂಗ್ ಅವರ ಸಾಧನೆ**

ಈ ನಾಡಿಗೆ ಬಂದು ಬಾಸೆಲ್ ಮಿಶನ್ ಸ್ಥಾಪನೆಯಾದಾಗಿನಿಂದ ನೂರಾರು ಮಿಶನರಿಗಳು ಈ ಕನ್ನಡ ನಾಡಿನಲ್ಲಿ ಸೇವೆ ಸಲ್ಲಿಸಿವೆ. ಬಹುತೇಕ ಮಿಶನರಿಗಳು ಸಾಹಿತ್ಯ ಕೃತಿಗಳ ಮುದ್ರಣಕ್ಕೆ ಸಂಬಂಧಿಸಿದ ಕಾರ್ಯಗಳಲ್ಲಿ ತೊಡಗಿಕೊಂಡವು. ಕನ್ನಡ ಮತ್ತು ಮಲಯಾಳಂ ಭಾಷೆಗೆ ಹೆಚ್ಚು ಪ್ರಾಮುಖ್ಯತೆ ಕೊಟ್ಟರು. ಈ ಮಿಶನರಿ ಸಂಸ್ಥೆಯು ಹೆಚ್ಚು

ಸಂಪಾದನೆಯ ಮುದ್ರಣಕ್ಕೆ ಒತ್ತುಕೊಟ್ಟರು. ಅಲ್ಲದೆ ಇಂಗ್ಲಿಷ್, ಜರ್ಮನ್ ಮತ್ತು ಯುರೋಪ್ ಹಾಗೂ ಏಷ್ಯಾದ ಇತರೆ ಭಾಷೆಗಳಲ್ಲಿ ಪ್ರಕಟವಾದವು. ಮೊಗ್ಲಿಂಗ್, ವೈಗಲ್, ಗುಂಟಾರ್ಟ್ ಕಿಟೆಲ್, ಜಿಗಲ್ ಚನ್ನಬಸಪ್ಪ ಕನ್ನಡ ಮಲಯಾಳಂ ಸಾಹಿತ್ಯಕ್ಕೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಟ್ಟರು.

ಹಾವನೂರ ಅವರು ಮೊಗ್ಲಿಂಗ್ ಅವರ ಸಾಹಿತ್ಯ ಸಾಧನೆಯನ್ನು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ಬುದ್ಧಿ, ಸಾಮರ್ಥ್ಯ, ಭಾಷೆಗಳ ಹಿಡಿತ, ಗೂರ್ಗ್ ಚಟುವಟಿಕೆಗಳು ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ಪ್ರಸ್ತಾಪಗೊಂಡಿದೆ. ನಂತರ ಬರುವ ಮಿಶನರಿಯು ಗೂರ್ಗ್ ಅವರನ್ನು ಕಾರ್ಯಚಟುವಟಿಕೆಯಲ್ಲಿ ಸಕ್ರಿಯವಾಗಿ ತೊಡಗಿಕೊಂಡಿತು. ಧರ್ಮ, ಸಾಹಿತ್ಯ, ಶೈಕ್ಷಣಿಕ ಕ್ಷೇತ್ರದಲ್ಲಿ ಸೇವೆಯ ಸ್ಮರಿಸಿದರು. ಆನಂದರಾಯ ಮತ್ತು ಗೌಂಡಿಯ್ಯರವರ ಪುಸ್ತಕ ಆಧರಿಸಿ ಮೊಗ್ಲಿಂಗ್‌ರವರು 'ಹೀರಾರು' ಪತ್ರಿಕೆಯಲ್ಲಿ ಬರೆದರು. ಈ ಪುಸ್ತಕವನ್ನು ಕನ್ನಡ ಸಾಹಿತ್ಯದಲ್ಲಿ ಪ್ರಥಮ ಪತ್ರವೆಂದು ತಿಳಿಯಲಾಗಿದೆ. ಇದನ್ನು ಅತ್ಯುತ್ತಮ ಕೃತಿಯೆಂದು ಹೇಳಲಾಗಿದೆ. ಇತರ ಮಿಶನರಿಗಳು ಬೇರೆ ಬೇರೆ ಭಾಷೆಗಳಿಂದ ಭಾಷಾಂತರಿಸುವ ಕೆಲಸ ಮಾಡಿದರು. ಅಲ್ಲದೆ ಜಾತಿ ವಿಚಾರಣೆ ಮತ್ತು ದೇವ ವಿಚಾರಣೆ ಎನ್ನುವ ಎರಡು ಕೃತಿಗಳನ್ನು ಬರೆದರು.

ಆ ಕೃತಿಗಳನ್ನು ಕನ್ನಡದಲ್ಲಿ ಪ್ರಥಮ ಸಾಹಿತ್ಯ ಪ್ರಬಂಧಗಳೆಂದು ಕರೆಯಲಾಗಿದೆ. ಪ್ರಾರಂಭಗೊಂಡ 'ಮಂಗಳೂರು ಸಮಚಾರ'ದಲ್ಲಿ ಮೊದಲು ಕನ್ನಡ ಜಾನಪದ ಸಾಹಿತ್ಯದ ಬಗ್ಗೆ ಸಾಮಾನ್ಯ ಜ್ಞಾನ ಕೊಡುವ ಉದ್ದೇಶವಾಗಿತ್ತು. ಇಂಗ್ಲೆಂಡ್ ಆರ್ಥಿಕ ಪರಿಸ್ಥಿತಿ, ಕಾಬೂಲ್ ಯುದ್ಧ, ಗ್ವಾಲಿಯರ್ ರಾಜ್ಯ ಕಬಳಿಸಿದ ಮಹತ್ವ ದಾಖಲೆಗಳ ಸಂಗ್ರಹ ಅಲ್ಲದೆ ಮೊಗ್ಲಿಂಗ್ ಅವರು ಬರೆದಿರುವ ಕೈಬರಹವನ್ನು ಪರಿಶೀಲಿಸಿ ಪ್ರಕಟಿಸಿದರು. ಕೂರ್ಗ್‌ನ ಜನಜೀವನ ಮತ್ತು ಪರಿಸರ ಪರಿಚಯಿಸುತ್ತದೆ. ಅಲ್ಲದೆ ಅವರು ಕನ್ನಡ ಸಾಹಿತ್ಯ ಕೃತಿಗಳನ್ನು ಜರ್ಮನ್‌ಗೆ ಭಾಷಾಂತರಿಸಿದರು. ಈ ವಿಷಯವನ್ನು Z.D.M.G ಪತ್ರಿಕೆಯಲ್ಲಿ ಪ್ರಕಟಿಸಿದರು.

ಬಿಬ್ಲೋಯಾತಿಕ್, ಕರ್ನಾಟಕ ಸೀರಿಸ್‌ನಲ್ಲಿರುವ ಮಧ್ಯ ಕನ್ನಡ ಸಂಪ್ರದಾಯ ಕೃತಿಗಳನ್ನು ತಮ್ಮ ಪತ್ರಿಕೆ ಮೂಲಕ ಹೊರ ತಂದರು. ಕನ್ನಡದ ಅಸ್ಮಿತೆಯನ್ನು ಚರಿತ್ರೆಯಲ್ಲಿ ತಮ್ಮ ಕಾರ್ಯ ವೈಖರಿಯನ್ನು ಉಳಿಯುವಂತೆ ಮಾಡಿದರು. ಟುಬಿಜನ್ ವಿಶ್ವವಿದ್ಯಾಲಯ ಅವರಿಗೆ ಡಾಕ್ಟರೇಟ್ ಪದವಿ ಕೊಟ್ಟು ಗೌರವಿಸಿತು. ಆದರೆ ಕ್ರಿ.ಶ. ೧೮೫೦ಕ್ಕಿಂತ ಪೂರ್ವದಲ್ಲಿ ಕನ್ನಡ ಸಾಹಿತ್ಯ ಯಾವ ಕೃತಿಯೂ ಡಾಕ್ಟರೇಟ್ ಪದವಿ ಪಡೆದಿರಲಿಲ್ಲ. 'ಕನ್ನಡ ಸಾಹಿತ್ಯ' ಹೊಸ ರೂಪುರೇಷೆ ಹಾಕಿ ಕೊಡುವಲ್ಲಿ ಅವರ ಪಾತ್ರ ಬಹಳ ಹಿರಿದಾದುದು. ಅವರ ಅನುವಾದ ಕಾರ್ಯವನ್ನು ಮಾಡಿದರು ಅಲ್ಲದೆ ಆಧುನಿಕ ಗದ್ಯಸಾಹಿತ್ಯಕ್ಕೆ ಹೊಸ ಸ್ವರೂಪ ಕೊಟ್ಟರು.

**'ಮಂಗಳೂರು ಭೋಟನ್ ಆಟೋಗ್ರಾಫಿ ಪ್ರಕೃತಿಯ ಸ್ವ-ಮುದ್ರಣ'**

ಸ್ವಿಸ್ ಮಿಶನರಿಯು ಸಸ್ಯ ಹಾಗೂ ಎಲೆಯನ್ನು ಬಳೆಸಿಕೊಂಡು ಸಹಜವಾದ ವರ್ಣಗಳಿಂದ ಮುದ್ರಿಸಿ ಅವುಗಳನ್ನು ಬಾಸಲ್ ಇವಾಂಜೆಲಿಕಲ್‌ನಲ್ಲಿ ಪುಸ್ತಕ ರೂಪದಲ್ಲಿ ಹೊರ ತಂದಿತು. ಹಾಗೆಯೇ ಜೆ.ಹುನ್ಜಿಕರ್ ಅವರ ಬಾಸಲ್ ಇವಾಂಜೆಲಿಕ್ ಮಿಶನರಿಗೆ ಸೇರಿದವರು. ೧೯ನೇ ಶತಮಾನದ ಉತ್ತರಾರ್ಧದಲ್ಲಿ ಮಂಗಳೂರಿನಲ್ಲಿ ಕೆಲಸ ಮಾಡುತ್ತಿದ್ದರು. ಬಾಸೆಲ್ ಕೇಂದ್ರ ಕಾರ್ಯಾಲಯದಲ್ಲಿ ೧೮೬೨ರಲ್ಲಿ ಸಹಜ ವರ್ಣದಲ್ಲಿ ಮುದ್ರಿಸಿದ ಪ್ರತಿಗಳಲ್ಲಿ ಲೇಖನ ಬರೆದರು. ನಂತರ ೧೫ ಪ್ರತಿಗಳನ್ನು ತಂದಿದ್ದರು. ಈ ರೀತಿ ಎಲೆಗಳ ಮುದ್ರಣಕ್ಕೆ ಬಳಸಿರಲಿಲ್ಲ. ಹಾಗೆಯೇ ತಾಂತ್ರಿಕತೆ ಬಳಸಿರಲಿಲ್ಲ.

ತಾಂತ್ರಿಕತೆಯನ್ನು ಬಳಸಿದ ರೀತಿ ಮುಂಗಾರು ಕಾಲದಲ್ಲಿ ಸಂಗ್ರಹಿಸಿದ ಎಳೆಯದಾದ ಮಾದರಿಗಳಿಂದ ಮುದ್ರಣ ಫಲಕಗಳನ್ನು(plate) ಮಾಡಲಾಯಿತು. ಅವನು ಸಂಗ್ರಹಿಸುವಾಗ ಒಂದು ರೆಂಬೆ ಇಲ್ಲವೆ ಎಲೆಯ ಬದಲಾಗಿ ಬೇರು ಸಮೇತ ಎಳೆಯ ಸಸ್ಯವನ್ನು ಅಪೇಕ್ಷಿಸಿ ಆರಿಸಲಾಯಿತು.

ಈ ತಂತ್ರಗಳನ್ನು ೭-೮ ಮಾದರಿಯಲ್ಲಿ ತೆಗೆದುಕೊಂಡು ನೈಜವರ್ಣದ ಚಾಪೆಯ ತೈಲ ವರ್ಣದಿಂದ ಬಳಸಬೇಕು. ಫಲಕದ ಪುನರ್‌ಪ್ರತಿ ಮಾಡಬೇಕು ಕಾಗದ ಮೇಲೆ ಮುದ್ರಿಸಬೇಕು. ಈ ರೀತಿ ಒಂದು ಅಥವಾ ಎರಡು ಮಾದರಿಯನ್ನು ಮಾಡಲು ಸಾಧ್ಯವಾಯಿತು. ಫಲಕದ ಮೇಲೆ ಇನ್ನೊಂದು ಪ್ರತಿ ಮಾಡಬೇಕು. ನಂತರ ಕಾಗದ ಮುದ್ರಿಸಬೇಕು. ಈ ಸಸ್ಯ ಜಾತಿಯ ಮಾದರಿ ಬಳಸಿ ಪುನರ್‌ಮುದ್ರಿಸಿರುವುದು ತುಂಬ ಕಷ್ಟವಾಗಿತ್ತು. ಆದರೆ ಪ್ರತಿಯಿಂದ ಪ್ರತಿಗೆ ಭಿನ್ನವಾಗಿತ್ತು. ನೈಜ ವರ್ಣದ ಛಾಯಾತೈಲ ವರ್ಣದಿಂದ ಎರಡು ಪ್ರತಿ ಮಾಡಲು ಸಾಧ್ಯ. ಈ ಕಾರಣದಿಂದ ಪ್ರತಿಯಿಂದ ಪ್ರತಿಗೆ ವ್ಯತ್ಯಾಸವಾಗುತ್ತದೆ.

ಇದು ಭಾರತಕ್ಕೆ ಬಂದ ಯುರೋಪಿನ ಎಲ್ಲಾ ಮಿಶನರಿಗಳಿಗೆ ಪ್ರೇರಣೆ ನೀಡಿತು. ರೋಟ್ಸ್‌ಬರ್ಗ್ "ಪ್ಲೋರ್ ಇಂಡಿಯಾ ಪ್ರರಿಯರ್‌ವರ ಉಪಯುಕ್ತ ಸಸ್ಯಗಳಿಗೆ ಕ್ಲಾಗೋಡ್‌ರ್ವನವರ ದಕ್ಷಿಣ ಇಂಡಿಯಾ ಅರಣ್ಯ ಉದ್ಯಾನವನಗಳು."[೯] ಈ ರೀತಿಯ ಕೃತಿಗಳನ್ನು ರಚಿಸಿದರು. ೧೯ನೇ ಶತಮಾನದ ಮಧ್ಯದ ಅವಧಿಗೆ ಮುದ್ರಣದ ಕಲೆಯು ಪರಿಚಿತಗೊಂಡಿರಬೇಕು. ಆದರೆ ಮಂಗಳೂರಿನ ಬಾಸಲ್ ಮಿಶನರಿಯವರು ೧೮೪೨ರಲ್ಲಿ ಮುದ್ರಣಾಲಯವನ್ನು ಸ್ಥಾಪಿಸಿದರು. "ಈ ಮುದ್ರಣ ಕ್ರಿಶ ೧೮೬೨ರಲ್ಲಿ ಮುದ್ರಿಸಲ್ಪಟ್ಟಿತ್ತು. ಅದು ಎರಡು ದೊಡ್ಡ ಗಾತ್ರದ ಸಂಪುಟಗಳಲ್ಲಿದ್ದು ಅದರ ಕಾಗದದ ಗಾತ್ರ ೨೬x೩ ಸೆಂ.ಮಿ. ಆಗಿದೆ. ಮೂಲತಃ ಹಿಂದೂಸ್ಥಾನದ ಮೂಲಿಕಾ ನಿದರ್ಶನಗಳು ಎಂಬ ಶೀರ್ಷಿಕೆಯ 'ಕನ್ನಡ ಪುಸ್ತಕ' ಆದರೆ ಅದಕ್ಕೆ "ಮಂಗಳೂರು ಬೋಟನ್ ಆಟೋಗ್ರಫಿ"(Mangalore Botan Autography) ಇಲ್ಲವೆ ದಕ್ಷಿಣ ಭಾರತೀಯ ಸಸ್ಯಗಳ ಸ್ವಮುದ್ರಣ(Nature`s

self printing of the south Indian Flore). ಈ ರೀತಿಯ ಶೀರ್ಷಿಕೆ ಹೊಂದಿತ್ತು. ಹೊಸ ರೀತಿಯ ಮುದ್ರಿಕೆಯ ಕಲೆಯ ಸಸ್ಯಗಳನ್ನು ಬಳಸಿಕೊಂಡು ಮುದ್ರಣ ನೂತನ ಸ್ವರೂಪ ಕಲ್ಪಿಸುವುದು. ಇಡೀ ಭಾರತದಲ್ಲಿ ವಿಶೇಷವಾಗಿ ಉದಕಮಂಡಲದಿಂದ ಪಡೆದುಕೊಳ್ಳಲಾಗಿದೆ. ೪೪೦ ಸಸ್ಯ ಜಾತಿಯ ಎಲೆಗಳನ್ನು ಬಳಸಿಕೊಂಡು ೪೭೪ ವರ್ಣಚಿತ್ರಗಳನ್ನು ಮಾಡಲಾಗಿದೆ.

## ಕೊನೆಯ ಟಿಪ್ಪಣಿ

೧. ಮರೆಯಲಾಗದ ಬರಹಗಾರರು ಹಟ್ಟಿಯಂಗಡಿ ನಾರಾಯಣರಾಯರ ಸಾಹಿತ್ಯವಾಚಿಕೆ ಹಾವನೂರ–ಪು.ಸಂ. ೭೨
೨. ಅದೇ, ಪು.ಸಂ. ೭೨
೩. ರಂ.ಶ್ರೀ.ಮುಗಳಿ ಚಿತ್ರಿಸಿದ 'ಪಂಪ ರನ್ನರು' ಶ್ರೀನಿವಾಸ ಹಾವನೂರ ಪು.ಸಂ. ೧
೪. ಅದೇ, ಪು.ಸಂ. ೩–೪
೫. ಅದೇ, ಪು.ಸಂ. ೯
೬. ಅದೇ, ಪು.ಸಂ. ೨೪
೭. ಅದೇ, ಪು.ಸಂ. ೩೦
೮. ಮಧ್ಯಕಾಲೀನ ಕರ್ನಾಟಕ, ಶ್ರೀನಿವಾಸ ಹಾವನೂರ–ಪು.ಸಂ. ೧೪–೧೫
೯. ಅದೇ, ಪು.ಸಂ. ೮೬
೧೦. ಅದೇ, ಪು.ಸಂ. ೮೯
೧೧. ಅದೇ, ಪು.ಸಂ. ೯೪–೯೫
೧೨. ಅದೇ, ಪು.ಸಂ. ೧೦೯–೧೧೦
೧೩. ಅದೇ, ಪು.ಸಂ. ೧೧೦
೧೪. ಮಧ್ಯಕಾಲೀನ ಕರ್ನಾಟಕ, ಶ್ರೀನಿವಾಸ ಹಾವನೂರ–ಪು.ಸಂ. ೧೧೦
೧೫. ಅದೇ, ಪು.ಸಂ. ೧೧೪
೧೬. ಮಧ್ಯಕಾಲೀನ ಕರ್ನಾಟಕ, ಶ್ರೀನಿವಾಸ ಹಾವನೂರ–ಪು.ಸಂ. ೧೧೫
೧೭. ಅದೇ, ಪು.ಸಂ. ೧೧೭
೧೮. ಅದೇ, ಪು.ಸಂ. ೧೧೯
೧೯. ಅದೇ, ಪು.ಸಂ. ೧೨೧
೨೦. ಅದೇ, ಪು.ಸಂ. ೧೨೫
೨೧. ಅದೇ, ಪು.ಸಂ. ೧೭೯
೨೨. ಅದೇ, ಪು.ಸಂ. ೧೮೫
೨೩. ಅದೇ, ಪು.ಸಂ. ೧೮೫
೨೪. ಪಾ.ವೆಂ ಆಚಾರ್ಯ ಹರಟೆ, ಶ್ರೀನಿವಾಸ ಹಾವನೂರ–ಪು.ಸಂ.೨೫–೨೬
೨೫. ಬೆಂಗೇರಿಯವರ ಬರಹಗಳು ಶ್ರೀನಿವಾಸ ಹಾವನೂರ–ಪು.ಸಂ. ೨೭–೨೮
೨೬. ಅದೇ, ಪು.ಸಂ. ೩೧–೩೨
೨೭. ಬೆಂಗೇರಿಯವರ ಬರಹಗಳು ಶ್ರೀನಿವಾಸ ಹಾವನೂರ–ಪು.ಸಂ. ೩೨
೨೮. ಅದೇ, ಪು.ಸಂ. ೫೧–೫೨
೨೯. ಸುದರ್ಶನ, ಅಭಿನಂದನ ಗ್ರಂಥ ಮಂಗಳೂರು ಬೋಟನ್ ಆಟೋಗ್ರಫಿ ಪ್ರಕೃತಿಯ ಸ್ವ ಮುದ್ರಣ ಪು.ಸಂ. ೩೫೦

## ಅಧ್ಯಾಯ ಏಳು

# ಇತರೆ ಸಾಹಿತ್ಯ

ಶ್ರೀನಿವಾಸ ಹಾವನೂರ ಅವರು ಕನ್ನಡ ಸಾಹಿತ್ಯದಲ್ಲಿ ನಿರೂಪಿಸಿದ ವಿಚಾರಧಾರೆಗಳನ್ನು ಈ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ. ಸಾಹಿತ್ಯ ವಿವಿಧ ಪ್ರಕಾರಗಳಾದ ಪತ್ರಿಕಾ ಸಾಹಿತ್ಯ ನಿಘಂಟು ಮತ್ತು ಕಾದಂಕಥನ ಇವು ಇತರೆ ಸಾಹಿತ್ಯವೆಂದು ಪರಿಗಣಿಸಿ ಅಧ್ಯಯನಕ್ಕೊಳಪಡಿಸಲಾಗಿದೆ.

ಪತ್ರಗಳು ಚಿತ್ರಿಸಿದ ಗೋವಿಂದ ಪೈ, ಕೃತಿಯನ್ನು ಅಧ್ಯಯನ ಮಾಡುತ್ತ ಹೋದಂತೆ ಕೃತಿಯ ಹೊಳಹುಗಳನ್ನು ಗುರುತಿಸಲು ಸಾಧ್ಯವಾಗುತ್ತಿದೆ. ಕನ್ನಡ ಸಾಹಿತ್ಯದಲ್ಲಿ ಪೈಯವರು ಮಾಡಿದ ಪ್ರತಿನಿತ್ಯದ ವ್ಯವಹಾರಗಳನ್ನು ಅರಿಯಬಹುದು. ಕನ್ನಡ ಸಾಹಿತಿಯೊಬ್ಬನ ಬದುಕಿನಲ್ಲಿ ಆತನ ಪತ್ರಗಳನ್ನು ಸಂಪಾದಿಸಿ ಪ್ರಕಟಿಸುವುದರಿಂದ ಸಾಹಿತ್ಯ ಕ್ಷೇತ್ರಕ್ಕೆ ಪ್ರಯೋಜನವಾಗುವುದನ್ನು ಗೋವಿಂದ ಪೈ ಅವರ ಕೃತಿಯನ್ನು ನೋಡಿದಾಗ ಗೋಚರವಾಗುತ್ತದೆ.

ಗೋವಿಂದ ಪೈಯವರ ಅಭಿಮಾನಿಗಳು ಸಾಹಿತ್ಯಾಸಕ್ತರ ಪತ್ರಗಳ ಕ್ರೋಢೀಕರಿಸುವುದರ ಮೂಲಕ ರಾಜರತ್ನಂ ಅವರು ಪ್ರಥಮವಾಗಿ ಕೆಲವು ಪತ್ರಗಳನ್ನು ಸಂಕಲನ ರೂಪದಲ್ಲಿ ಪರಿಚಯಿಸಿದರು. ಹಾಗೆಯೇ ಕುಂದಾಪುರ ಭಂಡಾರ್ಕರ್ಸ್ ಕಾಲೇಜಿನಲ್ಲಿ 'ದೀವಿಗೆ' ಮೂಲಕ ಪರಿಚಯಿಸಿದರು. ಮುಂಬಯಿ ವಿಶ್ವವಿದ್ಯಾಲಯದ ಕನ್ನಡ ವಿಭಾಗ ಮುಖ್ಯಸ್ಥರಾದ ಶ್ರೀನಿವಾಸ ಹಾವನೂರ ಅವರು ಸಂಪಾದಿಸಿ ಪ್ರಕಟಿಸಿದರು.

ಪತ್ರ ಸಾಹಿತ್ಯವು ಸಾಹಿತ್ಯ ಓದುಗರಿಗೆ ಅಮೂಲ್ಯವಾದ ಆಕರವೆಂದು ಹೇಳಬೇಕು. ಪಾಶ್ಚಿಮಾತ್ಯ ಕವಿ–ಲೇಖಕರಲ್ಲಿ ಈ ತೆರನಾದ ಪತ್ರ ಸಂಗ್ರಹಗಳನ್ನು ಕಾಣಬಹುದು. ಕನ್ನಡದಲ್ಲಿ ಪತ್ರ ಸಂಗ್ರಹದ ಕೊರತೆಯನ್ನು ನೀಗಿಸುವ ಸಲುವಾಗಿ ಕು.ಶಿ. ಹರಿದಾಸ ಭಟ್ಟರು ಪತ್ರ ಸಂಗ್ರಹಗಳನ್ನು ೧೯೬೩ರಲ್ಲಿ 'ದೀವಿಗೆ'ಗಳಲ್ಲಿ ಪ್ರಕಟಿಸಿದರು. ಪೈಗಳ ಜನ್ಮಶತಾಬ್ದಿಯ ಕಾಲಕ್ಕೆ ಮಂಗಳೂರು ವಿಶ್ವವಿದ್ಯಾಲಯ ಮತ್ತು ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಸಂಸ್ಥೆ ಸಹಯೋಗದೊಂದಿಗೆ ಮತ್ತಷ್ಟು ಪತ್ರಗಳನ್ನು ಸಂಗ್ರಹಿಸಿದರು. ಹಾಗೆಯೇ ೧೯೪೪ರಲ್ಲಿ

ಜಿ.ಪಿ.ರಾಜರತ್ನಂ ಸ್ಮಾರಕ ಉಪನ್ಯಾಸ ಮಾಲೆಯನ್ನು ಏರ್ಪಡಿಸಿದರು. ಅಲ್ಲದೆ ಗೋವಿಂದ ಪೈ ಅವರ ಪತ್ರ ಸಾಹಿತ್ಯಕ್ಕೂ ರಾಜರತ್ನಂ ಅವರಿಗೂ ಅವಿನಾಭಾವ ಸಂಬಂಧದ ಮೂವತ್ತು ವರ್ಷಗಳ ಒಡನಾಟ ಪತ್ರ ಸಾಹಿತ್ಯದಲ್ಲಿ ನಿರೂಪಿತಗೊಂಡಿದೆ.

ಗೋವಿಂದ ಪೈಯವರ ಕನ್ನಡದ ಎಲ್ಲಾ ಪತ್ರಗಳು ನಮಸ್ಕಾರದಿಂದ ಪ್ರಾರಂಭಗೊಂಡಿವೆ. ಹಾಗೆಯೇ ಚಿಕ್ಕವರಿಗೂ ಕೂಡ ನಮಸ್ಕಾರ ಎಂದು ಸಂಭೋದಿಸುತ್ತಿದ್ದರು. ಆದರೆ ಕೆಲವು ಪತ್ರಗಳಲ್ಲಿ ಆಶೀರ್ವಾದ ಇದೆ. (ಕೆಲವರು ಆಶೀರ್ವಾದ ಮಾಡಬೇಕೆಂದು ಪತ್ರದಲ್ಲಿ ಕೇಳಿಕೊಂಡಿದ್ದಾರೆ)ಹೀಗಾಗಿ ಆಶೀರ್ವಾದದ ಸಂಭೋದನೆ ಕಂಡುಬಂದಿದೆ. ಆ ಪತ್ರಗಳನ್ನು ತರುಣರು ಮಧ್ಯ ವಯಸ್ಸಿನವರು ವೃದ್ಧರು ಬರೆದಿದ್ದರು. ೧೭೫ ಪತ್ರಗಳು ಸಿಕ್ಕಿದ್ದು, ಆ ಅಭಿಮಾನಿಗಳ ಪತ್ರಗಳು ಯಾವ ಭಾಷೆಯಲ್ಲಿ ಇರುತ್ತವೆಯೋ ಆ ಭಾಷೆಯಲ್ಲಿ ಉತ್ತರ ಬರೆಯುತ್ತಿದ್ದರು. ಕನ್ನಡ, ಇಂಗ್ಲಿಷ್ ಎರಡು ಭಾಷೆಯಲ್ಲಿ ಪತ್ರಗಳು ಇದ್ದವು.

ಅವರಿಗೆ ಬಂದಿರುವ ಪುಸ್ತಕ ಅಥವಾ ಪತ್ರಗಳಲ್ಲಿ ಶಬ್ದಗಳ ತಪ್ಪು ಕಂಡುಬಂದರೆ ಅದನ್ನು ಖಂಡಿಸುತ್ತಿದ್ದರು. ಅನ್ಯ ಕೃತಿಯಲ್ಲಿ ಗೋವಿಂದ ಪೈ ಒಳದೋಷ ಕಂಡುಬಂದರೆ ಅದನ್ನು ಹೇಳುತ್ತಿದ್ದರು. ಕೃತಿಯ ಅಂತಃಸತ್ವ ಹೇಳಲು ಕರ್ತೃ ಸ್ವತಂತ್ರರಿರುತ್ತಾರೆಂದು ಹೇಳುತ್ತಾರೆ. ಆದರೆ ಕನ್ನಡ ಭಾಷೆಯ ವಿಷಯ ಬಂದಾಗ ಅವರು ಎಚ್ಚರ ವಹಿಸುತ್ತಿದ್ದರು. ತಪ್ಪು ಕಂಡುಬಂದಾಗ ಖಂಡಿಸುತ್ತಿದ್ದರು. ಹಾಗೆಯೇ ಅವರು ತಪ್ಪು ಮಾಡಿದಾಗ ಕ್ಷಮೆ ಕೇಳುತ್ತಿದ್ದರು.

ಅಮ್ಮೆಂಬಳ ಶಂಕರನಾರಾಯಣ ಅವರ ಕವನ ಸಂಕಲನದ ಮುನ್ನುಡಿಯಲ್ಲಿ ಪೈಯವರು ಅನುಷ್ಟುಬ್ ಎಂಬ ಶಬ್ದವನ್ನು ಬಳಸಿದರು. ಬಳಸಿದ ಶಬ್ದ ಕುರಿತು "ಅನುಷ್ಟುಬ್ ಶಬ್ದವನ್ನು ಅನುಷ್ಟಪ್ ತಿದ್ದಿಕೊಳ್ಳಲು ಸೂಚಿಸಿದರು. ನಂತರ ತಪ್ಪು ಕಂಡುಬಂದಾಗ ಪೈಯವರು "ಅನುಷ್ಟುಭ್ + ಛಂದಸ್ಸು ಎಂಬ ಸಮಾಸ ಪದವು ಸಂಸ್ಕೃತ ಸಂಧಿಯ ನಿಯಮಗಳ ಮೇರೆಗೆ ಅನುಷ್ಟುಪ್ ಛಂದಸ್ಸು ಎಂದು ಆಗಬೇಕು. ತಮ್ಮ ಸೂಚನೆ ಸರಿಯಿದೆ ಹೀಗಾಗಿ ನನ್ನನ್ನು ಕ್ಷಮಿಸಬೇಕು ಎಂದು ಪತ್ರ ಬರೆದರು"[೬] (೧೩.೪.೧೯೪೭) ಹೀಗೆ ಅವರು ಪ್ರತಿ ವಿಷಯದಲ್ಲಿ ಅವರನ್ನು ಆತ್ಮಾವಲೋಕನ ಮಾಡಿಕೊಳ್ಳುತ್ತಿದ್ದರು.

ಪೈಯವರ ಪತ್ರಗಳ ಸಾಹಿತ್ಯ ತುಂಬ ವೈಶಿಷ್ಟ್ಯತೆಯಿಂದ ಕೂಡಿದೆ ಬುದ್ಧಿಜೀವಿಗಳ ಪತ್ರ ವ್ಯವಹಾರ, ಸಮಕಾಲೀನ ವಿದ್ಯಮಾನಗಳ ಘಟನೆಗಳ ವಿವರವಿದೆ. ಗಾಂಧಿಯವರ ಭಾರತ ಸ್ವಾತಂತ್ರ್ಯ ಕಗ್ಗೊಲೆ ಎಂದು ಅವರ ಕವನಗಳಲ್ಲಿ ಅಭಿವ್ಯಕ್ತಗೊಂಡಿದೆ. ಹಾಗೆಯೇ ಕರ್ನಾಟಕ ಪ್ರಾಂತ್ಯ ರಚನೆ ೧೯೫೦ ಅವಧಿಯ ಘಟನಾವಳಿಗಳು ಕುರಿತು ನಿರೂಪಿತಗೊಂಡಿದೆ.

ನೂತನ ಪ್ರಾಂತ್ಯ ರೂಪುಗೊಳ್ಳುವ ವಿಷಯ ಪತ್ರದಲ್ಲಿ ಉಲ್ಲೇಖಗೊಂಡಿವೆ ಮತ್ತು ಕೈಬಿಟ್ಟದನ್ನು ನೆನಪಿಸಿಕೊಂಡರು. "ನಮ್ಮ ತಾಯಿ ಜೀತೆಯ ಜೀವಮಾನದಲ್ಲಿ ಇದೊಂದು ಘೋರವಾದ ದುರ್ದಿನ"[೭] ಎಂದು ಸ್ಮರಿಸಿಕೊಂಡರು. ನಾಡಿನ ಏಕೀಕರಣದ ನಂತರ

ಅದಕ್ಕೆ ತನ್ನದೇ ಸ್ವರೂಪ ಕೊಡಬೇಕೆಂಬ ಈ ಹಿನ್ನೆಲೆಯಲ್ಲಿ ನಾಡಗೀತೆ ಬೇಕು. ಅದನ್ನು ಜಿ.ಎಸ್.ಲಕ್ಷ್ಮಣ ಪೈಗಳು ರಚಿಸಿದ ನಂತರ ಗೋವಿಂದ ಪೈಯವರು ಕನ್ನಡ ಸಾಹಿತ್ಯ ಪರಿಷತ್ತಿಗೆ ಶಿಫಾರಸ್ಸು ಮಾಡುವಂತೆ ವಿನಂತಿಸಿಕೊಂಡರು. ಅದರ ಪ್ರತಿ ಈ ತೆರನಾಗಿದೆ. (೧೫/೯೧೫೦) "Any such poem or other similar work of anyonelse than a citizen of the mysore state is never likely to have any chance of being adopted by a paristat as its an them"[೨] ಮೈಸೂರು ಸಾಹಿತ್ಯ ವಲಯದವರು ನಾವು ಶ್ರೇಷ್ಠರು ಎನ್ನುವ ಅಹಂ ಮಿಕೆಯಲ್ಲಿದ್ದರು. ಅಲ್ಲದೆ ಕೆಲವರು ಮಾತ್ರ ಅಂದರೆ ಮಾಸ್ತಿ. ವಿ.ಸೀ. ಆರ್.ಕೃ, ರಾಜರತ್ನಂ ಅವರನ್ನು ಹೊರತುಪಡಿಸಿದರೆ ಉಳಿದವರು ಶ್ರೇಷ್ಠರೆಂದು ಪ್ರದರ್ಶಿಸುತ್ತಿದ್ದರು.

**ಪತ್ರ ಸಾಹಿತ್ಯದಲ್ಲಿ ಸಂಶೋಧನೆ. ಸಂಗತಿ**

ಈ ಪತ್ರ ಸಾಹಿತ್ಯದಲ್ಲಿ ದೈನಂದಿನ ವ್ಯವಹಾರಕ್ಕೆ ಸಂಬಂಧಿಸಿದ ವಿಷಯಗಳು ಮಾತ್ರವಿರಲಿಲ್ಲ. ಜೊತೆಗೆ ಸಂಶೋಧನಾತ್ಮಕ ಸಂಗತಿಗಳೂ ಪೈಯವರ ಪತ್ರ ಸಾಹಿತ್ಯದಲ್ಲಿ ಪ್ರಸ್ತಾಪಗೊಂಡಿದೆ. ಅಭಿಮಾನಿಗಳು ಹಾಗೂ ವಿದ್ವತ್‌ಜನರು ಅವರ ಗಮನಕ್ಕೆ ಬಂದ ಸಂಶೋಧನ ವಿಷಯ ಸುಳಿವು ಸಿಕ್ಕಾಗ ಆ ಕುರಿತು ಪೈಯವರೊಂದಿಗೆ ಪತ್ರದ ಮೂಲಕ ವಿಷಯ ಹಂಚಿಕೊಳ್ಳುತ್ತಿದ್ದರು. ಅಲ್ಲದೆ ಅವರಲ್ಲಿ ಯಾವ ಬಿಗುಮಾನವಿರಲಿಲ್ಲ. ವಿಷಯ ತಿಳಿದುಕೊಳ್ಳದೆ ಯಾವುದೂ ಒಪ್ಪಿಕೊಳ್ಳುತ್ತಿರಲಿಲ್ಲ.

ಪೈಯವರು ಸಂಶೋಧನ ಕ್ಷೇತ್ರದಲ್ಲಿ ಒಂಟಿ ಸಲಗದಂತೆ ನಡೆದವರು ಪರರೊಡನೆ ವಿಷಯಕ್ಕೆ ಸಂಬಂಧಿಸಿದಂತೆ ಚರ್ಚೆ ಮಾಡದೆ ಅಥವಾ ಮಾಹಿತಿ ಪಡೆಯದೆ ಸ್ವತಂತ್ರವಾಗಿ ಸಂಶೋಧನ ಕಾರ್ಯದಲ್ಲಿ ತೊಡಗಿಕೊಳ್ಳುತ್ತಿರಲಿಲ್ಲ ಎಂಬುದಕ್ಕೆ ಪತ್ರ ವ್ಯವಹಾರದಲ್ಲಿ ನಿದರ್ಶನಗಳನ್ನು ಕಾಣಬಹುದು. ಪೈಯವರು ಡಿ.ಎಲ್.ನರಸಿಂಹಾಚಾರ್ ಉಗ್ರಾಣ ಮಂಗೇಶ್‌ರಾವ್, ರಾಜರತ್ನಂ, ಲೋಕಾಪುರ, ಸದಾನಂದನಾಯಕ ಮುಂತಾದವರೊಂದಿಗೆ ಪತ್ರ ವ್ಯವಹಾರಕಕ್ಕೆ ಸಂಬಂಧಿಸಿದಂತೆ ಚರ್ಚಿಸುತ್ತಿದ್ದರು. ವಿಷಯದಲ್ಲಿ ಹೆಚ್ಚು ಪರಿಣಿತಿಯನ್ನು ಹೊಂದಿದವರಲ್ಲಿ ಮಾಹಿತಿ ಪಡೆದುಕೊಳ್ಳುತ್ತಿದ್ದರು. ಉದಾಹರಣೆಗೆ ಉಗ್ರಾಣ ಮಂಗೇಶ್‌ರಾವ್ ಅವರಲ್ಲಿ ಶಾಸನ ಕುರಿತು ಮಾಹಿತಿಯನ್ನು ಕೇಳಿದರೆ, ಪೈಯವರು ಡಿ.ಎಲ್.ನರಸಿಂಹಾಚಾರ್ ಅವರ ಹೆಸರು ಸೂಚಿಸುತ್ತಿದ್ದರು. ಹಾಗೆಯೇ ಅವರು ಪತ್ರದ ಮೂಲಕ ಮಾಹಿತಿಯನ್ನು ಪಡೆದುಕೊಳ್ಳುತ್ತಿದ್ದರು.

ಪೈಯವರು ಪ್ರಕಟಿಸಿದ ಲೇಖನ ಕುರಿತು ಪತ್ರಗಳ ಮೂಲಕ ಚರ್ಚೆಗೆ ಒಳಪಡಿಸುತ್ತಿದ್ದರು. ರನ್ನನ ಕುರಿತು ಕ್ರಿ.ಶ. ೧೯೨೭ರಲ್ಲಿ ಲೇಖನ ಬರೆದರು. 'ಉದಯ ಭಾರತದ' ಎರಡು ಸಂಚಿಕೆಯಲ್ಲಿ ಗದಾಯುದ್ಧ ರಚನೆಯ ಕಾಲವನ್ನು ಕ್ರಿ.ಶ. ೯೮೨ ಎಂದು ತಿಳಿದುಕೊಂಡಿದ್ದರು. ೧೯೩೨ರಲ್ಲಿ ದೇಶರಂಜನ ಹಾಗೂ ಜಯಕರ್ನಾಟಕದಲ್ಲಿ

ರನ್ನನ ಕುರಿತು ಲೇಖನ ಮತ್ತೆ ಬರೆದರು. ಈ ಕುರಿತು ಅಧ್ಯಯನ ಮಾಡಿದಾಗ ಗದಾಯುದ್ಧವು ಅಜಿತಪುರಾಣ ಕಾಲ ಎಂದರೆ ಕ್ರಿ.ಶ. ೯೯೩ರ ನಂತರ ರಚಿತವಾಗಿರಬೇಕೆಂದು ತಿಳಿಯುತ್ತದೆ. ಕೊನೆಯ ಗಡವು ೯೯೭ (ತೈಲಪನ ಮರಣಕ್ಕಿಂತ ಮುಂಚೆ) ಎಂದು ತಿಳಿದಿದ್ದರು. ನಂತರ ಇದಕ್ಕೆ ಪೂರಕವಾಗಿ ವೆಂ.ಭೀ.ಲೋಕಾಪುರ ಪ್ರಕಾರ ಗದಾಯುದ್ಧದ ರಚನಾವಧಿಯ ಕಾಲ ಕ್ರಿ.ಶ. ೧೦೦೫-೧೦೦೮ ಎಂದಾಯಿತು. ಈ ಅಂಶವನ್ನು ಆಧರಿಸಿ ಹೇಳುವುದಾದರೆ ಪೈಯರ ನಿಲುವಿಗೆ ಗಟ್ಟಿತನ ಬಂತು ಹೀಗೆ ಗೋವಿಂದ ಪೈ ಅವರ ಪತ್ರಸಾಹಿತ್ಯ ಮಹತ್ವವನ್ನು ಪಡೆದುಕೊಂಡಿದೆ.

**ಕನ್ನಡ ಪತ್ರಿಕಾ ಸೂಚಿ (೧೮೪೩-೧೯೭೭)**

ದೇಶದ ಪ್ರಗತಿಯಲ್ಲಿ ಪತ್ರಿಕೋದ್ಯಮದ ಪಾತ್ರ ಬಹಳ ಮಹತ್ವದಾಗಿದೆ. ಹತ್ತು ಹಲವು ಸಂಗತಿಗಳನ್ನು ಶ್ರೀಸಾಮಾನ್ಯರಿಗೆ ತಲುಪಿಸುವ ಹೊಣೆ ಪತ್ರಿಕೋದ್ಯಮದ್ದಾಗಿರುತ್ತದೆ. ಪತ್ರಿಕೆಗಳು ಜನರ ಹಿತವನ್ನು ಬಯಸುತ್ತವೆ. ಸಮಾಜದ ಸಾಮರಸ್ಯವನ್ನು ಕಾಯ್ದುಕೊಳ್ಳುತ್ತವೆ. ಹಾಗೆಯೇ ನಾಡಿನ ಆರ್ಥಿಕ ಸ್ಥಿರತೆಯನ್ನು ಕಾಪಾಡಿಕೊಳ್ಳುವ ಪರಿಸರವನ್ನು ಸೃಷ್ಟಿಸುತ್ತವೆ. ಶೈಕ್ಷಣಿಕ ಪ್ರಗತಿಯನ್ನು ಬಯಸುತ್ತವೆ. ಹೀಗೆ ಹತ್ತು ಹಲವು ಸಂಗತಿಗಳನ್ನು ಒಳಗೊಂಡ ಮಹತ್ವದ ಕಾರ್ಯವನ್ನು ಈ ಪತ್ರಿಕೋದ್ಯಮ ಪೂರೈಸುತ್ತದೆ. ಭಾರತೀಯ ಪತ್ರಿಕೋದ್ಯಮದಲ್ಲಿ ಕನ್ನಡ ಪತ್ರಿಕೋದ್ಯಮವೂ ಒಂದು. ೧೮ನೇ ಶತಮಾನದ ಪೂರ್ವಭಾಗದಿಂದಲೂ ನೆಲೆ-ಬೆಲೆಯನ್ನು ಕಂಡುಕೊಂಡು ಬದಲಾವಣೆ ಸ್ವರೂಪ ಹೊಂದಿದೆ. ಕನ್ನಡ ಪತ್ರಿಕಾ ಸೂಚಿ ೧೮೪೩-೧೯೭೭ರವರೆಗೆ ಕನ್ನಡ ಪತ್ರಿಕಾ ಸೂಚಿಯು ದೊರೆಯುತ್ತದೆ. ಕನ್ನಡ ಪತ್ರಿಕೋದ್ಯಮ ಇತಿಹಾಸ ಮಾತ್ರವಲ್ಲ ಪತ್ರಿಕೆ ಸಮೀಕ್ಷೆಯ ಒಳಗೊಂಡಿರುತ್ತದೆ. ಶ್ರೀನಿವಾಸ ಹಾವನೂರ, ಶ್ರೀಮಾನ್ ಹೆಗಡೆ, ಶ್ರೀ ಭಂಡಾರಿ ಜೆಲ್ಲಪ್ಪನ್ ಇವರೆಲ್ಲರ ಪರಿಶ್ರಮದ ಪ್ರತಿಯಾಗಿ ಈ ಪತ್ರಿಕಾ ಸೂಚಿ ಪ್ರಕಟಗೊಂಡಿತು. ಸ್ವಾತಂತ್ರ್ಯಪೂರ್ವದ ದಿನಗಳಲ್ಲಿ ಪತ್ರಿಕೋದ್ಯಮ ನಡೆಸುವುದು ತುಂಬ ಕಷ್ಟಕರವಾದ ಕಾರ್ಯವಾಗಿತ್ತು. ಆದರೆ ನಂತರ ದಿನಗಳಲ್ಲಿ ಉದ್ಯಮದ ರೂಪ ತಾಳಿತು. ಏಕೆಂದರೆ ಇದರಲ್ಲಿ ಬಂಡವಾಳವನ್ನು ಹಾಕಿದರೆ ಲಾಭ ಪಡೆದುಕೊಳ್ಳಬಹುದು ಎನ್ನುವುದು ಪತ್ರಿಕೋದ್ಯಮದ ನಿಲುವಾಗಿತ್ತು.

ಸಾಹಿತಿಗಳು ಮತ್ತು ವಿದ್ಯಾವಂತರು ಪತ್ರಿಕಾ ಸಂಪಾದಕರಾಗಿ, ಪ್ರಕಾಶಕರಾಗಿ ಕಾರ್ಯನಿರ್ವಹಿಸುವುದರ ಮೂಲಕ ಪತ್ರಿಕಾ ಕ್ಷೇತ್ರವನ್ನು ಮೌಲ್ಯಯುತ ಕ್ಷೇತ್ರವನ್ನಾಗಿ ಮಾಡಿದರು. ಮಹನೀಯರಾದ ತಾತಾ ವೆಂಕಟಪ್ಪನವರ ದತ್ತಾಂತ ಚಿಂತಾಮಣಿ ಹಾಗೂ ಸಾಧ್ವಿ ಪತ್ರಿಕೆಗಳು, ಬೆನಗಲ್ ರಾಮರಾಯರು ಸುವಾಸಿನಿ, ಎಂ.ಎಸ್.ಕಾಮತರ ಆನಂದ ಹರ್ಡೇಕರ್ ಮಂಜಪ್ಪನವರ 'ಶರಣ ಸಂದೇಶ', ಶಿವರಾಮ ಕಾರಂತರ 'ವಸಂತ,' ತಾರಾನಾಥ ಪ್ರೇಮ ಬಿ.ವೆಂಕಟನಾರಣಪ್ಪ, ವಿಜ್ಞಾನಿ ಅಸಕ್ಯ ಅವರ ಕಥಾಂಜಲಿ ಮೊದಲಾದವರ ಪರಿಶ್ರಮದ ಫಲವಾಗಿ ಹೆಮ್ಮರವಾಗಲು ಸಾಧ್ಯವಾಯಿತು. ೧೯ನೇ ಶತಮಾನದ ಅಪೂರ್ವ ಪರಿಶ್ರಮದ ಫಲವಾಗಿ ಹೆಮ್ಮರವಾಗಲು ಸಾಧ್ಯವಾಯಿತು.

ಪತ್ರಿಕೆಗಳಾದ ಮೈಸೂರು ವೃತ್ತಾಂತ ಭೋದಿನಿ ಚಂದ್ರೋಯದ ಧಾರವಾಡ ಕನ್ನಡ ಸುವಾರ್ತೆ (ಮುಂಬಯಿ) ಬಿ.ಎನ್ ಗುಪ್ತರು ಪ್ರಜಾಮತ ಪತ್ರಿಕೆ, ತಿ.ತಾ.ಶರ್ಮರ ವಿಶ್ವ ಕರ್ನಾಟಕ ಈ ಎಲ್ಲಾ ಪತ್ರಿಕೆಗಳು ಕನ್ನಡ ನಾಡು, ನುಡಿ ಹಾಗೂ ಜನಜೀವನಕ್ಕೆ ಸಂಬಂಧಿಸಿದ ವ್ಯಾಸಂಗವೆನಿಸಿದ ಮಹತ್ವ ಸಂಗತಿ ಒಳಗೊಂಡಿದೆ. ಹೀಗಾಗಿ ಯುವ ಸಂಶೋಧಕರಿಗೆ ಇಂದಿಗೂ ಆಕರಗಳ ಖಣಜವಾಗಿದೆ.

**ಕನ್ನಡ ಪತ್ರಿಕೆ ಸೂಚಿಯ ಹಿನ್ನೆಲೆ**

ಈ ಪತ್ರಿಕಾ ಯೋಜನೆ ೧೯೭೯ರ ಹಿಂದೆಯೇ ಅಸ್ತಿತ್ವ ಪಡೆದುಕೊಂಡಿತು. ಶ್ರೀಮೋಹನ್ ಹೆಗಡೆ ಮೇಗರವಳ್ಳಿ, ಯ.ಬಿ.ಜಿ.ಮೂರ್ತಿ ಸಂಗ್ರಾಹಕರಾಗಿ, ಪಂಡಾರಿ ಚೆಲಪ್ಪನ್ ಮತ್ತು ಬಿ.ಶ್ಯಾಮಸುಂದರ ಸಹಾಯಕರು ಹಾಗೂ ನಿರ್ದೇಶಕರಾಗಿ ಕಾರ್ಯನಿರ್ವಹಿಸಿದರು. ಹಾವನೂರ ಅವರಿಗೆ ಮಾಹಿತಿ ಕ್ರೋಢೀಕರಿಸಲು ೭-೮ ವರ್ಷಗಳು ಬೇಕಾದವು. ಇಷ್ಟು ಅವಧಿಯಲ್ಲಿ ಎರಡು ಸಾವಿರ ಪತ್ರಿಕೆಗಳನ್ನು ಸಂಗ್ರಹಿಸಿದರು. ಕನ್ನಡ ಪತ್ರಿಕೋದ್ಯಮದ ಚರಿತ್ರೆಯನ್ನು ಆಗಿನ ತರಂಗದ ಸಂಪಾದಕರಾಗಿದ್ದ ಸಂತೋಷ ಕುಮಾರ ಗುಲ್ವಾಡಿಯರ ಸಲಹೆ ಮೇರೆಗೆ ಪ್ರಕಟಿಸಿದರು.

**ಪತ್ರಿಕೋದ್ಯಮದ ಚರಿತ್ರೆ**

ಕನ್ನಡದ ಮೊದಲ ಪತ್ರಿಕೆ 'ಮಂಗಳೂರು ಸಮಾಚಾರ' ಎಂದು ಪರಿಚಯಿಸಿದವರು ಶ್ರೀನಿವಾಸ ಹಾವನೂರ ಅವರು. ಲಂಡನ್ನಿನ ಬ್ರಿಟಿಷ್ ಗ್ರಂಥಾಲಯದಲ್ಲಿದ್ದ ಅದರ ಪ್ರತಿಯನ್ನು ಪಡೆದುಕೊಂಡು ಅದರ ಕುರಿತು ೧೯೭೫ರಲ್ಲಿ ಬರೆದರು. 'ಮಂಗಳೂರು ಸಮಾಚಾರ'ವನ್ನು ಬಾಸೆಲ್ ಮಿಶನರಿಯ ಹರ್ಮನ್ ಮೊಗ್ಲಿಂಗ್ ಕ್ರಿ.ಶ. ೧೮೪೩ರಲ್ಲಿ ಪ್ರಕಟಿಸಿದ್ದರು. ಪತ್ರಿಕೆಗಳ ವಿಷಯವನ್ನು ವಾರ್ತಿಕ, ವೈಚಾರಿಕ ಮತ್ತು ಮನೋರಂಜನೆ ಹೀಗೆ ವರ್ಗೀಕರಿಸಬಹುದು. ಜೊತೆಗೆ ಈ ಮೂರು ಅಂಶಗಳನ್ನು ವಾರ್ತೆ, ಪತ್ರಿಕೆಗಳು ದೇಶ-ವಿದೇಶಿ ಸುದ್ದಿ ಪ್ರಮುಖ ಸ್ಥಳೀಯ ಮತ್ತು ಸ್ವತಂತ್ರ ಸುದ್ದಿಯನ್ನು ಒಳಗೊಂಡಿತ್ತು. ವೈಚಾರಿಕ ಪತ್ರಿಕೆಗಳ ವ್ಯಾಪ್ತಿ ದೊಡ್ಡದು. ಭಾಷೆ, ಸಾಹಿತ್ಯ ಕಲೆ, ಧರ್ಮ, ಇತಿಹಾಸ, ಶಿಕ್ಷಣ, ವಿಜ್ಞಾನ ಮುಂತಾದ ಅಂಶಗಳ ಕಡೆಗೆ ಗಮನಕೊಡಬೇಕು. ಪತ್ರಿಕೆಗಳ ಕಾಲಾವಧಿಯನ್ನು ಆಧರಿಸಿ ಮೂರು ಭಾಗಗಳನ್ನಾಗಿ ಮಾಡಬಹುದು. ೧. ಪ್ರಾರಂಭದ ಹಂತ, ಪ್ರಯೋಗಶೀಲತೆ, (೧೮೪೩-೧೯೨೦) ೨. ಸ್ವಾತಂತ್ರ್ಯ ಹೋರಾಟದ ಅವಧಿ (೧೯೨೦-೧೯೪೭) ೩. ಸ್ವಾತಂತ್ರ್ಯ ಪಡೆದ ಅವಧಿ (೧೯೪೭-೧೯೭೦)ವರೆಗೆ. ಕನ್ನಡ ಪತ್ರಿಕೆ ಮೊದಲ ಅವಧಿಯ ಪ್ರಾಯೋಗಿಕ ಸ್ವರೂಪ ನಿರೂಪಿತಗೊಂಡಿದೆ. ಆ ಸಂದರ್ಭದ ಹೋರಾಟ ವಿಷಯ ಸರ್ವರಾಜ್ಯದ ವರ್ತಮಾನವನ್ನು ದಾಸರು, ಸಾಹಿತಿಗಳು ಈ ವಿಷಯ ಜೊತೆಗೆ ಭಾರತದ ಜನಸಂಖ್ಯಾ ಆಧರಿಸಿ, ಇಂಗ್ಲೆಂಡ್ ಆದಾಯಕ್ಕೆ ಸಂಬಂಧಿಸಿದ ಚೀನಾದಲ್ಲಿ ಜರುಗಿದ್ದ

ಯುದ್ಧ ಮೊದಲಾದ ಪತ್ರಿಕೆ ಸುದ್ದಿ ಪ್ರಕಟಗೊಂಡ ಸಂಗತಿ ಈ ಸ್ಥಳೀಯರಿಗೆ ಜನರಿಗೆ ಅಗತ್ಯವಿತ್ತೆ? ಆದರೆ ಮೊಗ್ಲಿಂಗ್ ಈ ತೆರನಾದ ಸುದ್ದಿಯ ಪ್ರಭಾವ ಸ್ಥಳೀಯರ ಮೇಲೆ ಪರಿಣಾಮ ಬೀರಿತು. ಅಲ್ಲದೆ ಕನ್ನಡ ಲಿಪಿ ಸುಧಾರಣೆ ಮಾಡುವಲ್ಲಿ ಪ್ರಗತಿ ಕಾಣಲಿಲ್ಲ. ಕನ್ನಡ ಮೊದಲ ಕಥೆಗಾರ ಯಾರು? ಪಂಜೆಯವರೋ ಕಾಮತರೋ ಎಂಬುವುದನ್ನು ಪಂಜೆಯ ಮೊದಲ ಕಥೆಯ ಜನಕ ಎನ್ನುವುದನ್ನು ಸ್ಪಷ್ಟಪಡಿಸುತ್ತಾರೆ.

ಭಾಷಾ ಕುಟುಂಬದವರು ಮೈಸೂರು ವೃತ್ತಾಂತ, ಭೋದಿನಿ, ವಾರ ಪತ್ರಿಕೆಗಳನ್ನು ಐದಾರು ವರ್ಷ ನಡೆಸಿದರು. ಡಿ.ವಿ.ಜಿಯವರ ಜ್ಞಾಪಕ ಚಿತ್ರಶಾಲೆಯನ್ನು ನೆನಪಿಸಿಕೊಂಡರು. ಸಂಪಾದಕ ಪ್ರಕಾಶಕರಾದ ಭಾಷಾಂ ತಿರುಮಲಾಚಾರ್ಯ ಮತ್ತು ಭಾಷ್ಯಾಚಾರ್ಯರ ಅವರಿಗೆ ಮುಮ್ಮಡಿ ಕೃಷ್ಣರಾಜರು ಧನಸಹಾಯ ಮಾಡಿದರು. ಅಲ್ಲದೆ ಪತ್ರಿಕೆಗೆ ಹೊಸ ಸ್ವರೂಪವನ್ನು ಕೊಟ್ಟರು ನಂತರ ಮೈಸೂರು ವೃತ್ತಾಂತ ಭೋದಿನಿಯ ಬದಲಿಗೆ ಕರ್ನಾಟಕ ಪ್ರಕಾಶಿಕಾ ಪಕ್ಷ ಪತ್ರಿಕೆಯು ಪ್ರಾರಂಭಿಸಿದರು. ಇದು ಮೂರ ನಾಲ್ಕು ವರ್ಷ ನಡೆಯಿತು. ನಂತರ ಸ್ಥಗಿತಗೊಂಡಿತು. ಆದರೆ ಮತ್ತೆ ಕ್ರಿ.ಶ.೧೮೭೩ ವಾರಪತ್ರಿಕೆಯಾಗಿ ಮುಂದುವರಿಯಿತು. ಈ ಅಂಶಗಳನ್ನು ಆಧರಿಸಿ ಕನ್ನಡ ಪತ್ರಿಕಾ ಪಿತಾಮಹರೆಂದು ಕರೆದರು.

ಮೈಸೂರು ವೃತ್ತಾಂತ ಭೋದಿನಿ ಮೈಸೂರಿಗೆ ಸೀಮಿತವಾಗಿತ್ತು. ಅಂದರೆ ಕ್ರಿ.ಶ.೧೯೭೪ರ ನಂತರ ಪತ್ರಿಕೆ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿತು. ಭೋದಿನೀ ಹಾಗೂ ಪ್ರಕಾಶಿಕೆ ಈ ಪತ್ರಿಕೆಗಳಲ್ಲಿ ಟೀಕೆ ಟಿಪ್ಪಣಿಯು ಪ್ರಕಟಗೊಳ್ಳುತ್ತಿದ್ದವು. ಕಲಕತ್ತೆಯ ಪತ್ರಿಕೆಯಾದ 'ಇಂಡಿಯಾ ಮಿತ್ರದಲ್ಲಿ' ಉಲ್ಲೇಖವಾಗಿದೆ. ಧಾರವಾಡದ ಭೋದಿನಿ ಪತ್ರಿಕೆಯು ನಂತರ ಕನ್ನಡ ಜ್ಞಾನಭೋದಕ ಪತ್ರಿಕೆಯು ಬೆಳಗಾವಿಯಲ್ಲಿ ಪ್ರಾರಂಭವಾಯಿತು. ಇದರ ಉದ್ದೇಶ ಕನ್ನಡ ಭಾಷೆ ಮತ್ತು ಪಠ್ಯ ಪುಸ್ತಕ ಜನಪ್ರಿಯಗೊಳಿಸುವುದು ಅಲ್ಲದೆ ಕನ್ನಡ ಪುಸ್ತಕ ಕೊರತೆ ಕಾಣದಂತೆ ನೋಡಿಕೊಳ್ಳುವುದು. ಇದರ ಜೊತೆಗೆ ಶೈಕ್ಷಣಿಕ ಸಂಗತಿ ಕುರಿತು ಪರಿಚಿತಗೊಂಡಿದೆ. ಈ ಪತ್ರಿಕೆಗಳ ಉದ್ದೇಶ ಶಿಕ್ಷಣ ಮತ್ತು ಇತರ ವಿವಿಧ ವಿಷಯಗಳ ಕುರಿತು ನಿರೂಪಿತಗೊಂಡಿದೆ.

'ಮಠ ಪತ್ರಿಕೆ'ಯು ಮುಂಬಯಿ ಕರ್ನಾಟಕದಲ್ಲಿ ಮೊತ್ತ ಮೊದಲಿಗೆ ಸುದ್ದಿಯನ್ನು ಬಿತ್ತರಿಸಿತು. ಮಠ (ಅಂದರೆ ಇದು ಶೈಕ್ಷಣಿಕ ಪತ್ರಿಕೆಯಾಗಿ ಹೊರಹೊಮ್ಮಿತು.) ಕಾರ್ಯವ್ಯಾಪ್ತಿ ಹಳ್ಳಿ ಹಳ್ಳಿಗಳಿಗೂ ತಲುಪಿತು. ಡೆಪ್ಯೂಟಿ ಚನ್ನಬಸಪ್ಪನವರು ಈ ರೀತಿ ಹೇಳಿದರು. "ಚಿತ್ರದುರ್ಗದ ಮುರುಘ ಮಠದ ಜಗದ್ಗುರು ಬೆಳಗಾವಿಯಲ್ಲಿ ಅನ್ನ ಕೊಡುವುದಕ್ಕೋಸ್ಕರ ಪ್ರತಿ ತಿಂಗಳು ೩೦೦ರೂ ಕೊಡಲು ಒಪ್ಪಿದರು. ಈ ಹಣದಿಂದ ಸುಮಾರು ೫೦ ಜನ ನಿರಾಶ್ರಿತ ವಿದ್ಯಾರ್ಥಿಗಳಿಗೆ ಎರಡು ಹೊತ್ತು ಊಟ ಮತ್ತು ವಾಸಸ್ಥಳ ಒದಗಿಸಿ ಕೊಡುತ್ತಿದ್ದರು."[೨] ಹೀಗಾಗಿ ನಂತರದ ದಿನಗಳಲ್ಲಿ ವೀರಶೈವ ಬೋರ್ಡಿಂಗಳಾಗಿ ಪ್ರಾರಂಭಿಸಲು ಇದು ಕಾರಣವಾಯಿತು.

ಅಂದಿನ ಪತ್ರಿಕೆಗೆ ಲೋಕಶಿಕ್ಷಣವೇ ಮುಖ್ಯವಾಗಿತ್ತು. ಲೌಕಿಕ ವಿಷಯಗಳಲ್ಲದೆ ಜಗತ್ತಿನ ವಿದ್ಯಮಾನಗಳನ್ನು ತಿಳಿಸುತ್ತಿದ್ದವು. ಮೈಸೂರು ಸಂಸ್ಥಾನದಲ್ಲಿರುವ ಪ್ರಜಾ ಪ್ರತಿನಿಧಿ ಸಭೆಗೆ ಕಾನೂನು ಮಾಡುವ ಅಧಿಕಾರವಿರಲಿಲ್ಲ. ಆದರೆ ಕಾನೂನಿನ ಕುಂದು ಕೊರತೆಗಳ ಕುರಿತು ಚರ್ಚಿಸುವ ಅವಕಾಶವಿತ್ತು. "ಕರ್ನಾಟಕದಲ್ಲಿ ಪ್ರಥಮ ದಿನಪತ್ರಿಕೆಯಾದ 'ಸೂರ್ಯೋದಯ ಪ್ರಕಾಶಿಕೆ'ಯೂ ದಿವಾನರ ಆಡಳಿತದ ಕಾರ್ಯವೈಖರಿಯನ್ನು ಟೀಕಿಸುತ್ತಿತ್ತು. ಹೀಗೆ ಪತ್ರಿಕೆಗಳು ಸರ್ಕಾರದ ಕೆಲಸಗಳನ್ನು ಟೀಕಿಸುತ್ತಿದ್ದವು. ಇಂಗ್ಲಿಷ್ ಪತ್ರಿಕೆಯನ್ನು ಎಂ.ಗೋಪಾಲ ಅಯ್ಯಂಗಾರ್ ನಡೆಸುತ್ತಿದ್ದರು. ಆಗ ಸರ್ಕಾರ ಸುದ್ದಿ"[೫] ಮಾಡಬಾರದು ಎಂದು ಪತ್ರಿಕೆಗೆ ಕಾನೂನಿನ ನಿರ್ಬಂಧವನ್ನು ಹೇರಿ ಸಂಪಾದಕರನ್ನು ಗಡಿಪಾರು ಮಾಡಿದರು.

ಮಹತ್ವದ ಸಂಗತಿ ಎಂದರೆ ಅವರು ಸರ್ಕಾರದ ರಹಸ್ಯಗಳನ್ನು ಬಹಿರಂಗಪಡಿಸಿದರು. ೧ ಬಂಗಾಲದ ವಿಭಜನೆ ಮಾಡುವ ಕುರಿತು, (೧೯೦೫) ಮದ್ರಾಸ್ ಸರ್ಕಾರ ವ್ಯಾಪ್ತಿಗೆ ಬರುವ ಜಿಲ್ಲೆಗಳಾದ ಬೆಂಗಳೂರು ಮತ್ತು ಕೋಲಾರವನ್ನು ಉಳಿಸಿಕೊಂಡು ಅದರ ಬದಲಾಗಿ ಬಳ್ಳಾರಿ, ಅನಂತಪುರವನ್ನು ಬಿಟ್ಟುಕೊಡುವ ರಹಸ್ಯ ಸಂಗತಿಯನ್ನು 'ದೇಶಭಿಮಾನಿ' ಪತ್ರಿಕೆಯು ಬಹಿರಂಗಪಡಿಸಿತು. ಈ ಕಾರಣಕ್ಕಾಗಿ ೧೯೦೮ರಲ್ಲಿ ಈ ಪತ್ರಿಕೆ ಮೇಲೆ ನಿರ್ಬಂಧವನ್ನು ಹೇರಿದರು. (The Mysore New Paper Regulation) ನಿರ್ಬಂಧ ನಿಯಮಗಳು ಈ ರೀತಿ ಇವೆ. ೧. ಸರ್ಕಾರದ ಪೂರ್ವ ಅನುಮತಿ ಇಲ್ಲದೆ ಪತ್ರಿಕೆ ಹೊರಡಿಸುವಂತಿಲ್ಲ. ೨. ಅನುಮತಿ ಯಾವಾಗಬೇಕಾದರೂ ಹಿಂಪಡೆದುಕೊಳ್ಳಬಹುದು. ೩. ಪತ್ರಕರ್ತರನ್ನು ಮೈಸೂರಿಂದ ಹೊರಹಾಕಬಹುದು. ಅಲ್ಲದೆ ಅನುಮತಿ ಇಲ್ಲದೆ ಸಂಸ್ಥಾನದ ಒಳಬರುವಂತಿಲ್ಲ. ೪. ಪತ್ರಿಕೆ ಸ್ಥಿರ-ಚರ ವಸ್ತುಗಳು ಹಿಂದಿನ ಸಂಚಿಕೆ ಜಪ್ತಿ ಮಾಡಿ ಅವನ್ನು ಸರ್ಕಾರ ವಿವೇವಾರಿ ಮಾಡಿಕೊಳ್ಳಬಹುದು. ೫. ಸಂಸ್ಥಾನ ಹೊರಗಡೆ ಮುದ್ರಿಸಿದರೆ ಅದನ್ನು ಯಾರು ತೆಗೆದುಕೊಳ್ಳುವಂತಿಲ್ಲ. ೬. ಇಂಥ ಕೆಲಸಗಳಿಗೆ ಪ್ರತ್ಯಕ್ಷ ಮತ್ತು ಪರೋಕ್ಷ ಸಹಾಯ ಮಾಡಿದರೆ ಅಂಥವರನ್ನು ಸಂಸ್ಥಾನದಿಂದ ಹೊರಹಾಕಬಹುದು.

**ಧಾರವಾಡ ಪ್ರಥಮ ವೃತ್ತಿಪತ್ರಿಕೆ**

ಸ್ಥಳೀಯವಾಗಿ ಅಸ್ತಿತ್ವವನ್ನು ಕಂಡುಕೊಂಡ ಪತ್ರಿಕೆ ಎಂದರೆ 'ಚಂದ್ರೋದಯ'. ಆಗಿನ ಇತರ ಪತ್ರಿಕೆಗಳಾದ ಬೆಳಗಾವಂ ಸಮಚಾರ, ಧಾರವಾಡ ವೃತ್ತ, ಹುಬ್ಬಳ್ಳಿ ವೃತ್ತ, ಕರ್ನಾಟಕ ವೃತ್ತ ಇತ್ಯಾದಿ ಕಾರ್ಯನಿರ್ವಹಿಸುತ್ತಿದ್ದವು. ಕನ್ನಡ ಜನರ ಬದುಕಿನ ನೈಜ ಸಂಗತಿಗಳನ್ನು ಹಾಗೂ ೧೮೮೫ರಲ್ಲಿ ಇಂಗ್ಲೆಂಡ್, ರಷ್ಯನ್ನರ ನಡುವಿನ ಯುದ್ಧ ಪರಿಣಾಮವಾಗಿ ಈ ನಾಡಿನ ಜನರಿಂದ ಹಣ ಸಂಗ್ರಹಿಸಿ ಅದನ್ನು ಇಂಗ್ಲೆಂಡಿಗೆ ಕಳುಹಿಸಿದ ಮತ್ತು ಇಲ್ಲಿಯ ನೌಕರರು ಸಂಬಳದ ೧/೪ರ ಭಾಗವನ್ನು ಪ್ರತಿಯೋರ್ವನು ಕೊಡಬೇಕಾದ ಈ ಸುದ್ದಿಯನ್ನು ಪತ್ರಿಕೆ ಪ್ರಸಾರ ಮಾಡಿತ್ತು. ಹಾಗೆಯೇ 'ಹಿಂದೂ ಮತಾಭಿಮಾನಿ' ಪತ್ರಿಕೆಯು

ಕನ್ನಡ ಘನತೆಯನ್ನು ಮತ್ತು ಹಿಂದೂ ಧರ್ಮದ ಸಂರಕ್ಷಣೆ ಕೆಲಸವನ್ನು ಪತ್ರಿಕೆಯ ಮಾಡಿತು. ೧೮೮೮ರಲ್ಲಿ ಬೈಬಲ್‌ನ ಕೆಲವು ಮಹತ್ವಗಳನ್ನು ಎತ್ತಿ ತೋರಿತು. ಹಿಂದೂ ಮಿಶನ್ ಮತ್ತು ಕ್ರಿಶ್ಚಿಯನ್ ಮಿಶನರಿ ಹೀಗೆ ಎರಡು ಸಂಸ್ಥೆಗಳಿದ್ದು ಹಿಂದೂ ಮಿಶನ್ ಹಿಂದೂಗಳ ಧರ್ಮ ಪ್ರಚಾರ ಕಿರುಕೃತಿಯನ್ನು ಪ್ರಕಟಿಸಿದರು. 'ಧನುರ್ದಾರಿ' ಪತ್ರಿಕೆಗೆ ಆರಂಭದಲ್ಲಿ ಎಡರುತೊಡರು ಎದುರಾದವು. ವರ್ತಮಾನ ಸುದ್ದಿಯನ್ನು ಪ್ರಕಟಿಸುವುದು ತುಂಬ ಜರೂರಾಗಿತ್ತು. ಈ ಪತ್ರಿಕೆಯು ಆರ್ಥಿಕವಾಗಿ ಪ್ರಗತಿಯಾಗಲಿಲ್ಲ; ಆದರೆ ಸಂಪಾದಕರಿಗೆ ಉತ್ಸಾಹ ಕುಗ್ಗಲಿಲ್ಲ. ದಾವಣಗೆರೆ ಶಾಲಾ ಮಾಸ್ತರ್ ಅವರ ಬಳಿ 'ವಾಗ್ದೇವಿ ವಿಲಾಸ ಪ್ರೆಸ್' ಇತ್ತು. ಅದನ್ನು ವರ್ಷಕ್ಕೆ ೩೦೦ರೂ. ರಂತೆ ಮುದ್ರಣ ಯಂತ್ರವನ್ನು ಬಾಡಿಗೆ ಗೊತ್ತು ಮಾಡಿ ಪತ್ರಿಕೆ ಪ್ರಾರಂಭಿಸಿದರು.

ಕಂಪೋಸಿಟರನ್ನು ಹಾವೇರಿಗೆ ಕರೆಸಿದರು. ೧೯೦೬ರಲ್ಲಿ ವಾರಪತ್ರಿಕೆಯನ್ನು ಪ್ರಕಟಿಸಿದರು. ಅಲ್ಲದೆ ಮರಾಠಿ ಪತ್ರಿಕೆ ಕೇಸರಿ ಆ ಕಾಲಘಟ್ಟದ ವರ್ತಮಾನ ಸುದ್ದಿಗಳನ್ನು, ಬ್ರಿಟಿಷ್ ಅಧಿಕಾರಿಗಳ ದಬ್ಬಾಳಿಕೆ ಮತ್ತು ರಾಷ್ಟ್ರೀಯ ಕಾಂಗ್ರೆಸ್‌ನ ವರ್ತಮಾನದ ಸುದ್ದಿಯನ್ನು ಕೊಡುತ್ತಿತ್ತು. ಹೀಗಾಗಿ ಚಂದಾದಾರರ ಸಂಖ್ಯೆ ಹೆಚ್ಚಾಯಿತು. ಆದರೆ ಪ್ರಗತಿ ಕಾಣಲಿಲ್ಲ. ಅಂದರೆ ಪ್ರೆಸ್ ಮಾಲೀಕರು ಮುದ್ರಣದ ಯಂತ್ರವನ್ನು ಮರಳಿ ಪಡೆದರು. ಹೀಗಾಗಿ ಪತ್ರಿಕೆಯು ಸ್ಥಗಿತಗೊಂಡಿತು. ನಂತರ ಹಳೇ ಮಾದರಿ ಮುದ್ರಣ ಯಂತ್ರವನ್ನು ಖರೀದಿಸಿ ಮತ್ತೆ ಕಾರ್ಯ ಆರಂಭಿಸಿದರು. ಅಂದರೆ ೧೯೦೮ರಲ್ಲಿ ರಾಜಕಾರಣ ಹೊಸ ರೂಪ ಪಡೆದಿತ್ತು. ಕ್ರಾಂತಿಕಾರು ಕೊಲೆ ಸುಲಿಗೆ ನಡೆಸುತ್ತಿದ್ದರು. ಅದರ ಪ್ರತಿಯಾಗಿ ಕ್ರಾಂತಿಕಾರರ ಭಾಷಣಗಳನ್ನು ಅನುವಾದಿಸಿ ಪ್ರಕಟಿಸಿದರು. ಆಗಿನ ಪತ್ರಕರ್ತರು ಇತರೆ ಬೇರೆ ಬೇರೆ ಉದ್ಯೋಗದಿದ್ದರು. ಮಾತೃಭೂಮಿ ಸಂಪಾದಕರಾದ ಎಂ.ಎಲ್.ಶ್ರೀಕಂಠಯ್ಯನವರು ವೃತ್ತಿಯಿಂದ ಅಡ್ವಕೇಟ್ ಜನರಲ್‌ರಾಗಿ, ತಿ.ತಾ.ಶರ್ಮರವರು ಶಾಸನದ ಸಹಾಯಕರಾಗಿದ್ದರು ಪ್ರಜಾಮತ ಪತ್ರಿಕೆಯವರು ಉದ್ಯಮಿಯಾಗಿದ್ದರು. ರಾಷ್ಟ್ರಬಂಧು ಪತ್ರಿಕೆಗೆ ಕಡ್ಲಂಗೋಡು ಶಂಕರಭಟ್ಟ ಮತ್ತು ನಿರಂಜನರು ತಮ್ಮನ್ನು ಅರ್ಪಿಸಿಕೊಂಡರು.

**'ವಿಶ್ವಕರ್ನಾಟಕ'** ಪತ್ರಿಕೆಯು ಸ್ವಾತಂತ್ರ್ಯ ಚಳುವಳಿಯ ಸ್ವರೂಪವನ್ನು ಪರಿಚಯಿಸಿತು. ಅವರು ನೌಕರಿ ಬಿಟ್ಟು ಮೈಸೂರು ಸ್ಟಾರ್ ಪತ್ರಿಕೆಯಲ್ಲಿ ಕಾರ್ಯನಿರ್ವಹಿಸಿದ್ದರು. ಅಲ್ಲದೆ ೧೯೨೫ರಲ್ಲಿ ವಿಶ್ವಕರ್ನಾಟಕ ವಾರಪತ್ರಿಕೆ ಪ್ರಾರಂಭಿಸಿದರು. ಈ ಅವಧಿಯಲ್ಲಿ ಗಾಂಧಿ ಮುಂದಾಳತ್ವದಲ್ಲಿ ಸಹಕಾರ ಚಳುವಳಿ, ಗ್ರಾಮ ಪುನರುಜ್ಜೀವನ ಇನ್ನು ಮುಂತಾದ ಚಳುವಳಿಗಳು ಪ್ರಾರಂಭವಾದವು. ಹೀಗಾಗಿ ಜನಸಾಮಾನ್ಯರಲ್ಲಿ ರಾಜಕೀಯ ಪ್ರಜ್ಞೆ ಮೂಡಿಸುವುದರಲ್ಲಿ ಭಾಷಂ ಕುಟುಂಬದ ತಾತಯ್ಯ, ಡಿ.ವಿ.ಜಿ. ವೆಂಕಟಪ್ಪ ಇವರ ಪಾತ್ರ ಅಪಾರವಾದುದು. ಸ್ವರಾಜ್ಯ ಸಂಗ್ರಾಮದಂತಹ ಸತ್ಯಾಗ್ರಹಗಳ ವರ್ಣನೆ ಕಾಣಬೇಕೆಂದರೆ ವಿಶ್ವಕರ್ನಾಟಕ ಪತ್ರಿಕೆಯನ್ನು ಗಮನಿಸಿದರೆ ಸಾಕಿತ್ತು. ಹೀಗೆ ಮಹತ್ವದ ಸಂಗತಿಗಳು ಇಲ್ಲಿ ನಿರೂಪಿತಗೊಂಡಿದೆ.

ಪ್ರಬುದ್ಧ ಕರ್ನಾಟಕದ ಸಂಪಾದಕರಾದ ಎ.ಆರ್.ಕೃಷ್ಣಶಾಸ್ತ್ರಿ ಈ ರೀತಿ ಹೇಳಿದರು. "ಶರ್ಮರೇ ಈ ಲೇಖನದಲ್ಲಿ ತೋರುವ ಸೌಮ್ಯ ಹಾಗೂ ಶಾಸ್ತ್ರ ಮರ್ಯಾದೆ ನಿಮ್ಮ ವಿಶ್ವಕರ್ನಾಟಕದಲ್ಲಿ ಕಂಡುಬರುವುದಿಲ್ಲ? ಅದಕ್ಕೆ ಪ್ರತಿಯಾಗಿ ನಮ್ಮವರು ಈ ರೀತಿ ಉತ್ತರಿಸಿದರು. ಪ್ರಭುದ್ಧ ಕರ್ನಾಟಕದ ಬರಹದ ಶಾಸ್ತ್ರ ಮರ್ಯಾದೆ ಸಿಕ್ಕರೆ ವಿಶ್ವಕರ್ನಾಟಕ ಶಾಸ್ತ್ರ ಮರ್ಯಾದೆಯೇ ಸರಿ"[೬] ಎಂಬುದಾಗಿ ಸಮರ್ಥಿಸಿಕೊಂಡಿರುವುದನ್ನು ಉಲ್ಲೇಖಿಸಲಾಗಿದೆ.

**ಚಂದಿಕೆ ಪತ್ರಿಕೆ**

ಈ ಪತ್ರಿಕೆಯು ಕ್ರಿ.ಶ. ೧೯೦೮ ಏಪ್ರಿಲ್‌ರಂದು ಪ್ರಕಟವಾಯಿತು. ಪ್ರಾರಂಭದಲ್ಲಿ ೫೦೦ ಪ್ರತಿಗಳು ಹೋದವು. ನಂತರ ೨೫೦೦ ಚಂದಾದಾರರ ವಿಸ್ತಾರವನ್ನು ಪಡೆದುಕೊಳ್ಳುತ್ತದೆ. ಅದರಲ್ಲಿ ಪ್ರಕಟಗೊಳ್ಳುವ ಕಾದಂಬರಿ ಎಲ್ಲರನ್ನು ಆಕರ್ಷಿಸಿತು. ಕಮಲ ಕುಮಾರಿ, ವೈಭವ, ಮೃಣಾಲಿನಿ, ಪ್ರಬುದ್ಧ, ಪದ್ಮನಯನೆ ಇತ್ಯಾದಿ ಪತ್ರಿಕೆಗಳು ದಿನದಿಂದ ದಿನಕ್ಕೆ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳುವಂತಾಯಿತು. ಅಂದರೆ ಧಾರವಾಡ, ವಿಜಾಪುರ, ಬೆಳಗಾವಿ, ಮೈಸೂರು, ಕಾರವಾರ ಅಲ್ಲದೆ ಕನ್ನಡದ ಹೊರ ಪ್ರಾಂತ್ಯಗಳ ಹೈದ್ರಾಬಾದ್, ಮದ್ರಾಸ್ ಪ್ರಾಂತ್ಯಗಳಲ್ಲಿ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿತು.

**ಕವಿತೆ ರೂಪದ ಪತ್ರಿಕೆ**

ಈ ಪತ್ರಿಕೆ ಕಾವ್ಯಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಡುತ್ತಿತ್ತು. ಅಲ್ಲದೆ ಯುವ ಕವಿಗಳಿಗೆ ಪ್ರೇರಣೆ ನೀಡಬೇಕು ಎಂಬ ಉದ್ದೇಶವನ್ನು ಹೊಂದಿತ್ತು. ಹಾಗೆಯೇ ಪ್ರಭಾತ ಪತ್ರಿಕೆಯು ೧೯೧೮ರಲ್ಲಿ ತನ್ನ ಕಾರ್ಯವನ್ನು ಆರಂಭಿಸಿತು. ಇದರಲ್ಲಿ ಕಿತ್ತೂರಿನ ಔಷಧ ಸಂಗ್ರಹ ಕುರಿತು ಪ್ರಸ್ತಾಪಗೊಂಡಿದೆ. ದ.ರಾ.ಬೇಂದ್ರೆ ಶಾಂತಕವಿಗಳು, ಕೋಲಾರದ ಚನ್ನಕೃಷ್ಣಯ್ಯ ಉತ್ತರ ಕನ್ನಡ ಜಿಲ್ಲೆ ಕಡೆಯರೆಲ್ಲ ಸೇರಿ ಪತ್ರಿಕೆಯಲ್ಲಿ ಬರೆಯಲುತೊಡಗಿದರು.

**ಕರ್ಮವೀರ ವೀರಗಾಥೆ**

ಈ ಪತ್ರಿಕೆಯು ೧೯೨೧ರ ಫೆಬ್ರವರಿ ೧೫ರಂದು ತನ್ನ ಕಾರ್ಯವನ್ನು ಪ್ರಾರಂಭಿಸಿತು. ಆಗ ಗಾಂಧಿ ಕಾಲ ಪ್ರಾರಂಭವಾದ ದಿನವಾಗಿತ್ತು. ಪತ್ರಿಕೆ ಹುಬ್ಬಳ್ಳಿಯಲ್ಲಿ ಪ್ರಾರಂಭಗೊಂಡು ರಂ.ರಾ.ದಿವಾಕರರು ಮತ್ತು ಧಾರವಾಡದ ಸಾಹಿತ್ಯಸಕ್ತರು ಇದರ ರಕ್ಷಣೆಗೆ ನಿಂತಿದ್ದರು. ೧೯೨೧ರಲ್ಲಿ ಅಸಹಕಾರ ಚಳುವಳಿಯು ಪ್ರಾರಂಭಗೊಂಡು ಧಾರವಾಡ ಹೆಂಡದಂಗಡಿ ಮುಂದೆ ಪಿಕೆಟಿಂಗ್, ಗೋಲಿಬಾರ್ ನಡೆಯಿತು. ಆ ಅವಧಿಯಲ್ಲಿ ಮೂವರು ಮಡಿದರು. ಈ ಚಳುವಳಿ ಸ್ವರೂಪವನ್ನು ಕರ್ಮವೀರ ಪತ್ರಿಕೆ ಪ್ರಕಟಿಸಿತು. ಈ ಅಂಶವನ್ನು ಆಧರಿಸಿ ಈ ಸಂಪಾದಕರನ್ನು ಬಂಧನಗೊಳಪಡಿಸಿದರು. ಈ ಎಲ್ಲಾ ಸಂದರ್ಭವನ್ನು ಆಧರಿಸಿ ಹುಕ್ಕೇರಿ ರಾಮರಾಯರು ಪತ್ರಿಕೆಯ ಸಂಪಾದನೆಯಲ್ಲಿ ಆಲೂರು ವೆಂಕಟರಾಯರು ಮತ್ತು ಶಂಬಾ ಜೋಶಿಯವರು ಹೆಸರನ್ನು ಸೂಚಿಸಿರಲಿಲ್ಲ. ನಂತರದಲ್ಲಿ 'ಭೂರಕ್ಕ ಸಾಯ ಸ್ವಾಹಂ' ಲೇಖನ ಪ್ರಕಟಗೊಂಡ ಕಾರಣಕ್ಕಾಗಿ ಮತ್ತು ರಾಜ್ಯದ್ರೋಹದ ಆರೋಪ ಬಂತು. ಈ

ಲೇಖನವನ್ನು ಆಲೂರು ವೆಂಕಟರಾಯರು ಬರೆದಿದ್ದರು. ಹೀಗಾಗಿ ಆಲೂರು ವೆಂಕಟರಾಯ ಕರ್ಮವೀರಕ್ಕೆ ಶ್ರೀರಕ್ಷೆಯಾಗಿ ನಿಂತಿದ್ದರು.

**'ಸಂಯುಕ್ತ ಪತ್ರಿಕೆ'** ಕ್ರಿ.ಶ. ೧೯೨೯ರಲ್ಲಿ ಬೆಳಗಾವಿಯಲ್ಲಿ ತನ್ನ ಖಾತೆಯನ್ನು ತೆರೆದುಕೊಂಡಿತು. ನಂತರದ ದಿನಗಳಲ್ಲಿ ಹುಬ್ಬಳ್ಳಿಗೆ ವರ್ಗಗೊಂಡು ಈ ಎರಡು ಪತ್ರಿಕೆಗಳ ಕೃಷ್ಣ ಮತ್ತು ತುಂಗಭದ್ರೆ ಸಂಗಮದಂತೆ ಉತ್ತರ ಕನ್ನಡ ಜನರ ಬದುಕಿಗೆ ಜೀವನಾಡಿಯಾಗಿ ಕಾರ್ಯನಿರ್ವಹಿಸಿತು. ಪತ್ರಿಕೆಯ ಸಂಪಾದಕರು ಇಬ್ಬರು ಸಂಪ್ರದಾಯಸ್ಥರು; ಆದರೆ ನಾಲ್ಕು ಜನ ಘಟ್ಟದ ಮೇಲಿನ ಉತ್ತರ ಕರ್ನಾಟಕದವರು. ಮುಂಬಯಿ ಸರ್ಕಾರ ಬಾಂಬೆ ಸೆಂಟ್ರಲ್ ಕೋ ಆಫರೇಟ್ ಇನ್ಸಿಸ್ಟಿಟೂಟ್ ದ.ಕ. ಜಿಲ್ಲೆಯ ಸಂಸ್ಥೆಯ ಸಹಯೋಗದೊಂದಿಗೆ ಕ್ರಿ.ಶ. ೧೯೧೯ರ ಪತ್ರಿಕೆ ಪುತ್ತೂರಿನಲ್ಲಿ ತನ್ನ ಖಾತೆಯನ್ನು ತೆರೆದುಕೊಂಡಿತು. ಪೂರ್ವದ ದಿನಗಳ ಕೆನರೀಜ್ ವರ್ನ್ಯಾಕ್ಯುಲರ್ ಸೊಸೈಟಿ, ಮುಂಬಯಿ ಸರ್ಕಾರದವರು ಬಾಸೆಲ್ ಮಿಶನ್ನಿಗೆ ಅನುದಾನ ಕೊಟ್ಟಿದ್ದು ಈ ಪತ್ರಿಕೆಗೆ ಮುಂಬಯಿ ಕರ್ನಾಟಕದವರು ಪ್ರೇರಣೆಗೊಂಡರು. ಅಂದರೆ ದಕ್ಷಿಣ ಕನ್ನಡ ಜಿಲ್ಲೆ ಮೊಳಹಳ್ಳಿ ಶಿವರಾವ್ ಎತ್ತುಗಡೆಯಿಂದ ಚಳುವಳಿಯ ತೀವ್ರವಾಗಿ ಪ್ರಾರಂಭಗೊಂಡಿದೆ.

ಸ್ವಾತಂತ್ರ್ಯಪೂರ್ವದಲ್ಲಿ ಕನ್ನಡ ಪತ್ರಿಕೆಗಳು ನಾಡಿನ ಪ್ರಗತಿಗಾಗಿ ತಮ್ಮ ಸೇವೆಯನ್ನು ಅರ್ಪಿಸಿಕೊಂಡವು. ಅವುಗಳ ಉದ್ದೇಶ ತಾರ್ಕಿಕ ವೈಚಾರಿಕ ಮತ್ತು ಮನೋರಂಜನೆ ಆಗಿದ್ದರೂ ದೇಶದ ಸ್ವಾತಂತ್ರ್ಯ ಚಳುವಳಿಯಲ್ಲಿ ಹಲವು ಪತ್ರಕರ್ತರು ತೊಡಗಿಕೊಳ್ಳುವ ಮೂಲಕ ಜನಸಾಮಾನ್ಯರನ್ನು ತೊಡಗಿಸಿಕೊಳ್ಳುವಂತೆ ಮಾಡಿದರು. ಸ್ವಾತಂತ್ರ್ಯ ಪಡೆಯುವ ಅವರ ಚಿತ್ತ ಈ ನಾಡಿನ ಚಳುವಳಿಯ ಕಡೆಗಿರುವಂತೆ ಗಮನಹರಿಸಿದರು. ತೃತೀಯ ಘಟ್ಟದಲ್ಲಿ ಪತ್ರಿಕೋದ್ಯಮ ಹಲವು ಬಗೆಯ ಕವಲು ದಾರಿಹಿಡಿಯಿತು. ಪತ್ರಕರ್ತರಲ್ಲಿ ಸೇವಮನೋಭಾವನೆ ಬದಲಾಗಿ, ವ್ಯವಹಾರಿಕದ ಗುಣಧರ್ಮ ಅನುಸರಿಸುವುದು ಅವರಿಗೆ ಮಾನದಂಡವಾಯಿತು. ದಿನಪತ್ರಿಕೆ ಮತ್ತು ವಾರಪತ್ರಿಕೆ ಆರಂಭಗೊಂಡವು. ಅದರ ಸ್ವರೂಪ ಬದಲಾಗಿಯಿತು. ಒಬ್ಬರು ಮುಖ್ಯಸ್ಥ ನಾಲ್ಕಾರು ಮಂದಿ ಸಹಾಯಕರು, ಬೇರೆ ಬೇರೆ ಭಾಗವಾಗಿ ಗುರುತಿಸಿಕೊಂಡು ಸುದ್ದಿ ವಿಭಾಗ, ಜಾಹೀರಾತು, ಕಲಾ, ಉಪವಿಭಾಗ ಹೀಗೆ ಅನೇಕ ವಿಭಾಗಗಳನ್ನು ಮಾಡಿಕೊಂಡು ಕನ್ನಡ ಪತ್ರಿಕೋದ್ಯಮ ಪ್ರೌಢದೆಸೆಯ ಸ್ವರೂಪ ಪಡೆಯಿತು. ಸ್ವಾತಂತ್ರ್ಯದ ನಂತರ ಬದಲಾವಣೆಯನ್ನು ಕಂಡವು. ಪ್ರಜಾವಾಣಿ, ಡೆಕ್ಕನ್ ಹೆರಾಲ್ಡ್, ಸುಧಾ, ಮಯೂರ ಇನ್ನಿತರ ಪತ್ರಿಕೆಗಳೆಲ್ಲವೂ ಆಧುನಿಕ ಪತ್ರಿಕೋದ್ಯಮ ಕಡೆಗೆ ಧಾವಿಸಿತು.

**ಕಲ್ಯಾಣಿ ಸರಸ್ವತಿ**

ಸ್ತ್ರೀಯರ ಆಸಕ್ತಿಯ ವಿಷಯ ಮತ್ತು ಮನೋರಂಜನೆಗಾಗಿ ಈ ಪತ್ರಿಕೆ ಆರಂಭಗೊಂಡಿತು. 'ಸುಪ್ರಭಾತ' ಪತ್ರಿಕೆಯ ಸರಸ್ವತಿ ರಾಜವಾಡೆ ಮತ್ತು ಸೋದರಿ

ಸಂಪಾದಕಿ ಎಂ.ಆರ್.ಲಕ್ಷ್ಮಮ್ಮ ವೀರಮಾತೆ ಪತ್ರಿಕೆ ಸರೋಜಿನಿ ಮಹಿಷಿ, ಮಹಿಳಾ ಜ್ಯೋತಿ (ಹುಬ್ಬಳ್ಳಿ) ಶ್ರೀಮತಿ ಕಲಾ ಪಾರಿಜಾತ ಪತ್ರಿಕೆ ಮಹಾದೇವಮ್ಮ ಚಿತ್ರಪತ್ರಿಕೆಗಳೆಲ್ಲ ಸ್ವಾತಂತ್ರ್ಯ ಪೂರ್ವದ ಪತ್ರಿಕೆಗಳು ಪರಿಚಯಗೊಂಡವು. ಅಲ್ಲದೆ ತಿರುಮಲಾಂಬ ಅವರು ಸಾಹಿತ್ಯ ಲೋಕದಲ್ಲಿ ಜನಪ್ರಿಯಗೊಂಡರು. ಕರ್ನಾಟಕ ನಂದಿ ಸನ್ಮಾರ್ಗದರ್ಶಿನಿ ಪ್ರಥಮ ಮಹಿಳಾ ಪತ್ರಕರ್ತರಾಗಿ ತಮ್ಮ ಕಾರ್ಯವನ್ನು ಮಾಡಿರುವುದನ್ನು ಹಾವನೂರ ಅವರು ವಿಶ್ಲೇಷಿಸಿದ್ದಾರೆ.

ಕನ್ನಡ ಕಾವ್ಯ, ಹಾಸ್ಯ ಪ್ರವೃತ್ತಿಗೆ ಉತ್ತಮ ನಿದರ್ಶನವೆಂದರೆ (೧೯೧೧-೬೯) ಬೆಂಗಳೂರಿನ 'ವಿಕಟ ವಿನೋದಿನಿ' ಪತ್ರಿಕೆ ಅಲ್ಲದೆ ಕೊರವಂಜಿಯು ಕೂಡ ಹಾಸ್ಯ ಸಂಗತಿಗಳನ್ನು ಪ್ರತಿನಿಧಿಸುತ್ತದೆ. 'ಪ್ರಜಾಮತ' ಪತ್ರಿಕೆಯಲ್ಲಿ ಬಿ.ಎನ್.ಗುಪ್ತರವರು ಸಂಪಾದಕಾರಾಗಿ ಕಾರ್ಯನಿರ್ವಹಿಸುತ್ತಿದ್ದರು. ಪತ್ರಿಕೆಯು ಗರ್ಭಿಣಿ ಮಹಿಳೆಯ ಹೆರಿಗೆ ವಿಷಯ ಕುರಿತು ಲೇಖನಗಳನ್ನು ಪ್ರಕಟಿಸಿದೆ. ಪತ್ರಿಕೆಯಲ್ಲಿ ಕಥಾಂಜಲಿ, ಜನವಾಣಿ ಹಾಗೆಯೇ ಬೇರೆ ಬೇರೆ ಭಾಷೆಗಳಲ್ಲಿ ಪರಿಚಿತಗೊಂಡಿವೆ.

**ವೀರಕೇಸರಿ**

ಈ ಪತ್ರಿಕೆಯನ್ನು ಸೀತಾರಾಮ ಶಾಸ್ತ್ರಿಗಳು ಆರಂಭಿಸಿದರು. (೧೯೨೦) ಅದೇ ಅವಧಿಯಲ್ಲಿ ರಾಮಯ್ಯನವರು 'ಸುಭೋದೆ ಪತ್ರಿಕೆ'ಯನ್ನು ಆರಂಭಿಸಿದರು. ಶಾಸ್ತ್ರೀಯವರು ಶೃಂಗೇರಿಯಲ್ಲಿದ್ದು ಶಾಸ್ತ್ರೀಯ ಹಿನ್ನೆಲೆ ಅಧ್ಯಯನ ಮಾಡಿದ್ದರಿಂದ ಅವರಿಗೆ ಪಾಂಡಿತ್ಯವಿತ್ತು. ಈ ಕಾರಣದಿಂದ 'ಆರ್ಯಮಹಿಳಾ' ಎಂಬ ವಾರ ಪತ್ರಿಕೆಯನ್ನು ಬಿಡುವಿನ ವೇಳೆಯಲ್ಲಿ ನಡೆಸುತ್ತಿದ್ದರು. ಅಲ್ಲದೆ ಕೇಸರಿ ಮರಾಠಿ ಪತ್ರಿಕೆಯ ಪ್ರಭಾವ ಅವರ ಮೇಲೆ ಆಗಿತ್ತು. ಗಾಂಧಿಯವರು ಚಳುವಳಿ ಮಾಡಲು ಕರೆ ಕೊಟ್ಟ ಸಂದರ್ಭದಲ್ಲಿ ಅವರ ಕೆಲಸ ಇನ್ನು ತೀವ್ರಸ್ವರೂಪ ಪಡೆದುಕೊಂಡಿತು.

**ಸಾಹಿತ್ಯ ಪತ್ರಿಕೆ**

ಪತ್ರಿಕಾ ಸಾಹಿತ್ಯದಲ್ಲಿ ವಿಶೇಷವಾದ ಸಾಹಿತ್ಯ ವಿಷಯಗಳು ಪತ್ರಿಕೆಯು ಒಳಗೊಂಡಿವೆ. ಹಾಗೆಯೇ ಜಯಕರ್ನಾಟಕ ಜಯಂತಿ, ದಿನಪತ್ರಿಕೆ, ಪುರವಾಣಿ, ಕಡ್ಲುಂಗೋಡೆ ಶಂಕರಭಟ್ಟರ ರಾಷ್ಟ್ರಬಂಧು, ಶಿವರಾಮ ಕಾರಂತರ ವಸಂತ, ಎಚ್.ಎಸ್ ಚನ್ನಕೇಶವ ಅಯ್ಯಂಗಾರ್ ಅವರ ನುಡಿಗನ್ನಡಿ, ಮುಳಿಯ ತಿಮ್ಮಪ್ಪಯ್ಯರ ಕನ್ನಡಕೋಗಿಲೆ, ಮಾಸ್ತಿಯರ ಜೀವನ ಸಾಹಿತ್ಯ, ಹೀಗೆ ಸಂಚಿಕೆಯಲ್ಲಿ ವಿಮರ್ಶೆ ಸಂಶೋಧನೆಗಳ ಬಗೆಗಳನ್ನು ಪರಿಚಯಿಸುತ್ತಿತ್ತು. ಸಾಹಿತ್ಯ ಸುದ್ದಿಯನ್ನು ಕೊಡುವ ಪತ್ರಿಕೆಗಳಾದ ವಾಗ್ಭೂಷಣ, ಶಿವಾನುಭವ, ಶರಣ ಸಂದೇಶ, ರಂಗಭೂಮಿಗಳು ಕಾರ್ಯಾಚರಿಸುತ್ತಿದ್ದದರ ಬಗೆಗೆ ವಿವರಿಸಲಾಗಿದೆ.

**ಅನ್ಯ ಭಾಷಾ ಪತ್ರಿಕೆಗಳು**

ಇತರೆ ಭಾಷೆಗಳ ಜನರು ಕರ್ನಾಟಕದಲ್ಲಿ ಇರುವ ಕಾರಣ ಈ ನಾಡಿಗೆ ಪೂರ್ವದಿಕ್ಕಿನಿಂದ ಬಂದ ಮೊದಲ ಪತ್ರಿಕೆ ಕೌಸೀಮ್ ಅಲ್-ಅಕಬರ್ ಅಂದರೆ ಇದು

ಉರ್ದು ಪತ್ರಿಕೆ ಅಲ್ಲ; ಹಿಂದೂಸ್ತಾನಿ ಪತ್ರಿಕೆ. ಕ್ರಿ.ಶ. ೧೮೬೩ರಲ್ಲಿ ಈ ಪತ್ರಿಕೆಯು ವಿದೇಶಿ ಮುಸ್ಲಿಮ್ ಮಹಿಳೆಯರ ಶೈಕ್ಷಣಿಕ ಪ್ರಗತಿಗಾಗಿ ಲೇಖನಗಳನ್ನು ಪ್ರಕಟಿಸಿತು. ಹಾಗೆಯೇ ಕೌ ಲ-ಬ ಮೈಸೂರು; ಇದು ಉರ್ದು ಪತ್ರಿಕೆಯಾಗಿತ್ತು; ಆದರೆ ಈ ಪತ್ರಿಕೆ ತಮಿಳು ಭಾಷೆಯಲ್ಲಿ ಇತ್ತು. ಉತ್ತರ ಕರ್ನಾಟಕದಲ್ಲಿ ಮರಾಠಿ ಪತ್ರಿಕೆಗಳು ಹೆಚ್ಚು ಪ್ರಭಾವ ಬೀರಿದ್ದವು. ಕಲಾದಗಿಯ 'ಹಿತೇಚ್ಛು' (೧೮೭೦), ಧಾರವಾಡದ ಛಾಬಾ (೧೮೮೦) ಪತ್ರಿಕೆಗಳು ಕನ್ನಡಿಗರ ಸುದ್ದಿಯನ್ನು ಮರಾಠಿ ಭಾಷೆಯಲ್ಲಿ ನೀಡುತ್ತಿದ್ದವು. ಇದರ ಪ್ರಭಾವ ಉತ್ತರ ಕರ್ನಾಟಕದಲ್ಲಿ ಎಷ್ಟಿಂತ್ತೆದರೆ ೧೮೮೦-೧೯೪೭ರ ಕಾಲಘಟ್ಟದಲ್ಲೂ ೬೦ಕ್ಕೂ ಹೆಚ್ಚು ಪತ್ರಿಕೆಗಳು ಚಾಲ್ತಿಯಲ್ಲಿದ್ದವು.

ಉತ್ತರ ಕರ್ನಾಟಕದ ಬೆಳಗಾಂ ಸಮಾಚಾರವು ದೀರ್ಘಕಾಲದ ಪತ್ರಿಕೆಯಾಗಿತ್ತು. ೧೯ನೇ ಶತಮಾನದಲ್ಲಿ ವಾರಪತ್ರಿಕೆಯಾಗಿ ಜನಪ್ರಿಯಗೊಂಡಿತು. ಅಲ್ಲದೆ ಕ್ರಿ.ಶ. ೧೯೧೮ರ ತರುಣ ಭಾರತದ ಬಗ್ಗೆ ವಿಶೇಷ ಮಹತ್ವದ ಪಡೆದುಕೊಂಡಿದೆ.

**ಉತ್ತರ ಕನ್ನಡ ಜಿಲ್ಲೆಯಲ್ಲಿ ಪತ್ರಿಕೋದ್ಯಮ**

ಉತ್ತರ ಕನ್ನಡ ಹೋರಾಟದ ಮೊದಲ ಪತ್ರಿಕೆ ಸರಸ್ವತಿ, ನಂತರ ವಿನೋದಿನಿ, ಸುಧಾಕರ, ವಿಚಾರ ನಂದಿನಿ ಹೀಗೆ ಸುಮಾರು ೫೦ ಪತ್ರಿಕೆಗಳು ಪ್ರಚಲಿತದಲ್ಲಿದ್ದವು. ಪಕ್ಷಪತ್ರಿಕೆ ಮಾಸಪತ್ರಿಕೆ, ವಾರಪತ್ರಿಕೆ ಇವುಗಳಲ್ಲದೆ ಇಂಗ್ಲಿಷ್, ಮರಾಠಿ ಲೇಖನಗಳನ್ನು ಒಳಗೊಂಡಿದ್ದವು. ಶಿರಸಿ ಸಮಾಚಾರ, ಗ್ರಾಮಜೀವನ, ಶರಣ ಸಂದೇಶ, ಶಿಕ್ಷಣದ ಮುನ್ನಡೆ ಹೆಸರುಗಳು ಬಂದವು. ಅಲ್ಲದೆ ಬೆಳಕು, ನಾಗರಿಕ, ಪತ್ರಿಕೆಗಳ ಪ್ರಗತಿ ಮಾಡಲು ಗೌರೀಶ ಕಾಯ್ಕಿಣಿ, ದಾಮೋದರ, ಚಿತ್ತಾಲರು ಮತ್ತು ಇತರ ಅನೇಕ ಪ್ರತಿಭಾವಂತರು ಸೇವೆ ಸಲ್ಲಿಸಿದರು.

**ದಕ್ಷಿಣ ಕನ್ನಡದ ಉದ್ಯಮ ವೈಶಿಷ್ಟಗಳು**

ದಕ್ಷಿಣ ಕನ್ನಡ ಜಿಲ್ಲೆಯವರು ತುಂಬ ಅಚ್ಚುಕಟ್ಟಾಗಿ ಕಾರ್ಯವನ್ನು ನಿರ್ವಹಿಸುತ್ತಾರೆ ಎನ್ನುವುದು ಪತ್ರಿಕೋದ್ಯಮದಲ್ಲಿ ಜನಜನಿತವಾದ ಮಾತು. ಇಲ್ಲಿನ ಪತ್ರಿಕೆಗಳು ಗುಣಾತ್ಮಕ ಅಂಶಗಳನ್ನು ಒಳಗೊಂಡಿವೆ. 'ಹೆಳವ' ಘಟ್ಟವನ್ನು ಹತ್ತಿದ ಪತ್ರಿಕೆ ಕೆಲವು ಅಪವಾದಗಳು ಶ್ರೀಕೃಷ್ಣ ಸೂಕ್ತಿ, ವಸಂತ ಮಾಸಿಕ, ಸಂಡೆ ಟೈಮ್ಸ್ ಎಮ್.ಎಸ್. ಕಾಮತ್ ಮೊಗವೀರ (ಮುಂಬಯಿ) ದಕ್ಷಿಣ ಕನ್ನಡ ಶಿವರಾಯರಿಂದ ಆರಂಭಗೊಂಡಿತು. ಭೇದ ಭಾವವಿಲ್ಲದಿರುವುದನ್ನು ಕಾಣಬಹುದು. ಆರ್.ಕೆ. ಪ್ರಭು, ಡಿ.ಆರ್. ಮಣೀಕರ್, ಯು.ಆರ್.ರಾವ್, ಬಿ.ಎಸ್.ತುಂಗ್, ಪಾಂ.ವೆಂ.ಆಚಾರ್ಯ, ನಿರಂಜನ ಮುಂತಾದವರು ಕಂಡುಬರುತ್ತದೆ. ಎಂ.ಎಸ್.ಕಾಮತ್ ವ್ಯಾಸರಾಯ ಬಲ್ಲಾಳ ಕೆ.ವಿ.ಭಟ್ಟ, ಡಿ.ಕೆ. ಮೆಂಡನ್ ಮುಂತಾದವರು.

ದಕ್ಷಿಣ ಕನ್ನಡ ಪ್ರಗತಿಗೆ ನವಯುಗ, ಕಂಠೀರವ, ಪ್ರಭಾತ, ರಾಷ್ಟ್ರಬಂಧು, ಅಂತರಂಗ, ಸುದರ್ಶನ, ಯುಗಪುರುಷ ಭಾರತೀ ಇತ್ಯಾದಿ ಪತ್ರಿಕೆಗಳು ಸಹಾಯಕವಾಗಿದ್ದವು. ಹೆಗ್ಗಳಿಕೆಗೆ ಭಾಜನವಾಗುವ ವಿಶಿಷ್ಟ ಪತ್ರಿಕೆಗಳು ಸ್ವಾತಂತ್ರ್ಯದ ಜನಜಾಗೃತಿ ಮೂಡಿಸುವ ಕಾರ್ಯದಲ್ಲಿ ತೊಡಗಿಕೊಂಡವು.

ಪತ್ರಿಕೆಯ ಉಗಮ, ವಿಕಾಸ ಕುರಿತ ಪ್ರಧಾನ ಸಂಪಾದಕರಾದ ಹಾವನೂರ ಅವರ ಲೇಖನಗಳು ಇಲ್ಲಿವೆ. ಪತ್ರಿಕೆಗಳು ನಂತರದ ಕಾಲದಲ್ಲಿ ಉದ್ಯಮವಾಗಿ ಹೊರಹೊಮ್ಮಿದ ಚಿತ್ರಣವಿದೆ. ಈ ಪತ್ರಿಕಾ ಸೂಚಿಯನ್ನು ನಾಲ್ಕು ಭಾಗ ಮಾಡಿಕೊಂಡಿದ್ದರು. ೧. ಪತ್ರಿಕಾ ಪ್ರಪಂಚದ ಸಮೀಕ್ಷೆಗಳು, ೨. ಕೆಲವು ಗಮನಾರ್ಹ ಪತ್ರಿಕೆಗಳು, ೩. ಸಂಪಾದಕರ ಬರಹದ ಮಾದರಿ ೪. ಕೆಲವು ಪತ್ರಕರ್ತರ ಕುರಿತು ಮಹತ್ವದ ಸಂಗತಿಗಳು ಅಭಿವ್ಯಕ್ತಗೊಂಡಿವೆ. ಈ ಸೂಚಿಯ ಪ್ರಧಾನ ಸಂಪಾದಕರಾಗಿ ಹಾವನೂರ ಅವರು ಕಾರ್ಯನಿರ್ವಹಿಸಿದರು. ಪತ್ರಿಕಾ ಸಂಗ್ರಾಹಕರಾಗಿ ಶ್ರೀಮೋಹನ್ ಹೆಗಡೆ ಸಹಾಯಕರಾಗಿ ಶ್ರೀಪಂಚಾರಿ ಚಲ್ಲಪನ್ ಕಾರ್ಯನಿರ್ವಹಿಸಿರುವುದನ್ನು ಗಮನಿಸಬಹುದಾಗಿದೆ.

ಕನ್ನಡ ಪತ್ರಿಕಾ ವಲಯ ವೈವಿಧ್ಯಮಯ ಹತ್ತು ಹಲವು ಸಂಗತಿಯನ್ನು ಒಳಗೊಂಡಿದೆ. ಪತ್ರಿಕಾ ಇತಿಹಾಸ ಸಮೀಕ್ಷೆ ೧೮೪೩-೧೯೭೭ರವರೆಗಿನ ವಿಚಾರಗಳು ಪ್ರಸ್ತಾಪಗೊಂಡಿದೆ. ಕನ್ನಡ ಪತ್ರಿಕೋದ್ಯಮದ ಮೊದಲ ಹೆಜ್ಜೆಗಳು ಸ್ವಾತಂತ್ರ್ಯಪೂರ್ವದ ಪತ್ರಿಕೋದ್ಯಮ ವೈಖರಿ, ವೀರಶೈವ ಪತ್ರಿಕಾ, ಪ್ರಪಂಚ ಮಾಧ್ವ, ಪತ್ರಿಕಾಲೋಕ, ಮೈಸೂರಿನ ಪತ್ರಿಕಾ ಶಾಸನ ಹೀಗೆ ೧೯೦೮ರ ವಿಷಯಗಳ ಕುರಿತು ವಿವರವಾದ ಸಂಗತಿಗಳು ಪರಿಚಿತಗೊಂಡಿವೆ. ಹಾವನೂರ ಅವರಲ್ಲದೆ ಇತರ ಲೇಖಕರು ಪ್ರಮುಖ ಲೇಖನಗಳನ್ನು ಬರೆದಿದ್ದಾರೆ. ಈ ನಾಡಿನ ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯ ಪಡೆದ ನಂತರದವರೆಗೆ ಪತ್ರಿಕೋದ್ಯಮದ ಏಳು-ಬೀಳುಗಳ ಚಿತ್ರಣ ಅನಾವರಣಗೊಂಡಿವೆ.

**ಪತ್ರಿಕಾ ವಲಯ ಸಮೀಕ್ಷೆಗಳು: ಕನ್ನಡ ಪತ್ರಿಕೋದ್ಯಮದ ಪ್ರಥಮ ಕುರುಹು**

ಪತ್ರಿಕೋದ್ಯಮದ ವಿಕಾಸದ ವಿಚಾರಗಳನ್ನು ನಿರೂಪಿಸಲಾಗಿದೆ. ಕನ್ನಡದ ಮೊದಲ ಪತ್ರಿಕೆ 'ಮಂಗಳೂರು ಸಮಚಾರ'; ಆದರೆ ೧೮೧೩ರ ಹಿಂದೆ ಪತ್ರಿಕೆ ಇರಲಿಲ್ಲವೆ? ೧೮೪೩ರಲ್ಲಿ ಇತ್ತು ಎನ್ನುವುದು ತಿಳಿದುಬರುತ್ತದೆ. ಅದಕ್ಕೆ ಸ್ಪಷ್ಟತೆ ಇರಲಿಲ್ಲ. ೧೮೪೩ರಲ್ಲಿ ಬಳ್ಳಾರಿಯಲ್ಲಿ ಜರ್ಮನ್ ಪಾದ್ರಿ ಕಲ್ಲಚ್ಚಿನ 'ಕನ್ನಡ ಸಮಾಚಾರ' ಪತ್ರಿಕೆ ಇತ್ತು ಎನ್ನುವುದು ನಾಡಿಗ್ ಕೃಷ್ಣಮೂರ್ತಿರ್ಯವರು, ಭಾರತೀಯ ಪತ್ರಿಕೋದ್ಯಮ ನಿಬಂಧದಲ್ಲಿ ಉಲ್ಲೇಖಿಸಿದ್ದಾರೆ. ಈ ವಿಷಯಕ್ಕೆ ಸರಿಯಾದ ಪುರಾವೆಗಳಿಲ್ಲ. ಅಂದರೆ ಜರ್ಮನ್ ಮಿಶನರಿಗಳು ಈ ನಾಡಿಗೆ ಬಂದದ್ದು ೧೮೩೪ರಲ್ಲಿ. ಹಾಗೆಯೇ ಅವರ ಕಾರ್ಯಕ್ಷೇತ್ರ ಬಳ್ಳಾರಿ ಮತ್ತು ಮಂಗಳೂರು. ಕಲ್ಲಚ್ಚು ಮತ್ತು ಮುದ್ರಣ ಯಂತ್ರ ಸ್ಥಾಪನೆಯಾಗಿರುವುದು ೧೮೪೩ರಲ್ಲಿ ಮಿಶನರಿಗಳ

ದಾಖಲೆ ಮತ್ತು ವರದಿ ಪುಸ್ತಕಗಳಲ್ಲಿ ಕಾಣಬಹುದು. ಇನ್ನೊಂದು ಅಂಶವೆಂದರೆ ಮಂಗಳೂರು ಸಮಾಚಾರ ಎನ್ನುವುದು. ಬಳ್ಳಾರಿಗೆ ವರ್ಗಗೊಂಡ ನಂತರ ಕನ್ನಡ ಸಮಾಚಾರವೆಂದಾಯಿತು.

ಕ್ರಿ.ಶ. ೧೮೨೬ರಲ್ಲಿ ಕನ್ನಡ ಪತ್ರಿಕೆ ಚಾಲ್ತಿಯಲ್ಲಿತ್ತು ಎನ್ನುವುದು ಇಲ್ಲಿ ಗಮನಿಸಬೇಕಾದ ಅಂಶ. ಆದರೆ ಮುದ್ರಣ ಯಂತ್ರಗಳು ಬಳ್ಳಾರಿ ಕ್ರಿ.ಶ. ೧೮೨೭, ಬೆಂಗಳೂರು ಕ್ರಿ.ಶ. ೧೮೪೧, ಮಂಗಳೂರು ಕ್ರಿ.ಶ. ೧೮೪೨, ಮೈಸೂರು ಕ್ರಿ.ಶ. ೧೮೪೩, ಬೆಳಗಾವಿ ಕ್ರಿ.ಶ. ೧೮೪೮ ಹೀಗೆ ಭಾರತ ವಿವಿಧ ಪ್ರದೇಶಗಳಲ್ಲಿ ಪತ್ರಿಕೆ ಪ್ರಾರಂಭವಾದವು. ಮತ್ತೊಂದು ಸಂಗತಿ ಎಂದರೆ ಮಿಶನರಿಗಳು ಪತ್ರಿಕೆಗಳನ್ನು ಹೊರಡಿಸಿದ್ದು ಯಾವ ವರದಿಯಲ್ಲೂ ಉಲ್ಲೇಖವಾಗಿಲ್ಲ. ಧಾರವಾಡದಲ್ಲಿ ೧೮೪೦ರಲ್ಲಿ ಛಾಪಾ ಪತ್ರಿಕೆ ಪ್ರಕಟಗೊಂಡಿತ್ತು. ಆದರೆ ಕನ್ನಡ ಶಬ್ದ ಮರಾಠಿ ಶಬ್ದವೆಂದು ಗೋಚರವಾಗುತ್ತದೆ. ಮರಾಠಿಯಲ್ಲಿ ವಾವಾ ಎಂದರೆ ಆನೆಯ ಮರಿ ಎಂದ ಹಾಗೆಯೇ "ಕ್ರಿ.ಶ. ೧೮೪೩ ರೂಪುಗೊಂಡ ಸರಕಾರದ Report on Native papers ಮತ್ತು ಹಳೆಯ ಧಾರವಾಡ ಜಿಲ್ಲಾ ಗೆಜೆಟಿಯರ್‌ನಲ್ಲಿ"[೭] ಎಂದು ಉಲ್ಲೇಖಗೊಂಡಿದೆ.

ಈ ಎಲ್ಲಾ ಅಂಶಗಳನ್ನು ಗಮನಿಸಿದರೆ ಮಂಗಳೂರು ಸಮಾಚಾರವೇ ಕನ್ನಡ ಮೊದಲ ಪತ್ರಿಕೆ ಎನ್ನುವುದು ಉಚಿತ; ಭಾರತೀಯ ಭಾಷಾ ಪತ್ರಿಕೆಗಳನ್ನು ಕುರಿತು ಹೇಳುವುದಾದರೆ ಬಂಗಾಲಿ ಪ್ರಥಮ ಪತ್ರಿಕೆ 'ಸಮಾಚಾರ ದರ್ಪಣ'; ಹಾಗೆಯೇ ಮರಾಠಿ ಪ್ರಥಮ ಪತ್ರಿಕೆ ವರ್ತಮಾನ (೧೮೨೮); ತೆಲುಗು ಪ್ರಥಮ ಪತ್ರಿಕೆ ಸತ್ಯದೂತ ಎಂಬುದನ್ನು ಗಮನಿಸಲಾಗಿದೆ.

ಬೆಳಗಾವಿ 'ಸುಬುದ್ಧಿ ಪ್ರಕಾಶ' ಪತ್ರಿಕೋದ್ಯಮದ ವಿಕಾಸ ರೂಪವಾಗಿದೆ. ಮಿಶನರಿಗಳಿಗೆ ಮುದ್ರಣದ ಅನುಕೂಲವಾದ ಹಾಗೆ ಪತ್ರಿಕೆ ಸ್ವರೂಪ ವಿಕಾಸದ ದಾರಿಯಾಗಿ ಕಂಡಿತು. ಕನ್ನಡ ಸಮಾಚಾರ ಸ್ಥಗಿತಗೊಂಡ ನಂತರ ಮಿಶನರಿಗಳ ಪತ್ರಿಕೆಗಳೂ ಸ್ಥಗಿತಗೊಂಡವು. ನಂತರ ಮೊಗ್ಲಿಂಗನು 'ಕನ್ನಡ ವಾರ್ತಿಕ' ಹೊರಡಿಸತೊಡಗಿದನು. ಈ ಪತ್ರಿಕೆ ಮೂಲಕ ಧರ್ಮ ಪ್ರಚಾರ ಸಂಗತಿಗಳು ಪ್ರಚಾರಗೊಂಡವು. ಕನ್ನಡ ಪತ್ರಿಕಾ ವ್ಯವಸಾಯವು ಕ್ರಿ.ಶ. ೧೮೬೦ರಲ್ಲಿ ಒಳಗೆ ಆರಂಭವಾಗಿರಬೇಕು. ಬೆಂಗಳೂರು, ಧಾರವಾಡ ಮತ್ತು ಮಂಗಳೂರು ಹೀಗೆ ಮುಖ್ಯ ನಗರಗಳಿಂದ ಪ್ರಕಟಿಸಲ್ಪಟ್ಟವು. ಮೈಸೂರು ವೃತ್ತಾಂತ ಭೋದಿನಿಯು ಪ್ರಥಮ ವಾರಪತ್ರಿಕೆಯಾಗಿದೆ. ಇದು ೧೮೬೪ರವರೆಗೆ ಚಾಲ್ತಿಯಲ್ಲಿತ್ತು. ಭಾಷ್ಯಂ ಮನೆತನದ ತಿರುಮಲಾಚಾರ್ಯ ಮತ್ತು ಭಾಷ್ಯಚಾರ್ಯ ಕ್ರಿ.ಶ. ೧೮೬೫ರಲ್ಲಿ ಕರ್ನಾಟಕ ಪ್ರಕಾಶಿಕಾ ಎಂಬ 'ಪಕ್ಷ ಪತ್ರಿಕೆ'ಯನ್ನು ಹೊರಡಿಸಿದರು. ನಂತರದ ದಿನಗಳಲ್ಲಿ ಅದು ಸ್ಥಗಿತಗೊಂಡಿತು. ವಾರಪತ್ರಿಕೆಯಾಗಿ ಆರಂಭಿಸಿದರು. ಈ ಅಂಶಗಳನ್ನು ಆಧರಿಸಿ ಹೇಳುವುದಾದರೆ ಭಾಷ್ಯಂ ಕನ್ನಡ ಪತ್ರಿಕೋದ್ಯಮದ ಆದ್ಯರು.

'ಕನ್ನಡ ಜ್ಞಾನಭೋದಕ' ಪತ್ರಿಕೆ ಉದಯವಾಯಿತು. ಈ ಪತ್ರಿಕೆಯು ಕನ್ನಡ ಭಾಷೆಯ ಪುಸ್ತಕಗಳನ್ನು ಛಾಪಿಸಿ ಪ್ರಸಿದ್ಧಿ ಮಾಡುವ ಮಂಡಲಿ ಈ ಸಂಸ್ಥೆಯು ಪತ್ರಿಕೆಯನ್ನು ಹೊರಡಿಸುತ್ತಿತ್ತು. ಸಂಪಾದನ ಕಾರ್ಯ ಮತ್ತು ಪ್ರಕಾಶನ ಕಾರ್ಯವು ಬೆಳಗಾವಿಯ ಸರ್ದಾರ್ ಹೈಸ್ಕೂಲ್‌ನಲ್ಲಿ ನಡೆಯುತ್ತಿತ್ತು. ಈ ಪತ್ರಿಕೆಯು ಶೈಕ್ಷಣಿಕ ಮತ್ತು ಸರ್ಕಾರಿ ಸುದ್ದಿಗಳನ್ನು ಬಿತ್ತರಿಸುತ್ತಿತ್ತು. ಅರುಣೋದಯ ಎಂಬ ಕ್ರಿ.ಶ. ೧೮೬೨ರ ಮಾಸಪತ್ರಿಕೆಯ ಪ್ರಕಟಪಡಿಸಿದರು. ಇದರ ಸಂಪಾದನೆಯನ್ನು ಲಂಡನ್ ಮಿಶನರಿಯ ಹರ್ಮನ್ ಮೊಗ್ಲಿಂಗ್, ರೈಸ್ ಪರಿಚಯಿಸಿದರು. ಅದರಲ್ಲಿ ಧಾರ್ಮಿಕ ವಿಚಾರ, ವಿಜ್ಞಾನ, ಕಥೆ, ಔತಣನದ ನುಡಿಗಳು ಅಲ್ಲದೆ ಹಿಂದೂ ಮತ್ತು ಇಸ್ಲಾಂ ಧರ್ಮ ಸಂಗತಿಗಳು ಹೊರಹೊಮ್ಮುತ್ತಿದ್ದವು. ವಿಜ್ಞಾನ ಮತ್ತು ಭೂಗೋಳ ಸಂಗತಿಗಳನ್ನು ಪ್ರಕಟಿಸಲಾಗಿತ್ತು.

'ವಿಚಿತ್ರ ವರ್ತಮಾನ ಸಂಗ್ರಹ' ಪತ್ರಿಕೆಯು ಕ್ರಿ.ಶ. ೧೮೬೨ರಲ್ಲಿ ಮಂಗಳೂರಿನಿಂದ ಪ್ರಕಟಗೊಂಡಿತು. ಈ ಪತ್ರಿಕೆ ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಪ್ರಕಟಗೊಂಡಿತು. ಇದರ ಸಂಪಾದಕರಾಗಿ ಜೆ ಮ್ಯಾತ್ ಮತ್ತು ಕಿಟೆಲ್ ಕಾರ್ಯವನ್ನು ನಿರ್ವಹಿಸಿದರು. ೧೮೬೫ರಲ್ಲಿ ಡೆಪ್ಯುಟಿ ಚನ್ನಬಸಪ್ಪನವರು ಮಠ ಪತ್ರಿಕೆಯನ್ನು ಆರಂಭಿಸಿದರು. ನಂತರದ ದಿನಗಳಲ್ಲಿ ಶಾಲಾಪತ್ರಿಕೆಯೆಂದು ನಾಮಕರಣವಾಯಿತು. ಹಾಗೆಯೇ ಮುಂದಿನ ದಿನಗಳಲ್ಲಿ ಕ್ರಿ.ಶ. ೧೮೭೧ರಲ್ಲಿ ಕನ್ನಡ ಹೆಸರು ಪಡೆಯಿತು. ಆಗ ಕರ್ನಾಟಕ ಕಾಲೇಜು ಬಿಟ್ಟು ಬೆಳಗಾವಿ ಮತ್ತು ಧಾರವಾಡದಲ್ಲಿ ತನ್ನ ಕಾರ್ಯವನ್ನು ಮುಂದುವರಿಸಿತು. ಹೀಗಾಗಿ ಡೆಪ್ಯುಟಿ ಚನ್ನಬಸಪ್ಪ ಕನ್ನಡ ಭಾಷೆ, ಸಾಹಿತ್ಯ ಮತ್ತು ಕನ್ನಡಿಗರ ಶೈಕ್ಷಣಿಕ ಉನ್ನತಿಗಾಗಿ ನಿಷ್ಠೆ ಮತ್ತು ಪ್ರಾಮಾಣಿಕವಾಗಿಯೇ ಪ್ರಗತಿಯಾಗಲು ಸಾಧ್ಯವಾಯಿತು.

"ಲಿಂಗವಂತರಿಗೆ ತಿಳಿಸುವುದೇನೆಂದರೆ ಬೆಳಗಾವಿ ಜಿಲ್ಲೆಯ ಡೆಪ್ಯುಟಿ ಇನ್ಸ್‌ಪೆಕ್ಟರ್ ಚನ್ನಬಸಪ್ಪನವರು ಈ ರೀತಿ ಹೇಳಿದ್ದರು. ಚಿತ್ರದುರ್ಗದ ಮುರುಘ ಮಠದ ಜಗದ್ಗುರು ಬಹು ದಯಾಳುಗಳಾಗಿ ಅನಾಥರಾದ ವಿದ್ಯಾರ್ಥಿಗಳಿಗೆ ಬೆಳಗಾವಿಯಲ್ಲಿ ಅನ್ನ ಕೊಡುವುದಕ್ಕೆ ಪ್ರತಿ ತಿಂಗಳು ೩೦೦ ರೂಪಾಯಿ ಕೊಡುವುದಕ್ಕೆ ಒಪ್ಪಿದರು. ಈ ಹಣದಿಂದ ಒಂದು ಮನೆ ತೆಗೆದುಕೊಂಡು ಅಡುಗೆ ಮತ್ತು ಇತರೆ ಕೆಲಸ ಮಾಡುವವರನ್ನು ನೇಮಿಸಿಕೊಂಡು ಸುಮಾರು ೫೦ ಜನ ನಿರಾಶ್ರಿತರಾದ ವಿದ್ಯಾರ್ಥಿಗಳಿಗೆ ಎರಡು ಹೊತ್ತು ಊಟ ಮತ್ತು ವಾಸ ಮಾಡಲಿಕ್ಕೆ ಮನೆ ಮಾಡಿದರು."[೮] ಈ ಮೂಲಕ ಕನ್ನಡ ನಾಡಿನ ಪ್ರಗತಿಗೆ ಮಾಡಿದ ಸೇವೆ ಅಪಾರವಾದುದು. ಆಗಸ್ಟ್ ೧೮೬೮ರಲ್ಲಿ ಅವರು ಆರಂಭಿಸಿದ ಪತ್ರಿಕೆ ಹೆಚ್ಚು ಕಾಲ ಇರಲಿಲ್ಲ. ನಂತರದ ದಿನಗಳಲ್ಲಿ 'ಜೀವನ ಶಿಕ್ಷಣ' ಎಂಬ ಹೆಸರು ಪ್ರಕಟಗೊಂಡಿತು. ಈ ಪತ್ರಿಕೆಯು ಸರ್ಕಾರಿ ಸುದ್ದಿಯನ್ನು ಕೊಡುವುದಲ್ಲದೆ ಜನರ ಬದುಕಿನ ಸಂಗತಿಗಳನ್ನು ಪರಿಚಯಿಸಿತು. ೧೮೬೬ರಲ್ಲಿ ಪ್ರಾರಂಭಗೊಂಡಿದ್ದು ಆಗ ರಿಕೆಟ್ಸ್ ಅವರು ಸುದ್ದಿ ಸಂಪಾದಕರಾಗಿ ಕಾರ್ಯನಿರ್ವಹಿಸಿದರು. ಇತರ ವಿದೇಶಿ ಸುದ್ದಿಗಳು, ಭೂಸುಧಾರಣೆ ಆಯೋಗಗಳ

ಕುರಿತು ವಿಷಯಗಳು ಪ್ರಸ್ತಾಪಗೊಂಡಿದೆ. ಬರಗಾಲ ಮತ್ತು ಕಾಲರ ರೋಗ ಕುರಿತ ಚರ್ಚೆಗಳನ್ನು ಪತ್ರಿಕೆ ಪ್ರಕಟಿಸಿರುವುದನ್ನು ಗಮನಿಸಬಹುದಾಗಿದೆ.

**ಸ್ವಾತಂತ್ರ್ಯ ಪೂರ್ವದ ಪತ್ರಿಕೋದ್ಯಮದ ಸ್ವರೂಪ**

ಗತಕಾಲದ ಸಮಾಜದ ಪ್ರಗತಿ, ಧಾರ್ಮಿಕ, ಧರ್ಮದ ನೆಲೆ; ಬದುಕಿನ ಸ್ವರೂಪ ಅನುಕೂಲ ಮತ್ತು ಅನಾನುಕೂಲ ಪ್ರತಿನಿತ್ಯ ನಡೆಯುವ ನೂರಾರು ವಿದ್ಯಮಾನ ಮತ್ತು ರಹಸ್ಯ ಬಹಿರಂಗಪಡಿಸುವುದು ಪತ್ರಿಕೆಯ ಉದ್ದೇಶವಾಗಿತ್ತು. ಜೊತೆಗೆ ರಾಷ್ಟ್ರಾಭಿಮಾನ ಮತ್ತು ಕನ್ನಡಾಭಿಮಾನ ಮೂಡಿಸುವುದು ಪತ್ರಿಕೆಯ ಗುರಿಯಾಗಿತ್ತು. ಆ ಕಾಲಕ್ಕೆ ಪತ್ರಿಕೆ ವ್ಯವಹಾರಿಕ ದೃಷ್ಟಿಕೋನ ಹೊಂದದೆ ಅದು ಸಮಾಜದ ಸೇವೆ ಎಂದು ಪರಿಭಾವಿಸಿತ್ತು.

'ಸುಭೋದಿನಿ' ಪತ್ರಿಕೆಯು ಈ ನಾಡಿನ ಕಾರ್ಯವೈಖರಿಯನ್ನು ನಿರೂಪಿಸಿದೆ. ದಕ್ಷಿಣ ಕನ್ನಡವನ್ನು ಪೂರ್ವಕಾಲದ ಇತಿಹಾಸದ ಪರಿಚಯಿಸುತ್ತದೆ. ಆ ಕಾಲದ ಪತ್ರಿಕೆ ಜನಸಾಮಾನ್ಯರಿಗೆ ಕಾನೂನು ವಿಷಯ ಸಂಬಂಧಿಸಿದ ಕ್ರಿ.ಶ. ೧೮೭೭ರಲ್ಲಿ ನ್ಯಾಯಾಧಿಕರಣಕ್ಕೆ ಸಂಬಂಧಿಸಿದ ವಿಷಯಗಳನ್ನು ಮಾಸಿಕವಾಗಿ ಆರಂಭಿಸಿತ್ತು. ಈ ಅವಧಿಗೆ ಸುಭೋದಿನಿ ಪತ್ರಿಕೆ ಸ್ಥಗಿತಗೊಂಡಿತು. ಕನ್ನಡ ನಾಡು ಮತ್ತು ಭಾಷೆ ದಿನದಿಂದ ದಿನಕ್ಕೆ ಪ್ರಗತಿಯಾಗುತ್ತಿತ್ತು. ಕರ್ನಾಟಕ ವಾಣಿವಿಲಾಸ ಪತ್ರಿಕೆ ಕ್ರಿ.ಶ. ೧೮೮೫ರಲ್ಲಿ ತನ್ನ ಕಾರ್ಯವನ್ನು ಆರಂಭಿಸಿತು. ಪತ್ರಿಕೆಯ ಸಂಪಾದಕೀಯ ಭಾಗದಲ್ಲಿ ಸ್ತ್ರೀ ಶಿಕ್ಷಣ ಕುರಿತು ವಿಷಯಗಳು ಪ್ರಕಟವಾಗುತ್ತಿತ್ತು.

**'ಉಗಮ'**ದಲ್ಲಿ ಪತ್ರಿಕೆಗೆ ನಾಮಕರಣ ಮಾಡುವುದು ತುಂಬ ಕಷ್ಟಕರವಾದ ಕೆಲಸ ಈ ವಿಷಯಕ್ಕೆ ಸಂಬಂಧಿಸಿದಂತೆ ಚರ್ಚೆಗೊಂಡಿದೆ. 'ಕಿಡಿ' (ಬೆಂಗಳೂರು) 'ನುಡಿ' (ಮುಂಬಯಿ) 'ಭಾರತೀ ವಿಜಯ' ಈ ರೀತಿಯ ನಾಮಧ್ಯೇಯಗಳ ಪತ್ರಿಕೆಗಳ ವಿಷಯ ಒಳಗೊಂಡಿವೆ. ಇಳಿದು ಬಾ ತಾಯಿ, ಆತ್ಮಗಳ ಬೆಲೆ, ಸಿರಿಗನ್ನಡ ಗೆಲ್-ಬಾಳ್ ಈ ತೆರನಾದ ನಿದರ್ಶನವನ್ನು ಕಾಣಬಹುದಾಗಿದೆ. ಅಲ್ಲದೆ ಮಹಿಳೆಗಾಗಿ ಮೀಸಲಾದ ಪತ್ರಿಕೆ ಸೋಜಿಗ, ಸರಸ್ವತಿ, ಸಾಧ್ವಿ, ಸುವಾಸಿನಿ ಮತ್ತು ಮಹಿಳಾ ಲೇಖಕರು, ಮಹಿಳಾ ವಿಷಯಗಳನ್ನು ಒಳಗೊಂಡಿರುವುದನ್ನು ಸಂಪಾದಕರು ಚರ್ಚಿಸಿದ್ದಾರೆ.

ಮತಧರ್ಮಕ್ಕೆ ಸಂಬಂಧಿಸಿದ ಪತ್ರಿಕೆಗಳು ಆಯಾ ಧರ್ಮಕ್ಕೆ ಸಂಬಂಧಿಸಿದ ವಿಷಯಗಳನ್ನು ಎತ್ತಿಹಿಡಿಯುವುದು ಹಿಂದಿನಿಂದಲೂ ಬಂದ ರೂಢಿ. ಮೊದಲ ಪತ್ರಿಕೆ 'ಮೈಸೂರು ಸ್ಟಾರ್' ನಂತರದಲ್ಲಿ 'ವೀರಶೈವ ಪತ್ರಿಕೆ' ಶರಣ, ಶಿಷ್ಟಪೂರ್ವ ಪದಗಳನ್ನೊಳಗೊಂಡ ಮತ ಪ್ರಚಾರ ಕಾರ್ಯದಲ್ಲಿ ತೊಡಗಿಕೊಂಡರು. ಹಳಕಟ್ಟಿಯವರು 'ಶಿವನಾನುಭವ' ಕ್ರೈಸ್ತರ 'ಕ್ರಿಸ್ತ ಆಗಮನದೂತ' ಜೀವಜಲವು ಮಳವಳ್ಳಿ-ಬೆಂಗಳೂರಿನಿಂದ ಪ್ರಕಟವಾಗುತ್ತಿದ್ದವು. ಅಲ್ಪಸಂಖ್ಯಾತರು ತಮ್ಮ ಹೆಚ್ಚುಗಾರಿಕೆಯನ್ನು ಪ್ರದರ್ಶಿಸುವುದಕ್ಕೋಸ್ಕರ ಈ ರೀತಿಯ ಪತ್ರಿಕೆ ಕಾಣಬಹುದು. ಈಡಿಗರು, ದೇವಾಂಗರು, ಕುಂಚಿಟಿಗರು, ಹವ್ಯಕರು ಮುಂತಾದ ಸಮುದಾಯಗಳು ಪತ್ರಿಕೆಗಳನ್ನು ಪ್ರಕಟಿಸುತ್ತಿದ್ದರು. ಅಲ್ಪಸಂಖ್ಯಾತರು ವಾಣಿ (ಮಂಡ್ಯ),

ದಕ್ಷಿಣ ಕನ್ನಡ ಜಿಲ್ಲೆಯ ಅಳಿಕೆಯಿಂದ ‘ಪುರುಷಾರ್ಥ’, (ಬೆಳಗಾವಿ) ಧರ್ಮದಂಥ ಆರೋಗ್ಯ ಕಾಪಾಡುವ ಭೀಷಗ್ವರ (ಬೆಳಗಾವಿ) ಮುಂತಾದ ಪತ್ರಿಕೆಗಳನ್ನು ಕಾಣಬಹುದು.

ಮನೋರಂಜನೆ ವಿಚಾರಗಳಾದ ಸಣ್ಣಕಥೆಗಳಿಗೆ ಸಂಬಂಧಿಸಿದ ಪತ್ರಿಕೆಗಳು ಹದಿನೈದು–ಇಪ್ಪತ್ತು ಪ್ರಕಟಗೊಂಡಿದ್ದವು. ಅ.ಕೃ.ಕೃಷ್ಣರಾಯರು, ನರಸಿಂಹಮೂರ್ತಿ, ಬಸವರಾಜ ಕಟ್ಟಿಮನಿ ಪತ್ರಿಕೋಧ್ಯಮದಲ್ಲಿ ಕೆಲಸ ಮಾಡಿದವರು. ರಾಶಿ. ಅವರ ‘ಕೊರವಂಜಿ’, ನಂತರದಲ್ಲಿ ‘ಅಪರಂಜಿ’ ಪತ್ರಿಕೆ, ಬದಲಾಗಿ ಜಿ.ನಾರಾಯಣರವರು ‘ವಿನೋದ’ ಪತ್ರಿಕೆ ಹೊರಡಿಸಿದರು. ಸ್ವಾತಂತ್ರ್ಯೋತ್ತರ ಅವಧಿಯ ಪತ್ರಿಕೆ ಎಂದು ತಿಳಿದುಬರುತ್ತದೆ. ಹಾಗೆಯೇ ವಿಕಟ ಪ್ರತಾಪ ಎಂಬ ಮಾಸಪತ್ರಿಕೆ ಇತ್ತು. ಅದರಲ್ಲಿ ಕೆಲವು ಕಾಲ್ಪನಿಕ ವ್ಯಕ್ತಿಗಳ ಅಭಿದಾನಗಳಿದ್ದವು. ಅವಲಕ್ಕಿ ಅಮ್ಮರ್‍ಯಾಮ್ಮ, ಮೊಸರವಲಕ್ಕಿ ಶೀತಮ್ಮ, ಸಂಡಿಗೆ ಗುಂಡಕ್ಕಿ, ದೋಸೆ ವೆಂಕೊಬಾಯಿ ಈ ರೀತಿಯ ಸಂಗತಿಗಳು ಪರಿಚಿತಗೊಂಡವು. ಕರ್ನಾಟಕದ ಮಕ್ಕಳ ಕುರಿತ ಪತ್ರಿಕೆ, ಕಾರ್ಯನಿರ್ವಹಿಸುತ್ತಿದ್ದವು. ರಾಜರತ್ನಂ ದೇವುಡು ಮಕ್ಕಳ ಸಾಹಿತ್ಯ ಕುರಿತು ಪತ್ರಿಕೆಗಳು ಬರೆಯುತ್ತಿದ್ದರು. ದೇವುಡು ಅವರು ‘ನಮ್ಮ ಪುಸ್ತಕ’ ಎಂಬ ಪತ್ರಿಕೆ ಪ್ರಕಟಿಸುತ್ತಿದ್ದರು. ಬಾಲ ಸಾಹಿತ್ಯಕ್ಕೆ ಸಂಬಂಧಿಸಿದ ಲೇಖನಗಳು ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. ಹಾಗೆಯೇ ಬದುಕಿನ ಕಾಮ–ಪ್ರೇಮಗಳಿಗೆ ಸಂಬಂಧಿಸಿದಂತೆ ಅನೇಕ ಪತ್ರಿಕೆಗಳಲ್ಲಿ ವಿಷಯ ಪ್ರಸ್ತಾಪಗೊಂಡಿವೆ. ಕಾಮಕಲಾ, ರತಿರಂಗ, ಶೃಂಗಾರ ಮೊದಲ ಪತ್ರಿಕೆಗಳ ಕುರಿತ ಚರ್ಚೆಗಳಾಗಿವೆ.

‘ಪತ್ರಿಕಾ ಸೂಚಿ’ ಸ್ವಾತಂತ್ರ್ಯಪೂರ್ವದ ದಿನಗಳಲ್ಲಿ ಪತ್ರಿಕೆಗಳ ಸಂಖ್ಯೆ ಬಹಳ ಕಡಿಮೆ ಆದರೂ ಪತ್ರಿಕೆಯ ಸೂಚಿ ಸಿದ್ಧವಾಗಿತ್ತು. “೧೯೪೮ರ ಮದ್ರಾಸ್ ಸಮಾಚಾರದ ಕೆಲವು ಸಂಚಿಕೆಗಳಲ್ಲಿ”[೯] ಕನ್ನಡದ ವಿವರಗಳನ್ನು ಕಾಣಬಹುದು. ಅಲ್ಲದೆ ಸಾ.ಶ್ರೀ ರಾಜಪ್ರರೋಹಿತರು ಕನ್ನಡ ಸಾಹಿತ್ಯ ಪರಿಷತ್ತು ಪತ್ರಿಕೆಯಲ್ಲಿ ಕನ್ನಡ ಮಾಸಪತ್ರಿಕೆಗಳ ಸದ್ಯದ ಸ್ಥಿತಿ ಮಾಹಿತಿ ಪೂರ್ಣವಾದ ಸಮೀಕ್ಷೆಯನ್ನು ಬರೆದರಷ್ಟೆ. ಹಾಗೆಯೇ ಮೃತಪಟ್ಟ ಜೀವಂತ ಎಂದು ಎರಡು ಭಾಗ ಮಾಡಿ ಅದೇ ಕಾಲಕ್ಕೆ “ಮೇವುರಡಿ ಮಲ್ಲಾರಿಯರು ಕನ್ನಡ ಪತ್ರಿಕೆಗಳ ಪ್ರದರ್ಶನವನ್ನು ಧಾರವಾಡದ ‘ಜಯ ಕರ್ನಾಟಕದಲ್ಲಿ’ ಯಾದಿಯ ವಿವರಗಳನ್ನು ಇಟ್ಟುಕೊಂಡಿದ್ದರು.”[೧೦] ಹೀಗೆ ಅನೇಕ ಮಹತ್ವದ ಸಂಗತಿಗಳನ್ನು ಅನಾವರಣಗೊಂಡಿದೆ. ಪತ್ರಿಕೆಗಳನ್ನು ಸಂಗ್ರಹಿಸುವಲ್ಲಿ ತಂತ್ರಗಳನ್ನು ಬಳಸಿದ ರೀತಿ ಗಮನಿಸಬಹುದು. ಉಡುಪಿಯ ಅಂತರಂಗ ಪತ್ರಿಕೆಯು ಒಂದು ವೇದಿಕೆಯನ್ನು ಏರ್ಪಡಿಸಿತ್ತು. ಅದೇನೆಂದರೆ ೧೮೪೩–೧೯೨೦ರವರೆಗಿನ ಅವಧಿಯನ್ನು ಪತ್ರಿಕೆ ಕುರಿತು ಮಾಹಿತಿ ನೀಡಬೇಕು. ಅಂಥವರಿಗೆ ೧೦–೧೫ ರೂ. ಬಹುಮಾನ ಕೊಡುವುದಾಗಿ ಹೇಳಿದರು. ಹೆಚ್ಚು ಸಂಗ್ರಹಿಸಿಕೊಟ್ಟವರಲ್ಲಿ ಧಾರವಾಡದ ಟಿ.ಆರ್.ಭಾಗವತ ೫೯ ಪತ್ರಿಕೆಗಳ ಮಾಹಿತಿ ನೀಡಿದರು. ಆ ಸಂಗ್ರಹಿತ ಪತ್ರಿಕೆಯಲ್ಲಿ ಜ್ಞಾನಭೋದಕ ಪತ್ರಿಕೆಯು ಒಂದು.

**'ಸಂಪಾದಕ ಮತ್ತು ವಾಚಕರೊಡನೆ ಸಂಬಂಧ'** ಚಂದಾದಾರರನ್ನು ಬಣ್ಣಿಸುವುದು, ಸಮಾಧಾನಪಡಿಸಿ ಪ್ರೋತ್ಸಾಹ ನೀಡುವುದು ಗತಕಾಲದ ಸಂಗತಿಯನ್ನು ಪರಿಚಯಿಸುವುದು ಈ ಪತ್ರಿಕೆಯ ಉದ್ದೇಶವಾಗಿತ್ತು. ಗಳಗನಾಥರ ಸಣ್ಣ ಹಳ್ಳಿಯಿಂದ 'ಸಬ್ಬೋಧ ಚಂದಿಕೆ' ಚಂದಾದಾರರ ಕುರಿತು ಸಂಪಾದಕೀಯಲ್ಲಿ ಪ್ರಸ್ತಾಪಗೊಂಡಿದೆ. ಕನ್ನಡ ಪ್ರಸಾರದ ವ್ಯಾಪ್ತಿಯನ್ನು ಧಾರವಾಡ, ವಿಜಾಪುರ, ಬೆಳಗಾವಿ, ಮೈಸೂರು, ಕಾರವಾರ, ಹೈದ್ರಾಬಾದ್, ಮದ್ರಾಸ್‌ವರೆಗೆ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿದೆ. ಪೆನ್ಶನರ್ ಮಾಸ ಪತ್ರಿಕೆಯ ಸಂಪಾದಕೀಯದಲ್ಲಿ ನೋವಿನ ಸಂಗತಿ ಪ್ರಸ್ತಾಪಗೊಂಡಿದೆ. ಸಮಾಜದ ಸಾಮಾನ್ಯ ಜನರ ಪ್ರಗತಿ ಬಾಂಧವ್ಯದ ಸಂಗತಿಗಳನ್ನು ತಿಳಿಸುವುದಾಗಿತ್ತು.

**'ಪತ್ರಿಕೆಗಳ ಪರಸ್ಪರ ಸಂಬಂಧ'** ಆ ಕಾಲದಲ್ಲಿ ಪತ್ರಿಕೆಗಳ ನಡುವಿನ ಸಂಬಂಧ ಚಿತ್ರಣ ಚಿತ್ರಿತಗೊಂಡಿದೆ. ಸ್ವಾತಂತ್ರ್ಯ ನಂತರದಲ್ಲಿ ಪತ್ರಿಕೆಗಳ ಸಂಪಾದಕರು ಇನ್ನೊಬ್ಬ ಸಂಪಾದಕರನ್ನು ನಿಂದಿಸುವುದು ತೀರ ವಿರಳ. ಆದರೆ ಗತಕಾಲದ ಪತ್ರಿಕಾ ಸಂಪಾದಕರು ನಿರ್ಭಿತಿಯಿಂದ ಇನ್ನೊಬ್ಬ ಸಂಪಾದಕರನ್ನು ನಿಂದಿಸುತ್ತಿದ್ದರು. 'ಸುಭೋದ ಚಂದಿಕೆ' ಜನಪ್ರಿಯತೆ ಕಂಡು ಮೈಸೂರು ಕಡೆಯ ಕರ್ನಾಟಕ ಕಾದಂಬರಿ ಸಂಗ್ರಹ ಸಂಪಾದಕರು ಚಂದಾದಾರರನ್ನು ನಿಂದಿಸುತ್ತಿರೆಂದು ನಂಬುತ್ತೀರಿ, ಹಾಗೆಯೇ ಕ್ರೈಸ್ತ ಪತ್ರಿಕೆ ಹಿಂದೂ ಧರ್ಮವನ್ನು ಮತ್ತು ಕೃಷ್ಣ ದೈವತ್ವದ ಸ್ವರೂಪ ನಿಂದಿಸದೇ ಸ್ವಮತದ ಜನಪ್ರಿಯತೆ ಪಡೆಯುವುದು ಕಷ್ಟ ಎಂಬುದು ಮನಗಂಡರು. ಹಿಂದೂ ಧರ್ಮವನ್ನು ಟೀಕಿಸುವ ಕಾರ್ಯಕ್ಕೆ ಹಿಂದೂ ಮುಂದು ನೋಡುತ್ತಿರಲಿಲ್ಲ. ಇದಕ್ಕೆ ಪ್ರತಿಯಾಗಿ ಹಿಂದೂ ಮತಾಭೀಮಾನ ಪತ್ರಿಕೆಯಲ್ಲಿ ಬೈಬಲ್ ವಿಷಯ ಕುರಿತು ಮಿಶನರಿಗಳನ್ನು ಪ್ರತಿಕ್ರಿಯಿಸದ ಕಾರಣ ಕ್ರೈಸ್ತ ಸಭಾಪತ್ರವನ್ನು ಲೇವಡಿ ಮಾಡಿದರು.

'ಸ್ವಾತಂತ್ರ್ಯ ಚಳುವಳಿ' ಆ ಕಾಲದ ಸ್ವಾತಂತ್ರ್ಯ ಚಳುವಳಿ ಸುದ್ದಿಯನ್ನು ಜನಸಾಮಾನ್ಯರಿಗೆ ತಲುಪಿಸುವ ಮಹತ್ವದ ಕಾರ್ಯವನ್ನು ನಿರ್ವಹಿಸಿತು. ಕವಿತಾ ರೂಪದಲ್ಲಿ ಜಾಹೀರಾತು, ಸಣ್ಣಕಥೆ, ಸ್ವರೂಪ ಸಂಪಾದಕೀಯಲ್ಲಿ ಟೀಕೆ, ಟಿಪ್ಪಣಿ ರೂಪದಲ್ಲಿ ವಿಶಿಷ್ಟ ಸಂಗತಿಯನ್ನು ನಿರೂಪಿತಗೊಂಡಿದೆ. ಅಲ್ಲದೆ ಕ್ವಿಟ್ ಇಂಡಿಯಾ ಚಳುವಳಿಯ ೧೯೪೨ ೯ರಂದು ಬೆಳಗಿನ ಜಾವದಲ್ಲಿ ಗಾಂಧಿಯವರನ್ನು ಬಂಧಿಸಿದ ಸುದ್ದಿಯನ್ನು ಕೇಳಿ ಜನ ಮಮ್ಮಲ ಮರುಗುವಂತೆ **'ಹರಿಜನ ಪತ್ರಿಕೆಯಲ್ಲಿ'** ಸುದ್ದಿ ಮಾಡಿದರು. ಅಲ್ಲದೆ ಇತರೆ ಕನ್ನಡ ಪತ್ರಿಕೆಗಳು ಸುದ್ದಿಯನ್ನು ಬಿತ್ತರಿಸಿದವು. ಕರ್ನಾಟಕ ವೈಭವ, ಕರ್ಮವೀರ, ವಿಶ್ವಕರ್ನಾಟಕ, ಪ್ರಜಾಮತ, ವೀರಕೇಸರಿ ತಾಯಿನಾಡು, ಸಂಯುಕ್ತ ಕರ್ನಾಟಕ ಇನ್ನು ಮುಂತಾದ ಪತ್ರಿಕೆಗಳು ಈ ನಾಡಿನ ಅಭಿವೃದ್ಧಿಗೆ ಸಹಕರಿಸಿದವು.

ಸ್ತ್ರೀಯರ ಪ್ರಗತಿ ಗತಕಾಲದ ಪತ್ರಿಕೆಗಳಲ್ಲಿ ಮಹಿಳೆಗೆ ಸಂಬಂಧಿಸಿದ ಮಹತ್ವ ಸಂಗತಿಗಳ ಮೇಲೆ ಬೆಳಕು ಚೆಲ್ಲಿದರು. ವಿಧವಾವಿವಾಹ, ಬಾಲ್ಯವಿವಾಹ ನಿಷೇಧ ಶಾಲಾಶಿಕ್ಷಣ

ಹೀಗೆ ಅನೇಕ ಸಂಗತಿಗಳನ್ನು ಬಿಚ್ಚಿಟ್ಟಿದ್ದಾರೆ. ವೆಂಕಟರಂಗೋ ಕಟ್ಟಿಯವರು ಸಂಪ್ರದಾಯ ವರ್ಗಕ್ಕೆ ಕೆಲವು ಸವಾಲುಗಳನ್ನು ಹಾಕಿದರು. ಉದಾ. ವಿಧವಾ ವಿವಾಹ ನಿಷಿದ್ಧ; ಇದಕ್ಕೆ ಪ್ರತಿಯಾಗಿ ವಿಧವಾ ಕೇಶಮುಂಡನವು ಶಾಸ್ತ್ರದಲ್ಲಿ ಹೇಳಿಲ್ಲವೆಂದು ಬರೆಯುವರಿಗೆ ಬಹುಮಾನ ಕೊಡುವುದಾಗಿ ಸವಾಲನ್ನು ಹಾಕಿದರು. ಹಾಗೂ 'ಸುದರ್ಶನ' ಪತ್ರಿಕೆಯಲ್ಲಿ ಸ್ತ್ರೀಶಿಕ್ಷಣ ಕುರಿತು ವಿಶಿಷ್ಟ ಸಂಗತಿಯು ಪ್ರಕಟಗೊಂಡಿವೆ. ಕವಿತೆ ಮತ್ತು ಗದ್ಯ ಸ್ವರೂಪದ ಸಂಗತಿಯು ಪೂರ್ವಕಾಲದ ಪತ್ರಿಕೆಗಳಲ್ಲಿ ಉಲ್ಲೇಖವಾಗಿರುವುದನ್ನು ಕಾಣಬಹುದು. ಆರಾಧಿಸುವ ಹಾಡು ಎಂದು ಕನ್ನಡ ಕಾವ್ಯದ ದಾಟಿಯಲ್ಲಿ ಬಿ.ಎಲ್.ರೈಸ್ ಎಂಬ ಪಾದ್ರಿ ರಚಿಸಿದರು. ಈ ಸ್ವರೂಪದ ಪದ್ಯಗಳು ಅರುಣೋದಯ ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದವು. ಈ ಎಲ್ಲಾ ಸಂಗತಿಗಳನ್ನು ತಿಳಿಯುವುದರ ಮೂಲಕ ಕನ್ನಡ ಭಾಷೆ ಸಾಹಿತ್ಯದಲ್ಲಿ ಕನ್ನಡಿಗರ ಜೀವನ ವಿಕಾಸವನ್ನು ಕಾಣಬಹುದು.

**ವೀರಶೈವ ಪತ್ರಿಕೆಗಳು**

ಗತಕಾಲದ ಪತ್ರಿಕೆಗಳು ವೀರಶೈವ ತತ್ವಸಿದ್ಧಾಂತ ಪ್ರಚಾರ ಮತ್ತು ಪ್ರಸರಣಾ ಮಾಡುವ ಉದ್ದೇಶ ಹೊಂದಿತ್ತು. ಈ ಪತ್ರಿಕೆಗಳು ವೀರಶೈವ ಸಾಹಿತ್ಯ ಮತ್ತು ಶಿಕ್ಷಣ ಕ್ಷೇತ್ರಕ್ಕೆ ಅಪಾರವಾದ ಕೊಡುಗೆ ಕೊಟ್ಟಿರುವುದು ಕಾಣಬಹುದು. ಧರ್ಮ ಪ್ರಗತಿಗಾಗಿ ಪತ್ರಿಕೆ ಮಾಧ್ಯಮ ತುಂಬ ಮಹತ್ವ ಪಾತ್ರ ನಿರ್ವಹಿಸಿದೆ. ಈ ಹಿನ್ನೆಲೆಯಲ್ಲಿ ಅನೇಕ ಧರ್ಮಗಳು ಪತ್ರಿಕೆ ಮಾಧ್ಯಮವನ್ನು ಬಳಸಿಕೊಳ್ಳಲು ಮುಂದಾದವು. ಮೊದಲಿಗೆ ಕ್ರೈಸ್ತರು ಪತ್ರಿಕಾ ಮಾಧ್ಯಮ ಬಳಸಿಕೊಳ್ಳುವುದರ ಮೂಲಕ ಪ್ರಗತಿ ಕಂಡರು. ಸನಾತನ ಧರ್ಮವಾದ ವೈದಿಕ ಧರ್ಮವು ಬಳಸಿಕೊಂಡಿತು. ಜೈನ ಕುರುಬ, ಈಡಿಗರು, ಕುಂಚಿಟಿಗರು ಇನ್ನು ಮುಂತಾದವರು ಬಳಸಿಕೊಂಡರು ಎನ್ನುವುದು ವೇದ್ಯವಾಗುತ್ತದೆ. ಈ ಲೇಖನದ ಮೂಲಕ ವೀರಶೈವ ಧರ್ಮಕ್ಕೆ ಸಂಬಂಧಿಸಿದಂತೆ ಮಹತ್ವದ ವಿಚಾರಗಳು ಪ್ರಸ್ತಾಪಗೊಂಡಿವೆ. ಶ್ರೀನಿವಾಸ ಹಾವನೂರ ಅವರು ಕೆಲವು ಮಹತ್ವ ಸಂಗತಿಗಳನ್ನು ಪರಿಚಯಿಸುತ್ತಾರೆ. 'ವೀರಶೈವ ಮತ ಪ್ರಕಾಶಿಕೆ' ಸಂಪಾದಕೀಯಲ್ಲಿ ವಿ.ಪಿ.ರುದ್ರಪ್ಪನವರು 'ಸಟೀಕ ಬಸವೇಶ್ವರ ವಿಜಯ' ಕೃತಿಯ ಕುರಿತು ಪ್ರಸ್ತಾಪಗೊಂಡಿದೆ ಮತ್ತು ಬಿ.ಮುನಿಯಪ್ಪ ಸಂಪಾದಕತ್ವದಲ್ಲಿ ಕ್ರಿಶ. ೧೮೭೬ರಲ್ಲಿ ವೀರಶೈವ ಮತದರ್ಶನ ಪ್ರಕಟವಾಗಿರುವುದನ್ನು ಗಮನಿಸಬಹುದು.

ಈ ಮೇಲೆ ಪ್ರಸ್ತಾಪಗೊಂಡ ವೀರಶೈವ ಪತ್ರಿಕೆ ಮೊದಲ ಮತ್ತು ಎರಡನೇಯ ಪತ್ರಿಕೆಯಲ್ಲಿ ವಿಷಯಗಳು ನಿರೂಪಿತಗೊಂಡಿದೆ. ಅದಕ್ಕಿಂತ ಪೂರ್ವದಲ್ಲಿ ಮೈಸೂರ್ ಸ್ಟಾರ್ ಪತ್ರಿಕೆಯ (೧೮೮೭) ಸಂಪಾದಕರಾದ ಜಿ.ವೀರಸಂಗಪ್ಪನವರು ಪ್ರಾರಂಭಿಸಿದರು. ನಂತರದಲ್ಲಿ "೧೮೯೧ರಲ್ಲಿ ಜನಗಣತಿಯಲ್ಲಿ ವೀರಶೈವರನ್ನು ಶೂದ್ರರೆಂದು ವರ್ಗೀಕರಿಸಿದ್ದರು. ಮಹತ್ವದ ಸಂಗತಿಯನ್ನು ಗಮನಿಸಿದ ವೀರಶೈವರು ಆಕ್ರೋಶಗೊಂಡಿದ್ದರು ಹಾಗೂ

ವೀರಶೈವರು ಶೂದ್ರರಲ್ಲ ಎನ್ನುವುದಕ್ಕೆ ಪಂಡಿತ ಎನ್.ಆರ್. ಕರಿಬಸವ ಶಾಸ್ತ್ರಿಗಳು ಸಮರ್ಥಿಸಿದರು. ಹಾಗೆಯೇ ಈ ವಿಷಯ ಪರ ಮತ್ತು ವಿರೋಧಗಳು ಚರ್ಚೆಗೊಂಡವು. ಬ್ರಾಹ್ಮಣ ಮತ್ತು ಬ್ರಾಹ್ಮಣಿ ಎನ್ನುವ ವಿಚಾರವನ್ನು ಸಂಪಾದಕರಾದ ವಿರೂಪಾಕ್ಷಪ್ಪನವರು ವಿಷಯವನ್ನು ಸಮರ್ಥಿಸಿಕೊಂಡರು."[೧೧] ಈ ರೀತಿಯ ಸಂಗತಿ ನಂತರ ಸಾಮಾಜಿಕವಾಗಿ ಸಾಕಷ್ಟು ಭಿನ್ನಾಭಿಪ್ರಾಯಗಳಿಗೆ ಕಾರಣವಾದವು.

ವೀರಶೈವ ಧರ್ಮದ ಹೆಸರಿನಲ್ಲಿ ಅರುವತ್ತಕ್ಕಿಂತ ಹೆಚ್ಚು ಪತ್ರಿಕೆ ಪ್ರಕಟಗೊಂಡವು. ಯಾವ ಸ್ಥಳಗಳಿಂದ ಹೊರಟವು ಎನ್ನುವುದು ಕುರಿತು ವಿವರ ಕಾಣಬಹುದು. ಬೆಂಗಳೂರು, ಮೈಸೂರು, ಉತ್ತರ ಕರ್ನಾಟಕದ ಕೆಲವು ಊರುಗಳಲ್ಲಿ ಆಲಮಟ್ಟಿ, ಕಮತನೂರ, ಮಾಗಡಿ, ಹಿರೇಬಾಗೇವಾಡಿ, ಜಮನಾಳ, ಮುಂಡರಗಿ, ಹರಪನಹಳ್ಳಿ ಮುಂತಾದ ಸ್ಥಳಗಳಲ್ಲಿ ಪ್ರಕಟಗೊಂಡವು. ಮಹಾರಾಷ್ಟ್ರದಲ್ಲಿ ವೀರಶೈವರಿಗಾಗಿ ಕನ್ನಡ, ಮರಾಠಿ ಭಾಷೆಗಳಲ್ಲಿ ಪತ್ರಿಕೆಗಳು ಪ್ರಕಟಗೊಂಡವು. ಅನೇಕ ಪತ್ರಿಕೆಗಳಲ್ಲಿ ವೀರಶೈವ ಎಂಬ ಪರಿಭಾಷೆ ಹೆಚ್ಚು ಪತ್ರಿಕೆಯಲ್ಲಿ ಚಾಲ್ತಿಯಲ್ಲಿವೆ. ಆದರೆ ಒಂದು ಪತ್ರಿಕೆಯಲ್ಲಿ ಲಿಂಗಾಯಿತ ಶಬ್ದ ಬಳಕೆಯಾಗಿದೆ. ಈ ಶಬ್ದದ ಬಳಕೆ ಗೌಣವಾಗಿರುವುದು ಸ್ಪಷ್ಟವಾಗುತ್ತದೆ.

ಪತ್ರಿಕೆಗಳ ಮಹತ್ವದ ಸಮೀಕ್ಷೆಯನ್ನು ಆಧರಿಸಿ ಹೇಳುವುದಾದರೆ ನಾಲ್ಕು ಭಾಗವಾಗಿ ವರ್ಗೀಕರಿಸಿ ಪ್ರಾರಂಭದಿಂದ ೧೯೨೫, ೧೯೫೦ರವರೆಗೆ ೧೯೫೦-೭೫ರವರೆಗೆ, ೧೯೭೫ರ ನಂತರ ದಿನಗಳವರಿಗೆ ಈ ಕಾಲಘಟ್ಟ ಘಟಿಸಿದ ಮಹತ್ವದ ಸಂಗತಿಗಳನ್ನು ಚರ್ಚಿಸಲಾಗಿದೆ. ವೀರಶೈವ ಪತ್ರಿಕೆ ಪ್ರಕಾರ (೧೯೦೬) ಮದ್ರಾಸ್ ಪ್ರಾಂತ್ಯದಿಂದ ಎನ್.ಸಿ. ಚನ್ನವೀರಪ್ಪ ಡಿ.ವೈನ್ ಪ್ರೆಸ್‌ನಿಂದ ಪತ್ರಿಕೆ ಪ್ರಾರಂಭಿಸಿದರು. ನಂತರ 'ವೀರಶೈವ ಧರ್ಮ ತರಂಗಿಣಿ' ಎಂಬ ಪತ್ರಿಕೆಯನ್ನು ಕ್ರಿ.ಶ. ೧೯೧೧ರಲ್ಲಿ ಎಚ್.ಎಸ್.ಶಿವಲಿಂಗಪ್ಪ ಶಾಸ್ತ್ರಿಗಳು ಧಾರವಾಡದಲ್ಲಿ ಪ್ರಾರಂಭಿಸಿದರು. ಆ ನಂತರ ಧರ್ಮೋತ್ತೇಜಕ ಸಭಾ ಎಂಬ ಪತ್ರಿಕೆ ಪ್ರಾರಂಭಿಸಿದರು. ಶಾಂತವೀರ ರಾ.ಕಿತ್ತೂರ ಮೈಸೂರು ಗವಿಮಠದ ಸ್ವಾಮಿ, ಸಿದ್ರಾಮಪ್ಪ ಪಾವಟೆ ಲೇಖಕರ ವರ್ಗದಲ್ಲಿ ಕಾಣಿಸಿಕೊಂಡರು. ಅಲ್ಲದೆ ಹಿರೇಬಾಗೇವಾಡಿ ಜಮುನಾಳ (ಬಿಜಾಪುರ, ನೀಲಕಂಠ ವಿಜಯ ಮತ್ತು ಶ್ರೀ ಮಧ್ವವೀರಶೈವ ಎಂಬೆರಡು ಪತ್ರಿಕೆಗಳು ಪ್ರಕಟಗೊಂಡವು.

೧೯೨೫-೫೦ರ ಅವಧಿಯಲ್ಲಿ ವೀರಶೈವ ಪತ್ರಿಕೆಯ ಪ್ರಗತಿಯ ಪರ್ವ ಎನ್ನುವ ಮಾತಿನಲ್ಲಿ ಸಂದೇಹವಿಲ್ಲ. ಹೀಗಾಗಿ ಸಂಖ್ಯಾದೃಷ್ಟಿಯಿಂದ ಮತ್ತು ಗುಣಮಟ್ಟದಿಂದ ಗಣನೆ ಮಾಡಬಹುದಾಗಿದೆ. ವೀರಶೈವ ದರ್ಪಣ ಪತ್ರಿಕೆಯನ್ನು ಶಿವಲಿಂಗ ಶಾಸ್ತ್ರಿಗಳು ಮೈಸೂರಿನಲ್ಲಿ ಆರಂಭಿಸಿದರು. ಅದೇ ಕಾಲಕ್ಕೆ 'ಆರಾಧ್ಯ ಧರ್ಮೋಜ್ಜೀವಿನಿ' ಪತ್ರಿಕೆಯನ್ನು ಪ್ರಾರಂಭಿಸಿದರು. ಆದರೆ ಆರಾಧ್ಯ ಧಮೋಜ್ಜೀವಿನೀ ಸಭಾ ಎಂಬ ಸಂಸ್ಥೆಯೂ ಆಗಿತ್ತು (ಸಂಪಾದಕರು ನಂಜುಂಡರಾಧ್ಯರು) ಹಾವೇರಿಯಲ್ಲಿ ವಿ.ಸಿ. ಯಗಟಿ ಬಸವರಾಜರವರು ವಾರಪತ್ರಿಕೆ ಪ್ರಕಟಿಸಿದರು. ನಂತರ ಅದು ಮಾಸ ಪತ್ರಿಕೆಯಾಯಿತು. ಬೆಳಗಾವಿಯಲ್ಲಿ

ವೀರಶೈವ ತರುಣ ಸಂಘದವರು 'ಪ್ರಭೇದ ಮಾಸಿಕ' ಪತ್ರಿಕೆಯನ್ನು ಆರಂಭಿಸಿದರು. (೧೯೧೮-೩೦) ಈ ಪತ್ರಿಕೆಯನ್ನು ಶಿ.ಶಿ.ಬಸವನಾಳ ಮತ್ತು ಎಚ್‌ಎಫ್. ಕಟ್ಟಿಮನಿಯಂಥವರು ಮಾಡಿದರು. ಹಾಗೆಯೇ ಹರ್ಡೇಕರ ಮಂಜಪ್ಪನವರು ವಿಜಾಪುರ ಜಿಲ್ಲೆಯ ಆಲಮಟ್ಟಿಯಲ್ಲಿ 'ಶರಣ ಸಂದೇಶ' ಎಂಬ ಪತ್ರಿಕೆಯನ್ನು ಪ್ರಾರಂಭಿಸಿದರು.

ಈ ಪತ್ರಿಕೆಯು ಮೂರು ಅಂಶಗಳಿಗೆ ಪ್ರಾಮುಖ್ಯತೆಯನ್ನು ಕೊಟ್ಟಿತು. ೧. "ಶರಣ ತತ್ವಗಳ ಪ್ರಸಾರ, ೨. ಸಮಕಾಲೀನ ವಾತಾವರಣದಲ್ಲಿರುವ ರಾಜಕೀಯ ಮಹತ್ವ ಕಡಿಮೆ ಮಾಡಿ, ಸಾಮಾಜಿಕ ಚಟುವಟಿಕೆಗೆ ಒತ್ತು ಕೊಡುವುದು ೩. ವಿಶ್ವವಿದ್ಯಾಲಯದ ತಿಳುವಳಿಕೆ ಹೆಚ್ಚಿಸುವುದು."[೧೨] ಫ.ಗು.ಹಳಕಟ್ಟಿಯವರು ವಿಜಾಪುರದಲ್ಲಿ ಕ್ರಿಶ. ೧೯೨೭ರಲ್ಲಿ 'ಶಿವಾನುಭವ' ಪತ್ರಿಕೆಯನ್ನು ಆರಂಭಿಸಿದರು. ಈ ಪತ್ರಿಕೆಯ ಉದ್ದೇಶ ವಚನಕಾರರ ವಚನ ಮತ್ತು ಶಿವಶರಣ ಕಾಯಕದ ಮಹತ್ವವನ್ನು ಪರಿಚಯಿಸುವುದು. ಈ ಮೂಲಕ ಎರಡು ನೂರಕ್ಕಿಂತ ಹೆಚ್ಚು ಶರಣರನ್ನು ಪರಿಚಯಿಸಿದ್ದು. ಬಸವಣ್ಣ ಕಾಲಮಾನ ಕುರಿತು ಅರ್ಜುನವಾಡದ ಶಿಲಾಶಾಸನ ಉಲ್ಲೇಖಗೊಂಡ ನಂದಿಮಠ, ಶಿ.ಶಿ. ಬಸವನಾಳ, ಕುಂದಣಗಾರ, ಮಾಳವಾಡ ಇವರು 'ಶಿವಾನುಭವ' ಪತ್ರಿಕೆಗೆ ಮಹತ್ವದ ಲೇಖನಗಳನ್ನು ಅವರಾಗಿಯೇ ಕಳುಹಿಸುತ್ತಿದ್ದರು. ಕಾಶಿನಾಥ ಶಾಸ್ತ್ರಿಗಳು 'ಪಂಚಾಚಾರ್ಯ ಪ್ರಭಾ' ಎನ್ನುವ ಪತ್ರಿಕೆಯನ್ನು ಪ್ರಾರಂಭಿಸಿದರು. ಶಾಸ್ತ್ರಿಗಳು, ಪಂಡಿತರು ಕೂಡ ಆಗಿದ್ದರು. ಹೀಗಾಗಿ ಎಪ್ಪತ್ತೈದು ಕೃತಿಗಳನ್ನು ಪರಿಚಯಿಸಿದರು. ಅಲ್ಲದೆ ಐವತ್ತು ವರ್ಷಗಳ ಕಾಲ ವೀರಶೈವ ಪತ್ರಿಕೆಗಳು ಮಾಡಿದ ಕಾರ್ಯವನ್ನು ಸ್ಮರಿಸಿಕೊಳ್ಳಬಹುದು.

ವಿ.ಶಿವಮೂರ್ತಿ ಶಾಸ್ತ್ರಿಗಳು ವ್ಯಕ್ತಿ ಮತ್ತು ಪತ್ರಿಕೆ ವಿಷಯದಲ್ಲಿ ಕೈಗೊಂಡ ಸಂಚಾರದ ಪ್ರತಿಫಲವಾಗಿ ಕರ್ನಾಟಕದಲ್ಲಿ ಶರಣಸಾಹಿತ್ಯ ನೆಲೆಗೊಳ್ಳಲು ಸಾಧ್ಯವಾಯಿತು. ಅಲ್ಲದೆ ಗೋವಿಂದ ಪೈಯವರ ಸಂಶೋಧನ ಬರಹಗಳಿಗೂ ಅವಕಾಶವಾಯಿತು. ಮತ್ತೊಂದು ವೈಶಿಷ್ಟತೆಯನ್ನು ಕಾಣಬಹುದು. ಉತ್ತರ ಕರ್ನಾಟಕದ ಪತ್ರಿಕೆಗಳಲ್ಲಿ ಲಿಂಗಾಯಿತ ಎಂಬ ಪರಿಭಾಷೆ ಮೂರು ಪತ್ರಿಕೆಗಳಲ್ಲಿ ಬಳಕೆಗೊಂಡಿದೆ. ಲಿಂಗಾಯಿತ ವಿದ್ಯಾಭಿವೃದ್ಧಿ ಸಂಸ್ಥೆಯ ಈ ಪತ್ರಿಕೆಯು ಬೆಳಗಾವಿಯಲ್ಲಿ ಆರಂಭಗೊಂಡು ನಂತರ ಧಾರವಾಡಕ್ಕೆ ವರ್ಗಗೊಂಡಿತು. ಆದರೆ ಬಹಳ ಕಾಲ ಇರಲಿಲ್ಲ. ಆದರೆ ಈ ಸಂಸ್ಥೆಯು ಸಾಹಿತ್ಯ ಸಮಿತಿಯಾಗಿ ರೂಪುಗೊಂಡಿತು. ಹೀಗಾಗಿ ಇತಿಹಾಸ ಸಂಶೋಧನೆಗೆ ಸಂಬಂಧಿಸಿದ ಲೇಖನಗಳು ಚಾಲ್ತಿಯನ್ನು ಪಡೆದುಕೊಂಡವು. ಈ ಪತ್ರಿಕೆಗಳಲ್ಲಿ ವೀರಶೈವಕ್ಕೆ ಸಂಬಂಧಿಸಿದ ವಿಷಯಗಳು ಹೆಚ್ಚು ಇರುತ್ತಿರುವ ಕಾರಣದಿಂದ ಲಿಂಗಾಯಿತ ಎಂಬ ಶಬ್ದ ಗೌಣಾವಾಗಿರಬೇಕು.

ವೀರಶೈವ ಧರ್ಮ ಸಾಮ್ರಾಜ್ಯ ಎಂಬ ಕಮತನೂರ ಎಂಬ ಊರಿನಿಂದ ರಾಚಯ್ಯ ಮತ್ತು ಲಿಂಗಯ್ಯ ಹೀರೇಮಠರು ಆರಂಭಿಸಿದರು. ಸೊಲ್ಲಾಪುರದ ಎಂ.ಎಸ್. ಕಲ್ಯಾಣ ಶೆಟ್ಟಿಯವರು ವೀರಶೈವ ಮತ ಪ್ರಸಾರದ ಪತ್ರಿಕೆ ಹೆಸರನ್ನು ಏಕೆ ಇಟ್ಟರೂ ಗೊತ್ತಿಲ್ಲ. ಆ

ಸಂಚಿಕೆಯು ಒಂದು ಕೂಡ ಇರಲಿಲ್ಲವೆಂದು ಹೇಳಿದರು. ಹಾವೇರಿಯಲ್ಲಿ 'ಸದ್ಧಮ ದೀಪಿಕೆ' ಎಂಬ ಪತ್ರಿಕೆ ಆರಂಭವಾಯಿತು. ಆ ಮೂಲಕ ಚನ್ನಮಲ್ಲಿಕಾರ್ಜುನ ಶಾಸ್ತ್ರಿಗಳು ವೀರಶೈವರಿಗೆ ಅಷ್ಟಾವರಣದ ಮಹತ್ವ ನೀಡಿದರು. ಅಲ್ಲದೆ ಸೋಮನಾಥ ಪಂಚಚಾರ್ಯರಿಗೆ ಸಂಬಂಧಿಸಿದ ಮಹತ್ವದ ಸಂಗತಿಗಳನ್ನು ಪರಿಚಯಿಸಿದರು. ರಾಯಚೂರಿನ ಅಮರವಾಣಿ ಸ್ವಾತಂತ್ರ್ಯದ ನಂತರದ ಪತ್ರಿಕೆ. ಬಿ.ಎಂ. ವೀರೇಶ್ವರಶಾಸ್ತ್ರಿ ಎಸ್.ಎಂ. ಹುಣಿಶ್ಯಾಳ್ ಎಸ್. ಶಿವಾನಂದ ಸೇರಿ ಪತ್ರಿಕೆಯನ್ನು ಪ್ರಕಟಿಸಿದರು.

ಸ್ವಾತಂತ್ರ್ಯದ ನಂತರ ಕೆಲವು ಮಹತ್ವದ (೧೯೦೫-೭೫) ಪತ್ರಿಕೆಗಳು ಪ್ರಕಟವಾದವು. ಶರಣ ಮಾರ್ಗ ತ್ರೈಮಾಸಿಕ ಪತ್ರಿಕೆಯು ವಿಜಾಪುರದಲ್ಲಿ ೧೯೫೬ರಲ್ಲಿ ಪ್ರಕಟವಾಯಿತು. ಲಿಂಗರಾಜ ಬರಗೂರ, ಆರು ಬೆರಳಿನ ವೀರಪ್ಪ ಶಾಸ್ತ್ರಿಗಳು ಹೊರಡಿಸಿದರು. ಎಚ್.ಟಿ.ಸಾಸನೂರ, ವಿ.ಟಿ. ವಜ್ರಮಟಿ ಅವರು 'ಅನುಭವ ಮಂಟಪ' ಎಂಬ ಪತ್ರಿಕೆಯನ್ನು ಪ್ರಾರಂಭಿಸಿದರು. ಶ್ರೀಶೈಲ ಜ್ಯೋತಿ ಎನ್ನುವ ಪತ್ರಿಕೆ 'ವೀರ ಸಂಘ'ದಿಂದ ಪ್ರಾರಂಭವಾಯಿತು. ಮೂಡವಾಣಿ ಪತ್ರಿಕೆಯನ್ನು ಮುಂಡರಗಿಯ ಸಿ.ಎಂ. ಚುರ್ಚಹಾಳಮಠ ಮಹಾಲಿಂಗ ಮಾಳಿಗೆ ಅವರು ಪತ್ರಿಕೆ ಆರಂಭಿಸಿದರು. 'ಜ್ಞಾನಪ್ರಸಾದ' ಪತ್ರಿಕೆಯನ್ನು ಅಖಿಲ ಭಾರತ ವೀರಶೈವ ಸಂಘವು ಬೆಳಗಾವಿಯಲ್ಲಿ ಪ್ರಾರಂಭಿಸಿದರು. ವಿ.ಕೆ. ಜವಳಿಯವರು ಕಾಯಕ ಪತ್ರಿಕೆಯನ್ನು ಧಾರವಾಡದಿಂದ ಹೊರಡಿಸಿದರು. ಅದನ್ನೇ 'ಮಾಮನೆ' ಎನ್ನುವ ಪತ್ರಿಕೆಯಾಗಿ ಬೆಂಗಳೂರಿನಿಂದ ಹೊರಡಿಸಿದರು.

ಮೈಸೂರಿನ ಶ್ರೀ ಸುತ್ತೂರು ಮಠದ ಆಶ್ರಯದಲ್ಲಿ ಮಠದಿಂದ ಎರಡು ಪತ್ರಿಕೆಗಳನ್ನು ಪ್ರಕಟಿಸಿದರು. 'ಶರಣವಾಣಿ,' ಪತ್ರಿಕೆಯನ್ನು ಕೆ.ಎಸ್. ಶಾಲಾ ವಿದ್ಯಾರ್ಥಿ ಸಂಘದವರು ಪ್ರಕಟಿಸಿದರು. 'ಪ್ರಸಾದ' ಎಂಬ ಪತ್ರಿಕೆ ಎಚ್.ಗಂಗಾಧರಯ್ಯ ಮಾಡಿದರು. ಉಜ್ಜಯನಿ ಮಠ ಚಿತ್ರದುರ್ಗ ಶ್ರೀ ಶಿವಪ್ರಕಾಶ ಶಿವಾಚಾರ್ಯರು 'ಸದ್ಧರ್ಮ' ಪತ್ರಿಕೆ 'ಪ್ರಭಾ' ಪತ್ರಿಕೆಯನ್ನು ಜಿ.ವಿ.ತಿಪ್ಪೇಸ್ವಾಮಿ ಸಂಪಾದಕತ್ವದಲ್ಲಿ ಪ್ರಕಟಿಸಿದರು. ನಂತರದ ದಿನಗಳಲ್ಲಿ ಸತ್ಯ ಶುದ್ಧ ಕಾಯಕವನ್ನು ಬಿ.ರಾಜಶೇಖರಪ್ಪ ಪ್ರಾರಂಭಿಸಿದರು. 'ಸಾವಧಾನ' ಪತ್ರಿಕೆಯನ್ನು ಧಾರವಾಡದ ಶ್ರೀ ಮುರುಘಾ ಮಠದವರು ಪ್ರಕಟಿಸಿದರು. ಸಿದ್ಧಗಂಗಾ ಎಂಬ ತ್ರೈಮಾಸಿಕ ಪತ್ರಿಕೆ ಸಿದ್ಧಮಠದಿಂದ ಚನ್ನಪ್ಪ ದೊರೆ ಸ್ವಾಮಿಯವರು ಪ್ರಾರಂಭಿಸಿದರು. 'ಮಠೀಯ ಪರಂಜ್ಯೋತಿ' ಮೂರು ಸಾವಿರ ಮಠದ ಗಂಗಾಧರ ಹೊರಡಿಸಿದರು. ಈ ಪತ್ರಿಕೆಗೆ ಸಿದ್ದಯ್ಯ ಪುರಾಣಿಕ ಡಿ.ಎಸ್.ಕರ್ಕಿ, ಈಶ್ವರ ಸಣಕಲ್ ಲೇಖನವನ್ನು ಕೊಡುತ್ತಿದ್ದರು. ಮಾಮಿಡಿ ಪತ್ರಿಕೆಯನ್ನು ಶ್ರೀಶೈಲ ನಿಡುಮಾಮಿಡಿ ಹೊರಡಿಸಿದರು. ಮಠಗಳು ಅಲ್ಲದೆ ಗಾನಕಲಾ ಸಂಸ್ಥೆಯವರು ವೀರಶೈವ ಮತ ಪ್ರಚಾರದ ನಿಮಿತ್ತವಾಗಿ 'ಪಂಚಾಕ್ಷರ ಪ್ರಕಾಶ' ಪತ್ರಿಕೆ ಪ್ರಕಟಿಸಿದರು. ಹಾವನೂರ ಅವರು ವೀರಶೈವ ಪತ್ರಿಕೆಯ ಮಹತ್ವದ ವಿಚಾರಧಾರೆಯನ್ನು ಪರಿಚಯಿಸಿದರು. ವೀರಶೈವ ಪತ್ರಿಕೆಯು ತನ್ನ ಧರ್ಮದ ಅಸ್ತಿತ್ವವನ್ನು ಉಳಿಸಿಕೊಳ್ಳುವ ಉದ್ದೇಶದಿಂದ

ಧರ್ಮಪ್ರಚಾರ ಮತ್ತು ಪ್ರಸಾರ ಮಾಡುವಲ್ಲಿ ಮಹತ್ವ ಪಾತ್ರವನ್ನು ನಿರ್ವಹಿಸುತ್ತವೆ. ಅಲ್ಲದೆ ಪ್ರಸಾರ ಮಾಡುವ ಕಾರ್ಯದಲ್ಲಿ ನಿಷ್ಠೆಯಿಂದ ಧರ್ಮ ಪ್ರಚಾರದ ಕಾಯಕ ಮಾಡುವುದರ ಮೂಲಕ ಧರ್ಮದ ಪ್ರಗತಿಗೆ ಕಾರಣರಾದರು.

**ಮಹತ್ವದ ಹಲವು ಪತ್ರಿಕೆಗಳು**

ಮಂಗಳೂರು ಸಮಾಚಾರ ಕನ್ನಡ ಪತ್ರಿಕೆಯ ಮಹತ್ವದ ಸಂಗತಿಯನ್ನು ಪರಿಚಯಿಸುವಲ್ಲಿ ಹಾವನೂರ ಅವರ ಪಾತ್ರ ಹಿರಿದು. ಕನ್ನಡ ಮೊದಲ ಪತ್ರಿಕೆ ಸಂಬಂಧಿಸಿದಂತೆ ಚರ್ಚೆ ಈ ನಾಡಿನ ಕನ್ನಡ ಗ್ರಂಥ ಮತ್ತು ಪತ್ರಿಕಾ ಲೇಖನದಲ್ಲಿ ಸ್ಪಷ್ಟ ಸಂಗತಿ ಕಂಡುಬಂದಿಲ್ಲ. ಯುರೋಪಿನ ಪ್ರಾಚ್ಯ ಪುಸ್ತಕದಲ್ಲಿ ವಿಚಾರಿಸಿದ ಕುರಿತು ಮಾಹಿತಿ ಸಿಕ್ಕಿತು. ಪತ್ರಿಕೆಯ ಪೂರ್ಣ ಸಂಪುಟಗಳ ಮೈಕ್ರೋಫಿಲ್ಮ್ ಇಂಗ್ಲೆಂಡಿನಿಂದ ತರಿಸಿಕೊಂಡು ಅಧ್ಯಯನ ಮಾಡಿದ ನಂತರ ಕನ್ನಡ ಸ್ಪಷ್ಟ ಸಂಗತಿಯನ್ನು ಪರಿಚಯಿಸಲು ಸಾಧ್ಯವಾಯಿತು.

ಆರಂಭ ಕಾಲಕ್ಕೆ ವರ್ತಮಾನದ ಸುದ್ದಿಯನ್ನು ಒಬ್ಬರಿಂದ ಮತ್ತೊಬ್ಬರಿಗೆ ಬಿತ್ತರಿಸುತ್ತಿದ್ದರು. ಈ ಸುದ್ದಿ ಸುಳ್ಳಾಗುವ ಸಾಧ್ಯತೆಯ ಇತ್ತು. ಈ ಕಾರಣದಿಂದ ಏನು ಲಾಭವಿಲ್ಲವೆಂದು ತಿಳಿದಿದ್ದರು. ಹೀಗಾಗಿ ಜರ್ಮನ್‌ನಿಂದ ಬಾಸೆಲ್ ಮಿಶನ್‌ನವರು ಕ್ರಿ.ಶ. ೧೮೩೭ರಂದು ಮಂಗಳೂರಿಗೆ ಮುದ್ರಣ ಯಂತ್ರ ತಂದ ನಂತರ ವರ್ಷದಿಂದ 'ಪಕ್ಷ' ಪತ್ರಿಕೆ ಪ್ರಾರಂಭವಾಯಿತು.

ಈ ಪತ್ರಿಕೆಯ ಒಡೆತನ ಬಾಸೆಲ್ ಮಿಶನ್‌ಗೆ ಸೇರಿತ್ತಾದಾದರು ಮಿಶನ್‌ನ ಹೆಸರು ಯಾವ ಸಂಚಿಕೆಯಲ್ಲೂ ಪ್ರಸ್ತಾಪವಾಗಿಲ್ಲ. ಆದರೆ ಪ್ರಕಾಶಕರಾಗಿ ಸಂಪಾದಕರ ಕಾರ್ಯವನ್ನು ಹರ್ಮನ್ ಮೊಗ್ಲಿಂಗ್ ಅವರೇ ನಿರ್ವಹಿಸುತ್ತಿದ್ದರು. ಅದರೆ ಸಮಾಚಾರ ಸಂಗತಿಯ ಈ ರೀತಿಯದಾಗಿದೆ. "೧. ಉತ್ತಮ ನಡೆತಗಳನ್ನು ಅನುಸರಿಸಬೇಕು. ದುಷ್ಟ ನಡೆಗೆ ನ್ಯಾಯಾಲಯದ ಶಿಕ್ಷೆಯ ಕಂಡು ಭಯಗೊಳ್ಳುವಂತೆ ಮಾಡುವುದು. ೨. ಸರ್ಕಾರಿ ನಿರೂಪಗಳು ಕಾನೂನುಗಳು. ೩. ಸುದ್ದಿಯನ್ನು ಹೇಳುವ ಸಾಮತಿಗಳು ಪದಗಳು ೪. ಕಥೆಗಳು, ೫. ಸರ್ವರಾಜ್ಯ ವರ್ತಮಾನ"[೨೨] ಈ ರೀತಿಯ ನಿರ್ಬಂಧಗಳನ್ನು ಒಡ್ಡುವ ಮೂಲಕ ನಾಡಿನ ಜನತೆಯನ್ನು ಹಿಡಿತದಲ್ಲಿ ಇಟ್ಟುಕೊಳ್ಳುವ ಪ್ರಯತ್ನ ಮಾಡಿದರು. ನಂತರದ ದಿನಗಳಲ್ಲಿ ಆ ಕಾಲದ ವರ್ತಮಾನ ಸುದ್ದಿ ಉತ್ತಮವಾದ ಪರಿಸರ ಕಂಡುಬಂದಿತು. ಮಿಶನರಿ ಶಾಲೆಯನ್ನು ಆರಂಭಿಸಿದಾಗ ಮೂವರು ಬ್ರಾಹ್ಮಣ ಜಾತಿಯಿಂದ ಕ್ರೈಸ್ತ ಮತಕ್ಕೆ ಮತಾಂತರಗೊಂಡರು. ಇದು ಬಾಸೆಲ್ ಮಿಶನ್‌ನವರ ಮೊದಲನೆಯ ಮತಾಂತರವಾಗಿತ್ತು. ಅಲ್ಲದೆ ನಂತರ ಸ್ವಧರ್ಮ ಸೇರಿದರು. ದಕ್ಷಿಣ ಕನ್ನಡದ ಜಿಲ್ಲೆಯ ಜನರಿಗೆ ಕೋರ್ಟು ಕಛೇರಿ ಸಂಬಂಧಿಸಿದ ಹಾಗೆ ಕಾನೂನಿನ ವಿಷಯಗಳು ಇಲ್ಲಿ ನಿರೂಪಿತಗೊಂಡಿವೆ.

ಈ ಪತ್ರಿಕೆಯ ದಾಖಲೆ ಐತಿಹಾಸಿಕವಾಗಿ ಮಹತ್ವ ಪಡೆದಿದೆ. ಈ ಪತ್ರಿಕೆಯನ್ನು ಮಿಶನರಿಗಳು ಪ್ರಕಟಿಸುತ್ತಿದ್ದರು. ಕ್ರೈಸ್ತ ಧರ್ಮದ ವಿಚಾರಗಳು ಮಾತ್ರ ಆಗಿರದೆ ಕನ್ನಡಿಗರ

ಮತ, ಧರ್ಮ ಕುರಿತು, ದಾಸರ ಹಾಡು, ಶ್ಲೋಕಗಳು, ಬೈಬಲ್ ಉಕ್ತಿಗಳು ಹೀಗೆ ಸಮಸ್ತ ವಿಚಾರಧಾರೆಗಳು ಈ ಪತ್ರಿಕೆಯಲ್ಲಿ ಪ್ರಕಟವಾಗುತ್ತಿತ್ತು. ಪತ್ರಿಕೆಯ ಕೆಲವು ಸಂಚಿಕೆಗಳ ವಿಷಯಗಳನ್ನು ಗಮನಿಸುವುದಾದರೆ, "ಶತ್ರುಗಳನ್ನು ಪ್ರೀತಿ ಮಾಡಿ ನಿಮಗೆ ಶಪಿಸುವರನ್ನು ಆಶೀರ್ವದಿಸಿರಿ; ಹಗೆ ಮಾಡುವರಿಗೆ ಉಪಕಾರ ಮಾಡಿ. ನಿಮಗೆ ಹಿಂಸೆಯೂ ಮತ್ತು ನಿಂದೆ ಮಾಡುವವರಿಗೆ ಪ್ರಾರ್ಥಿಸಿ"[೧೪] (೯ನೇ ಸಂಚಿಕೆ)

ವಾಚಕರ ಮನೋರಂಜನೆಗೆ ಈ ಪತ್ರಿಕೆ ಹೆಚ್ಚು ಮಹತ್ವವನ್ನು ಕೊಟ್ಟಿರಲಿಲ್ಲ ಎಂಬುದು ತಿಳಿಯುತ್ತದೆ. ಸಂಪಾದಕೀಯದಲ್ಲಿ ಹೆಚ್ಚು ಪಡೆ ನುಡಿಗಳು ಬಳಕೆಯಾಗುತ್ತಿದ್ದವು. ಉದಾ. ಜನ ಮರುಳೋ ಜಾತ್ರೆ ಮರುಳೋ. ಈ ನಾಡಿನ ವಿವಿಧ ಸಂಸ್ಥಾನಗಳ ರಾಜರು ಮತ್ತು ವೀರರು ಬ್ರಿಟಿಷರೊಡನೆ ಹೋರಾಡಿದ ಕಥೆಯ ವಿವರಗಳು ಗ್ವಾಲಿಯರ್, ಲಾಹೋರ್, ಸಿಂಧುದೇಶಗಳ ಹೋರಾಟದ ಸ್ವರೂಪಗಳನ್ನು ಈ ಪತ್ರಿಕೆಯಲ್ಲಿ ಬಹಳ ಸುಂದರವಾಗಿ ಚಿತ್ರಿಸಲಾಗಿತ್ತು. ಲಾಹೋರ್ ಸಂಸ್ಥಾನವನ್ನು ಸ್ಥಾಪಿಸಿ ರಣಜಿತಸಿಂಗ್ ಮತ್ತು ಬದಲಾದ ಅಧಿಕಾರದ ಸ್ವರೂಪವನ್ನು ಪತ್ರಿಕೆ ನೀಡಿದೆ. ಮಂಗಳೂರು ಮತ್ತು ಕನ್ನಡದ ಸಿಖ್ ಸಮುದಾಯ ಕುರಿತ ಪತ್ರಿಕೆ ಪರಿಚಯಿಸಿದರು.

ಮಂಗಳೂರು ಸಮಾಚಾರ ಪತ್ರಿಕೆಯು ಕನ್ನಡ ನಾಡಿಗೆ ಸೀಮಿತವಾಗದೆ ಅಖಿಲ ಭಾರತ ಮಟ್ಟದಲ್ಲಿ ತನ್ನ ಕಾರ್ಯ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿತು. ಜಗತ್ತಿನ ಹತ್ತು ಹಲವು ಸುದ್ದಿಗಳನ್ನು ಈ ನಾಡಿನ ಜನರಿಗೆ ಪರಿಚಯಿಸುತ್ತಿತ್ತು. ಭಾಷೆಯ ಕುರಿತು ಲೇಖನ ಪ್ರಕಟವಾಗುತ್ತಿದ್ದವು. ಕನ್ನಡ ಪಂಡಿತ ಸಂಸ್ಕೃತಭೂಷಿತವಾದ ಪ್ರೌಢ ಶೈಲಿಯಲ್ಲಿ ಬರೆಯುತ್ತಿದ್ದರು. ಹೀಗಾಗಿ ಇದರ ಅರ್ಥ ಹಳೆಗನ್ನಡ ನಡುಗನ್ನಡ ಪದ್ಯ ಪರಂಪರೆ ಪ್ರಬಲವಾಗಿತ್ತು. ಗದ್ಯ ರೂಪದಲ್ಲಿ ಸಾಮಾನ್ಯ ಜನರಿಗೆ ತಿಳಿಯುವಂತೆ ಬರೆಯುವವರು ದೇಶಿಯರಲ್ಲಿ ಇರಲಿಲ್ಲ. ಆದರೆ ಮಿಶನರಿಗಳು ಅವರ ಮತ-ಧರ್ಮದ ಕುರಿತು ಬರೆಯಲು ಪ್ರಾರಂಭಿಸಿದರು. ಅಲ್ಲದೆ ಕೋರ್ಟು, ಕಛೇರಿಗಳಿಗೆ ಸಂಬಂಧಿಸಿದ ಮಹತ್ವದ ಸಂಗತಿಗಳನ್ನು ಪ್ರಕಟಿಸುತ್ತಿದ್ದರು. ಪತ್ರಿಕೆ ಸಂಚಾಲಕರು ಅದರ ಕಾರ್ಯ ಮುದ್ರಣ ಕೆಲಸವನ್ನು ಬಳ್ಳಾರಿಗೆ ವರ್ಗಾಯಿಸಬೇಕೆಂದು ತೀರ್ಮಾನಿಸಿದರು. ಈ ನಾಡಿನ ಜನರ ಕನ್ನಡ ಭಾಷೆಯ ಅಥವಾ ಪತ್ರಿಕೆಯನ್ನು ಪ್ರಗತಿ ಮಾಡುವ ಹಿನ್ನೆಲೆಯಲ್ಲಿ "ಕಲ್ಲಿನಲ್ಲಿ ಛಾಪಿಸದೆ ಬಳ್ಳಾರಿಯಲ್ಲಿ ಇರುವ ಅಕ್ಷರ ಛಾಪಖಾನೆಯಲ್ಲಿ ಅಚ್ಚುಪಡಿ ಮಾಡಲಿಕ್ಕೆ ನಿರ್ಧರಿಸಿದರು. ಕನ್ನಡ ಸೀಮೆಯ ನಾಲ್ಕು ದಿಕ್ಕುಗಳಲ್ಲಿರುವ ಶುದ್ಧವಾದ ಮೊಳೆ ಅಚ್ಚುಗಳಿಂದ ಆಗುವ ಬರಹವನ್ನು ಸುಲಭವಾಗಿ ಓದಬಹುದು ಇದಲ್ಲದೆ ಬಳ್ಳಾರಿಯಲ್ಲಿ ಆಗುವ ವರ್ತಮಾನಗಳನ್ನು ತಿಳಿಸುತ್ತಿದ್ದರು."[೧೫]

ಕನ್ನಡ ಪ್ರಜ್ಞೆ ಈ ಎರಡು ಭಾಗಗಳಲ್ಲಿ ಮೈಸೂರು ಸಂಸ್ಥಾನದ ಕನ್ನಡಿಗರಿಗೂ ಮುಂಬಯಿ ಕರ್ನಾಟಕದವರೆಗೂ ಆ ಕಾಲದ ಬಳಕೆ ಇರದಿದ್ದಾಗ ಕನ್ನಡ ನಾಡಿನ ಜನರು ಒಂದೇ ಎನ್ನುವ ಭಾವನೆ ಇರಲಿಲ್ಲ. ಕನ್ನಡಿಗರು ಎಲ್ಲಾ ಪತ್ರಕರ್ತರು ಮೊದಲಿನಿಂದಲೂ

ಏಕತಾ ಭಾವನೆ ಇಟ್ಟುಕೊಂಡಿದ್ದರು. ಮಂಗಳೂರು ಸಮಾಚಾರ ಎನ್ನುವ ಶೀರ್ಷಿಕೆಯ ಬದಲಾಗಿ 'ಕನ್ನಡ ಸಮಾಚಾರ' ಎಂಬುದಾಗಿ ಮಾರ್ಪಟ್ಟದೆ. ಆದರೆ ಸಂಪಾದನ ಕಾರ್ಯ ನಿರ್ವಹಿಸುವುದು ತುಂಬ ಕಷ್ಟವಾಯಿತು.

ಚಂದ್ರೋದಯ ಪತ್ರಿಕೆಯು ಕನ್ನಡ ಪತ್ರಿಕೋದ್ಯಮದಲ್ಲಿ ತನ್ನದೆಯಾದ ಚಾರಿತ್ರಿಕತೆಯನ್ನು ಹೊಂದಿದೆ. ಕ್ರಿ.ಶ. ೧೮೪೩ರಲ್ಲಿ ತನ್ನ ಆರಂಭವಾದ ವಿಚಾರದ ಚರ್ಚೆ, ಅಲ್ಲದೆ ಕ್ರಿ.ಶ. ೧೮೮೦ರ ದಶಕದ ಅವಧಿಯಲ್ಲಿ ಚಂದ್ರೋದಯ ಪತ್ರಿಕೆಯು ಒಂದು ಎಂಬ ಮಾತನ್ನು 'ಹೊಸಗನ್ನಅರುಣೋದಯ' ಕೃತಿಯಲ್ಲಿ ಉಲ್ಲೇಖಿಸಲಾಗಿದೆ. ಈ ಸ್ಥಳೀಯ ಪತ್ರಿಕೆಯು ಸರ್ಕಾರಿ ತೇಗಳಿಕೆ ಮತ್ತು ಹೊಗಳಿಕೆ ಸಂಬಂಧಿಸಿದ ಮಹತ್ವ ಸಂಗತಿ ಒಳಗೊಂಡಿದೆ.

ಆ ಕಾಲದ ಪತ್ರಿಕೆ ಸಿಗದಿದ್ದರೆ ಅಂದಿನ ಆಗುಹೋಗುಗಳ ಬಗೆಗೆ ಸ್ಪಷ್ಟತೆ ಸಾಧ್ಯವಾಗುತ್ತಿರಲಿಲ್ಲ. ನಂತರದ ಸಂಯುಕ್ತ ಕರ್ನಾಟಕದ ಎನ್.ಎಸ್. ಘಳಿಗಿಯವರ ಅಂಗಡಿಯಲ್ಲಿ ಸಿಕ್ಕಿದೆ "ಸಂಯುಕ್ತ ಕರ್ನಾಟಕ ೧೬.೨.೧೯೮೦ರ ಸಂಚಿಕೆಯಲ್ಲಿ ಲೇಖನ ಬರೆದಿದ್ದರು ಅಲ್ಲದೆ ಹೇಮ ಪಟ್ಟಣಶೆಟ್ಟಿಯವರು ಚಂದ್ರೋದಯ ಮಾಸಪತ್ರಿಕೆಯ ೧೯೧೬ರ ಎರಡು ಸಂಚಿಕೆಗಳನ್ನು ಪತ್ತೆ ಹಚ್ಚಿದ್ದಾರೆ."[೧೬] ಹೀಗಾಗಿ ಚಂದೋದಯ ಪತ್ರಿಕೆ ಚರಿತ್ರೆ ಹಿನ್ನೆಲೆ ತಿಳಿಯಲು ಸಾಧ್ಯವಾಯಿತು.

ಕ್ರಿ.ಶ. ೧೮೭೬ ಈ ಪತ್ರಿಕೆ ಓದುಗರಿಗೆ ತೆರೆದುಕೊಂಡಿತು. ಆ ಸಂದರ್ಭದಲ್ಲಿ ಕನ್ನಡ ಪತ್ರಿಕೆ ಪ್ರಭಾವ ಇರಲಿಲ್ಲ. ಸುಬುದ್ಧಿ ಪ್ರಕಾಶನ ಪತ್ರಿಕೆ ಬೆಳಗಾವಿಯಲ್ಲಿ ಕಾರ್ಯನಿರ್ವಹಿಸುತ್ತಿತ್ತು. ಇದನ್ನು ಹೊರತುಪಡಿಸಿದರೆ ಬೇರೆ ಯಾವ ಪತ್ರಿಕೆಯ ಪ್ರಭಾವ ಇರಲಿಲ್ಲ ಎಂದು ತಿಳಿದುಬರುತ್ತದೆ. ಇನ್ನೊಂದು ಮಹತ್ವದ ಅಂಶವೆಂದರೆ ಕನ್ನಡ ಭಾಷೆಯ ಪ್ರಭಾವಕ್ಕಿಂತ ಮರಾಠಿ ಭಾಷೆಯ ಪ್ರಭಾವ ಹೆಚ್ಚಾಗಿತ್ತು. ಈ ಕನ್ನಡ ನಾಡಿನಲ್ಲಿ ಮರಾಠಿ ಪತ್ರಿಕೆ ಬೆಳಗಾಂ ಸಮಾಚಾರ, ಧಾರವಾಡ ವೃತ್ತ ಎಂಬ ಮರಾಠಿ ಪತ್ರಿಕೆಗಳು ಚಾಲ್ತಿಯಲ್ಲಿದ್ದವು. ವ್ಯಾಪಾರಿ ಲಿಂಗವಂತರು, ಶೆಣೈ ಬ್ರಾಹ್ಮಣರೂ ಅವರ ವ್ಯವಾಹಾರ ಮಾಡುತ್ತಿದ್ದದ್ದು ಮರಾಠಿಯಲ್ಲಿ ಆದ ಕಾರಣ ಅವರು ಮರಾಠಿ ಪತ್ರಿಕೆಯನ್ನು ಅವಲಂಬಿಸಲೇಬೇಕಾಗಿತ್ತು.

ಇಂಥ ಸಂದರ್ಭದಲ್ಲಿ ಕನ್ನಡ ಚಂದ್ರೋದಯ ಪತ್ರಿಕೆಯು ಜೀವ ಪಡೆಯಿತು. ಹೊನ್ನಪುರ ಮನೆತನದವರಾದ ಹುಚ್ಚಯ್ಯ ಮನೆತನದವರಾದ ಹುಚ್ಚಯ್ಯ ಬಿನ್ ಸಂಗಯ್ಯ ಛಾಪಿಸಿ ಪ್ರಕಟ ಮಾಡುತ್ತಿದ್ದರು. "೧೮೬೬ರ ಪುಸ್ತಕ ಸೂಚಿಯೊಂದರಲ್ಲಿ (ಮುಂಬಯಿ ಸರ್ಕಾರ ಪ್ರಕಟಿತ) ಆ ಕಾಲದ ಕನ್ನಡ ಮುದ್ರಣಾಲಯಗಳೆಂದು ಕುರಿತು ಜ್ಞಾನವರ್ಧಕ, ಸನ್ಮಾರ್ಗ ದರ್ಶನ, ಬೆಳಗಾವಿ ಸಮಾಚಾರ ಪ್ರೆಸ್ ಉಲ್ಲೇಖ ಮತ್ತು ವ್ಯಕ್ತಿಗಳ ಹೆಸರು ಗೋವಿಂದ ಪ್ರಭಾಕರ್ ಜೋಶಿ, ಕಲ್ಯಾಣಪ್ಪ, ಮಾದನಶೆಟ್ಟಿ, ದುರ್ಗಪ್ರಸಾದ, ಮಿಸರ್ ಬಸವಲಿಂಗ ಚಂದ್ರೋದಯ ಪತ್ರಿಕೆ ಮತ್ತು ಹುಚ್ಚಯ್ಯ ಹೆಸರು ಎಲ್ಲಿಯೂ ಉಲ್ಲೇಖವಾಗಿಲ್ಲ ಹಾವನೂರ ಊಹೆ ಮಾಡಿ ಈ ಪತ್ರಿಕೆ ೧೮೭೬ರಲ್ಲಿ ಪ್ರಾರಂಭವಾಗಿರಬಹುದು."[೧೭] ಎಂದು ಹೇಳಿದರು.

ಈ ಪತ್ರಿಕೆಯು ಧಾರವಾಡ ಜಿಲ್ಲೆಯ ಮೊದಲನೆಯ ವೃತ್ತಾಂತ ಪತ್ರಿಕೆಯಾಗಿತ್ತು. ಮುಂಬೈಯಲ್ಲಿ ಕ್ರಿಶ. ೧೮೮೦ರಲ್ಲಿ ಕನ್ನಡ ಸುವಾರ್ತೆ ಹವ್ಯಕ ಸುಭೋದೆಗಳು ಪ್ರಕಟವಾದವು. ಧಾರವಾಡ ಜಿಲ್ಲೆ ಕೆಲವು ಪತ್ರಿಕೆಗಳಾದ ವೃತ್ತಾಂತ ಮಂಜರಿ, ಕರ್ನಾಟಕ ಪತ್ರ, ಲೋಕಬಂಧು, ರಸಿಕರಂಜನಿ ಪತ್ರಿಕೆಗಳೂ ಇದ್ದವು. ಈ ಪತ್ರಿಕೆ ಧಾರವಾಡದಿಂದ ಆರಂಭಗೊಂಡು ಹಿಂದೂಸ್ಥಾನ ಮತ್ತು ಯುರೋಪಿನವರಿಗೆ ಸುದ್ದಿ ಮಾಡಿತು. ಚಂದೋದಯ ಪತ್ರಿಕೆ ಸ್ಥಳೀಯವಾಗಿರದೆ ರಾಷ್ಟ್ರೀಯತೆ ಪಡೆದಿತ್ತು "ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸಿನ ಕಲಕತ್ತೆಯ ಅಧಿವೇಶನಕ್ಕೆ ಯಾರು ಎನ್ನುವ ಪ್ರಶ್ನೆ ಬಂದಾಗ ಪತ್ರಿಕೆ ಈ ನಾಡಿನ ಒಳಿತನ್ನ ಬಯಸುವ ಇಂಗ್ಲೆಂಡಿನ ವಾಸಿಯಾದ ಸದ್ಗೃಹಸ್ತರಾಗಬೇಕು. ಅಧ್ಯಕ್ಷರಾಗಬೇಕು."[೧೮] ಈ ಅಭಿಪ್ರಾಯ ಮಹದೇವ ಗೋವಿಂದ ರಾನಡೆಯವರು ವಿಧಿವಶವಾದ ಸಂದರ್ಭದಲ್ಲಿ ಪತ್ರಿಕೆ ಸಂಪಾದಕಿಯದಲ್ಲಿ ಪ್ರಸ್ತಾಪಗೊಂಡಿತ್ತು. ಈ ಪತ್ರಿಕೆಯ ನಾಡಿನ ಅಭಿಮಾನವನ್ನು ಪ್ರತಿನಿಧಿಸುತ್ತದೆ.

ಈ ಪತ್ರಿಕೆಯು ಸ್ಥಳೀಯ ಮತ್ತು ಪ್ರಾದೇಶಿಕವಾದ ಸುದ್ದಿಗಳಿಗೆ ಸಾಕಷ್ಟು ಪ್ರಾಶಸ್ತ್ಯ ಕೊಟ್ಟಿದ್ದು ಕಂಡುಬರುತ್ತದೆ. ಕಾಲಸ್ಥಿತಿಯಲ್ಲಿ ಎಂಬ ಸದರಿನಲ್ಲಿ ಸರಕಾರಿ ಗೆಜೆಟ್ ಮಳೆ, ಬೆಳೆ, ವಾರದ ಪಂಚರಿಗೆ ಪೇಟೆಯ ಧಾರಣೆ ಇತ್ಯಾದಿಗಳು ಪ್ರಕಟವಾಗುತ್ತಿದ್ದವು. ಬಂಗಾರ ಧಾರಣಿ ಒಂದೇ ಸಮನೆ ಹೆಚ್ಚಾಗುತ್ತಿತ್ತು. ೧೦೦ ನಂಬರಿನ ಬಂಗಾರಕ್ಕೆ ೧ ತೊಲೆ ರೂ. ೧೮ರೂ. ಎಂದು ಪತ್ರಿಕೆಯಲ್ಲಿ ಚಿತ್ತರಿಸುತ್ತಿದ್ದರು. ಹಾಗೆಯೇ "ಪೀನಲ್ ಕೊಲ್ಡದನ್ವಯ ಕನೆಯ್ಯ ವಯಸ್ಸು ೧೦ ವರ್ಷಕ್ಕಿಂತ ಹೆಚ್ಚಿಗೆ ಇರಬೇಕು ಎಂಬ ವಿಷಯವನ್ನು ಧಾರವಾಡದಲ್ಲಿ ಸಾರ್ವಜನಿಕರಲ್ಲಿ ಚರ್ಚೆಯಾಗಿತ್ತು ವಿಚಾರಾಂತ್ಯದಲ್ಲಿ ೧೦ ವರ್ಷದ ವಯಸ್ಸನ್ನು ಹೆಚ್ಚಿಸುವ ಬಗ್ಗೆ ಸರ್ಕಾರಕ್ಕ ಅರ್ಜಿಯನ್ನು ಮಾಡಬಾರದೆಂದು ನಿಶ್ಚಯವಾಯಿತು. ಇದು ಯೋಗ್ಯವೇ."[೧೯] ಈ ರೀತಿಯ ಸಂಗತಿಯನ್ನ ಚಂದೋದಯ ಪತ್ರಿಕೆ ಪ್ರಕಟಿಸಿತ್ತು. ಮೆಟ್ರಿಕ್ ಪರಿಕ್ಷೆಯನ್ನು ಮುಂಬಯಿ ವಿಶ್ವವಿದ್ಯಾಲಯದವರು ನಡೆಸುತ್ತಿದ್ದರು. ಕರ್ನಾಟಕ ಜನರಿಗೆ ಬೆಳಗಾವಿಯನ್ನು ಕೇಂದ್ರ ಮಾಡಿಕೊಂಡು ಪರೀಕ್ಷೆ ಮಾಡುತ್ತಿದ್ದರು. ಆರ್ಥಿಕ ಹೊರೆಯಾಗುತ್ತದೆ ಎನ್ನುವ ಕಾರಣಕ್ಕಾಗಿ ಈ ಪತ್ರಿಕೆ ತೀವ್ರವಾಗಿ ವಿರೋಧಿಸಿತ್ತು. ಧಾರವಾಡದ ಹೈಸ್ಕೂಲಿಗೆ ನ್ಯೂ ಸ್ಕೂಲ್ ಎಂದು ಕರೆಯುತ್ತಿದ್ದರು.

**ಕರ್ಕಿ ವೆಂಕಟರಮಣ ಶಾಸ್ತ್ರಿ ಸೂರಿ**

ಕನ್ನಡ ಸಾಹಿತ್ಯ ಪ್ರಕಾರಗಳಲ್ಲೊಂದಾದ ನಾಟಕವನ್ನು ಹಾವನೂರ ಅವರು ಈ ಲೇಖನದಲ್ಲಿ ನೀಡಿದ್ದಾರೆ. ಇಗ್ಗಪ್ಪ ಹೆಗಡೆಯ ವಿವಾಹ ಪ್ರಹಸನವೇ ಮೊದಲ ಸ್ವತಂತ್ರ ನಾಟಕ ಕರ್ತೃ ಕರ್ಕಿ ವೆಂಕಟರಮಣ ಶಾಸ್ತ್ರಿಗಳು ಎಂದು ಪ್ರೊ. ಲಿಂಗೇಶ್ ಶರ್ಮರು ಪರಿಚಯಿಸಿದರು. ಅವರ ಬಾಲ್ಯ, ವಿದ್ಯಾಭ್ಯಾಸ ಮತ್ತು ಮನೆತನ ಸಂಬಂಧಿಸಿದ ವಿಷಯಗಳು

ಚರ್ಚೆಗೊಂಡಿವೆ. ಅವರ ತಂದೆ ವಿಘ್ನೇಶ್ವರ ಶಾಸ್ತ್ರಿಗಳು ರಾಮಚಂದ್ರಾಪುರ ಮಠದ ಭಕ್ತರು. ಅಲ್ಲಿ ಪಡೆದ ವಿದ್ಯಾಭ್ಯಾಸ ಅವರ ಮುಂದಿನ ಬದುಕನ್ನು ಬದಲಿಸಿತು. ಶಾಸ್ತ್ರಿಗಳಿಗೆ ಸಂಚಾರ ಮಾಡುವುದು ಬಾಲ್ಯದಿಂದಲೇ ಅಭ್ಯಾಸವಾಗಿತ್ತು. ಘಟ್ಟದ ಮೇಲಿನ ಊರುಗಳಾದ ಮೈಸೂರು, ಸಾಗರ, ಸೊರಬ ಇತ್ಯಾದಿ ಊರುಗಳಲ್ಲಿ ಓಡಾಡಿದ್ದಾರೆ. ಸಮಾಜದ ಸುಧಾರಕರಾದ ಮಹಾಬಲೇಶ್ವರರು ಶಾಸ್ತ್ರಿಯರ ಕಾರ್ಯದ ಸ್ವರೂಪ ತಿಳಿದಿದ್ದರಿಂದ ಇತರರ ಗಮನ ಸೆಳೆಯಲು ಸಾಧ್ಯವಾಯಿತು.

ಕ್ರಿ.ಶ. ೧೮೮೫ರ ಅವಧಿಯಲ್ಲಿ ಜನಸಾಮಾನ್ಯರ ಸ್ವಾಭಿಮಾನದ ಪ್ರತಿಯಾಗಿ ಸ್ವಾತಂತ್ರ್ಯ ಪಡೆಯುವ ಹಂಬಲವಾಗಿತ್ತು. ಇದರ ಪ್ರತಿಫಲವಾಗಿ ಅಖಿಲ ಭಾರತ ಕಾಂಗ್ರೆಸ್ ಹುಟ್ಟಿಕೊಂಡಿತು. ಬ್ರಿಟಿಷ್ ಆಡಳಿತದ ವಿರುದ್ಧ ನಿಲ್ಲುವ ಮನೋಸ್ಥೈರ್ಯ ಜನರಲ್ಲಿತ್ತು. ಆ ಅವಧಿಯ ವೈಸ್‌ರಾಯ್ ಪಂಡಫರಿನ್ ಆಡಳಿತದ ವ್ಯಾಪ್ತಿ ವಿಸ್ತರಿಸಿ ಜನರ ಮೇಲೆ ಒತ್ತಡ ಹೇರುವ ಉದ್ದೇಶವಿತ್ತು. ಅದೇ ಕಾಲಕ್ಕೆ ಮುಂಬಯಿ ಗೌರ್‍ನರ್‌ನಾಗಿದ್ದ ಲಾರ್ಡ್ ನಂತರ ಕೆಲವರು ಉದಾರ ಮತ್ತು ನ್ಯಾಯಾ ಪಕ್ಷಪಾತಿಗಳಾಗಿದ್ದರೆಂಬ ಕಾರಣದ ಹಿನ್ನೆಲೆಯಲ್ಲಿ ಭಾರತಿಯರ ಭಾವನೆಗಳು ಉದ್ರಿಕ್ತಗೊಳಿಸುವ ಕಾರಣವಾಯಿತು. ಈ ಪರಿಸ್ಥಿತಿಯನ್ನು ಅರಿತ ತಿಲಕ್‌ರು ಜನ ಸಾಮಾನ್ಯರಲ್ಲಿ ಜನಜಾಗೃತಿ ಮೂಡಿಸಿದರು. ನೇಟಿವ್ ಓಪಿನಿಯನ್ ಮತ್ತು ಮರಾಠ ಎಂಬ ಆಂಗ್ಲ ಪತ್ರಿಕೆ ಅಲ್ಲಿ ಮರಾಠಿ ಪತ್ರಿಕೆಗಳ ಕೇಸರಿ ಜ್ಞಾನಪ್ರಕಾಶ ಇದರ ಜೊತೆಗೆ ಪಾರ್ಸಿ ಚಾಮೇ ಜಮಶೇದ್ ಮತ್ತು ಗುಜರಾತಿ ಪತ್ರಿಕೆ ಹಿತೇಚ್ಛು ಈ ಎಲ್ಲಾ ಪತ್ರಿಕೆಗಳು ಸರ್ಕಾರ ನ್ಯೂನತೆಯ ಕುರಿತು ಪ್ರಶ್ನಿಸುತ್ತ ಪ್ರತಿಭಟಿಸುವ ಮೂಲಕ ರಹಸ್ಯಗಳನ್ನು ಬಹಿರಂಗಪಡಿಸಿದರು.

ಆ ಕಾಲಘಟ್ಟದಲ್ಲಿ (೧೮೮೦) ಸ್ವಾತಂತ್ರ್ಯ ಪಡೆಯುವಂಥ ಪ್ರೇರಣೆಗಳ ಸಾಹಿತ್ಯದ ಬೆಳವಣಿಗೆ ಕನ್ನಡದಲ್ಲಿ ಆಗಿರಲಿಲ್ಲ. ಮುಂಬಯಿ ನಗರ ಸಂಖ್ಯೆ ನಾಲ್ಕೈದು ಲಕ್ಷ ಜನರನ್ನು ಹೊಂದಿತ್ತು. ನಂತರ ಆ ಸಂಖ್ಯೆಯ ಏಳೆಂಟು ಸಾವಿರ ಇಳಿಯಿತು. ಕೆನರಾ ಜಿಲ್ಲೆಯಿಂದ ಬಂದವರ ಸಂಖ್ಯೆ ಹೆಚ್ಚಾಗಿತ್ತು. ಈಸ್ಟ್ ಇಂಡಿಯಾ ಕಂಪನಿ ಕಾಲದಲ್ಲಿ ಇದ್ದವರು ಕಾರವಾರ, ಕುಮಟ, ಹೊನ್ನಾವರ ಭಾಗಗಳಿಂದ ವ್ಯಾಪಾರವನ್ನು ಅವಲಂಬಿಸಿದ್ದರು.

ಮಹತ್ವ ಸಂಗತಿ ಎಂದರೆ ಉತ್ತರ ಕನ್ನಡ ಜಿಲ್ಲೆಯರೊಬ್ಬರು 'ಕನ್ನಡ ಸುವಾರ್ತೆ' ಪತ್ರಿಕೆಯನ್ನು ೧೮೮೩-೮೪ರಲ್ಲಿ ಮುಂಬಯಿ ನಗರದಿಂದ ಪ್ರಕಟಿಸಿದರು. ಅಲ್ಲಿ 'ಕರ್ನಾಟಕ ಪ್ರೆಸ್' ಎಂಬ ಮುದ್ರಣಾಲಯ ಮಾತ್ರ ಕಾರ್ಯನಿರ್ವಹಿಸುತ್ತಿದ್ದರು. ಅಲ್ಲಿ ಸಾಹಿತ್ಯ ಕಾರ್ಯಚಟುವಟಿಕೆಗಳು ಪ್ರಗತಿ ಕಂಡಿರಲಿಲ್ಲ. ಈ ಸಂದರ್ಭ ವೆಂಕಟರಮಣ ಶಾಸ್ತ್ರಿಗಳು ಮುಂಬಯಿಗೆ ಬಂದು ಬೂದಿ ಮಹಾಬಲೇಶ್ವರರ ಸಹಕಾರದಿಂದ ಭಾರತೀ ಪ್ರೆಸ್ ಆರಂಭಿಸಿ ಹಲವು ಪತ್ರಿಕೆ ಮತ್ತು ಕೃತಿಗಳನ್ನು ತಂದರು.

"ಅವರ ಪ್ರಥಮ ಕೃತಿ 'ದಕ್ಷಿಣ ಯಾತ್ರಾ ಚರಿತ್ರೆ' ಉಡುಪಿ, ಸುಬ್ರಹ್ಮಣ್ಯ ಕ್ಷೇತ್ರಗಳ ಸಂದರ್ಶನವಾಗಿದ್ದು ಹೊಸಗನ್ನಡ ಗದ್ಯದ ಪ್ರಥಮ ಪ್ರವಾಸ ಸಾಹಿತ್ಯವಾಗಿದೆ. ನಂತರ ಇಪ್ಪತ್ತು ಕೃತಿಗಳಲ್ಲಿ ಕೆಲವನ್ನು ಅವರು ಸಂಪಾದಿಸಿ ತಿದ್ದಿ ಪ್ರಕಟಪಡಿಸಿದ್ದರೂ ಹಲವನ್ನು ಸ್ವತಃ ಬರೆದಿದ್ದರು. ಅವುಗಳಲ್ಲಿ ಯಕ್ಷಗಾನ ಪ್ರಸಂಗಗಳಿವೆ; ಆಧ್ಯಾತ್ಮ ಕೃತಿಗಳಿವೆ; ಹಳಗನ್ನಡ ಕಾವ್ಯಗಳಿವೆ. ಜೊತೆಗೆ ಹವ್ಯಕರ ಉಗಮ ಇತಿಹಾಸಗಳಿಗೆ ಸಂಬಂಧಪಟ್ಟ ಪುಸ್ತಕಗಳಿವೆ. ಹೀಗೆ ಅವರು ಉತ್ತರ ಕನ್ನಡ ಜಿಲ್ಲೆಯ ಅನೇಕ ಕವಿ ಲೇಖಕರನ್ನು ಬೆಳಕಿಗೆ ತಂದರು. ಅವರ ಸ್ವರಚಿತ ಕೃತಿಗಳ ಪ್ರಾಚೀನ ನಾಟ್ಯ (ನಾಟಕ) ಕಥಾರ್ಣವ ಅನಾರ್ಯರ ವಿವರ ಮತ್ತು ಇಗ್ಗಪ್ಪ ಹೆಗಡೆ ವಿವಾಹ ಪ್ರಹಸನ ಇವನ್ನು ಹೆಸರಿಸಬೇಕು. ಅನಾರ್ಯರ ವಿವರವು ಹಿಂದೂಗಳಲ್ಲಿ ಶೂದ್ರರ ಸ್ಥಾನಮಾನವಾಗಿ ಐತಿಹಾಸಿಕ ನಿದರ್ಶಿಸುವ ಸ್ವತಂತ್ರ ಪ್ರಬಂಧ. ಕ್ರಿ.ಶ. ೧೮೮೭ರ ಆ ಕಾಲದಲ್ಲಿ ಮಹತ್ವ ಪಡೆದ ಕೃತಿಯಾಗಿತ್ತು. ಅವರ ಸಾಹಿತ್ಯ ಕುರಿತು ಗೋವಿಂದ ಪೈ, ಶಿವರಾಮ ಕಾರಂತ, ರಂ.ಶ್ರೀಮುಗಳಿ, ಶ್ರೀರಂಗ ನಿರಂಜನ"[೨೦] ಮೊದಲಾದವರು ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದರು.

ಕರ್ಕಿಯವರ ಸಾಹಿತ್ಯ ಕ್ಷೇತ್ರ ಅಲ್ಲದೆ ಪತ್ರಿಕೆ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಅವರು ಹವ್ಯಕ ಸುಭೋದೆ, ಹಿತೋಪದೇಶ (೧೮೮೫) ಎಂಬ ಎರಡು ಪತ್ರಿಕೆಗಳ ಮೂಲಕ ಮಹತ್ವದ ಮಾಹಿತಿಗಳನ್ನು ಜನರಿಗೆ ತಲುಪಿಸುವಲ್ಲಿ ಜನಪ್ರಿಯರಾದರು. ಹೀತೋಪದೇಶ ಬಾಳನ್ನು ಬೆಳಗಿಸುವಲ್ಲಿ ಪಾತ್ರವಹಿಸಿದೆ. ಚರಿತ್ರೆ, ಇತಿಹಾಸ, ವಿಜ್ಞಾನ ಹೀಗೆ ಹಲವು ವಿಷಯಗಳ ಕುರಿತು ಮಹತ್ವ ಸಂಗತಿಗಳನ್ನು ಮಕ್ಕಳಿಗಾಗಿ ಪತ್ರಿಕೆಗಳ ಮೂಲಕ ಪರಿಚಯಿಸಿದರು. ಜಗತ್ತಿನ ಹತ್ತು ಹಲವು ಸುದ್ದಿಗಳನ್ನು ಪ್ರಕಟಿಸಿದರು. ಮಕ್ಕಳ ಜ್ಞಾನಾರ್ಜನೆಯ ವಿಷಯ ಪರಿಚಯಿಸುವುದು ತುಂಬ ಅಗತ್ಯವಾಗಿತ್ತು. ವ್ಯಂಗ್ಯ ಚಿತ್ರಗಳನ್ನು ಪರಿಚಯಿಸುತ್ತಿದ್ದರು ರಾಜಕೀಯ ಪ್ರಚಲಿತ ವಿಷಯ. ವ್ಯಂಗ್ಯ ಚಿತ್ರಗಳನ್ನು ಬಳಸುವುದರಲ್ಲಿ ವೆಂಕಟರಮಣ ಶಾಸ್ತ್ರಿ ಮೊದಲಿಗರು. ಸಾಕ್ರೆಟೀಸ್ ಚರಿತ್ರೆ, ನೀರಿನ ವೈಜ್ಞಾನಿಕ ವಿವೇಚನೆ, ಅರ್ಥಶಾಸ್ತ್ರ ವಿವೇಚನೆ, ಮೂರರ ಪ್ರತಿಪಾದನೆ ಪತ್ರಿಕೆಯ ಮೊದಲ ಸಂಪುಟದಲ್ಲಿ ಪ್ರಕಟಗೊಂಡಿದೆ. ನಾಡಿನ ವಿವಿಧ ಭಾಗದಲ್ಲಿ ಪತ್ರಿಕೆಗೆ ಚಂದಾದಾರರು ಇದ್ದರು ಕಾಲದಿಂದ ಕಾಲಕ್ಕೆ ಚಂದಾದಾರರ ಸಂಖ್ಯೆಯಲ್ಲಿ ಪ್ರಗತಿ ಕಂಡಿತು.

ಹವ್ಯಕ ಸುಭೋದವು ನಾಡಿನ ಹಲವು ಪ್ರದೇಶಗಳ ವಿದ್ಯಮಾನಗಳನ್ನು ಕುರಿತು ಪ್ರಕಟಿಸುತ್ತಿತ್ತು. ಮದ್ರಾಸ್ ಗವರ್ನರ್ ಕನ್ನೇಮಾರಾ ದಕ್ಷಿಣ ಕನ್ನಡ ಜಿಲ್ಲೆ ಮಾರ್ಗವಾಗಿ ರಾಮೇಶ್ವರಕ್ಕೆ ಹೋಗುವಾಗ ಉಡುಪಿ ಕುಂದಾಪುರ ಜನರಿಂದ ಹಣ ವಸೂಲಿ ಮಾಡುತ್ತಿದ್ದ. ಈ ಸಂಗತಿಯನ್ನು ಶಾಸ್ತ್ರಿಯನ್ನು ಪ್ರಶ್ನಿಸಿದರು. ಕನ್ನಡ ಭಾಷೆ ಸಾಹಿತ್ಯ ಪ್ರಗತಿ ಕುರಿತು ಚಿಂತನೆ ಮಾಡಿದಾಗ ಕನ್ನಡ ಬರಹಗಾರರಿಗೆ ಪ್ರೋತ್ಸಾಹ ಇಲ್ಲದ್ದು ಮರಾಠಿ ಅಧಿಕಾರಿಗಳು ತಾತ್ಸಾರ ಮಾಡುತ್ತಿದ್ದುದನ್ನು ಕಂಡು ತರಾಟೆಗೆ ತೆಗೆದುಕೊಳ್ಳುತ್ತಿದ್ದರು. ಅವರ ಬರವಣಿಗೆಯ

ಉದ್ದೇಶ ಜನರ ರಕ್ಷಣೆ ದುಷ್ಟ ಅಧಿಕಾರಿಗಳ ಖಂಡನೆ, ಮಳೆಗಾಲದಲ್ಲಿ ಅನಾರೋಗ್ಯದ ಪರಿಸರ ಉಂಟಾಗಿರುವ ಕುರಿತು ಪತ್ರಿಕೆ ಪ್ರಸ್ತಾಪಿಸಿದೆ. ಅಲ್ಲದೆ ಉಚಿತ ಔಷಧ ಕೊಡುವ ವ್ಯವಸ್ಥೆ ಮಾಡುವುದು, ಲಂಚಗುಳಿತನ, ಸರ್ಕಾರಿ ಸೌಲಭ್ಯ ದುರ್ಬಳಕೆ ಪತ್ರಿಕೆಯಿಂದ ಸಂಗತಿಗಳ ಇತ್ಯಾದಿ ಸಾರ್ವಜನಿಕವಾಗಿ ಬಹಿರಂಗಪಡಿಸುವ ಕಾರ್ಯನಡೆಯಿತು.

ಬ್ರಿಟಿಷ್ ಹಿರಿಯ ಅಧಿಕಾರಿಗಳ ಭ್ರಷ್ಟಾಚಾರಗಳನ್ನು ಖಂಡಿಸಬೇಕು. ಅವರನ್ನು ಬಂಧಿಸಬೇಕು ಹೊರತು ಅಧಿಕಾರದಲ್ಲಿ ಮುಂದುವರಿಯಕೂಡದು ಎಂಬುದಾಗಿ ಹಿತೋಪದೇಶ ಪತ್ರಿಕೆ ಸಾರಿತು. ಈ ಸಂಗತಿಯನ್ನು ಮರಾಠಿ ಕೇಸರಿ ಪತ್ರಿಕೆ ಸ್ವಾಗತಿಸಿತು. ಅಧಿಕಾರಿಗಳ ಸ್ತ್ರೀ ವ್ಯಾಮೋಹವನ್ನು ಪತ್ರಿಕೆ ಖಂಡಿಸಿತು. ಅರಣ್ಯ ಇಲಾಖೆ ಕೆಲವು ನಿರ್ಬಂಧಗಳನ್ನು ಹೇರಿತ್ತು. "ಖಾಸಗಿ ಜನರ ಜಮೀನಿನಲ್ಲಿ ತೆಂಗು, ಕರಿಮರ, ಶ್ರೀಗಂಧ ಇಂಥ ಬೆಲೆಬಾಳುವ ಮರಗಳಿದ್ದರೆ ಅವುಗಳ ಸರ್ಕಾರದ ಸೊತ್ತು ಎನ್ನುವುದಾಗಿತ್ತು. ಹಾಗೆಯೇ ಅರಣ್ಯದ ಬೆಲೆಯುಳ್ಳ ಮಾಲು ಕಳ್ಳುವಾದರೆ ನೆರೆಯಲ್ಲಿರುವ ಇಡೀ ಹಳ್ಳಿಯ ಜನರ ಅದಕ್ಕೆ ಹೊಣೆ"[೨೧] ಎಂಬ ನಿರ್ಬಂಧವನ್ನು ಜನಸಾಮಾನ್ಯರ ಮೇಲೆ ಹೇರುತ್ತಿದ್ದರು. ಶಾಸ್ತ್ರಿಗಳು ಬ್ರಿಟಿಷ್ ಆಡಳಿತದ ಅಧಿಕಾರದ ಮತ್ತು ಸ್ಥಳೀಯ ಅಧಿಕಾರ ವಿರುದ್ಧ ದಿಟ್ಟ ನಿಲುವುಗಳನ್ನು ಪತ್ರಿಕೆಯಲ್ಲಿ ಬಹಿರಂಗಪಡಿಸುತ್ತಿದ್ದರು. ಸರ್ಕಾರ ವೆಂಕಟರಮಣ ಶಾಸ್ತ್ರಿಗಳನ್ನಂತೂ ವಿಚಾರಣೆಗೆ ಗುರುಪಡಿಸಿ ಶಿಕ್ಷಿಸಿತು. ಹೀಗಾಗಿ ಪತ್ರಿಕೆ ಸ್ಥಗಿತವಾಯಿತು. ಶಾಸ್ತ್ರಿಗಳು ಪತ್ರಿಕೆಯಲ್ಲಿ ತೊಡಗಿಸಿಕೊಂಡ ರೀತಿಯನ್ನು ಹಾವನೂರ ಅವರು ಸವಿವರವಾಗಿ ಪರಿಚಯಿಸಿದ್ದಾರೆ. ಶಾಸ್ತ್ರಿಗಳ ತೀಕ್ಷ್ಣಬುದ್ಧಿ, ಅದ್ಭುತ ಕಾರ್ಯ ಶಕ್ತಿ, ಉತ್ಸಾಹ, ಕಾರ್ಯ ಪ್ರವೃತ್ತರಾಗಿದ್ದ ಸಂಗತಿ, ಛಲದಂಕ ಮಲ್ಲರಂತೆ ಹೊರಾಟ ನಿಸ್ಸಂಶಯ ಸ್ವಾರ್ಥ ಇಲ್ಲದೆ ನಾಡಿನ ಹಿತವನ್ನು ಬಯಸುವ ಶಾಸ್ತ್ರಿಗಳ ದೃಷ್ಟಿಯಲ್ಲಿಟ್ಟುಕೊಂಡು ಅವರ ಲೇಖನಿ ಖಡ್ಗಕ್ಕಿಂತಲೂ ಹರಿತ ಎಂದು ಸೋದಾಹರಣವಾಗಿ ಹಾವನೂರ ಅವರು ವಿವರಿಸಿದ್ದಾರೆ. ನಾಡಿನ ಘನತೆ ಗೌರವವನ್ನು ಕಾಪಾಡಿದ ಶಾಸ್ತ್ರಿಗಳು ಎಂಥ ದುರಂತ ಬಂದರೂ ಅವುಗಳನ್ನು ಮೆಟ್ಟಿನಿಂತರು. ನಾಟಕಕಾರರಾಗಿ ಹಾಗೂ ಧೀರ ಪತ್ರಿಕೋದ್ಯಮಿಯಾಗಿ ಹೊಸಗನ್ನಡದ ಸಾಹಿತ್ಯ ಲೋಕದಲ್ಲಿ ತಮ್ಮದೇಯಾದ ಚಾಪು ಮೂಡಿಸಿದರು ಎಂದು ಶಾಸ್ತ್ರಿಗಳನ್ನು ಹಾವನೂರ ಅವರು ಕೊಂಡಾಡಿದ್ದಾರೆ.

**ನುಡಿಯ ಬಲ್ಲಾಳರು**

ಬಲ್ಲಾಳರು 'ನುಡಿ' ಪತ್ರಿಕೆಯೊಂದಿಗೆ ಪತ್ರಿಕಾ ಕ್ಷೇತ್ರದಲ್ಲಿ ಸಂಗತಿ ಅನಾವರಣಗೊಂಡಿದೆ. ಸ್ವಾತಂತ್ರ್ಯ ಬರುವ ಪೂರ್ವದಲ್ಲಿ ದೇಶ ವಿಭಜನೆಯಾಗಬೇಕು ಏಕೆ? ಶಾಂತಿ ಸ್ಥಾಪನೆಗಾಗಿಯೊ? ಅಥವಾ ದೇಶ ವಿಭಜನೆ ಮಾಡುವ ನಿರ್ಧಾರವನ್ನು ವಿರೋಧಿಸಿದ ಕಾಂಗ್ರೆಸ್ ಹಾಗಾದರೆ ಮತ್ತೇಕೆ ವಿಭಜನೆ ಮಾಡಲು ಸಹಕರಿಸಿದ್ದು ಏಕೆ ಎನ್ನುವ ವಿಚಾರವಾಗಿ 'ನುಡಿ' ಪತ್ರಿಕೆಯಲ್ಲಿ ಮಹತ್ವದ ಸಂಗತಿಗಳು ಪ್ರಸ್ತಾಪಗೊಂಡಿದೆ. ನೆಹರು ಅವರು ಹೋರಾಟ ಆಸಕ್ತರಿದ್ದರೂ ಈ ಹೋರಾಟ ಮಾಡುವ ನಿರ್ಧಾರವನ್ನು ಸಡಿಲಗೊಳಿಸಲು ಕಾರಣ ಜಿನ್ನರ ಪಾಕಿಸ್ತಾನದ

ಬೇಡಿಕೆಯು ಹಿಂದೂ ಮುಸ್ಲಿಮರ ನಿಜವಾದ ಆಸಕ್ತಿ ಕುರಿತು ತಿಳಿಯಲು ಕಾಂಗ್ರೆಸ್ಸಿನವರಿಗೆ ಸಾಧ್ಯವಾಗಲಿಲ್ಲವೆ? ಅನೇಕ ಸಮಸ್ಯೆಗಳಾಗಿ ಪಾಕಿಸ್ತಾನ ಕಟ್ಟುವಲ್ಲಿಯ ಹಿಂದೆ ಹಿಂದೂಗಳ ಮತ್ತು ಇತರ ಅಲ್ಪಸಂಖ್ಯಾತರ ಬದುಕನ್ನು ತಿಳಿಯವಲ್ಲಿ ಕಾಂಗ್ರೆಸ್ ಧುರೀಣರು ಹಿಂದೇಟು ಹಾಕಿದರು. ಭಾರತಕ್ಕೆ ಸಮಾನವಾಗಿ ಪಾಕಿಸ್ತಾನ ಇರುತ್ತದೆ ಎನ್ನುವುದು ಸಂಶಯದ ಸಂಗತಿ ಎಂದು ಹಾವನೂರ ಅವರು ಅವಲೋಕಿಸಿದ್ದಾರೆ.

ಮುಂಬಯಿಯಲ್ಲಿ 'ನುಡಿ' ವಾರಪತ್ರಿಕೆಯಾಗಿ ತನ್ನ ಖಾತೆಯನ್ನು ತೆರೆದುಕೊಂಡಿತು. ಪ್ರಜ್ಞಾವಂತ ಯುವ ಜನರ ಗುಂಪುಗಳ ಬಳಗವನ್ನು ಕಟ್ಟಿಕೊಂಡು ಬಡ ಮತ್ತು ಮಧ್ಯಮ ವರ್ಗದವರು ರಾಮಚಂದ್ರರಾವ್, ಹನುಮಂತ ಆಚಾರ್ಯ ರಾಮಚಂದ್ರ ಉಚ್ಚಿಲ್ ಹಾಗೂ ಎಂ.ಎ. ಕಾಮತರು ಮತ್ತು ಎಚ್.ಸೋಮನಾಥ ಇವರೆಲ್ಲರ ಪರಿಶ್ರಮ ಪ್ರತಿಫಲವಾಗಿ 'ನುಡಿ ಪತ್ರಿಕೆ' ತನ್ನ ಮಹತ್ತರ ಕಾರ್ಯವನ್ನು ಮಾಡಿತು. ಈ ನಾಡಿನ ಪ್ರಗತಿಗೆ ತ್ಯಾಗ ಮಾಡಿದ ಮಹಾತ್ಮರ ವಿಚಾರಧಾರೆಗಳನ್ನು ಪ್ರಕಟಿಸಿತು.

ಬಲ್ಲಾಳರು ಪತ್ರಿಕೋದ್ಯಮಿಯಾಗಬೇಕು ಎನ್ನುವ ಒತ್ತಾಸೆ ಇದ್ದವರು. ಅವರ ಪತ್ರಿಕೆಯಲ್ಲಿ ಅಧ್ಯಯನ, ಚಿಂತನೆ, ಲೇಖನಗಳೆಲ್ಲ ಪ್ರಕಟವಾಗುತ್ತಿತ್ತು. ಕಾಸರಗೋಡಿನಲ್ಲಿ ಕನ್ನಡ ಸಾಹಿತ್ಯ ೧೯೪೭ರಲ್ಲಿ ನಡೆದಿತ್ತು. ಆಗ ಪತ್ರಿಕೆಯ ರಾಮಚಂದ್ರರಾಯರು ಸಂಪಾದಕರಾಗಿ ಆ ಸಂಪಾದಕೀಯವನ್ನು ಅವರೇ ಬರೆಯುತ್ತಿದ್ದರು. ಆ ಸಂದರ್ಭದಲ್ಲಿ ಬಲ್ಲಾಳರಿಗೆ ಬರೆಯಲು ಹೇಳಿದರು. ಅಂದಿನಿಂದ ಕೊನೆಯವರಿಗೂ ಸಂಪಾದಕೀಯವನ್ನು ಅವರೇ ಬರೆದರು. ಸಾಹಿತ್ಯಕ್ಕೆ ಸಂಬಂಧಿಸಿದ, ಪ್ರಚಲಿತ ಘಟನೆಗಳಿಗೆ ಸಂಬಂಧಿಸಿದ ಸಂಗತಿಗಳನ್ನು ಪತ್ರಿಕೆ ಪ್ರಕಟಿಸುತ್ತಿತ್ತು. ಅಲ್ಲದೆ ಗ್ರಂಥ ವಿಮರ್ಶೆ, ಒಳನಾಡಿನ ಜಿಲ್ಲೆಯ ವಾರ್ತೆ, ಕ್ರೀಡೆ ಪ್ರೇಮ ಪತ್ರ, ಇತ್ಯಾದಿ ಬಿಡಿ ಬರಹಗಳನ್ನು ಬರೆದ ಬಲ್ಲಾಳರು ಮತ್ತು ನಿರಂಜನರು ಅಂಕಣಗಳನ್ನು ಬರೆಯುತ್ತಿದ್ದರು. ಈ ಪತ್ರಿಕೆಯಲ್ಲಿ ಕಾರ್ಮಿಕರ ಹಿತಾಸಕ್ತಿ ಬಯಸಿ ಲೇಖನಗಳು ಪ್ರಕಟಪಡಿಸುತ್ತಿದ್ದರು. ರೈಲ್ವೆ ನೌಕರರು ಮುಷ್ಕರ ಮಾಡಿದರು. ಹೀಗಾಗಿ ಆಗಿನ ಕಾರ್ಮಿಕ ಮಂತ್ರಿ ಈ ರೀತಿ ಆಕ್ರೋಶ ವ್ಯಕ್ತಪಡಿಸಿದರು. ರೈಲ್ವೆ ನೌಕರರಿಗಿರುವ ಅನುಕೂಲ ಇತರ ನೌಕರರಿಗೆ ಇಲ್ಲ ಎಂದು. ಈ ಮಾತನ್ನು ಗಮನಿಸಿ ಬಲ್ಲಾಳರು ರೈಲ್ವೆ ನೌಕರ ಪರವಾಗಿ ಸಮರ್ಥಿಸಿಕೊಂಡರು. ಮಾನ್ಯ ಕಾರ್ಮಿಕ ಮಂತ್ರಿಗಳಿಗೆ ಈ ರೀತಿ ಪ್ರಶ್ನೆಗಳನ್ನು ಮಾಡಿದರು "ಅತಿ ಪ್ರಸರಣಕ್ಕೆ ಯಾರು ಕಾರಣ ಜೀವನದ ವಸ್ತುಗಳ ವಿಪರೀತ ಬೆಲೆಗೆ ಯಾರು ಕಾರಣ? ರೈಲ್ವೆ ಕೆಲಸಗಾರರಿಗೆ ಸಿಗುತ್ತಿದ್ದ ಕಡಿಮೆ ಬೆಲೆಯ ದವಸ ಧಾನ್ಯಗಳನ್ನು ನಿಲ್ಲಿಸಲು ಯಾರು ಕಾರಣ? ಜೀವನ ಅವಶ್ಯಕತೆಗೆ ಅನುಗುಣವಾಗಿ ತುಟ್ಟಿ ಭತ್ಯೆ ಕೂಡದಿರುವ ಪೇ ಕಮಿಷನ್ನಿನ ದೀರ್ಘನಿದ್ರೆಗೆ ಯಾರು ಕಾರಣ? ಹೀಗಾಗಿ ಕೆಲಸಗಾರರನ್ನು ಕೃತಜ್ಞತೆ ಇಲ್ಲದವರೆಂದು ಕರೆಯುವುದರಲ್ಲಿ ಯಾವ ಪುರುಷಾರ್ಥವಿದೆ."[೨೨] ಈ ಪ್ರಶ್ನೆಗಳ ಬಲ್ಲಾಳರ ಕಾರ್ಯಗಳಿಗೆ ನಿದರ್ಶನವಾಗಿದೆ.

ಕಾಮತ್ ಮತ್ತು ಬಲ್ಲಾಳರ ಒಡನಾಟ ಪ್ರಸಂಗವನ್ನು ಹಾವನೂರ ಅವರು ಪ್ರಸ್ತಾಪಿಸಿದ್ದಾರೆ. ಗಾಂಧೀಜಿಯವರ ಕೊಲೆ ಜನವರಿ ೩೦, ೧೯೪೮ರ ಸಂಜೆ ಆಯಿತು. ಈ ಸುದ್ದಿ ಬಲ್ಲಾಳರ ಕಛೇರಿಗೆ ತಂದಿದ್ದರು. ಈ ಎಲ್ಲಾ ವಿವರ ಬಳಸಿಕೊಂಡು ಬಲ್ಲಾಳರು ವಿಶೇಷ ಸುದ್ದಿ ತಯಾರಿಸಿಕೊಂಡು ಪ್ರಕಟಿಸಿದರು. ಹಾಗೆಯೇ ಹೈದರಾಬಾದಿನ ನಿಜಾಮರ ಶರಣಾಗತಿ ಸುದ್ದಿ ಸಂಜೆ ೬ ಗಂಟೆಗೆ ಬಂದಿತು. ಫ್ರೀಪ್ರೆಸ್ ಕಛೇರಿಗೆ ಬಂದ ಸಂಗತಿಯನ್ನು ಕಾಮತರು ಟೆಲಿಪ್ರಿಂಟಿನಲ್ಲಿ ಮೂಡಿಬಂದ ಆ ಸುದ್ದಿಯ ಕಾಗದ ಪ್ರತಿಯನ್ನು ಹಿಡಿದುಕೊಂಡು 'ನುಡಿ ಪತ್ರಿಕೆ' ಮುದ್ರಣವಾಗುತ್ತಿದ್ದ ಪ್ರೆಸ್ಸ್‌ಗೆ ಬಂದರು. ಬಲ್ಲಾಳರ ಸಂಪಾದಕೀಯ ಸುದ್ದಿಯನ್ನು ತೆಗೆದು ನಿಜಾಮನ ಶರಣಾಗತಿಗೆ ಸಂಬಂಧಿಸಿದಂತೆ ಸಂಪಾದಕೀಯದಲ್ಲಿ ಬರೆಯುವಂತೆ ತಿಳಿಸಿದರು. ಅದನ್ನು ಕಾಮತ್ ಬರೆದರು. ಅದನ್ನು ಕನ್ನಡಕ್ಕೆ ಬಲ್ಲಾಳರು ತರ್ಜುಮೆ ಮಾಡಿದರು.

ಆ ಸಂಪಾದಕೀಯ, ಮಹತ್ವವೆಂದರೆ "ಹೈದ್ರಾಬಾದ್ ಸಂಸ್ಥಾನದ ಪ್ರದೇಶವನ್ನು ಮಹಾರಾಷ್ಟ್ರ, ಕರ್ನಾಟಕ, ತೆಲಂಗಾಣ ಭಾಷಾನ್ವಯ ಹಂಚಿ ಹಾಕಬೇಕು ಎಂಬ ಸೂಚನೆ ಅಷ್ಟೊಂದು ಮುಂದಾಗಿ ಮಾಡಲಾಗಿತ್ತು. ಯಾವುದೇ ದೌರ್ಬಲ್ಯಕ್ಕಿಂತ ಇಂಗ್ಲಿಷ್ ವಿಷಯದ ಮೊದಲಿಗೆ ಈ ಸೂಚನೆ ಜೊತೆಗೆ ದೇಶದ್ರೋಹಿ ನಿಜಾಮನನ್ನು ಗಲ್ಲಿಗೇರಿಸಬೇಕು ಎಂಬ ಉಗ್ರ ಸೂಚನೆ ಅದರಲ್ಲಿತ್ತು! ಅವನ ಬಗ್ಗೆ ಸಹನೂಭೂತಿಯುಳ್ಳವರಾರೂ ಈ ದೇಶದಲ್ಲಿ ಇರಲಿಲ್ಲ. ನಿಜ ಆದರೂ ಇಂಥ ಉಗ್ರಗಾಮೀ ವಿಚಾರ ಮಂಡಿಸಬಾರದೆಂದು ಪ್ರೆಸ್ ಕೌನ್ಸಿಲ್‌ನವರು ಅಂದರಂತೆ. ಅದರಂತೆ ಸರ್ಕಾರಕ್ಕೆ ಎಚ್ಚರಿಕೆ ನೀಡುವಷ್ಟು ದುಡಿಕಿನದಾಗಿತ್ತು."[೩] ಆ ಮಾತು ಈ ತೆರನಾದ ಕಠೋರ ಅಭಿಪ್ರಾಯಗಳು ವ್ಯಕ್ತಗೊಂಡವು.

ಬಲ್ಲಾಳರು, ಕಾಮತರು ಮತ್ತು 'ನುಡಿ ಕೂಟದ' ಇತರರು "ಕರ್ನಾಟಕದ ಏಕೀಕರಣಕ್ಕೆ ಬದ್ಧರಾಗಿ ಹತ್ತಾರು ಬಾರಿ ಆ ಕುರಿತು ಸಂಪಾದಕೀಯ ಬರೆದರು. ಅದೇ ಎಂ.ಕಾಮತರು ಭಾಷಾನ್ವಯ ಪ್ರಾಂತ ರಚನೆಯ ತತ್ವಕ್ಕೆ ಕಡು ವಿರೋಧಿಗಳು. 'ನುಡಿಯ' ಸಂಸ್ಥಾಪಕರು ಹಾಗೆ ಬೇಡ ಎಂದರೆ ಬಲ್ಲಾಳರು ಸ್ವಲ್ಪವೂ ಜಗ್ಗಲಿಲ್ಲ. ಕೊನೆಗೆ ನಾನೇ ಸೋತೆ ಎಂಬುದಾಗಿ ಕಾಮತರು ತಮ್ಮ ಆತ್ಮಚರಿತ್ರೆಯಲ್ಲಿ ಹೇಳಿಕೊಂಡಿದ್ದಾರೆ."[೪] ಹೀಗೆ ವಿರೋಧವಾದ ಸಂಗತಿಗಳ ಬಗೆ ಹಾವನೂರು ಅವರು ವಿಶ್ಲೇಷಿಸಿದ್ದಾರೆ.

ಮುಂಬಯಿ ಆಕಾಶವಾಣಿಯಲ್ಲಿ ಅರ್ಧಗಂಟೆಯ ಕನ್ನಡ ಕಾರ್ಯವನ್ನು ನಡೆಸಲಾಗಿತ್ತು. ಈ ಕಾರ್ಯಕ್ರಮವನ್ನು ಸ್ವಾತಂತ್ರ್ಯ ಬರುವುದಕ್ಕಿಂತ ಎರಡು ಮೂರು ನೂರು ವರ್ಷಗಳಿಂದಲೂ ನಡೆಸಿಕೊಂಡು ಬರುತ್ತಿತ್ತು. ಆದರೆ ಧಾರವಾಡದಲ್ಲಿ ಆಕಾಶವಾಣಿ ಕ್ರಿ.ಶ. ೧೯೪೯ರಲ್ಲಿ ಪ್ರಾರಂಭಗೊಂಡ ಹಿನ್ನೆಲೆಯಲ್ಲಿ ಮುಂಬೈಯ ಕನ್ನಡ ಕಾರ್ಯಕ್ರಮ ಸ್ಥಗಿತಗೊಳಿಸುವ ಹುನ್ನಾರವನ್ನು ಕಂಡು ಬಲ್ಲಾಳರು ದಾಖಲೆ ಸಮೇತವಾಗಿ ಸಂಪಾದಕೀಯಲ್ಲಿ ಖಂಡಿಸಿದರು.

ಇದರ ಪರಿಣಾಮ ಕೇಂದ್ರ ವಾರ್ತೆ ಮತ್ತು ಪ್ರಸಾರ ಖಾತೆಯ ಸಚಿವರಾದ ದಿವಾಕರ ಮೇಲೆ ಪ್ರಭಾವ ಬೀರಿತು. ಏಕೀಕರಣದಲ್ಲಿ ತೊಡಗಿಕೊಂಡ ದಿವಾಕರ ಮೊದಲಿನಂತೆ ಕಾರ್ಯನಿರ್ವಹಿಸುವಂತಿರಲಿಲ್ಲ. ಕೇಂದ್ರ ಮಂತ್ರಿ ಪದವಿಗೆ ಕರ್ನಾಟಕ ಏಕೀಕರಣದ ಬಲಿದಾನ ಎನ್ನುವ ವಿಷಯದಡಿಯಲ್ಲಿ 'ನುಡಿ' ಪತ್ರಿಕೆಯು ಮಂತ್ರಿಯ ಕುರಿತು ಟೀಕೆ ಬರೆದಿದ್ದಕ್ಕಾಗಿ ಅಲ್ಲಿ ನೇಮಕವಾಗಬೇಕಾದ ಆದೇಶ ರದ್ದು ಮಾಡಿದರು.

'ನುಡಿ' ಪತ್ರಿಕೆಯು ಮುಂಬಯಿ ಕನ್ನಡಿಗರ ಜೀವನಾಡಿಯಂತೆ ಇತ್ತು. ನುಡಿಯು ಅನುರಕ್ತೆ ಧಾರವಾಹಿಯನ್ನು ಪ್ರಕಟಿಸುತ್ತಿದ್ದರು. ಆದರೆ ಅರ್ಧ ಭಾಗದಷ್ಟಾದಾಗ ಆಕಸ್ಮಿಕವಾಗಿ ಪತ್ರಿಕೆ ಸ್ಥಗಿತಗೊಂಡಿತು. ನುಡಿ ಕಛೇರಿಯಲ್ಲಿ ಎಲ್ಲರೂ ಕೂಡಿ ಚರ್ಚೆ ನಡೆದಿತ್ತು. ಆ ಸಂದರ್ಭದಲ್ಲಿ ಬಿ.ಜಿ.ಕುಲಕರ್ಣಿ ಬಂದರು. ಮುಂಬಯಿ ಸರ್ಕಾರ ವಾರ್ತಾ ಮತ್ತು ಪ್ರಸಾರ ಇಲಾಖೆಯ ಉಪನಿರ್ದೇಶಕರು ಪತ್ರಿಕೆಯಲ್ಲಿ ಪ್ರಕಟವಾದ ಟೀಕೆ ಕುರಿತು ಚರ್ಚೆಗೆ ಬಂದಿರಬಹುದೆಂದು ತಿಳಿಯುತ್ತಿದ್ದರು. ಆದರೆ ಬಿ.ಬಿ.ಕುಲಕರ್ಣಿ ವಿಷಯ ಪ್ರಸ್ತಾಪ ಮಾಡಲಿಲ್ಲ. ಮುಖ್ಯಮಂತ್ರಿಗಳು ಪ್ರತಿ ಹದಿನೈದು ದಿನಕ್ಕೊಮ್ಮೆ ಪತ್ರಿಕೆಯವರ ಸಭೆ ಕರೆಯುತ್ತಿದ್ದರು. ಹೀಗಾಗಿ ಆ ಸಭೆಗೆ ನುಡಿ ಪತ್ರಿಕೆಯವರು ಬಂದಿರಲಿಲ್ಲ. ಈ ಹಿನ್ನೆಲೆಯಲ್ಲಿ ಅಧಿಕೃತವಾಗಿ ಆಮಂತ್ರಣ ಕೊಡಲು ಬಂದಿದ್ದೇನೆ ಎಂದು ಹೇಳಿರುವುದನ್ನು ಹಾವನೂರ ಉಲ್ಲೇಖಿಸಿದ್ದಾರೆ.

**ಶಬ್ದ ಮಂಜರಿ ಕೋಶ**

ಹಾವನೂರ ಅವರು ಗಂಗಾಧರ ಮಡಿವಾಳೇಶ್ವರ ತುರುಮರಿ ಅವರ ಶಬ್ದಮಂಜರಿ ಕೋಶದ ಮಹತ್ವದ ವಿಚಾರಧಾರೆಯನ್ನು ನಿರೂಪಿಸಿದ್ದಾರೆ. ಶಬ್ದಕೋಶ ಅಥವಾ ನಿಘಂಟುಗಳಲ್ಲಿ ಹಲವು ಪ್ರಕಾರಗಳಿವೆ. ಎಕ ದ್ವಿ–ಭಾಷಾ ಬಹುಭಾಷಾ ಕೋಶಗಳನ್ನು ಮಿಶನರಿಗಳು ಕನ್ನಡ ಶಬ್ದಕೋಶವನ್ನು ಪರಿಚಯಿಸುವ ದೃಷ್ಟಿಯಿಂದ ದ್ವಿ ಭಾಷಾ ಕೋಶವನ್ನು ಇಂಗ್ಲಿಷ್ ಕನ್ನಡ ನಿಘಂಟುವನ್ನು ರೀವ್ ಎಂಬ ಮಿಶನರಿ ಸಿದ್ಧಪಡಿಸಿದರು. ನಂತರ ಕ್ರಿ.ಶ. ೧೮೨೪ ಅವರೇ ಕನ್ನಡ ಇಂಗ್ಲಿಷ್ ರಚನೆ ಮಾಡಿದರು. ಇನ್ನೊಬ್ಬ ಮಿಶನರಿಯು ಸ್ಯಾಂಡರ್ಸನ್ ಈ ಎರಡು ನಿಘಂಟುಗಳನ್ನು ಪರಿಷ್ಕರಿಸಿದರು. ಮುಂದುವರಿದ ಭಾಗವಾಗಿ ಕಿಟೆಲ್‌ರವರು ಪರಿಷ್ಕರಿಸಿದರೂ ದ್ವಿಭಾಷ ನಿಘಂಟು ಇತ್ತು. ಆದರೆ ಏಕ ಭಾಷಾ ಕೋಶ ಇರಲಿಲ್ಲ.

ಕನ್ನಡದ್ದೇ ಏಕಭಾಷೆ ಕೋಶಗಳು ನಂತರ ಅವರದ್ದೇ ಕನ್ನಡ 'ರತ್ನಕೋಶ.' ಕಾರಂತ, 'ಸಿರಿಗನ್ನಡ ಅರ್ಥಕೋಶ' ಜೆ.ಎ.ಕವಲಿಯವರ 'ಕನ್ನಡ ಕಸ್ತೂರಿ' ಕನ್ನಡ ಕೋಶ, ಕಾವ್ಯಪದ ಮಂಜರಿ ಈ ಪರಂಪರೆಯಲ್ಲಿ ಗಂಗಾಧರ ಮಡಿವಾಳೇಶ್ವರ ತುರುಮುರಿ ಮೊದಲಿಗರು, ಕ್ರಿ.ಶ. ೧೮೮೯ರಲ್ಲಿ ಸಣ್ಣ ದೊಡ್ಡ ಅಂಶಗಳ ಆಕರಗಳ ಶಬ್ದಕೋಶ ಮಾಡಿದರು. ಇದಕ್ಕಿಂಥ ಪೂರ್ವ ಇರಲಿಲ್ಲವೇ; ಇತ್ತು? ಹಳೆಗನ್ನಡ ಸಂಸ್ಕೃತ ನಿಘಂಟುಗಳಿದ್ದವು. ಆದರೆ ಶಬ್ದಕೋಶಗಳು ಇಲ್ಲವೆ ಸಮಾನಾರ್ಥದ ಪದಗಳು ಇರುವಂಥ ಪದಕೋಶ ಇರಲಿಲ್ಲ. ಅಥವಾ ನೇರವಾದ ಅರ್ಥ ಹೇಳುವಂಥ ಶಬ್ದಕೋಶ ಇರಲಿಲ್ಲ. ಆ ಪರಂಪರೆ ಹಾಕಿ ಕೊಡುವಲ್ಲಿ ತುರುಮುರಿ ಅವರ ಪಾತ್ರ ಹಿರಿದು. ಮಹತ್ವದ ಸಂಗತಿ ಎಂದರೆ

ಮಿಶನರಿಗಳು ಧರ್ಮ ಪ್ರಸಾರ ದೃಷ್ಟಿಯಿಂದ ಅಲ್ಲದೆ ಶೈಕ್ಷಣಿಕ ಉದ್ದೇಶದಿಂದ ಹಾಗೂ ಹಳೆಗನ್ನಡ ಕಾವ್ಯಗಳ ಓದುಗ ದೃಷ್ಟಿಯಿಂದ ಅದರ ವ್ಯಾಕರಣ ಅರ್ಥಗಳನ್ನು ತಿಳಿದು ಉತ್ತರ ಕರ್ನಾಟಕ ಮುಂಬಯಿ ಶಿಕ್ಷಣಾಧಿಕರಿಗಳಾದ ರಸೆಲ್, ಡೆಪ್ಯುಟಿ ಚನ್ನಬಸಪ್ಪ ಕಂಡುಕೊಂಡ ಕನ್ನಡ ವಿಷಯ ಕಲಿಯಬೇಕಾದರೆ ಹಾಗೂ ಹಳೆಗನ್ನಡ ಕಾವ್ಯಗಳಲ್ಲಿ ಶಬ್ದಗಳ ಅರ್ಥ ತಿಳಿಯುವುದು ಕಷ್ಟವಾಗುತ್ತದೆ. ಆ ಶಬ್ದದ ಅರ್ಥ ತಿಳಿದರೆ ವಿಷಯವನ್ನು ಅರ್ಥೈಸಲಿಕ್ಕೆ ಸುಲಭವಾಗುತ್ತದೆ. ಈ ಕಾರಣದಿಂದ ತುರುಮುರಿಯವರ ಹೆಸರು ಕೇಳಿ ಬಂತು. ಅವರು ಪ್ರಾಥಮಿಕ ಶಾಲೆ ಶಿಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದರು. ಹಾಗೆಯೇ ಅಥಣಿ ಮಡಿವಾಳ ಸ್ವಾಮಿಗಳಲ್ಲಿ ಕನ್ನಡ ಸಂಸ್ಕೃತ ಕೃತಿಗಳ ಅಧ್ಯಯನ ಮಾಡಿ ವಿದ್ವತ್ ಪಡೆದಿದ್ದರು. ಅಲ್ಲದೆ ಇಂಗ್ಲಿಷ್ ಚೆನ್ನಾಗಿ ಬಲ್ಲವರಾಗಿದ್ದರು. ಈ ಕಾರಣದಿಂದ ಭಾಷಾಂತರಕಾರನೆಂದು ನಿಯೋಜಿತ ಗೊಂಡಿದ್ದರು. ೧೮೯೫ರಲ್ಲಿ ಅವರು ಪತ್ರಗಳ ತರ್ಜುಮೆ, ಸ್ವರಚನೆ ಕಾರ್ಯದಲ್ಲಿ ತೊಡಗಿಕೊಂಡಿದ್ದರು.

ಈ ಶಬ್ದಮಂಜರಿ ಶಬ್ದಕೋಶದ ಬರವಣಿಗೆ ಮಾಡುವ ಹಂತದಲ್ಲಿ ಶ್ರಮವಹಿಸಿ ಕೆಲಸ ಮಾಡಿದರು. ಈ ಸಂದರ್ಭದಲ್ಲಿ ಇತರ ಕೃತಿಗಳನ್ನು ಬಳಸಿಕೊಂಡರು. ಕಬ್ಬಿಗರ ಕೈಪಿಡಿ, ಕರ್ನಾಟಕ ಶಬ್ದಮಂಜರಿ ಅಮರಕೋಶ ಅಲ್ಲದೆ ಪ್ರಾಚೀನ ಕೃತಿಗಳ ಬಳಸಿಕೊಂಡರು. ಜೊತೆಗೆ ಆಯ್ದು ಕಾವ್ಯ ಭಾಗಗಳನ್ನು ಪಡೆದುಕೊಂಡಿದ್ದರು. ಈ ಶಬ್ದಕೋಶವನ್ನು 'ವಿಚಾರ ದರ್ಪಣ' ಪ್ರೆಸ್ಸ್‌ನವರು ಪ್ರಕಟಿಸಿದ್ದರು. ಆಗಿನ ಪ್ರಸಿದ್ಧ ಪುಸ್ತಕ ವ್ಯಾಪಾರಿಯಾದ ಅನಾಡ ಚನ್ನವೀರಪ್ಪನವರು ಪುನರ್ ಮುದ್ರಣ ಮಾಡುವಾಗ ಕಿಟೆಲ್ ಶಬ್ದಕೋಶವನ್ನು ಬಳಸಿಕೊಂಡಿದ್ದಾರೆಂದು ಹಾವನೂರ ಅವರ ಸಂಪಾದನೆಯಿಂದ ತಿಳಿದುಬರುತ್ತದೆ. ಹಾವನೂರ ಈ ಶಬ್ದಕೋಶ ಸಂಪಾದನೆ ಮಾಡುವುದು ತುರುಮರಿ ಅವರ ಶಬ್ದಕೋಶ ಯುವ ಸಂತತಿಗೆ ತಲುಪಿಸುವ ಕಾರ್ಯ ಮಾಡಿದರು. ಈ ಹೆಗ್ಗಳಿಕೆ ಹಾವನೂರ ಅವರಿಗೆ ಸಲ್ಲುತ್ತದೆ. "ಜ್ಞಾನ ಸಂಸ್ಕೃತಿ ಮತ್ತು ಸಾಹಿತ್ಯ ಪ್ರಸಾರ ಕಾರ್ಯಕ್ಕೆ ಕರ್ನಾಟಕ ಸರ್ಕಾರ ತುಂಬ ದಿನಗಳ ಹಂಬಲಿಕೆಯಾಗಿತ್ತು. ಮೂಲ ಪರಂಪರೆ ಪ್ರಾರಂಭಿಸಿದ ಯಶಸ್ಸು ದಕ್ಷ ಮತ್ತು ದೂರದೃಷ್ಟಿಯುಳ್ಳ ಮುಖ್ಯಮಂತ್ರಿ ಕೆಂಗಲ್ ಹನುಮಂತಯ್ಯನವರಿಗೆ ಸಲ್ಲಬೇಕು. ಕನ್ನಡ ಭಾಷೆಯ ಶ್ರೀಮಂತಗೊಳಿಸುವ ಉದ್ದೇಶದಿಂದ ಇಂಥ ಶಬ್ದಕೋಶ ಓದುಗರಿಗೆ"[೨೫] ಸುಲಭವಾಗಿ ಸಿಗುವಂತೆ ಮಾಡುವುದು ಅವರ ಉದ್ದೇಶವಾಗಿತ್ತು.

**ಕಾದಂ ಕಥನ**

ಕನ್ನಡ ಸಾಹಿತ್ಯದಲ್ಲಿ ಜನಪ್ರಿಯಗೊಂಡ ಸಾಹಿತ್ಯ ಪ್ರಕಾರವೆಂದರೆ ಕಾದಂಬರಿ ಹಾವನೂರ ಅವರು ಕಾದಂ ಕಥನ ಎಂದು ನಾಮಕರಣ ಮಾಡುವುದರ ಮೂಲಕ ಹೊಸ ಪ್ರಕಾರವನ್ನು ಕನ್ನಡ ಸಾಹಿತ್ಯಕ್ಕೆ ಪರಿಚಯಿಸಿದರು. ಈ ಪ್ರಕಾರಕ್ಕೆ ತಮ್ಮದೇಯಾದ ವ್ಯಾಖ್ಯಾನವನ್ನು ಕೊಡುತ್ತಾರೆ. "ಕಾದಂ ಕಥನದಲ್ಲಿ ಕಾದಂಬರಿಯ ಆದಿ-ಮಧ್ಯ-ಅಂತ್ಯಗಳನ್ನು ಆಯ್ಕೆ ಮಾಡಿಕೊಳ್ಳುವುದು, ಇಲ್ಲವಾದರೆ ಕೆಲವು ಕಾದಂಬರಿಗಳಲ್ಲಿ ಹಾಗೆ ಮಾಡಲು ಸಾಧ್ಯವಾಗದಿದ್ದಾಗ

ಅದರ ಪೂರ್ವಾರ್ಧದ ಇಲ್ಲವೆ ವಿಶಿಷ್ಟ ಪಾತ್ರವೊಂದನ್ನು ತೆಗೆದುಕೊಳ್ಳಬಹುದು. ವ್ಯಕ್ತಿಗೆ ಸಂಬಂಧಿಸಿದ ಕಥಾಭಾಗ ಹಾಗೂ ಸನ್ನಿವೇಶಗಳನ್ನು ಆಯ್ಕೆ ಮಾಡಿಕೊಳ್ಳಬಹುದು."೨೬ ಈ ರೀತಿ ಹೊಸ ಸ್ವರೂಪ ಕೊಡುವಲ್ಲಿ ಯಶಕಂಡರು.

ಹಾವನೂರ ಅವರು ಎಸ್.ಎಲ್. ಭೈರಪ್ಪ ಅವರ ಕಾದಂಬರಿ ಆಧರಿಸಿ ಸಾಹಿತ್ಯದ ಹೊಸ ಪ್ರಕಾರವಾದ ಕಾದಂ ಕಥನಗಳು ಕಾತ್ಯಾಯನಿ, ಮಂಡಿ ಸಾಹುಕಾರ, ರ್‍ಯಾಗಿಂಗ್, ಮಾತಂಗಿ, ನಿಯೋಗಗಳನ್ನು ರಚಿಸಿದರು.

ಕಾತ್ಯಾಯನಿ ವಂಶವೃಕ್ಷದಿಂದ ವಸ್ತುವನ್ನು ಆಯ್ದುಕೊಂಡು ಕಾತ್ಯಾಯನಿ ಎಂಬ ಕಾದಂ ಕಥನದಲ್ಲಿ ಕಾತ್ಯಾಯನಿ ಪಾತ್ರವನ್ನು ಕೇಂದ್ರಿಕರಿಸಿಕೊಂಡು ಮಾವ, ಅತ್ತೆ, ಗಂಡ, ತೀರಿಕೊಂಡ ಮಗ ಹೀಗೆ ಅದರ ವ್ಯಾಪ್ತಿಯು ವಿವಿಧ ಸಂದರ್ಭ, ಸನ್ನಿವೇಶಕ್ಕೆ ಅನುಗುಣವಾಗಿ ಸಂಕ್ಷಿಪ್ತಗೊಳಿಸಿ ಈ ಕಾದಂ ಕಥನಕ್ಕೆ ಹೊಸ ಸ್ವರೂಪ ಕೊಟ್ಟರು. ಕಾತ್ಯಾಯನಿಯ ಗಂಡ ತೀರಿಕೊಂಡ ಆತನ ಓದು ಮೊಟಕುಗೊಂಡಿತು. ಅದನ್ನು ಕಾತ್ಯಾಯನಿಯ ಮೂಲಕ ಪೂರ್ಣಗೊಳಿಸುವ ಪ್ರಯತ್ನ ಮಾವ ಮತ್ತು ಅತ್ತೆಯ ಸಹಾಯದಿಂದ ವಿದ್ಯಾಭ್ಯಾಸ ನಡೆದಿತ್ತು. ಆದರೆ ತನ್ನ ಓದಿನ ಸಂದರ್ಭದಲ್ಲಿ ಕಾಲೇಜಿನಲ್ಲಿ ನಾಟಕ ಪ್ರಯೋಗ ನಡೆದಿತ್ತು. ಅದರಲ್ಲಿ ಪಾತ್ರ ಮಾಡುವುದರ ಮೂಲಕ ಪ್ರಾಧ್ಯಾಪಕರ ಪ್ರೇಮಪಾಷಕ್ಕೆ ಒಳಗಾಗಿ ತನ್ನ ಬದುಕನ್ನೇ ದುರಂತ ಮಾಡಿಕೊಂಡ ಚಿತ್ರಣ. ಹಾಗೆಯೇ ಒಂದು ಕುಟುಂಬದ ವಂಶವನ್ನು ಬೆಳಗಲಿಕ್ಕೆ ಬಂದು ಹೆಣ್ಣು ಇನ್ನೊಂದು ವಂಶದ ಸಂತತಿಯ ಬೆಳವಣಿಗೆ ದಾರಿಯಾಯಿತು. ಈ ರೀತಿ ಪ್ರೇಮದ ವ್ಯಾಮೋಹಕ್ಕೆ ಒಳಗಾದ ಹೆಣ್ಣು ನೈತಿಕತೆ ಮತ್ತು ಕುಟುಂಬದ ಘನತೆ ಗೌರವಗಳಿಗೆ ಕುಂದುಂಟಾಗುವ ಸನ್ನಿವೇಶವನ್ನು ಕಾಣಬಹುದು. ಹಾವನೂರ ಅವರು ಮಹಿಳೆಯು ಕೌಟುಂಬಿಕವಾಗಿ ಎಷ್ಟು ಪ್ರಮುಖ ಪಾತ್ರವಹಿಸುತ್ತಾಳೆ ಮತ್ತು ಮಹಿಳೆಯನ್ನು ಕೇಂದ್ರಿಕರಿಸಿಕೊಂಡು ಗಂಡನೊಂದಿಗೆ ವೈವಾಹಿಕ ಬದುಕು. ಅತ್ತೆ ಮಾವನೊಂದಿಗೆ ಕೌಟುಂಬಿಕ ವ್ಯವಹಾರ ಚಿಕ್ಕ ಬಾಲಕನ ಭವಿಷ್ಯ ರೂಪಿಸಲು ಮನಸ್ಸು ಹರಿಸದೆ ಪ್ರೇಮ ಪ್ರೀತಿ ವಾತ್ಸಲ್ಯದ ಕಡೆಗೆ ಮನಸ್ಸು ಸೆಳೆಯಲು ದಾರಿಮಾಡಿಕೊಡುತ್ತದೆ. ಪ್ರೇಮದ ಅಮಲಿನಲ್ಲಿ ಹೆಣ್ಣು ತನ್ನ ಕೌಟುಂಬಿಕ ಸಂಬಂಧಕ್ಕಿಂತ ದೈಹಿಕ ಸುಖದ ಕಡೆಗೆ ವಾಲುತ್ತಾಳೆ ಎಂದು ಕಾದಂ-ಕಥನದಲ್ಲಿ ನಿರೂಪಿಸಿದ್ದಾರೆ.

**ಮಂಡಿ ಸಾಹುಕಾರ**

ಎಸ್.ಎಲ್.ಭೈರಪ್ಪ ಅವರ ಸಾಕ್ಷಿ ಕಾದಂಬರಿಯನ್ನು ಆಧಾರಿಸಿ 'ಮಂಡಿ ಸಾಹುಕಾರ' ಎಂಬ ಕಾದಂ-ಕಥನವನ್ನು ಹಾವನೂರ ರಚಿಸಿದ್ದಾರೆ. ತಾಯಿ ಸುಕನ್ಯೆ ತನ್ನ ಮಗನ ವಿದ್ಯಾಭ್ಯಾಸಕ್ಕೆ ಪರಿತಪಿಸುವ ಚಿತ್ರಣ; ನಾಗಪ್ಪ ತಾತ ಆರ್ಥಿಕ ಪ್ರಬಲನಾಗಿದ್ದರೂ ಮೊಮ್ಮಗನ ಕನಿಷ್ಠ ವಿದ್ಯಾಭ್ಯಾಸದ ವೆಚ್ಚವನ್ನು ಲೆಕ್ಕ ಹಾಕುವುದರ ಮೂಲಕ ಮೊಮ್ಮಗ ಓದಿನ ವೆಚ್ಚವನ್ನು ತನ್ನ ಪುಸ್ತಕದಲ್ಲಿ ಬರೆದಿಟ್ಟಿದ್ದನು. ಪರಮಶಿವಯ್ಯ ತನ್ನ ಆಸ್ತಿ ಮಾರಿ ಬಂದ

ಹಣದಿಂದ ಮಗನ ಶಿಕ್ಷಣದ ವೆಚ್ಚವನ್ನು ಕೊಟ್ಟು ಆದರಿಂದ ಋಣಮುಕ್ತಿ ಪಡೆಯುತ್ತಾನೆ. ಕಾಯಿಲೆಗೆ ತುತ್ತಾದ ನಾಗಪ್ಪಜ್ಜ ಆ ಸಂದರ್ಭದಲ್ಲಿ ಹಣವನ್ನು ವೆಚ್ಚಮಾಡದೆ ನಾಟಿ ಔಷಧ ತೆಗೆದುಕೊಂಡು ಸಾವನ್ನು ತಾನೇ ಆಹ್ವಾನಿಸಿಕೊಂಡ, ಹೀಗಾಗಿ ಅಗತ್ಯವಿದ್ದಾಗ ವೆಚ್ಚ ಮಾಡುವುದು ತುಂಬ ಉಚಿತವಾದದು. ಆದರೆ ತಾನು ಸಂಪಾದನೆ ಮಾಡಿದ ಹಣ ತನ್ನ ಶವಸಂಸ್ಕಾರ ಮಾಡುವ ಸಂದರ್ಭದಲ್ಲಿ ಆ ಹಣವನ್ನು ಅಳಿಯ ಪರಮಶಿವಯ್ಯ ಮಾವನ ಶವ ಮೇಲೆ ಹಾಕಿ ಬೆಂಕಿ ಹಚ್ಚಿದರು. ತಾನು ಸಂಪಾದನೆ ಮಾಡಿದ ಹಣ ತನ್ನ ದೈನಂದಿನ ಕಷ್ಟಗಳಿಗೆ ಬಳಕೆಯಾಗದಿರುವ ಸಂಗತಿ ಈ ಕಾದಂ-ಕಥನದಲ್ಲಿದೆ.

**ರ್‍ಯಾಂಗಿಂಗ್**

ಎಸ್.ಎಲ್. ಭೈರಪ್ಪನವರ ಕಾದಂಬರಿ ತಂತುವಿನಿಂದ ಆಯ್ಕೆ ಮಾಡಿಕೊಂಡ ಕಾದಂ-ಕಥನವೇ ರ್‍ಯಾಂಗಿಂಗ್ ಶಾಲಾ ಕಾಲೇಜು ಮತ್ತು ಹಾಸ್ಟೆಲ್‌ಗಳಲ್ಲಿ ನಡೆಯುವ ರ್‍ಯಾಂಗಿಂಗ್ ಕೇಂದ್ರೀಕೃತ ವಸ್ತು. ಕಾಲೇಜು ಪರಿಸರದಲ್ಲಿ ಹಿರಿಯ ವಿದ್ಯಾರ್ಥಿಗಳು ಕಿರಿಯ ವಿದ್ಯಾರ್ಥಿಗಳಿಗೆ ಕಿರುಕುಳ ಕೊಡುವ ಚಿತ್ರಣವಿದೆ. ಇದಕ್ಕೆ ರೋಸಿಹೋಗಿರುವ ಪೋಷಕರ ಸ್ವರೂಪ ಇಲ್ಲಿದೆ. ಹಿರಿಯ ವಿದ್ಯಾರ್ಥಿಯಾದ ವಿಜಯ ಕುಮಾರ, ಸಂಜುಂಡ, ಕಾಲೇಜ್ ರೋಬೇಟ್ (ಅಪಾಯದ ಯಂತ್ರದ ಮಧ್ಯದಲ್ಲಿ ನುಗ್ಗಿ ಕೆಲಸ ಮಾಡುತ್ತಿದ್ದರು) ರಂಗನಾಥ ಹೆಸರು ರಾಕೇಟ್ ಆತನು ರಾಕೇಟ್ ವೇಗದಲ್ಲಿ ಬೈಕ್ ಓಡುಸುತ್ತಿದ್ದನು. ಜಸ್ ಬೀರ್ ಚೌದರಿ ಹರಿಯಾಣದ ಶ್ರೀಮಂತರ ಮಗ ಮತ್ತು ಕಿರಿಯ ವಿದ್ಯಾರ್ಥಿ ಅನೂಪ್ ಮತ್ತು ರವೀಂದ್ರ, ಹಿರಿಯ ವಿದ್ಯಾರ್ಥಿಗಳು ಕಿರಿಯ ವಿದ್ಯಾರ್ಥಿಯಾದ ಅನೂಪ್‌ನನ್ನು ತಮ್ಮ ರೂಮಿಗೆ ಕರೆದೊಯ್ದು ಆತನಿಗೆ ಕಿರುಕುಳ ಕೊಟ್ಟಿದರು. ಪ್ರತಿಯಾಗಿ ಅವನು ಬಹಳ ದುಃಖಿತನಾಗಿದ್ದನು. ಅದನ್ನು ಕಂಡ ಸ್ನೇಹಿತ ರವೀಂದ್ರ ಕೇಳಿದನು. ಅದಕ್ಕೆ ಆತನು ನಡೆದ ಘಟನೆಯನ್ನು ವಿವರವಾಗಿ ಹೇಳಿದನು. ನಂತರ ರವೀಂದ್ರನು ತನ್ನ ತಂದೆಗೆ ಈ ವಿಷಯವನ್ನು ಹೇಳಿದನು. ಆಗ ಅವರು ಕೋಪಗೊಂಡು ಐ.ಜಿಗೆ ಈ ಸಂಗತಿಯನ್ನು ಫೋನ್ ಮೂಲಕ ತಿಳಿಸಿದನು. ಅವರು ಎಸ್.ಪಿ.ಯಿಂದ ವಿಷಯ ಈ ಸಂಬಂಧಿಸಿದ ಮಾಹಿತಿ ತಿಳಿದುಕೊಂಡು ಸಂಬಂಧಿಸಿದ ಪೋಲೀಸ್ ಇನ್ಸ್‌ಪೆಕ್ಟರ್ ಕ್ರಮ ಜರುಗಿಸುವಂತೆ ಆದೇಶ ನೀಡಿದರು. ನಂತರ ವಿದ್ಯಾರ್ಥಿಗಳನ್ನು ಜೈಲಿಗೆ ಹಾಕಿದ್ದ ಸುದ್ದಿಯು ಕಾಲೇಜು ಪ್ರಾಶುಂಪಾಲರಿಗೆ ತಿಳಿದು ಅವರು ಬೇಸರ ಮಾಡಿಕೊಂಡರು. ಹಾಗೆಯೇ ವಿದ್ಯಾರ್ಥಿಗಳ ಪೋಷಕರಿಗೆ ತಿಳಿಸಿದರು. ಅವರು ಕೂಡ ಮಕ್ಕಳ ದುರುಳ ಕಾರ್ಯಚಟುವಟಿಕೆಗೆ ಕೇಳಿ ಬೇಸರಪಟ್ಟುಕೊಂಡರು. ಕಾಲೇಜು ಮತ್ತು ಹಾಸ್ಟೆಲ್ ಆವರಣದಲ್ಲಿ ಇಂಥ ಕಾರ್ಯಚಟುವಟಿಗಳು ಜರುಗದಂತೆ ಪೊಲೀಸ್ ಇಲಾಖೆ ನಿಯಂತ್ರಿಸಬೇಕು.

**'ಮಾತಂಗಿ'** ಭೈರಪ್ಪನವರ ದಾಟುವಿನಿಂದ ಮಾತಂಗಿ ಎಂಬ ಕಾದಂ-ಕಥನ ಆಯ್ಕೆ ಮಾಡಿಕೊಂಡಿದ್ದಾರೆ. ಹಾವನೂರ ಅವರು ಸಮಾಜದ ವರ್ಣ ಮತ್ತು ವರ್ಗದ ರೀತಿ-

ನೀತಿಯನ್ನು ಮೀರಿ ನಡೆಯುವ ಕಾರ್ಯ ಚಟುವಟಿಕೆ ಇಲ್ಲಿ ಪ್ರತಿನಿಧಿತಗೊಂಡಿದೆ. ಮಾತಂಗಿ ಮತ್ತು ವೆಂಕಟರಮಣಯ್ಯ ಪಾತ್ರವನ್ನು ಕೇಂದ್ರೀಕರಿಸಿಕೊಂಡಿದೆ. ಹೆಂಡತಿ ತೀರಿದ ನಂತರ ಆತನ ಮನಸ್ಸು ವೈರಾಗ್ಯ ಹೊಂದಿತ್ತು. ದಿನಕಳೆದಂತೆಲ್ಲ ಶಾರೀರಿಕ ಕಾಮನೆಗಳ ಕಡೆ ಗಮನ ಹರಿಸಿತು. ಹಾಗೆಯೇ ಆತನು ಅರ್ಚಕನಾದ ಕಾರಣ ಪಾವಿತ್ರತೆಯನ್ನು ಮತ್ತು ನೈತಿಕತೆ ಕಾಯ್ದುಕೊಳ್ಳುವುದು ಅನಿವಾರ್ಯವಾಗಿತ್ತು ಅಲ್ಲದೆ ತನ್ನ ಅರ್ಚಕ ಪರಂಪರೆಯನ್ನು ಉಳಿಸಿಕೊಂಡು ಬಂದಿರುವ ಘನತೆ ಮತ್ತು ಗೌರವವನ್ನು ಕಾಪಾಡಿಕೊಳ್ಳುವುದು. ಹಾಗೂ ದೈಹಿಕ ಕಾಮನೆಗಳನ್ನು ತೀರಿಸಿಕೊಳ್ಳುವುದು. ಇವುಗಳ ಸಮಾನತೆ ಕಾಯ್ದುಕೊಳ್ಳುವುದು ವೆಂಕಟೇಶನಿಗೆ ಅನಿವಾರ್ಯವಾಗಿತ್ತು. ಈ ತೆರನಾದ ದೈಹಿಕ ಕಾಮನೆಗಳನ್ನು ತೀರಿಸಿಕೊಳ್ಳಲು ಪರ್ಯಾಯ ವ್ಯವಸ್ಥೆಯು ಪೂರ್ವಕಾಲದಿಂದಲೂ ನಡೆದು ಬಂದಿತು. ಕೆಳವರ್ಗದಲ್ಲಿ ದೇವದಾಸಿ ಎಂದು ದೇವರ ಹೆಸರಿನಲ್ಲಿ ಬಿಡುವ ಪದ್ಧತಿ ಸಮಾಜ ಸಾಮಾನ್ಯ ಸಂಗತಿಯಾಗಿತ್ತು. ಈ ರೀತಿಯ ವ್ಯವಸ್ಥೆ ಹೆಣ್ಣನ್ನು ಬಳಸಿಕೊಳ್ಳುವ ತಂತ್ರವನ್ನು ಸೃಷ್ಟಿಸಿದರು. ಇಲ್ಲಿನ ಮಾತಂಗಿ ಪಾತ್ರ ದೇವತೆಯ ಆರಾಧಕಿ ಸ್ವರೂಪ, ದೈವತ್ವ ಸಾಂಕೇತಿಕ ನೆಪ, ಪುರುಷರಿಗೆ ದೈಹಿಕ ಕಾಮನೆಗಳನ್ನು ತೀರಿಸಿಕೊಳ್ಳುವ ಸರಳವಾದ ಮಾರ್ಗವಾಗಿತ್ತು. ಇಂಥ ನೂರಾರು ಮಹಿಳೆಯರು ಈ ರೀತಿಯ ವ್ಯವಸ್ಥೆಗೆ ಬಲಿಯಾಗುತ್ತಿದ್ದರು. ಅದಕ್ಕೆ ಧಾರ್ಮಿಕ ಕಾರಣಗಳನ್ನು ಕೊಡುವುದರ ಮೂಲಕ ಸಾಮಾಜಿಕವಾಗಿ ಮನ್ನಣೆ ಪಡೆದುಕೊಂಡಿತ್ತು.

**ನಿಯೋಗ**

ಭೈರಪ್ಪನವರ ಪರ್ವ ಕಾದಂಬರಿಯಿಂದ ಆಯ್ಕೆ ಮಾಡಿಕೊಂಡು 'ನಿಯೋಗ' ಎಂಬ ಕಾದಂ-ಕಥನವನ್ನು ಹಾವನೂರ ಅವರು ಸಾಹಿತ್ಯ ಲೋಕಕ್ಕೆ ಪರಿಚಯಿಸಿದರು. ಗಂಡನಲ್ಲದವನಿಂದ ಗರ್ಭ ಧರಿಸಿ ಮಗುವಿಗೆ ಜನ್ಮ ನೀಡಿದರೆ ಅದನ್ನ ನಿಯೋಗ ಎಂದು ಕರೆಯುತ್ತಾರೆ. ಪ್ರಾಚೀನ ಕಾಲದ ಭಾರತದ ರಾಜಮನೆತನಗಳ ಪರಂಪರೆಯ ಚರಿತ್ರೆ ಹಿನ್ನೆಲೆಯನ್ನು ಚರ್ಚಿಸಿದ್ದಾರೆ. ಕುಂತಿ, ಮಾದ್ರಿ ಮಕ್ಕಳ ಹುಟ್ಟಿನ ಹಿನ್ನೆಲೆಯನ್ನು ಗಮನಿಸಿದ್ದಾರೆ ಹಾವನೂರ ಅವರು. ಈ ನಾಡಿನ ಸಾಮಾಜಿಕ ಪದ್ಧತಿ ವಂಶದ ತಂದೆಯ ಆಸ್ತಿಯ ಪಾಲು ಹಂಚುವುದು ವಾಡಿಕೆ. ಆದರೆ ಕೌರವರ ಮತ್ತು ಪಾಂಡವರ ಆಸ್ತಿಯನ್ನು ಹಂಚಿಕೆ ಮಾಡಲು ಹೊರಟ ಕಾಳಗ ಪ್ರಸ್ತಾಪಗೊಂಡಿದೆ. ನಮ್ಮ ವಂಶದ ಕರುಳಿನ ಸಂಬಂಧವಿಲ್ಲ ಮೇಲೆ ಆಸ್ತಿಯ ಪಾಲು ಹಂಚುವ ಕುರಿತು ಪ್ರಶ್ನೆ ಹುಟ್ಟಿಕೊಳ್ಳುತ್ತದೆ. ಕುಂತಿ ಮತ್ತು ಮಾದ್ರಿ ಜನ್ಮ ನೀಡಿದ ಹಿನ್ನೆಲೆಗೆ ಸಂಬಂಧಿಸಿದ ವಾದ ವಿವಾದಗಳು ಅನಾವರಣಗೊಂಡಿದೆ. ಈ ಕಾದಂ-ಕಥನದಲ್ಲಿ ಹಾವನೂರ ಅವರು ತುಂಬ ವೈವಿಧ್ಯಮಯವಾದ ವಿಷಯಗಳನ್ನು ಆರಿಸಿದ್ದಾರೆ. ಮಹಿಳೆಯನ್ನು ಕೇಂದ್ರಿಕರಿಸಿಕೊಂಡು ಅವಳ ಕೌಟುಂಬಿಕ ಸಂಬಂಧ ಒಂದು ಕುಟುಂಬದಿಂದ ಇನ್ನೊಂದು ಸಂಬಂಧ, ವರ್ಗಗೊಂಡಿದ್ದನ್ನು ಗಮನಿಸಿದ್ದಾರೆ. ಹಾಗೆಯೇ ಮೊಟಕುಗೊಂಡ ವಿದ್ಯಾಭ್ಯಾಸವನ್ನು ಮುಂದುವರಿಸಲು ಬಂದ ಮಹಿಳೆ ಅದನ್ನು ಪೂರ್ಣಗೊಳಿಸಲಾಗದ ದೃಶ್ಯವಿದೆ. ಎರಡನೇ ಕಾದಂ-ಕಥನ ಮಗುವಿನ ಶಿಕ್ಷಣ ಕೊಡುವ

ತಂದೆ ತಾಯಿ ಮತ್ತು ತಾತನ ಪಾತ್ರ ಮಹತ್ವ ಪಡೆದುಕೊಂಡ ರೀತಿ, ತಾತನ ಸಂಪಾದನೆ ಮಾಡಿದ ಹಣ ಬಳಕೆಯಾಗದೆ ಬೆಂಕಿಗೆ ಆಹುತಿಯಾದಂತೆ ಮತ್ತು ಹಣವು ಬೆಂಕಿಗೆ ಆಹುತಿಯಾತಿತು. ಮೂರನೆಯ ಕಾದಂ-ಕಥನ ಶೈಕ್ಷಣಿಕ ಮತ್ತು ಹಾಸ್ಟೆಲ್ ಪರಿಸರದಲ್ಲಿ ಹಿರಿಯ ವಿದ್ಯಾರ್ಥಿಗಳು ಕಿರಿಯ ವಿದ್ಯಾರ್ಥಿಗಳಿಗೆ ರ್‍ಯಾಂಗಿಂಗ್ ಮಾಡುವ ಸ್ವರೂಪವಿದ್ದು, ಅವರ ಮೇಲೆ ಕಾನೂನಿನ ಕ್ರಮ ಜರುಗಿಸಿದ ಚಿತ್ರಣವಿದೆ. ಅದಕ್ಕೆ ಮಾತಂಗಿ ಕೆಳ ಸಮುದಾಯದವಳಾಗಿದ್ದು ದೈವತ್ವ ಲೇಪನ ಹಚ್ಚುವ ಮೂಲಕ ಮಹಿಳೆ ಬದಕನ್ನ ಬಲಿಕೊಡುವ ತಂತ್ರಗಾರಿಕೆಯ ಚಿತ್ರಣವಿದೆ. ನಿಯೋಗ ಕಾದಂ-ಕಥನದಿಂದ ಜನ್ಮ ಪಡೆದ ವಂಶದಿಂದ ಆಸ್ತಿಗೆ ಹಕ್ಕುದಾರ ಎನ್ನುವುದು ಸಾಮಾನ್ಯ, ಆದರೆ ವಂಶದಲ್ಲಿ ಜನ್ಮ ಪಡೆಯದೆ ಆಸ್ತಿ ಪಡೆಯುವುದು ವಿರುದ್ಧವಾದ ಕೌರವ ಮತ್ತು ಪಾಂಡವರ ಹೊರಟ ಚಿತ್ರಣವನ್ನು ಕಾಣಬಹುದು.

### ೭.೧. ಬಿಡಿ ಲೇಖನಗಳು

**'ಸಂಚು ಒಂದು ಪ್ರವೇಶ'**

ಗತಕಾಲದ ಆಚರಣೆಗಳ ಸ್ವರೂಪ ಇತಿಹಾಸದಲ್ಲಿ ಮರೆಯಾದಾಗ ಸತ್ಯದ ವಸ್ತು ಸ್ಥಿತಿ ಪರಿಚಯಿಸುವ ಘಟನೆ ಕಂಡ ವ್ಯಕ್ತಿ ಹೇಳಲೇಬೇಕಾಗುತ್ತದೆ. ಅಂತಹ ಕೆಲವು ನಿದರ್ಶನಗಳನ್ನು ಇಲ್ಲಿ ಕಾಣಬಹುದು. 'ಹಸುವಿನ ಹಾಲು ಸುಡುವುದಕ್ಕಲ್ಲ' ಪ್ರತಿನಿತ್ಯ ಬಳಸುವುದಕ್ಕೆ ಈ ರೀತಿಯಾಗಿ ಮೌಢ್ಯತೆಯಿಂದ ಆಚರಣೆಗಳ ಸಾಮಾಜಿಕ ಅಸ್ತಿತ್ವವನ್ನು ಪಡೆದುಕೊಳ್ಳುತ್ತವೆ. ಹೀಗಾಗಿ ವೈಚಾರಿಕತೆ ಮತ್ತು ವೈಜ್ಞಾನಿಕತೆ ದೃಷ್ಟಿಕೋನ ಬೆಳೆಸಬೇಕು. ವೈಚಾರಿಕ ದೃಷ್ಟಿ ಕೋನದಿಂದ ಇವರೆಡರ ವ್ಯತ್ಯಾಸವನ್ನು ಕಾಣಬಹುದು. ಕಾವ್ಯವನ್ನು ಕುರಿತು ಟೀಕೆ ಮಾಡಿದ ಕವಿಗಳನ್ನು ರಾಜ್ಯದಿಂದ ಹೊರ ಹಾಕಬೇಕೆಂದು ಪ್ಲೇಟೋ ಹೇಳಿದನು. ಶ್ರೀನಿವಾಸ ಹಾವನೂರ ಮತ್ತು ಕೃಷ್ಣರವರು 'ದೇವರು ಮತ್ತು ಮನುಷ್ಯ' ಕುರಿತ ಚರ್ಚೆಯಲ್ಲಿ (ಕಾರ್ಯಸ್ಥಾನಿ) ಕೃಷ್ಣ ಒಂದು ಕಾಲದ ವ್ಯಕ್ತಿ: ಮತ್ತೊಂದು ಕಾಲಕ್ಕೆ ದೈವೀಸಂಭೂತನಂತೆ ಪ್ರತಿನಿಧಿಸುತ್ತಾರೆ. ಕಾರ್ಯಸ್ಥಾನಿಯಾದ ಕೃಷ್ಣ ವ್ಯವಸ್ಥೆಯನ್ನು ತನ್ನ ಇಚ್ಛೆಯಂತೆ ಬಳಸಿ ಪಾಂಡವರ ವಿರುದ್ಧ ಕೌರವರು ಕಾರ್ಯನಿರ್ವಹಿಸುವಂತೆ ಮಾಡುವುದನ್ನು ಚರ್ಚಿಸಲಾಗಿದೆ.

ಧ್ರುಪದನ ಮತ್ತು ದ್ರೋಣರಲ್ಲಿ ಬಾಲ್ಯ ಸ್ನೇಹದ ಸಂಬಂಧ, ಸಲಿಗೆ ಇತ್ತು. ಧ್ರುಪದನ ಅಧಿಕಾರ, ಅಹಂಮಿಕೆ ಕಂಡುಬರುತ್ತದೆ. ಸ್ನೇಹ ಸಂಬಂಧದಲ್ಲಿ ಪ್ರಾಮುಖ್ಯತೆ ಕಾಣುವುದಿಲ್ಲ. ದ್ರೋಣರು ಅಶ್ವತ್ಥಾಮ ಹತನಾದನೆಂದು ಕೇಳಿದ ಕ್ಷಣ ನಿಶಕ್ತನಾದನು. ಮಗನು ಹತನಾದದ್ದು ಕೇಳಿ ಆತ್ಮಸ್ಥೈರ್ಯವನ್ನು ಕಳೆದುಕೊಂಡನು. ಯುದ್ಧದ ನಾಯಕತ್ವದಲ್ಲಿ ಇದ್ದವರಿಗೆ ಮಾತ್ರ ಇತಿಹಾಸದಲ್ಲಿ ಸ್ಥಾನ. ಹೋರಾಟ ಮಾಡಿದವರು ಆತಂಕ ಅನುಭವಿಸಿ ಜನಪ್ರಿಯತೆಗೆ ಭಾಜನರಾಗುವರು. ರಾಜ್ಯದ ಆಳ್ವಿಕೆ ಮಾಡಬೇಕಾದ ಶ್ರೀರಾಮ ವನವಾಸಕ್ಕೆ ಹೋಗುವ ಸಂದರ್ಭ ಎದುರಾದರೆ ಲಕ್ಷ್ಮಣ ರಾಜ್ಯದ ಚುಕ್ಕಾಣಿ ಹಿಡಿಯಬಹುದಿತ್ತು. ಆದರೆ ತನ್ನ ಸಹೋದರನ ದಾರಿಯನ್ನು ಅನುಸರಿಸಿದನು; ಹಾಗೆಯೇ ಭರತನು ತಿರಸ್ಕರಿಸಿದನು.

ನಂತರ ಉಳಿದವನು ಶತ್ರುಘ್ನ ಆದರೆ ಯಾರು ಆತನನ್ನ ಕೇಳಲಿಲ್ಲವೇ? ಅದರ ವಸ್ತುಸ್ಥಿತಿಯನ್ನು ಅರಿಯುತ್ತ ಹೋದರೆ, ಸತ್ಯ ಮತ್ತು ಧರ್ಮವನ್ನು ಪಾಂಡರ ಪರವಾಗಿ ನಿಂತರೆ ಆಸತ್ಯ, ಆಧರ್ಮ; ಕೌರವರ ಪರ ನಿಲ್ಲುತ್ತದೆ. ಆದರೆ ಅಭಿಮನ್ಯು ಚಿಕ್ಕ ವಯಸ್ಸಿನಲ್ಲಿಯೇ ಯುದ್ಧರಂಗದಲ್ಲಿ ಹೋರಾಟ ಮಾಡುವುದರೊಂದಿಗೆ ವೀರಮರಣ ಹೊಂದಿದನು. ಚರಿತ್ರೆಯಲ್ಲಿ ವೀರತ್ವದ ಹೋರಾಟಕ್ಕೆ ನಿದರ್ಶನವಾದನು.

ಹಾವನೂರ ಮಹಾಭಾರತದ ಕೆಲವು ಸಂಗತಿಗಳನ್ನು ಚರ್ಚೆಗೆತ್ತಿಕೊಂಡಿದ್ದಾರೆ. ಇತಿಹಾಸ ಕಥನ ಕಾವ್ಯಕ್ಕಿಂತ ರಾಜಕೀಯ ಕಥನ ಕಾವ್ಯವೆನ್ನುವುದು ಬಹಳ ಸೂಕ್ತ. ರಾಜಕೀಯ ತಂತ್ರ ಪ್ರತಿತಂತ್ರಗಳು, ವಂಚನೆ, ಸುಳ್ಳುಗಾರಿಕೆ, ಕೊಲೆ-ಸುಲಿಗೆ ಮೊದಲಾದ ಅನ್ಯಾಯಗಳು ಪ್ರಸ್ತಾಪಗೊಂಡಿದೆ. ಆದರೆ ಈ ಎಲ್ಲಾ ತಂತ್ರಗಳು ಗೌಣವಾಗಿ ಪವಾಡಗಳು ಸ್ವರೂಪ ನಿರೂಪಿತಗೊಂಡಿದೆ. ಕುಂತಿಗೆ ದೇವತೆಗಳಿಂದ ಸಂತಾನವಾದಂತೆ ದ್ರೌಪದಿಗೆ ಸಿಕ್ಕ ಪ್ರತಿಫಲ ಪರಿಣಾಮ ದೃಶ್ಯಗಳು ರಾಜಕೀಯ ವಿದ್ಯಮಾನದ ನೈಜತೆ ತಿಳಿದುಕೊಳ್ಳುವ ಕುತೂಹಲ. ಯುದ್ಧ ಮೂಲಕ ಅಧಿಕಾರ ಲಾಲಸೆ ಪರಿಚಿತಗೊಂಡಿದೆ. ಅಧಿಕಾರದಲ್ಲಿರುವ ವ್ಯಕ್ತಿ ಭೋಗ ಬದುಕಿನಲ್ಲಿ ತೇಲಾಡುವ ಚಿತ್ರಣ ಇಲ್ಲಿ ಎಲ್ಲ ಕಾಲಕ್ಕೂ ಧರ್ಮ, ನ್ಯಾಯ, ಆತ್ಮಸಾಕ್ಷಿ ಈ ಪರಿಕಲ್ಪನೆಗೆ ಹುಟ್ಟು ಪಡೆದುಕೊಂಡವು. ಸಾಮಾಜಿಕವಾಗಿ ಸಾಮರಸ್ಯಕ್ಕಾಗಿ ಹೊರತು, ಸಂಘರ್ಷಕ್ಕಲ್ಲ. ಮಹಾಭಾರತದ ಕಥನ ಲೌಕಿಕ-ಅಲೌಕಿಕ ಅಧಿಕಾರ ಕುರಿತು ಸಂಬಂಧಗಳನ್ನು ವಿಶ್ಲೇಷಿಸಿ ಮನುಷ್ಯ ಸಂಬಂಧ ಚರಿತ್ರೆಯ ಒಳಹೊಕ್ಕಿದೆ. ಹೀಗಾಗಿ ಮುಂದಿನ ಚರಿತ್ರೆಯ ರೂಪದಲ್ಲಿ ಆದರ್ಶ, ಸಂಘರ್ಷ ಸಾಮರಸ್ಯ ಇತ್ಯಾದಿ ಅನಾವರಣಗೊಂಡಿದೆ.

**ಕನ್ನಡ ಸಾಹಿತ್ಯ ಚರಿತ್ರೆಯ ಅವಸ್ಥಾಭೇದಗಳು : ಒಂದು ಸಮನ್ವಯ'**

ಕನ್ನಡ ಸಾಹಿತ್ಯ ವಿಕಾಸದ ಸಮೀಕ್ಷೆ ಮತ್ತು ಸಂಪುಟವನ್ನು ಕಿಟೆಲ್ ನಂತರ ಅನೇಕ ವಿದ್ವಾಂಸರು ಸಾಹಿತ್ಯ ಚರಿತ್ರೆ ಚರ್ಚೆಗೆ ಒಳಪಡಿಸಿದ್ದಾರೆ. ಮತ ತತ್ವ ಪ್ರೇರಣೆ, ಕವಿ ಪ್ರಭಾವ, ಭಾಷೆ, ಸಾಹಿತ್ಯ ಈ ರೀತಿಯ ಅಂಶಗಳನ್ನು ಅನೇಕ ವಿದ್ವಾಂಸರು ಬೇಧವನ್ನು ಕಲ್ಪಿಸಿದರು. ಈ ಕನ್ನಡ ಸಾಹಿತ್ಯ ಸುದೀರ್ಘ ಪರಂಪರೆ ಇದೆ. ರಚನಾಕ್ರಮ ಮತ್ತು ಭಾಷೆಯ ದೃಷ್ಟಿಯಿಂದ ಅವಸ್ಥಾಭೇದಗಳನ್ನು ಗುರುತಿಸಿ, ಹಳೆಗನ್ನಡ, ನಡುಗನ್ನಡ, ಹೊಸಗನ್ನಡ ಎಂದು ಗುರುತಿಸಿ ೧೦ನೇ ಶತಮಾನದ ಹಳೆಗನ್ನಡ ೧೨ನೇ ಶತಮಾನದ ನಡುಗನ್ನಡ ೧೯ನೇ ಶತಮಾನದ ಮಧ್ಯಕಾಲದ ಹೊಸಗನ್ನಡ ಹೀಗೆ ಕಾಲಘಟ್ಟವನ್ನು ವಿಭಾಗಿಸುವ ಕಾರ್ಯ ಮಾಡಿದರು.

ಒಂದು ಯುಗದ ಅವಧಿ ಇನ್ನೊಂದು ಯುಗದ ಮೇಲೆ ಪ್ರಭಾವ ಬೀರುತ್ತದೆ. ಜೈನಯುಗ, ವೀರಶೈವಯುಗ, ಬ್ರಾಹ್ಮಣಯುಗಗಳ ಬೆಳವಣಿಗೆ ಅವಸ್ಥಾನ ಕಾಲದ ನಿಯಮ ಈ ಕಾರಣಗಳಿಂದ ಸಾಹಿತ್ಯ ಅನ್ವಯಿಸುತ್ತದೆ. ಈ ಮೂರು ಕಾಲಘಟ್ಟಗಳಲ್ಲಿ ಭಾಷೆ ಮತ್ತು

ಗುಣ ಧರ್ಮಗಳನ್ನು ಮುಖ್ಯವಾಗಿರಿಸಿಕೊಂಡು, ಹಳೆಗನ್ನಡ ಭಾಷೆ ದೃಷ್ಟಿಯಿಂದ ಪ್ರೌಢಮೆ ಇರುತ್ತದೆ. ನಂತರ ಅದನ್ನು ಸರಳಗೊಳಿಸಲು ಸಾಹಿತ್ಯ ದೃಷ್ಟಿಯಿಂದಲೂ ಚಂಪೂ ಕಾವ್ಯಗಳು ಬಾಣನ ಗದ್ಯ ಪದ್ಯ ರಚನೆ ಮತ್ತು ಅಕ್ಷರ ವೃತ್ತಗಳು ಕಂಡು ಬರುತ್ತವೆ. ಹಳೆಗನ್ನಡ ದೃಷ್ಟಿಯಿಂದ ವಸ್ತು ರಚನೆ, ದೃಷ್ಟಿಯಿಂದ ನಡುಗನ್ನಡ ವಿನ್ಯಾಸ ಕೆಲಸ ನಡೆಯುತ್ತದೆ. ವಚನ, ರಗಳೆ, ಸಾಂಗತ್ಯ ಹಾಡು ಜನ ಸಾಮಾನ್ಯ ದೃಷ್ಟಿಯಿಂದ ಇಟ್ಟುಕೊಂಡು ಸಾಹಿತ್ಯ ರಚನೆಯ ರೂಪ ತಾಳಿತು.

ಹೊಸಗನ್ನಡದಲ್ಲಿ ಗದ್ಯಕ್ಕೆ ಪ್ರಾಶಸ್ತ್ಯ ಕಂದ, ವೃತ್ತ, ಷಟ್ಪದಿ, ಸಾಂಗತ್ಯ ಗೌಣವಾಗಿ, ಸಾಹಿತ್ಯ ಮಹತ್ವಕ್ಕಿಂತ ಧಾರ್ಮಿಕತೆ ಲೌಕಿಕ ವಿಷಯಗಳಿಗೆ ಹೆಚ್ಚು ಗಮನ ಹರಿಸಿದರು. ಸಾಹಿತ್ಯ ಸ್ವರೂಪ, ಕಥೆ ಪ್ರಬಂಧ ಇತ್ಯಾದಿ ಹೊಸ ಪ್ರಕಾರಗಳು ಬೆಳಕಿಗೆ ಬಂದವು. ಹಾಗೆಯೇ ಹಳೆಗನ್ನಡ, ನಡುಗನ್ನಡ ಆಯಾ ಕಾಲಘಟ್ಟದಲ್ಲಿ ತಮ್ಮದೇಯಾದ ವೈಶಿಷ್ಟ್ಯ ಮೆರೆದಿದೆ. ಆದಿ–ಮಧ್ಯ–ಅಂತ್ಯ ಹೀಗೆ ವಿಭಾಗಿಸಿಕೊಂಡ ಸಾಹಿತ್ಯ ಸ್ವರೂಪ ಕಾಣಬಹುದು.

ಆರಂಭ ಕಾಲದಲ್ಲಿ ಗ್ರಂಥಸ್ಥದ ಸ್ವರೂಪ ಅನ್ಯಭಾಷೆಯಾದ ಸಂಸ್ಕೃತ ಪ್ರಾಕೃತ ಪ್ರಭಾವದಿಂದ ಕನ್ನಡ ಭಾಷೆ ಸಾಹಿತ್ಯ ಭಾಷೆಗಳ ಸ್ವರೂಪ ಬದಲಾಯಿತು. ಭಾರತದ ಎಲ್ಲಾ ಪ್ರಾದೇಶಿಕ ಭಾಷೆಗಳ ಸಂಸ್ಕೃತ–ಪಾಲಿ ಭಾಷೆ ಪ್ರಭಾವ ಬೀರಿದೆ. ಹೀಗಾಗಿ ಜೈನರು ಸಂಸ್ಕೃತ ಮತ್ತು ಪಾಲಿ ಭಾಷೆಗಳನ್ನು ತಿಳಿದಿದ್ದ ಕಾರಣದಿಂದ ಇವರು ಭಾಷೆಯನ್ನು ಸಾಮಾನ್ಯ ಜನ ಸಮುದಾಯಕ್ಕೆ ತಲುಪುವ ದೃಷ್ಟಿಯಿಂದ ಕನ್ನಡ ಕೃತಿಗಳ ರಚನೆಗೆ ಮುಂದಾದರು. ಆ ಕಾಲದ ಪೂರ್ವ ಘಟ್ಟಗಳಲ್ಲಿ ಭಾಷೆಯಿಂದ ಗಮನಿಸಿದರೆ, ದೀರ್ಘೀಕರಣ ಬಳಕೆಯಾಗಿದೆ. ಶಾಸನ ಭಾಷೆಯು ಅಚ್ಚಕನ್ನಡ ಕಂಡುಬರುತ್ತದೆ. ಕಾವ್ಯ ಟೀಕಾಕಾರದ ದುರ್ವಿನೀತ, ಜೈನ ವ್ಯಾಖ್ಯಾನಕಾರ ತುಂಬಲಾಚಾರ್ಯ, ಕಾಳಿದಾಸ, ಕುಮಾರ ಸಂಭವ, ಅನುವಾದಿಸಿದ ಮತ್ತು ಕೇಶಿರಾಜನ ಲಕ್ಷಣ ಪದ್ಯಗಳನ್ನು ಒದಗಿಸಿದ ಆಸಗ ಹಾಗೂ ಮಾಳವೀಮಾದವ ಕರ್ತೃ ಕನ್ನಮಯ್ಯ.

'ಹಳೆಗನ್ನಡ ಮಧ್ಯಕಾಲ' ಕಾವ್ಯದ ವೈಶಿಷ್ಟ್ಯ ಪ್ರೌಢವೂ, ಜಿಗಿಯಾದ ಬಂಧವೂ, ರಾಜಕೀಯ ಸ್ಥಿತಿ ಉತ್ತಮವಾಗಿತ್ತು. ದಕ್ಷಿಣಕ್ಕೆ ಗಂಗರು, ಉತ್ತರಕ್ಕೆ ಕಲ್ಯಾಣಿ ಚಾಲುಕ್ಯರು ಮತ್ತು ಕಲಚೂರಿಗಳು ಸಮರ್ಪಕವಾದ ಆಡಳಿತ ನೀಡಿದರು. ಕನ್ನಡ ಸಾಹಿತ್ಯ ಶ್ರೇಷ್ಠ ಯುಗವಾಗಿತ್ತು. ಆ ಕಾಲದ ಲೌಕಿಕ ಕಾವ್ಯಗಳಲ್ಲಿ ಚಂಪೂ ಸಾಹಿತ್ಯ ರೂಪ ತನ್ನ ಅಸ್ತಿತ್ವವನ್ನು ಮುಂದುವರಿಸಿಕೊಂಡಿತು. ಲೌಕಿಕ/ಚಂಪೂ ಸಾಹಿತ್ಯ ರೂಪ ಅಸ್ತಿತ್ವವನ್ನು ಮುಂದುವರಿಸಿಕೊಂಡಿತು. ಲೌಕಿಕ ಮತ್ತು ಧಾರ್ಮಿಕ ಸ್ವರೂಪ ೧ನೇ ಗುಣವರ್ಮನು ಕಾರಣೀಭೂತನಾದನು. ನಂತರ ವಚನ ಸಾಹಿತ್ಯ ಉತ್ತುಂಗ ಶಿಖರವನ್ನು ಏರಿತು. ಅಂದರೆ ಚಂಪೂಕಾವ್ಯದ ರಚನೆ ಮರೆಯಾಗಲಿಲ್ಲ. ಆದರೆ ಬದಲಿಸಿದರೂ ಸ್ಥಿರತೆಯನ್ನು ಕಾಯ್ದುಕೊಂಡಿತು.

ಹಳೆಗನ್ನಡ ಅಂತ್ಯಕಾಲ ನಡುಗನ್ನಡ ಸಾಹಿತ್ಯ ಪ್ರಭಾವ ಮರೆಯಾಯಿತು. ಹಳೆಗನ್ನಡ ಸ್ವರೂಪ ಗೌಣವಾಗಲು ಕಾರಣವಾಯಿತು. ೧೬ನೇ ಶತಮಾನದ ಹೊತ್ತಿಗೆ, ಹಳೆಗನ್ನಡ ಅಸ್ತಿತ್ವ ಕಳೆದುಕೊಂಡಿತು. ಷಡಕ್ಷರಿಯು ಮುಂದುವರಿದ ನಂತರ ಚಿಕ್ಕದೇವರಾಯ ನಡುಗನ್ನಡಕ್ಕೆ ಒಲಿದರು. ಆದರೆ ತಿರುಮಲಾರ್ಯ ಮತ್ತು ಚಿಕ್ಕುಪಾಧ್ಯಾಯ ಸ್ವಲ್ಪ ಮಟ್ಟಿಗೆ ಹಳೆಗನ್ನಡ ಕಡೆಗೆ ಮುಖ ಮಾಡಿದರು. ಹಾಗೆಯೇ ೧೯ನೇ ಶತಮಾನದ ಹೊತ್ತಿಗೆ ಮುದ್ದಣ ಇದರ ಮುಂದುವರಿದ ಭಾಗವಾಗಿ ಮೈಸೂರು ಆಸ್ಥಾನದ ಕವಿ ಬಸವಪ್ಪಶಾಸ್ತ್ರಿ ಮತ್ತು ಅಯ್ಯಶಾಸ್ತ್ರಿ ಚಂಪೂ ಕಾವ್ಯ ರಚಿಸಿದರು.

'ನಡುಗನ್ನಡ' ಈ ಯುಗದ ಮಹತ್ವದ ವಿಷಯ ಪ್ರಮುಖವಾಗಿ ಇಟ್ಟುಕೊಂಡಿದ್ದರು. ವೀರಶೈವ ವಚನಗಾರರು ನಡುಗನ್ನಡ ಆದ್ಯ ಪ್ರವರ್ತಕರು, (ಹರಿಹರ ಮತ್ತು ರಾಘವಾಂಕರನ್ನು ಹೊರತುಪಡಿಸಿ) ನಡುಗನ್ನಡ ಕಾವ್ಯ ಸ್ವರೂಪ ಕುರಿತು ಇನ್ನೊಂದು ಪ್ರಕಾರವನ್ನು ನೆಲೆಗೊಳಿಸಿದರು. ಷಟ್ಪದಿ ಪ್ರಕಾರವನ್ನು ನೆಲೆಗೊಳಿಸಿದರು. ಹಳೆಗನ್ನಡ ಮಧ್ಯಕಾಲದಲ್ಲಿ ಜೈನರು ಪ್ರಾಬಲ್ಯ ಮೆರೆದಂತೆ ನಡುಗನ್ನಡದಲ್ಲಿ ವೀರಶೈವ ಪ್ರಮುಖರು ಮೆರೆದರು. ನಡುಗನ್ನಡ ಮಧ್ಯಕಾಲದಲ್ಲಿ ವಿಜಯನಗರ ರಾಜ್ಯಸ್ಥಾಪನೆ ನಂತರ ಸಾಹಿತ್ಯ ಸೇವೆ ಮಾಡಿದರು. ಷಟ್ಪದಿ ಸಾಂಗತ್ಯ ಮತ್ತು ಹಾಡುಗಳು ಚಾಲ್ತಿಗೆ ಬಂದವು. ಪ್ರೌಢದೇವರಾಯನ ಆಳ್ವಿಕೆಯಲ್ಲಿ ನೂರೊಂದು ವಿರಕ್ತರ ಪ್ರಚಾರಕರಾದರು. ಚಾಮರಸ, ನಿಜಗುಣ, ಶಿವಯೋಗಿ, ವಿರೂಪಾಕ್ಷಿ ಪಂಡಿತರು ಪ್ರಮುಖರಾಗಿದ್ದರು.

ಜೈನರು ಸಾಹಿತ್ಯ ರಚನೆಯನ್ನು ಭಾಷೆಯನ್ನು ಸರಳೀಕರಣಗೊಳಿಸಿದರು. ಹಾಗೆಯೇ ನಡುಗನ್ನಡ ಕಲ್ಯಾಣ ಕೀರ್ತಿ, ರಾಮಾಯಣ ಸಾಂಗತ್ಯದಲ್ಲಿ ಕೃತಿ ರಚನೆ ಮಾಡಿದರು. ಹಾಗೆಯೇ ತೀರ್ಥಂಕರ ಚರಿತ್ರೆಗೆ ಚಂಪೂ ಮಾರ್ಗವೇ ಇರಬೇಕು ಎಂದರೆ ಮಂಗರಸ, ನೇಮಿನಾಥ ಕಥೆಯನ್ನು ಸಾಂಗತ್ಯದಲ್ಲಿ, ಹಾಗೆಯೇ ಭರತೇಶ ವೈಭವವೂ ಸಾಂಗತ್ಯಕ್ಕೆ ಬದಲಾಗಿ ಷಟ್ಪದಿಯಲ್ಲಿ ತಂದರು. ಅದರ ಮುಂದುವರಿದ ಭಾಗವಾಗಿ ಬ್ರಾಹ್ಮಣ ಸಾಹಿತ್ಯ. ಬ್ರಾಹ್ಮಣ ಪಂಡಿತ ಕವಿಗಳು ಕೂಡ ಭಾಷೆಯನ್ನು ಜನಮುಖಿಯಾಗುವಂತೆ ಕಾವ್ಯಗಳನ್ನು ರಚಿಸಿದರು. ಸಾಹಿತ್ಯ ಜನಮುಖಿಯಾಗಲು ದಾಸರಾದ ಪುರಂದದಾಸರು, ಕನಕದಾಸರು, ಶ್ರೀವಾದಿರಾಜರು ಜನರ ಜೀವನಾಡಿಯಾದರು.

**'ನಡುಗನ್ನಡ ಅಂತ್ಯಕಾಲ' (೧೬೦೦–೧೯೦೦)**

ವಿಜಯನಗರದ ಅವಸಾನದ ಹೊತ್ತಿಗೆ ಕನ್ನಡ ಸಂಸ್ಕೃತಿಗೆ ಧಕ್ಕೆ ಬಂತು. ಹಾಗೆಯೇ ಸಾಹಿತ್ಯ ಮೇಲೆ ಪ್ರಭಾವ ಬೀರಿತು. ನಂತರ ಮೈಸೂರು ಅರಸ ಚಿಕ್ಕದೇವರಾಯ ಮತ್ತು ಮುಮ್ಮಡಿ ಕೃಷ್ಣರಾಯರ ಆಳ್ವಿಕೆಯಲ್ಲಿ ಸಾಹಿತ್ಯ ರಚನೆಗೆ ಪ್ರೇರಣೆ ಸಿಕ್ಕಿತು. ಹೀಗಾಗಿ ನಡುಗನ್ನಡ ಕಾವ್ಯ ನಿರ್ಮಿತಿಗೆ ಕಾರಣರಾದವರು. ಬಹಳ ವಿರಳ ಸಂಖ್ಯೆಯಲ್ಲಿ ಇದ್ದರು.

ಸರ್ವಜ್ಞನು ತ್ರಿಪದಿಯ ಮೂಲಕ ಪ್ರಗತಿ ಕಂಡರೆ, ಅಲ್ಲದೆ ವೀರಶೈವರಲ್ಲಿ ನಿಜಗುಣ ಶಿವಯೋಗಿ ಹಾಡಿನ ಸ್ವರೂಪದ ಭಕ್ತಿ ಪದಗಳನ್ನು ಹಾಡಿದರು. ಷಡಕ್ಷರಿ ಸರ್ಪಭೂಷಣ ಶಿವಯೋಗಿ ಮುಂತಾದ ಬ್ರಾಹ್ಮಣರಲ್ಲಿ ಕಾವ್ಯ ಮತ್ತು ಕೀರ್ತನೆಗಳ ರಚನೆಯಲ್ಲಿ ತೊಡಗಿದರು. ಈ ಅವಧಿಯಲ್ಲಿ ಕವಯತ್ರಿಯರಾದ ಸಂಚಿ ಹೊನ್ನಮ್ಮ ಹೆಳವನಕಟ್ಟಿ ಗಿರಿಯಮ್ಮ, ಹರಪನಹಳ್ಳಿ ಭೀಮವ್ವ ಮುಂತಾದವರು ಕಂಡುಬರುತ್ತಾರೆ. ಕನ್ನಡ ಮೊದಲ ನಾಟಕ 'ಮಿತ್ರ ಗೋವಿಂದ'ವು ಅದೇ ಕಾಲದ್ದು ಹಳೆಗನ್ನಡ ಯುಗ, ಉದಯಕಾಲ, ಮಧ್ಯಕಾಲ, ಅಂತ್ಯಕಾಲ, ಅಯಾ ಕಾಲಘಟ್ಟಗಳಲ್ಲಿ ರಾಜ್ಯದ ಉದ್ದಗಲಕ್ಕೂ ಮತಗಳು, ಭಾಷೆ ಶೈಲಿ ಪ್ರಸಿದ್ಧ ಕವಿ ಮತ್ತು ಕೃತಿಗಳು ನಡುಗನ್ನಡ, ಹೊಸಗನ್ನಡ ಇತ್ಯಾದಿಗಳು ಕಂಡುಬರುವುದನ್ನು ಶ್ರೀನಿವಾಸ ಹಾವನೂರ ಅವರು ವಿವರಿಸಿದ್ದಾರೆ.

**'ಸಮಯ ಪ್ರಜ್ಞೆ ಮತ್ತು ಚಾಕಲೇಟ್'**

'ಚೆಕ್' ಎನ್ನುವ ಪರಿಭಾಷೆಯನ್ನು ಬಳಸಿಕೊಂಡಿರುವುದು ತುಂಬ ಔಚಿತ್ಯ ಪೂರ್ಣವಾಗಿದೆ. 'ಚೆಕ್' ಬಂದಾಗ 'ಹಣ' ಎನ್ನುವ ಶಬ್ದ ಅರ್ಥ ಸ್ಫುಟಸುತ್ತದೆ. 'ಸಮಯ' ಎನ್ನುವ ಸಮಾನ ಅರ್ಥ ಕೊಡುವಷ್ಟು ಮಹತ್ವ ಪಡೆದುಕೊಂಡಿದೆ. 'ಸಮಯ ಅಥವಾ ಕಾಲ' ಎನ್ನುವುದು ಎಲ್ಲಾ ಕಾಲಕ್ಕೂ ಮೌಲ್ಯಯುತವಾದದ್ದು. ವ್ಯಕ್ತಿಗತವಾಗಿ ಬೆಳಕು, ಪ್ರಯೋಜನ, ಶ್ರೇಯಸ್ಸು ಸಿಗುವುದಾದರೆ ಅವರು ಸಮಯಕ್ಕೆ ಕೊಟ್ಟಿರುವ ಮಹತ್ವ ತಿಳಿಯುತ್ತದೆ. 'ಬೆಂಜಮಿನೆ ಪ್ರಾಂಕ್ಲಿನ್' ಈ ರೀತಿ ಹೇಳಿದ್ದಾರೆ. "Time is money, ಹಾಗೆಯೇ Times is more then money" ಈ ರೀತಿಯಾಗಿ ಸಮರ್ಥಿಸಿಕೊಂಡಿರುವುದನ್ನು ಅವಲೋಕಿಸಲಾಗಿದೆ.

ಹಾವನೂರ ಅವರು 'ಸಮಯಕ್ಕೆ ಎಷ್ಟು ಮಹತ್ವ ಕೊಡುತ್ತಾರೆ ಎಂಬುದು ಇಲ್ಲಿ ಪ್ರಸ್ತುತಗೊಂಡಿದೆ. ಸಭೆ, ಸಮಿತಿ, ಮಿಟಿಂಗ್, ಸಿಂಡಿಕೇಟ್ ಮಿಟಿಂಗ್, ಉಪಸಮಿತಿ – ಇಂಥ ಸಂದರ್ಭಗಳಲ್ಲಿ ಅಜೆಂಡ ಇರುತ್ತದೆ. ಅದಕ್ಕೆ ಸಂಬಂಧಿಸಿದ ಚರ್ಚೆಯಾಗಬೇಕು. ಪ್ರಾರಂಭದಲ್ಲಿ ಪ್ರಮುಖ ವಿಷಯ ಚರ್ಚೆಗೆ, ಸಮಯಕ್ಕೆ ಪ್ರಾಮುಖ್ಯತೆಯನ್ನು ಕೊಡಬೇಕು. ಅದನ್ನು ಬಿಟ್ಟು ಅನಗತ್ಯ ಸಂಗತಿ ಚರ್ಚೆ ಮಾಡುವುದು ಎಷ್ಟು ಸರಿ. ಹೀಗಾಗಿ ಸಮಯ ವ್ಯಯ ಮಾಡುವುದು. ಸಮಯ ಮತ್ತು ಔಚಿತ್ಯವನ್ನು ಅರಿತು ಮಾತನಾಡುವುದು. ಸಮಯ ಪರಿಪಾಲನೆ ಕಾಣುವ, ಎರಡು ವ್ಯಕ್ತಿಗಳ ನಿದರ್ಶನಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯ ಕುಲಪತಿಗಳಾದ ಡಿ.ಎಂ.ನಂಜುಂಡಪ್ಪ ಮತ್ತು ಶ್ರೀ ವೀರೇಂದ್ರ ಹೆಗ್ಗಡೆಯವರು ಅಧ್ಯಕ್ಷರಾಗಿದ್ದರು. ಹಾವನೂರ ಅವರು ಸಿಂಡಿಕೇಟ್ ಸದಸ್ಯರಾಗಿದ್ದರು. ಔಚಿತ್ಯತೆ ಅರಿತು ಮಾತನಾಡುತ್ತಿದ್ದರು. ಅಲ್ಲದೆ ವೀರೇಂದ್ರ ಹೆಗ್ಗಡೆಯವರು ಅವರ ಜೊತೆಗೆ ಮಿಲ್ಕ್ ಚಾಕಲೇಟ್ ಇಟ್ಟುಕೊಂಡು ಬರುತ್ತಿದ್ದರು ಎಂಬುದನ್ನು ಹಾವನೂರ ಅವರು ಉಲ್ಲೇಖಿಸಿದ್ದಾರೆ.

**'ಮಂಗಳೂರು ಬೋಟನ್ ಆಟೋಗ್ರಫಿ ಕೃತಿಯ ಮುದ್ರಣ'**

ಶ್ರೀನಿವಾಸ ಹಾವನೂರ ಅವರು 'ಭಾರತೀಯ ಮತ್ತು ಮಂಗಳೂರು' ವಲಯ 'ಸಸ್ಯ ಮತ್ತು ಎಲೆ' ಕುರಿತು ಜೊತೆ ಸೇರಿ ಸ್ವಿಸ್ ದೇಶದ ಮಿಶನರಿ ಮುದ್ರಿಸಿ ತೆಗೆದ ಚಿತ್ರವನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿದರು. ರೇ.ಜೆ.ಹುಗ್ಗಿಕರ್ ಬಾಸೆಲ್ ಇವಾಂಜೆಲಿಕಲ್ ಮಿಶನಿಗೆ ಸೇರಿಕೊಂಡು, ಮಂಗಳೂರಿನಲ್ಲಿ ಕಾರ್ಯ ನಿರ್ವಹಿಸುವ ಅವಧಿಯಲ್ಲಿ ಸಸ್ಯ ಮತ್ತು ಎಲೆಗಳ ಚಿತ್ರವನ್ನು ತೆಗೆದರು. ಆಧುನಿಕ ಮುದ್ರಣ ತಾಂತ್ರಿಕತೆಯ ಬಗ್ಗೆ ಭಾರತೀಯರಿಗೆ ಎಷ್ಟೇ ಜ್ಞಾನವಿದ್ದರೂ, ಅದರ ಮುದ್ರಣಕ್ಕೆ ಉಪಯೋಗಿಸಿ ಅವುಗಳ ನೈಜ ವರ್ಣದಲ್ಲಿ ತೆಗೆದಿದ್ದು, ತಿಳಿದುಕೊಳ್ಳುವುದು ಕಷ್ಟ ಈ ತಾಂತ್ರಿಕತೆ ಕುರಿತು ಉಲ್ಲೇಖಗೊಂಡಿದೆ. "ತಂತ್ರದಲ್ಲಿ ಸಸ್ಯದ ಏಳೆಂಟು ಮಾದರಿ ಅರಿಯಬೇಕು. ಒಂದು ಮಾದರಿಯನ್ನು ಅದರ ನೈಜವರ್ಣ ಛಾಯವನ್ನು ತೈಲವರ್ಣದಿಂದ ಬಳಸಬೇಕು. ಒಂದು ಫಲಕದ ಮೇಲೆ ಪುನಃ ಪ್ರತಿ ಮಾಡಬೇಕು. ಕಾಗದ ಮೇಲೆ ಮುದ್ರಿಸಬೇಕು. ಕ್ರಮದಲ್ಲಿ ಮುದ್ರಣವನ್ನು ಒಂದು ಮಾದರಿ ಇಲ್ಲವೆ ಎರಡು ಪ್ರತಿಗಳನ್ನು ಮಾತ್ರ ತೆಗೆಯುವುದು ಸಾಧ್ಯವಿತ್ತು. ಅವರು ಸಸ್ಯ ಮಾದರಿಗಳನ್ನು ಉಪಯೋಗಿಸಿ ಈ ಕ್ರಮವನ್ನು ಪುನರಾವರ್ತಿಸುತ್ತಿದ್ದರು."[೬] ಭಾರತಕ್ಕೆ ಬಂದ ಯುರೋಪಿಯನ್ನರು ಭಾರತೀಯ ಸಸ್ಯಶಾಸ್ತ್ರದಲ್ಲಿ ಆಸಕ್ತಿ ಇರುವ ಹಲವರು ವಿಷಯಗಳನ್ನು ಮಂಡಿಸಿದ್ದರು. ರೋಕ್ಸ್ ಬರ್ಗನ್ "ಪೊರ ಇಂಡಿಯಾ ಡ್ರರಿಯ" ಇಂಡಿಯ ಉಪಯುಕ್ತ ಸಸ್ಯಗಳು ಕ್ಲಾಗೂರ್ನನ್ ದಕ್ಷಿಣ ಇಂಡಿಯಾ ಅರಣ್ಯಗಳು ಮತ್ತು ಉದ್ಯಾನವನಗಳು ಈ ರೀತಿಯ ಮಹತ್ವದ ಪುಸ್ತಕಗಳ ಬೆ.ಹುನ್ನಿಕರ ಮುದ್ರಣ ಯಂತ್ರದ ಮೂಲಕ ಉಪಯುಕ್ತ ಪುಸ್ತಕಗಳು ಭಾರತೀಯರಿಗೆ ಪ್ರೇರಣೆ ನೀಡಿದವು. ನೈಜ ರೂಪ ಹಾಗೂ ಸಹಜ ವರ್ಣಗಳು ಪರಿಚಯಿಸುವ ಉದ್ದೇಶ ಅವರಾದಗಿತ್ತು. ೧೯ನೇ ಶತಮಾನದ ಮಧ್ಯ ಕಾಲದ ಹೊತ್ತಿಗೆ ಮುದ್ರಣ ತಾಂತ್ರಿಕತೆಯನ್ನು ಪರಿಚಯಿಸಿರಬೇಕು. ಮಂಗಳೂರು ಬಾಸೆಲ್ ಇವಾಂಜೆಲಿಕಲ್ ಮಿಶನಿನವರು ೧೮೪೨ರಲ್ಲಿ ಮುದ್ರಣವನ್ನು ಸ್ಥಾಪಿಸಿದರು. ಹಿಂದೂಸ್ತಾನದ ಮಾಲಿಕಾ ನಿದರ್ಶನಗಳು ಮಂಗಳೂರು ಬೋಟನ್ ಆಟೋಗ್ರಾಫಿ ಅಥವಾ ದಕ್ಷಿಣ ಭಾರತೀಯ ಸಸ್ಯಗಳು ಪ್ರಕೃತಿ ಸ್ವ ಮುದ್ರಣ ಕನ್ನಡ ಪುಸ್ತಕಗಳಿದ್ದವು (ಎರಡು ದೊಡ್ಡ ಗಾತ್ರದ ಸಂಪುಟಗಳಿದ್ದವು.)

ಈ ಸಸ್ಯಗಳು ಮುಖ್ಯವಾಗಿ ಮಂಗಳೂರು ವಲಯದ ಪಶ್ಚಿಮ ಕರಾವಳಿ ಉದಕಮಂಡಲದಿಂದ ಪಡೆಯಲಾಯಿತು. ಎರಡು ಸಂಪುಗಳಿಂದ ೪೪೦ ಸಸ್ಯ ಜಾತಿಗಳು ಎಲೆಗಳು ೪೭೪ ವರ್ಣಚಿತ್ರಗಳಿವೆ. (ಸಸ್ಯ ಶಾಸ್ತ್ರೀಯ ಹೆಸರುಗಳನ್ನು ಕೊಡಲಾಗಿದೆ) ೧೨ ಮುದ್ರಣಾಲಗಳು ಮುದ್ರಣ ಮತ್ತು ಪ್ರಕಾಶನ ಕ್ಷೇತ್ರದಲ್ಲಿ ವಿಲಿಯಂ ಕ್ಯಾರಿ ಹೆಸರು ಮಾತ್ರ ಕೇಳಿಬರುತ್ತದೆ. ಭಾರತೀಯ ಮತ್ತು ಯುರೋಪಿನ ಭಾಷೆಗಳಲ್ಲಿ ಬಾಸೆಲ್ ಮಿಶನರಿನವರು ಪುಸ್ತಕ ಪ್ರಕಟಿಸಿದರು. ಈ ಮುದ್ರಣವು ದಕ್ಷಿಣ ಭಾರತದಲ್ಲಿಯೇ ದೊಡ್ಡದಾಗಿತ್ತು. ಇದಕ್ಕೆ

ಭಾರತದಲ್ಲಿ ಸಮಾನವಾದ ಮುದ್ರಣವಿರಲಿಲ್ಲ. ಆದರೆ ಮದ್ರಾಸ್ ಸರ್ಕಾರವು ೧೮೭೫ರಲ್ಲಿ ಆಡಳಿತ ಕೈಪಿಡಿಯಲ್ಲಿ ದಾಖಲು ಮಾಡಿದೆ. ಹಾವನೂರ ಅವರು ಯುರೋಪಿನ್ನರು ಮಾಡಿದ ಕಾರ್ಯವನ್ನು ಕುರಿತು ಹೇಳುವುದರ ಜೊತೆಗೆ ಭಾರತ ಪ್ರಕೃತಿ ಮತ್ತು ಸಸ್ಯಗಳು ಮುದ್ರಣದ ಪಾತ್ರವನ್ನು ಕುರಿತಾದ ತಂತ್ರಜ್ಞಾನ ಅರಿಯುವಂತೆ ಮಾಡಿದರು.

**"ಶ್ರೀ ಅಕ್ಷೋಭ – ವಿದ್ಯಾರಣ ವಾಕ್ಯರ್ಥ ನಿಜವೆ"**

ಶ್ರೀ ಅಕೋಭ್ಯ ತೀರ್ಥರು ಮತ್ತು ವಿದ್ಯಾರಣ್ಯರ ನಡುವೆ ಆದ ವೈಚಾರಿಕತೆ ಕುರಿತು ಭಿನ್ನ ಚರ್ಚೆ ನಿರೂಪಿತಗೊಂಡಿದೆ. 'ತತ್ವಮಸಿ' ಸೂತ್ರದ ವೇದಾಂತ ದೇಶಿಕರು – ಸಮ್ಮುಖದಲ್ಲಿ – ವಾದ ಪ್ರತಿವಾದವು ದೃಶ್ಯ ಪ್ರಸ್ತುತ ಲೇಖನದಲ್ಲಿ ಅನಾವರಣಗೊಂಡಿದೆ. ಈ ವಾಕ್ಯರ್ಥಕ್ಕೆ ಸಂಬಂಧಿಸಿದ ಆಕರಗಳು ಸಮಕಾಲೀನ ವಿವರಗಳು ಸಿಕ್ಕಿವೆ. ಆದರೆ ಮಧ್ವರು ಅದ್ವೈತಿಗಳು ರಚಿಸಿದ ಹಾಗೂ ವೇದಾಂತ ದೇಶಿಕರು ಚರಿತ್ರೆಯ ಗ್ರಂಥಗಳಲ್ಲಿ ಅದರ ಪ್ರಸ್ತಾಪ ಕಾಣಬಹುದು. ಈ ೨೦ನೇ ಶತಮಾನದಲ್ಲಿ ಧಾರ್ಮಿಕ ಪ್ರವೃತ್ತಿಗೆ ಅವರವರ ಇಚ್ಛೆಗೆ ಅನುಸಾರವಾಗಿ ಉಲ್ಲೇಖಗೊಂಡಿದೆ. ಈ ಕಾರಣದಿಂದ ಸಂಭವನೀಯ ಪುರಾವೆಗಳಾಗಿ ಕಾಣುತ್ತವೆ.

ವಾಕ್ಯಾರ್ಥವನ್ನು ಮಂಡಿಸುವ ಮೂವರು ಸಮಕಾಲಿನರೇ. ವೇದಾಂತ ದೇಶಿಕರು ತ್ರಯಸ್ಥರಾಗಿಯ ಬಂದುದೇಕೆ ಈ ವಾಕ್ಯಾರ್ಥಕ್ಕೆ ಪುರಾವೇ ಎಷ್ಟರಮಟ್ಟಿಗೆ ನ್ಯಾಯ ಒದಗಿಸಿತು. ಈ ರೀತಿಯ ಪ್ರಮುಖ ಸಂಗತಿ ಮಧ್ವಾಚಾರ್ಯರ ನಾಲ್ವರು ಶಿಷ್ಯರಲ್ಲಿ ಕೊನೆಯವರು. ಮಧ್ವರು ಬದರಿಕಾಶ್ರಮಕ್ಕೆ ಮೂರು ಶಿಷ್ಯರು ಪೀಠಸ್ಥರಾಗಿ ಹೋಗಿದ್ದರು. ವೇದಾಂತ ದೇಶಿಕರು ಯಾವುದರ ಬಗ್ಗೆ ಗೊಂದಲವಿಲ್ಲ. ಕಾಲ ಖಚಿತ ಇದೆ. ನೂರಕ್ಕಿಂತ ಹೆಚ್ಚು ವರ್ಷದ ಬಾಳಿದವರು ಶ್ರೀ ವಿದ್ಯಾರಣ್ಯರು. ೮೪ನೇ ವಯಸ್ಸಿನಲ್ಲಿ ಪೀಠೋಪರಣ ಮಾಡಿದ್ದ. ಅಲ್ಲದೆ ವಿದ್ಯಾತೀರ್ಥರ ಸನ್ಯಾಸ ದೀಕ್ಷೆ ಪಡೆದರು. ವಿಜಯನಗರ ರಾಜ್ಯ ಸ್ಥಾಪನೆಯಲ್ಲಿ ಅವರ ಪಾತ್ರ ಹಿರಿದು. ಕ್ರಿ.ಶ. ೧೩೩೫–೩೬ ಕಾಲಘಟ್ಟದಲ್ಲಿ ಕಾಶಿಯಲ್ಲಿದ್ದಾಗ ವಿಜಯನಗರ ರಾಜರ ಬುಕ್ಕರಿಂದ ಆಹ್ವಾನ ಬಂದಿದ್ದ ಕಾರಣಕ್ಕಾಗಿ ವಿದ್ಯಾರಣ್ಯರ ಪಾತ್ರ ಬಹಳ ಪ್ರಾಮುಖ್ಯತೆಯನ್ನು ವಹಿಸುತ್ತದೆ.

ಈ ಮೂವರು ಸಮವಯಸ್ಕರೆನ್ನುವುದರ ಬಗ್ಗೆ ಖಚಿತವಾದ ಜನನ–ಮರಣ, ವಿವರಗಳು ಸ್ಪಷ್ಟತೆ ಕಾಣಬಹುದು. ವಿದ್ಯಾರಣ್ಯರು ಈರ್ವರಿಗಿಂತಲೂ ೨೫ ವರ್ಷ ಹಿರಿಯರೆನ್ನುವುದು ಪರಿಚಿತಗೊಳ್ಳುತ್ತದೆ. ವೇದಾಂತ ದೇಶಿಕರು (೧೨೬೮–೧೩೬೯) ಅಕ್ಷೋಭ್ಯ ತೀರ್ಥರು (೧೨೭೦–೧೩೦೦) ಇಬ್ಬರು ಸಮವಯಸ್ಕರು ವಿದ್ಯಾರಣ್ಯರು ೧೨೯೬–೧೩೮೫ ಅವರ ಕಾರ್ಯಸ್ಥಾನವನ್ನು ಗಮನಿಸಿಕೊಂಡು ಶ್ರೀರಂಗಮ್/ಸತ್ಯಮಂಗಲ, ಆನೆಗೊಂದಿ, ಮುಳಬಾಗಿಲು, ಹಂಪಿ, ಶೃಂಗೇರಿ ಇತ್ಯಾದಿ ಒಬ್ಬರನೊಬ್ಬರು ಸಂಪರ್ಕಿಸಲು ಅನುಕೂಲವಿತ್ತು. ಮತ್ತೊಂದು ಮಹತ್ವದ ಅಂಶವೆಂದರೆ ದಕ್ಷಿಣ ಭಾರತ ಕ್ರಿ.ಶ. ೧೩೨೭ರಲ್ಲಿ

ಮುಸ್ಲಿಮ್ ದಾಳಿ ದಬ್ಬಾಳಿಕೆಗೆ ಜನಸಾಮಾನ್ಯರ ರೋಸಿಹೋಗಿದ್ದರು. ಆ ಕಾಲದ ಧಾರ್ಮಿಕ ಪ್ರತಿನಿಧಿತ್ವವನ್ನು ವಹಿಸಿಕೊಂಡು ವಿದ್ಯಾರಣ್ಯರು ಹಾಗೂ ವೀರ ಕಂಪಣರಿಂದ ವಿಜಯನಗರ ಸ್ಥಾಪನೆಯಾಯಿತು. ಧಾರ್ಮಿಕವಾಗಿ ಅಸ್ತಿತ್ವವನ್ನು ಕಂಡುಕೊಂಡರು. ಅದರ ಜೊತೆಗೆ ರಾಮಾನುಜಾಚಾರ್ಯರ ಸಿದ್ಧಾಂತಗಳ ಸಂದರ್ಭ ಸಿಕ್ಕಾಗಲೆಲ್ಲ ಚೆನ್ನಾಗಿ ಬಳಸಿಕೊಂಡರು. ಅದೇ ಅವಧಿಯಲ್ಲಿ ತಲೆ ಎತ್ತಿದ್ದರು. ಮಧ್ವರಿಗೆ ಅನುಯಾಯಿಗಳ ಸಂಖ್ಯೆ ಬಹಳ ವಿರಳವಾಗಿತ್ತು. ಈ ಸಂದರ್ಭದಲ್ಲಿ ವಾದಿಸಿಯೋ ಗ್ರಂಥ ವಿನಿಮಯ ಮಾಡಿ ಅವರ ಸಿದ್ಧಾಂತಗಳನ್ನು ಜನಪ್ರಿಯಗೊಳಿಸಿದರು. ಈ ದ್ವೈತಿಗಳು ಪ್ರಬಲವಾದ ಪಂಥವನ್ನು ಎದುರಿಸಬೇಕಾಗಿತ್ತು.

ಹಾವನೂರ ಅವರು ಈ ರೀತಿ ಹೇಳುತ್ತಾರೆ. ತಾತ್ವಿಕವಾಗಿ ಹೇಳುವುದಾದರೆ 'ತತ್ವಮಸಿ' ಎಂಬ ಪ್ರೇಮ ಮಾತನ್ನು ಮೂರು ಮತದವರು ತಮ್ಮದೇಯಾದ ದಾಟಿಯಲ್ಲಿ ಹೇಳಬಹುದಿತ್ತು. ಈ ವಾಕ್ಯಾರ್ಥ ಶಂಕರಾಚಾರ್ಯರ 'ಮಂಡನ ಮಿಶ್ರರವಾದದಂತೆ' ಇಲ್ಲದೆ ಮಧ್ವಾಚಾರ್ಯ ಶೋಭನ ಭಟ್ಟರೊಡನೆ ಏಳೆಂಟು ಚರ್ಚೆಗಳಾಗಿರಲಿಲ್ಲ. ಆದರೆ ವಿಶಿಷ್ಟಾದ್ವೈತ ಮತದವರು ಸಿದ್ಧಾಂತ ಮಂಡಿಸಲು ಈ ತರಹದ ವೇದಿಕೆಗಳಲ್ಲಿ ಚರ್ಚಿಸುತ್ತಿದ್ದರು. ಈ ತರಹ ಚರ್ಚೆಗಳೂ ಮಧ್ವ ಮತದವರಿಗೆ ಅನಿವಾರ್ಯ ಎನ್ನುವ ಅಭಿಪ್ರಾಯ ಹಾವನೂರ ಅವರದು.

ಈ ರೀತಿಯ ಚರ್ಚೆಯಿಂದ ಲಾಭ-ನಷ್ಟಗಳ ಪ್ರಮಾಣ ಕಾಣುತ್ತದೆ. ಮುಳಬಾಗಿಲಿನ ಜಯಸ್ತಂಭ ಇದಕ್ಕೆ ಪುರಾವೆ ಎನ್ನುವುದು ಸೂಕ್ತ. ಅಲ್ಲದೆ ಶಿಲಾಸ್ತಂಭ ಅಥವಾ ಶಾಸನಗಳಿಗೆ ಶಕ ವರ್ಷ ಇರುತ್ತದೆ. ಇಲ್ಲಿಯ ಪುರಾವೆ ಎಷ್ಟು ಯೋಗ್ಯ ಎನ್ನುವುದು ಹಾವನೂರ ಅವರ ಅಭಿಮತ. ಇನ್ನೊಂದು ಮಾತನ್ನು ಸ್ಪಷ್ಟಪಡಿಸಬಹುದು. ಪೂರ್ವಿಕರಿಗೆ ಇತಿಹಾಸ ಪ್ರಜ್ಞೆ ಇರಲಿಲ್ಲವೆಂದಲ್ಲ. ಕಾಲ, ವರ್ಷ ಕುರಿತು ದಾಖಲಿಸಬೇಕು ಎನ್ನುವ ಪ್ರಜ್ಞೆ ಇರಲಿಲ್ಲ. ನಂತರದ ಕಾಲದಲ್ಲಿ ಸ್ವಮತದ ಪಕ್ಷಪಾತ ಆಗಿರುತ್ತದೆ ಎಂಬುದು ಮೇಲ್ನೋಟಕ್ಕೆ ಕಂಡು ಬಂದರೂ. ದ್ವೈತರ ಮತ್ತು ಅದ್ವೈತರ ಹೇಳಿಕೆ ಗಣನೆಗೆ ಮಾಡದಿರುವುದು ಸತ್ಯ ಮತ್ತು ನಿಷ್ಠೆ. ಪಕ್ಷಪಾತ್ರ ಇಲ್ಲವೆಂದಲ್ಲ. ಸ್ಪಷ್ಟವಾಗಿ ಗುರುತಿಸುವುದು ಕಷ್ಟಸಾಧ್ಯ. ಪರಕಾಲ ೩ನೇ ಪೀಠಸ್ಥರು ರಚಿಸಿದ 'ಮುಪ್ಪಾಯಿರಪ್ಪ ಗುರು ಪರಂಪರ ಪ್ರಭಾವ ಎಂಬ ತಮಿಳು ಕೃತಿ ಉಲ್ಲೇಖಗೊಂಡಿದೆ.

ವೇದಾಂತ ದೇಶಿಕರ ಮಹಿಮೆ ಕುರಿತು ಕೃತಿಯಲ್ಲಿ ಬರುತ್ತದೆ. ಅಲ್ಲಿ ವಾಕ್ಯಾರ್ಥದ ಪ್ರಸಂಗ ಬಂದಿದೆ. ವಿಜಯನಗರ ತತ್ವವಾದಿಗಳಾದ ಅಕ್ಷೋಭ್ಯ ಮುನಿಗಳಿಗೂ, ವಿದ್ಯಾರಣ್ಯರಿಗೂ ವೇದಾಂತರಿಗೂ ವಾದ ನಡೆಯುತ್ತದೆ. ಈರ್ವರ ಅಭಿಪ್ರಾಯ ರಾಜರು ಕಳುಹಿಕೊಡುತ್ತಿದ್ದರು. ಅಕ್ಷೋಭ್ಯ ತೀರ್ಥರ ಮತ್ತು ವಿದ್ಯಾರಣ್ಯರ ನಡುವೆ ವಾದ-ಪ್ರತಿವಾದದ ಮಧ್ಯದಲ್ಲಿ ದೇಶಿಕರು ನಿರ್ಣಯದ ಪಾತ್ರವನ್ನು ವಹಿಸುತ್ತಿದ್ದರು.

ಶ್ರೀವೈಷ್ಣವ ವಿದ್ವಾಂಸರಾದ ಕೌಶಿಕ ವೇದಾಂತಚಾರ್ಯರ ಅವರ ಕೃತಿಯಿಂದ 'ಆಚಾರ್ಯ ವಿಜಯ' ಚಂಪೂ ಕಾಲದ ಖಚಿತ ಈ ಕೃತಿಯಲ್ಲಿ ವಾಕ್ಯಾರ್ಥ ಚರ್ಚೆಗೊಂಡಿದೆ. ಅಕ್ಷೋಭ್ಯ ಮುನಿಗಳು ವಿದ್ಯಾರಣ್ಯರೊಡನೆ 'ತತ್ವಮಸಿ' ಎಂಬ ವೇದಾಂತ ಕುರಿತು ವಿಜಯನಗರದ ರಾಜರ ಆಸ್ಥಾನದ ವಾಗ್ಮಿಗಳಿಗೆ ಮುಜುಗರವನ್ನುಂಟುಮಾಡುವ ರೀತಿಯಲ್ಲಿ ವಾದವನ್ನು ಮಂಡಿಸಿದರು. ಈ ನಿರ್ಣಯದ ತೀರ್ಪು ನೀಡಲು ಯಾರನ್ನು ಮಾಡಬೇಕು ಎನ್ನುವ ಗೊಂದಲ. ಆಗ ವೆಂಕಟನಾಥರವರನ್ನು ಸೂಚಿಸಿದರು. ಕೌಶಿಕ ವೇದಾಂತ ದೇಶಿಕರು ಅತಿಯಾಗಿ ವೈಭವೀಕರಿಸಿದರು. 'ಅಸಿನಾ ತತ್ವ ಮಸಿನಾ' ಶ್ಲೋಕವನ್ನು ಅಕ್ಷೋಭ್ಯರು ವಿಜಯ ತರುವಾಯ ಹೇಳಿದರು. ಅದನ್ನು ಮೊದಲಿಗೆ ಹೇಳಿದವರು ಶ್ರೀವೈಷ್ಣವ ಮತದವರೇ ಎಂಬುದು ಮೊದಲ ಪುರಾವೆ ಸಿಕ್ಕಿದ್ದು ತಿಳಿದು ಬರುತ್ತದೆ. ಈ ವಿಷಯ ಕುರಿತು ಶೃಂಗೇರಿ ಮಠದಿಂದ ವಿರೋಧ ಕಾಣಲಿಲ್ಲ. ಅಲ್ಲದೆ ಹಾಗೆ ಮಾಡುವುದಕ್ಕೆ ಪುರಾವೆಗಳಿಲ್ಲ. ವಿದ್ವತ್ ಮುನಿಗಳ ಚರ್ಚೆಯು ಔಚಿತ್ಯಪೂರ್ಣವಾಗಿದೆ. ವಾಕ್ಯಾರ್ಥದದಲ್ಲಿ ತಾತ್ವಿಕತೆ ಇದೆ. ಹಾಗೆಯೇ ಹಾವನೂರ ವಿದ್ವತ್ ಪ್ರತಿನಿಧಿತಗೊಂಡಿದೆ.

ಪ್ರಸಕ್ತ ವಾಕ್ಯಾರ್ಥ ನಡೆದಿದ್ದರೆ ಉದ್ದೇಶ ಶ್ರೀವೇದಾಂಥ ದೇಶಿಕರ ವೇದ-ವೇದಾಂಗ, ಶೃತಿ-ಸ್ಮೃತಿಗಳಲ್ಲಿ ಬಹಳ ಪರಿಣಿತಿ ಪಡೆದವರಾಗಿದ್ದರು. ಶ್ರೀವೈಷ್ಣವ ಪುನರುತ್ಥಾನದ ಆಧಾರ ಸ್ತಂಭವಾಗಿದ್ದರು. ಸ್ವಮತದಲ್ಲಿ ಒಡೆದ ಮನಸ್ಸುಗಳ ಒಂದು ಮಾಡುವಲ್ಲಿ ಬಹಳ ಪ್ರಾಮುಖ್ಯತೆ ಪಡೆದಿದ್ದರು. ಮಧ್ವಾಚಾರ್ಯರು ರಾಮಾನುಚಾರ್ಯರ ಉದ್ದೇಶ ಕುರಿತು, ವೇದಾಂತ ದೇಶಿಕರ ಕೃತಿಯ ಶ್ಲೋಕವನ್ನು ಕುರಿತು, ಶ್ರೀದೇಶಿಕಾ ಸಂಭಾವನ ಗ್ರಂಥದಲ್ಲಿ ಪ್ರಸ್ತಾಪಗೊಂಡಿದೆ. ಅಲ್ಲದೆ ವಿಶಿಷ್ಟಾದ್ವೈತದ ವಿಚಾರ ಕುರಿತು ಅರವತ್ತರಿಂದ ಎಪ್ಪತ್ತು ಕೃತಿಗಳು ಪ್ರಕಟನೆಗೊಂಡಿದೆ. ಅಲ್ಲದೆ ಸ್ತೋತ್ರಗಳ ಮತ್ತು ಕಾವ್ಯಗಳ ರಚನೆಯಲ್ಲಿ ಪರಿಣಿತರು. ಯಾದವಾಭ್ಯುದಯ ಕಾವ್ಯಕ್ಕೆ ಅದ್ವೈತಿಗಳಾದ ಅಪ್ಪಯ್ಯ ದೀಕ್ಷಿತರು ವ್ಯಾಖ್ಯಾನ ಬರೆದಿದ್ದಾರೆ. ಅಂಥವರ ಸಿದ್ಧಾಂತ ವಿಷಯಗಳಲ್ಲೂ ಪರಿಣಿತರು. ವಿದ್ಯಾರಣ್ಯರಿಗೂ ವೇದಾಂತ ದೇಶಿಕರಿಗೂ ಸೈದ್ಧಾಂತಿಕ ಭಿನ್ನಾಭಿಪ್ರಾಯವಿತ್ತು. ಆದರೆ ವೈಯಕ್ತಿಕವಾಗಿ ಎಂದು ಚ್ಯುತಿ ತಂದವರಲ್ಲ.

ವೇದಾಂತ ದೇಶಿಕರ 'ಶತದೂಷಾಣವು' ಕೃತಿ ಬರೆದಾಗ ದೋಷಗಳನ್ನು ಕುರಿತು ಸರಿಪಡಿಸಲು ವಿದ್ಯಾರಣ್ಯರಿಗೂ ಕಳುಹಿಸಿದ್ದರು. ವೇದಾಂತ ದೇಶಿಕರನ್ನು ವಿದ್ಯಾರಣ್ಯರು ವಿಜಯನಗರಕ್ಕೆ ಬರುವಂತೆ ಆಹ್ವಾನಿಸಿದರು. ಆ ಸಂದರ್ಭದಲ್ಲಿ ವೈರಾಗ್ಯ ಪಂಚಕರು ಐದು ಶ್ಲೋಕಗಳನ್ನು ಬರೆದು ಕಳುಹಿಸಿದರು. ಆದರೆ ವಿಜಯನಗರಕ್ಕೆ ಬರಲು ಒಪ್ಪಲಿಲ್ಲ. 'ತತ್ವಮಸಿ' ಬಗ್ಗೆ ವಾಕ್ಯಾರ್ಥ ನಡೆಯಿತು. ಸ್ಪಷ್ಟತೆ ಇಲ್ಲದೇ ಇರುವುದು ಹೇಳಿದ್ದರು ಕಾರಣ? ಯಾವುದಲ್ಲ! ಅದರ ಸ್ಪಷ್ಟ ಉಲ್ಲೇಖವಿಲ್ಲ. ಆದರೆ ಅಕ್ಷೋಭ್ಯತೀರ್ಥರು 'ಮಧ್ವಾವತ' ಮತ ಸಾರಸಂಗ್ರಹ ಈ ಕೃತಿಕತ್ವ ಸ್ಪಷ್ಟ ಉಲ್ಲೇಖವಿಲ್ಲ. ಆದರೆ ದಿನಗಳಲ್ಲಿ ಯಾವುದೇ

ಮಠಗಳಲ್ಲಿ ಅವರು ಲಭ್ಯವಿಲ್ಲ. ವೇದಾಂತ ದೇಶಿಕರಿಗೆ ಅಭಿಪ್ರಾಯ ತಿಳಿಸಲಿಕ್ಕೆ ವಿದ್ಯಾರಣ್ಯರಿಗೆ ಕಳುಹಿಸಿದ್ದರು ಎನ್ನುವ ಉಲ್ಲೇಖವಿದೆ. ಅದನ್ನು ಕುರಿತು ಚರ್ಚೆ ನಡೆದಿಲ್ಲ. ವೇದಾಂತ ದೇಶಿಕರು ನಿರ್ಣಾಯಕರಾಗಿದ್ದರು. ಆದರೆ ಅದ್ವೈತ ತತ್ವದ ವಿರೋಧಿಗಳಾದರೂ ವಿದ್ಯಾರಣ್ಯ ಒಪ್ಪಿದ್ದು ಹೇಗೆ? ಅವರನ್ನು ಉದ್ಧಾರ ಮಾಡಿದ್ದಾರೆ. ಆ ಕಾಲಕ್ಕೆ ಶಂಕರಾಚಾರ್ಯರ ಎದುರಾಳಿಯಾದ ಮಂಡನ ಮಿಶ್ರರ ಪತ್ನಿಯನ್ನು ನಿರ್ಣಾಯಕರನ್ನಾಗಿ ಮಾಡಿದ್ದನ್ನೇ ಸ್ಮರಿಸಬಹುದು.

ಈ ಚರ್ಚೆ ನಡೆದ ಕಾಲಘಟ್ಟ? ಅದಕ್ಕೆ ಎರಡು ಕಾಲಗಳ ಸೂಚನೆ ಕಾಣಬಹುದು. ಕ್ರಿ.ಶ. ೧೩೩೬ (ವಿಜಯನಗರದ ರಾಜ್ಯ ಸ್ಥಾಪನೆಗಿಂತ ಮತ್ತೊಂದು ೧೩೫೬ ವಿದ್ಯಾರಣ್ಯರು ಕಾಶಿಗೆ ಬಂದ ನಂತರ) ಅವಧಿ ಸರಿಯಾದ ವಾದ ಇನ್ನೊಂದು ಕಡೆ ಅದಕ್ಕೆ ಈ ಸಮರ್ಥನೆ ಕಾಣಬಹುದು. ಆ ಅವಧಿಯಲ್ಲಿ ವಿದ್ಯಾರಣ್ಯರ ಕಾರ್ಯವ್ಯಾಪ್ತಿ ಮತ್ತು ವರ್ಚಸ್ಸು ಇರಲಿಲ್ಲ. ಅದೇ ಕಾಲಕ್ಕೆ ವೇದಾಂತ ದೇಶಿಕರು ಮತ್ತು ಅಕ್ಷೋಭ್ಯ ತೀರ್ಥರು ವಯೋವೃದ್ಧರಾಗಿದ್ದರು. ಹೀಗಾಗಿ ಅದು ಸಕಾಲವಲ್ಲವೆನ್ನುವುದು ಪ್ರಸ್ತಾಪಗೊಂಡಿದೆ.

**'ಕಳೆದ ಶತಮಾನದಲ್ಲಿ ಬ್ರಿಟಿಷರಿಂದ ಕರ್ನಾಟಕಕ್ಕೆ ಆದ ಅನ್ಯಾಯ'**

ಈ ನಾಡಿಗೆ ಬಂದ ಬ್ರಿಟಿಷರ ಆಳ್ವಿಕೆ ಕುರಿತ ಚರ್ಚೆಯನ್ನು ಕಾಣಬಹುದು. ಹರಿದು ಹಂಚಿಹೋಗಿದ್ದ ಪ್ರದೇಶವನ್ನು ಆಡಳಿತ ದೃಷ್ಟಿಯಿಂದ ಭೌಗೋಳಿಕವಾಗಿ ಹೊಂದಾಣಿಕೆ ರೀತಿ, ಲಾಭ ಮತ್ತು ಪ್ರಗತಿ ಅಥವಾ ನಷ್ಟ ಮತ್ತು ವಿನಾಶ ಈ ರೀತಿಯ, ಸಂಗತಿಯು ಪ್ರಸ್ತಾಪಗೊಂಡಿದೆ. ವಂಶ ಪರಂಪರೆಯ ಅನುಗುಣವಾಗಿ ಬಂದ ಹಕ್ಕನ್ನು ಕಸಿದುಕೊಂಡ ರೀತಿ, ಭೌಗೋಳಿಕ ಕುರಿತು ಶ್ರೀನಿವಾಸ ಹಾವನೂರ ಅವರು ಚರ್ಚಿಸಿದ್ದಾರೆ.

ಬ್ರಿಟಿಷರು-ಪೇಶ್ವೆಯವರನ್ನು ಕ್ರಿ.ಶ.೧೮೧೮ರಲ್ಲಿ ಪರಾಭವಗೊಳಿಸಿ ಥಾಮಸ್ ಮನ್ರೋ. ದಕ್ಷಿಣ ಭಾಗವನ್ನು ಅಧೀನಕ್ಕೆ ತೆಗೆದುಕೊಂಡನು. ಈ ಭಾಗವನ್ನು ಸದರ್ನ್ ಮರಾಠ ಕಂಟ್ರಿ ಎಂದು ಕರೆಯುತ್ತಿದ್ದರು. ಇದರ ವ್ಯಾಪ್ತಿಗೆ ಧಾರವಾಡ, ಬೆಳಗಾವಿ ಮತ್ತು ವಿಜಾಪುರ ಜಿಲ್ಲೆಗಳನ್ನು ಒಳಗೊಂಡಿದ್ದವು. ನಂತರದಲ್ಲಿ ಅದು 'ಮುಂಬಯಿ ಕರ್ನಾಟಕ'ವಾಯಿತು. ಬ್ರಿಟಿಷರು ಅಧಿಕಾರ ವಹಿಸಿಕೊಂಡ ಪ್ರಾರಂಭದಲ್ಲಿ ಅವರು ದಂಗೆ ಎದ್ದರು. ಅದರಲ್ಲಿ ಮೊದಲಿಗರು ಕಿತ್ತೂರು ನಂತರ ಕಾಲದಲ್ಲಿ ಖಾನಪುರ, ಹಲಗಲಿ, ಬೈಲಹೊಂಗಲ, ಮುಂಡರಗಿಯಲ್ಲಿ ವಿರೋಧವು ನಡೆಯಿತು. ಈ ಪರಿಸ್ಥಿತಿಯನ್ನು ಗಮನಿಸಿದ ಬ್ರಿಟಿಷರು ಭಯಗೊಂಡರು. ಆ ವ್ಯವಸ್ಥೆಯನ್ನು ಸರಿಪಡಿಸಲಿಕ್ಕೆ ಮದ್ರಾಸ್ ಪ್ರಾಂತ್ಯಕ್ಕೆ ಬಳ್ಳಾರಿಯಿಂದ ಸೈನ್ಯದ ತುಕಡಿಗಳನ್ನು ತರಿಸಿದರು. ಬ್ರಿಟಿಷ್ ಅಧಿಕಾರಿಗಳಾದ ಥಾಮಸ್ ಮನ್ರೋ, ವಾಲ್ಟರ್ ಎಲಿಯಟ್ ಮತ್ತು ಚಾಪ್ಲಿನ್ ಇವರು ಕನ್ನಡ ಪ್ರೇಮ ಹೊಂದಿದ್ದರು.

ಚಾಪ್ಲಿನ್ ಆಡಳಿತವನ್ನು ಸರಿಪಡಿಸಲು ಮುಂಬಯಿ ಗರ್ವನರ್ ಎಲ್‌ಫಿನ್‌ಸ್ಟನ್ನನಿಗೆ ಪತ್ರ ಬರೆದಿದ್ದ. ೧. ಗಲಭೆಯನ್ನು ಹತ್ತಿಕ್ಕಲು ಮದ್ರಾಸ್ ಸೈನಿಕರ ತಂಡದ ಸಹಾಯ

ಪಡೆದುಕೊಂಡರು. ೨. ಕನ್ನಡ ಮಾತನಾಡುವ ಮದ್ರಾಸ್ ಪ್ರಾಂತ್ಯದ ಪೂರ್ವಭಾಗದ ಸಂಸ್ಥಾನಿಕರು, ಪೇಶ್ವೆಯರಿಗೆ ಮರಾಠಿಗಾರ ಪ್ರಾಬಲ್ಯ ಆದರೆ ಮುಂಬಯಿ ಪ್ರಾಂತ್ಯದ ಕೌನ್ಸಿಲ್ ಸದಸ್ಯರಲ್ಲಿ ವಾರ್ಡನ್ ಇದನ್ನು ವಿರೋಧಿಸಿದ್ದು, ಗಲಭೆಯ ಸಂದರ್ಭದಲ್ಲಿ ಮುಂಬಯಿ ಮಿಲಿಟರಿ ಸಹಾಯ ಪಡೆಯಲಿಕ್ಕೆ ಹೆಚ್ಚು ಅನುಕೂಲವಾಗುತ್ತದೆ. ಅಲ್ಲಿಯ ವ್ಯಾಪಾರಸ್ಥರು ಮರಾಠಿಯನ್ನು ಮಾತನಾಡುತ್ತಾರೆ. ಸಂಸ್ಥಾನಿಕರು ಇನಾಂದರಾರು ಮರಾಠಿಗರನ್ನು ಈ ಕಾರಣದಿಂದ ಮುಂಬಯಿ ಪ್ರಾಂತ್ಯದಲ್ಲಿನ ಇವರನ್ನು ಬಳಸಿಕೊಳ್ಳಬೇಕು. ಈ ಪತ್ರದಲ್ಲಿ ಸಂಗತಿಯನ್ನು ಅರಿತು ಎಲ್‌ಫಿನ್‌ಸ್ಟನ್ನನಿಗೆ ಸಂಕಟವಾಯಿತು. ನಂತರ ಎಲ್‌ಫಿನ್‌ಸ್ಟನ್ ಮದ್ರಾಸ್ ಗರ್ವನರಿಗೆ ಮರು ಅಭಿಪ್ರಾಯ ಕಳುಹಿಸಿದನು.

೧. ಅಲ್ಲಿ ಕಂಡು ಬರುವ ದಂಗೆ ದಮನ ಮಾಡುವ ರೀತಿ,

೨. ಈ ಪ್ರದೇಶ ಮದ್ರಾಸ್ ಪ್ರಾಂತ್ಯಕ್ಕೆ ಆಡಳಿತ ಅನುಕೂಲ.

೩. ಅವರು ಮಾತನಾಡುವ ಭಾಷೆ ಕೆನರಿಸ್. ಕೌಟುಂಬಿಕ ಮತ್ತು ವ್ಯಾಪಾರಿಗಳ ಸಂಬಂಧ ಬಳ್ಳಾರಿ ಮತ್ತು ಸೋದಾ (ಅಂದರೆ ಉ.ಕ.ಜಿಲ್ಲೆಯ ಘಟ್ಟದ ಮೇಲಿನ ಪ್ರದೇಶ) ಕನ್ನಡಿಗರು ಒಂದೇ ಕಡೆಗೆ ಬರಬೇಕು ಎನ್ನುವ ಕಾರಣ. ಇದು ಏಕೀಕರಣದ ಪೂರ್ವಸ್ವರೂಪ. ಅಂದರೆ ಮದ್ರಾಸ್ ಮಿಲಿಟರಿ ರದ್ದಾಗಿದ್ದು ಸಿವಿಲ್ ಆಡಳಿತ ಮುಂಬಯಿ ಒಳಪಟ್ಟರು. ಈ ರೀತಿಯ ವಿಭಜನೆ ಸಲ್ಲದು. ಈ ಪ್ರದೇಶವನ್ನು ವಿಭಜಿಸದೆ ಒಂದೇ ಪ್ರದೇಶದ ವ್ಯಾಪ್ತಿಗೆ ಬಂದರೆ ಎಲ್ಲಾ ದೃಷ್ಟಿಯಿಂದಲೂ ಪ್ರಗತಿಯಾಗಲು ಸಾಧ್ಯವೆಂದು ಅಭಿಪ್ರಾಯಪಡುತ್ತಾರೆ. ಅಲ್ಲಿ ಕಾಗದ ಪತ್ರ ದಾಖಲೆಗಳನ್ನು ಕಲ್ಕತ್ತಾಗೆ ವರ್ಗಾಯಿಸಿದರು.

ಕೇಂದ್ರ ಕಛೇರಿಯಾದ ಲಂಡನ್ನಿನ ಈಸ್ಟ್ ಇಂಡಿಯಾ ಕಂಪನಿ ಕಳುಹಿಸಿತು. ಅಲ್ಲಿಯ ಅಧಿಕಾರಿಗಳಾದ ಮನ್ರೋನನ್ನು ಹೊರತುಪಡಿಸಿದರೆ ಇನ್ನಾರಿಗೂ ಅದರ ಕಲ್ಪನೆಯಾಗಲಿ ಆಸಕ್ತಿಯಾಗಲಿ ಅದರ ಪ್ರಯೋಜನವಾಗಲಿ ಅವರಿಗೆ ಬೇಕಾಗಿರಲಿಲ್ಲ. ಒಂದು ಭಾಷೆ ಮಾತನಾಡುವರು. (ಕನ್ನಡ) ಒಟ್ಟುಗೂಡಿಸುವ ಕಾರಣ ಈ ರೀತಿಯ ಏಕೀಕರಣದ ಕಲ್ಪನೆ ಯಾವ ಕಾರಣಕ್ಕಾಗಿ ಭಾಷಿಕರು ಏಕೀಕರಣವಾಗಬೇಕು. ಈ ರೀತಿಯ ಚರಿತ್ರೆಯು ಸುರುಳಿ ಬಿಚ್ಚಿಕೊಳ್ಳುತ್ತದೆ. ಕೆನರಾ ಎರಡು ಜಿಲ್ಲೆಗಳು, ಬಳ್ಳಾರಿ, ಕೊಡಗು, ಧಾರವಾಡ, ವಿಜಾಪುರ (೧೮೩೪) ವಿಲೀನವಾಗಿಸಿ ಒಂದೇ ಆಡಳಿತ ವ್ಯಾಪ್ತಿಗೆ ಸೇರಿದ್ದವು. ಈ ಎಲ್ಲಾ ಪ್ರದೇಶವು ಸೇರಿಸಿದರೆ ಮೈಸೂರಿಗೆ ಸಮಾನ ಪ್ರಾಂತ್ಯವಾಗಿತ್ತು. ಆದರೆ ಇದು ಮದ್ರಾಸ್ ಪ್ರಾಂತ್ಯದ ವ್ಯಾಪ್ತಿಗೆ ಬರುತ್ತದೆ. ಮತ್ತೊಂದು ಅಂಶವೆಂದರೆ ನಿಜಾಮನ ಮೂರು ಜಿಲ್ಲೆಗಳು ಹೊರತುಪಡಿಸಿದರೆ ಇವುಗಳ ಕನ್ನಡ ಭಾಷೆಯ ವ್ಯಾಪ್ತಿಗೆ ಬರುತ್ತದೆ.

ಕ್ರಿ.ಶ. ೧೮೪೯ರಲ್ಲಿ ಪ್ರದೇಶವಾರು ಹಸ್ತಾಂತರ ಮಾಡುವ ಸೂಚನೆ ಬಂತು. ಈ ಸಂದರ್ಭದಲ್ಲಿ ಮುಂಬಯಿ ಕನ್ನಡ ಪ್ರದೇಶಗಳು ಮದ್ರಾಸ್‌ಗೆ ಸೇರಿಸಿದವು. ಈ ಮದ್ರಾಸ್ ಭಾಗವನ್ನು ಮುಂಬಯಿಗೆ ಸೇರಿಸುವುದು. ಆ ಕಾಲದ ಗವರ್ನರ್ ಜಾನ್‌ಮೂಲ್ಕಮ್

ನಿಂದ ಹತ್ತಿರವಾಯಿತು. ಆ ಪ್ರದೇಶದ ಅಂದರೆ ಉತ್ತರ ಕನ್ನಡ ಜಿಲ್ಲೆಯ ಘಟ್ಟದ ಕೆಳಗಿನ ಪ್ರದೇಶದ ಸೂಪ ತಾಲ್ಲೂಕಿನಿಂದ ಶಿರ್ಸಿ, ಸಿದ್ಧಾಪುರದವರೆಗೆ, ಕರಾವಳಿ ಮಧ್ಯ ಸಹ್ಯಾದ್ರಿ ಪರ್ವತ ಶ್ರೇಣಿಯವರಿಗೆ ಧಾರವಾಡ, ಬೆಳಗಾವಿ ಈ ಪ್ರದೇಶವಾರು ಕೋರ್ಟು ಕಛೇರಿಗೆ ಮಂಗಳೂರಿಗೆ ಹೋಗಬೇಕಾಗಿತ್ತು. ಧಾರವಾಡವಾದರೆ ಸಮೀಪವಾಗುತ್ತದೆ. ಆಡಳಿತ ವ್ಯವಹಾರಿಕ ದೃಷ್ಟಿಕೋನ ಕ್ರಿ.ಶ. ೧೮೬೨ರಲ್ಲಿ ಉತ್ತರ ಕನ್ನಡ ಜಿಲ್ಲೆಯನ್ನು ಮುಂಬಯಿ ಕರ್ನಾಟಕ ಸೇರಿಸಬೇಕಾದ ಪ್ರಸಂಗ ಬಂತು. ಅವಧಿಯಲ್ಲಿ ಕೆನರ ಉತ್ತರ ಭಾಗವನ್ನು ಮುಂಬಯಿ ಕರ್ನಾಟಕ ಸೇರುವ ಪ್ರಮೇಯವೇ ಇರಲಿಲ್ಲ. ಆ ಸಂದರ್ಭದಲ್ಲಿ ಮದ್ರಾಸ್ ಆಡಳಿತ ವಿರೋಧಿಸಿತ್ತು.

ಹಾವನೂರ ಅವರು ಬ್ರಿಟಿಷ್ ಆಳ್ವಿಕೆಯ ಕಾಲದಲ್ಲಿ ಆಡಳಿತದ ಕಾರ್ಯ ವೈಖರಿವನ್ನು ಆಯಾ ಅವಧಿಯ ವ್ಯತ್ಯಾಸ ಮತ್ತು ಪ್ರಾಂತವಾರು ಸ್ಥಳೀಯ ಹಂತದಲ್ಲಿ ವಿರೋಧಿಸುವ ಹಂತಗಳನ್ನು ಇಲ್ಲಿ ಶ್ರೀನಿವಾಸ ಹಾವನೂರ ಅವರು ನಿರೂಪಿಸಿದ್ದಾರೆ. ಈ ಮಹತ್ವದ ದಾಖಲೆಗಳನ್ನು ಇಲ್ಲಿ ಕಾಣಬಹುದು.

**'ಅಪರಿಚಿತ ಹೈದರ'**

ಕಾಲಗರ್ಭದಲ್ಲಿ ಗರ್ಭೀಕರಿಸಿಕೊಂಡಿರುವ ಪುರಾವೆಗಳು ಪರಿಚಯ ಪಡೆಯುತ್ತ ಹೋದಂತೆ, ಅನೇಕ ಸಂಗತಿಗಳು ಅಯಾ ಕಾಲಘಟ್ಟದಲ್ಲಿ ಎಲೆಮರೆ ಕಾಯಿಯಂತೆ ಆಗಿರುವುದು ನಿರೂಪಿತಗೊಂಡಿದೆ. ರಾಜಕೀಯ ಮತ್ತು ಸಾಮಾಜಿಕವಾಗಿ ತಮ್ಮದೇಯಾದ ಛಾಪು ಮೂಡಿಸಿರುವ ಹೈದರ ಮತ್ತು ಟಿಪ್ಪುವಿನ ಚರಿತ್ರೆಯು ಅಲ್ಲದೆ ಇವರಷ್ಟೆ ಜನಮನ್ನಣೆ ಪಡೆದರು. ಅಶೋಕ ಚಕ್ರವರ್ತಿಯ ಅಕ್ಬರ್, ಕೃಷ್ಣದೇವರಾಯ ಇವರ ಚರಿತ್ರೆಯ ರೂಪದಲ್ಲಿ ಪರಿಚಿತಗೊಂಡಿದೆ. ಅಲ್ಲದೆ ಯುರೋಪಿಯನ್ನರ ಭಾಷೆಗಳಾದ, ಫ್ರೆಂಚ್, ಇಂಗ್ಲಿಷ್, ಜರ್ಮನ್ ಈ ಕೃತಿಗಳಲ್ಲಿ ತಪ್ಪು ಸ್ಪಷ್ಟತೆ ಇಲ್ಲದಿರುವುದು ಕಾಣಬಹುದು.

ಹೈದರ ನೈಜವಾದ ವಿಷಯಗಳಲ್ಲಿ ಕೆಲವು ನಿದರ್ಶನಗಳನ್ನು ಕಾಣಬಹುದು. ಮೊದೆ ಪೊದೆ ಗಡ್ಡ ಬೆಳೆದಿದ್ದ ಚಿತ್ರವಿರುವುದು ಕಾಣುತ್ತದೆ. ಆತನು ವಾರದಲ್ಲಿ ಎರಡು ದಿನ ಕ್ಷೌರ ಮಾಡಿಸಿಕೊಳ್ಳುತ್ತಿದ್ದನು. ಹಾಗೆಯೇ ಯುರೋಪಿಯನ್ನರ ಕೆಲವು ಭಾಷೆಗಳಲ್ಲಿ ರಚಿತಗೊಂಡಿದ್ದವು. ಟಿಪ್ಪು ಸುಲ್ತಾನ್ ೧೭೯೯ರ ಹತನಾದದ್ದು, ವಸ್ತುಸ್ಥಿತಿಯಾಗಿದ್ದರೆ, ಆದರ ಇನ್ನೊಂದು ಕೃತಿಯಲ್ಲಿ ಮರಣದ ವರ್ಷ ೧೭೯೭ ಎಂದು ಉಲ್ಲೇಖಗೊಂಡಿದೆ. ಹೈದರ್ ಕುರಿತು ಪ್ರಥಮ ಫ್ರೆಂಚ್ ಭಾಷೆಯಲ್ಲಿ ಕೃತಿ 'ABREGESDE HISTOIRED HYDER ALI' ಇಲ್ಲಿ ಲಭ್ಯವಿಲ್ಲ. ಆದರೆ, ಫ್ರಾನ್ಸ್‌ನ ಹಳೆಯ ಲೈಬ್ರರಿಯಲ್ಲಿ ಸಿಗುತ್ತದೆ. ಇದರಲ್ಲಿ ಕಾಲಾವಧಿ ೧೭೬೦ರೆಂದು ತಿಳಿದು ಬರುತ್ತದೆ.

ಹೈದರನ ಎರಡನೆಯ ಕೃತಿ ೧೭೮೪ರಲ್ಲಿ ರಚಿತಗೊಂಡಿದೆ. ಅದರ ಹೆಸರನ್ನು ಸಂಕ್ಷಿಪ್ತವಾಗಿ ಕರೆದುಕೊಳ್ಳುತ್ತಾನೆ. ಹೈದರ ಸೈನ್ಯ ಭಾಗ ಕಮಾಂಡರ್ ಇನ್ ಚೀಫ್ ಆಗಿದ್ದ,

ಆತನು ಗುಲಾಮ ಮಹಮ್ಮದ್‌ನೂ ಇಂಗ್ಲಿಷ್ ಅನುವಾದದಲ್ಲಿ ಅಲ್ಲಿಯ ಅನೇಕ ತಪ್ಪುಗಳನ್ನು ಸರಿಪಡಿಸಿದ್ದನು. ಆದರೆ ರಾಬ್‌ಸನ್ ಎಂಬ ಲೇಖಕ ಫ್ರೆಂಚ್ ಭಾಷೆಗಳ ತಪ್ಪುಗಳ ಸರಮಾಲೆ ಸರಿಪಡಿಸುವ ಮತ್ತು ಎಷ್ಟೋ ಪ್ರಮುಖ ವಿಷಯಗಳು ಇರಲಿಲ್ಲ. ಅಲ್ಲದೆ ಟಿಪ್ಪುನನ್ನು ಒಬ್ಬ ಖಳನಾಯಕನಂತೆ ಚಿತ್ರಿಸಿದ್ದನು.

ನಲ್ಲಪ್ಪನ ಬಖೈರಿನ ಮೂಲಕ ವೈಯಕ್ತಿಕ ವಿಷಯ MMDLT ಬಹಳ ಚೆನ್ನಾಗಿ ಅರಿತಿದ್ದನು. ಹೀಗಾಗಿ ಆತನ ಗುಣ ದೋಷಗಳ ಉಲ್ಲೇಖ ಕಾಣುತ್ತದೆ. ರಾ.ಹ.ದೇಶ ಪಾಂಡೆಯವರು ೧೮೬೨ರಲ್ಲಿ ಇಬ್ಬರ ಚರಿತ್ರೆ ಬರೆದಿದ್ದರು. (ಹೈದರ-ಟಿಪ್ಪು) ಅಪ್ಪಣಿ ಶೆಟ್ಟಿ ಬರೆದ ಕೃತಿಯಲ್ಲಿ ಹೈದರ ಕುರಿತು ಪ್ರಸ್ತಾಪಗೊಂಡ ವಿಷಯ ವೈಯಕ್ತಿಕ ಜೀವನ ಮತ್ತು ವ್ಯಕ್ತಿತ್ವ ಸಂಬಂಧಿಸಿದ ಸಂಗತಿ ಹೈದರನಿಗೆ ಉರ್ದುವಾಗಲಿ ಕನ್ನಡವಾಗಲಿ ಓದಲಿಕ್ಕೆ, ಬರೆಯಲಿಕ್ಕೆ ಬರುತ್ತಿರಲಿಲ್ಲ. ಹೈದರನು ಏಳು ವರ್ಷವಿದ್ದಾಗ ತಂದೆ ಮರಣ ಹೊಂದಿದನು. ೧೫೦ ಸೈನ್ಯದ ಅದಿಪತಿಯಾಗಿದ್ದ ಕುರಿತು ಹಸ್ತಪ್ರತಿ ಇತ್ತು. ಹತ್ತು ಸಾವಿರ ವರಹ ಸಾಲವಿತ್ತು. ಈರ್ವರೂ ನಂಜರಾಜ ದಳವಾಯಿಯ ಆಶ್ರಯದಲ್ಲಿ ಕಾರ್ಯನಿರ್ವಹಿಸಿದ್ದರು. ಚಿಕ್ಕವನಾದ ಹೈದರ ಕೂಡ ಪೋಲಿಯಾಗಿ ತಿರುಗುತ್ತಿದ್ದನು. ತನ್ನ ಅಣ್ಣ ಕೂಡ ಅಲ್ಪ ದಿನಗಳಲ್ಲಿ ತೀರಿಹೊದನು. ಆ ಕಾಲಾವಧಿಯಲ್ಲಿ ಸೈನಿಕ ವೃತ್ತಿಯಲ್ಲಿ ಮುಂದುವರಿಯುವುದು ಅನಿವಾರ್ಯವಾಗಿತ್ತು. ಈ ಕಾರಣದಿಂದ ವಿದ್ಯಾಭ್ಯಾಸ ಮೊಟಕುಗೊಂಡಿತು.

ಹೈದರನು ಅಲ್ಪಕಾಲದಲ್ಲಿ ಪ್ರಬಲ ಸೈನ್ಯವನ್ನು ಕಟ್ಟಿ ಸಣ್ಣಪುಟ್ಟ ಪಾಳೇಗಾರರನ್ನು ಸದೆ ಬಡೆಯುವುದರ ಮೂಲಕ ಪ್ರಬಲವಾದ ದೊರೆಯಾದನು. ಸಾಕಷ್ಟು ಧನ ಕನಕಗಳನ್ನು ಸಂಪಾದನೆ ಮಾಡಿದನು. ಆತನ ಮತ್ತು ಮಗನ ಮುಖ ಲಕ್ಷಣ ಕುರಿತು ವಿಷಯದ ಅಲ್ಲದೆ ಆತನು ಆಭರಣಗಳನ್ನು ಧರಿಸುತ್ತಿರಲಿಲ್ಲ. ಹೈದರ ಭಾವಚಿತ್ರ ಕುರಿತಾಗಿ ವಿವರಗಳಿವೆ. ಆತನು ಆತ್ಮೀಯರೊಡನೆ ಬಿಡುವಿನ ಸಮಯದಲ್ಲಿ ಹರಟೆ ಹೊಡೆಯುತ್ತಿದ್ದನು. ಮರಾಠರ ಬಹು ದೊಡ್ಡ ಸೈನ್ಯದೊಂದಿಗೆ ಸುತ್ತುವರಿದ ಹೈದರನ ಸೈನಿಕರಲ್ಲಿ ಯಾರಾದರೂ ಗಡ್ಡ ಮೀಸೆ, ತಲೆಗೂದಲು ತೆಗೆಸಿದನ್ನು ಕಂಡರೆ ಅವನನ್ನು ಹೈದರನೆಂದು ಗುರುತಿಸುವುದು ಕಷ್ಟ ಎಳೆದು ತನ್ನಿ ಎಂದು ಹೇಳುತ್ತಿದ್ದರು. ಹೀಗಾಗಿ ಅದನ್ನು ಕೇಳಿದ ಹೈದರ ವೇಷ ಹಾಕಿಕೊಂಡು ಅಲ್ಲಿಂದ ಪಲಾಯನ ಮಾಡಿದನು.

ಹೈದರನ ವೈಯಕ್ತಿಕ ಸಂದರ್ಭಗಳು ಸ್ಮರಿಸಿಕೊಳ್ಳಬೇಕಾಗುತ್ತದೆ. ಆತನು ಸಾವಿರ ಕುದುರೆಯ ಸರದಾರ; ಆದರೆ ಪಿಂಜಾರನ ಮಾತಿನಂತೆ ತನ್ನ ಹೆಂಡತಿಗೆ ಹೆದರುತ್ತಿದನು. ಅವಳು (ಕಡಪದ ನವಾಬನ ಮಗಳು) ಆತನು ಇಲ್ಲದ ಸಂದರ್ಭದಲ್ಲಿ ಆಡಳಿತವನ್ನು ನೋಡಿಕೊಳ್ಳುತ್ತಿದ್ದಳು. ಶ್ರೀರಂಗಪಟ್ಟಣ ಮತ್ತು ಆ ಮನೆಯ ಆಡಳಿತ ವ್ಯವಹಾರಗಳನ್ನು ಅವಳೇ ನಿರ್ವಹಿಸುತ್ತಿದ್ದಳು. ಹೈದರನ ದೌರ್ಬಲ್ಯಗಳನ್ನು ನಲ್ಲಪ್ಪನು ಗುರುತಿಸಿದ್ದಾನೆ.

ಸ್ತ್ರೀವ್ಯಾಮೋಹ, ಹಿತ್ತಾಳೆ ಕಿವಿ, ಕೊಟ್ಟ ಮಾತಿಗೆ ತಪ್ಪುವುದು ಸಾಮಾನ್ಯ ರೂಢಿಯಾಗಿತ್ತು. ಆತನು ಜನರನ್ನು ಹಿಂಸಿಸುವುದರಿಂದ ಹೆಚ್ಚು ಖುಷಿ ಪಡುತ್ತಿದ್ದನೆಂದು ತಿಳಿಯುತ್ತದೆ. ಅಲ್ಲದೆ ಮಾಡಿದ ತಪ್ಪಿನ ಆಧರ ಶಿಕ್ಷೆ ಕೊಡುತ್ತಿದ್ದನು. ಮೈಸೂರು ಅರಮನೆ ಖಂಡೇರಾಯನೆಂಬ ಆಪ್ತ ಸರದಾರನಿದ್ದ. ಹೈದರನಿಗೆ ಲೆಕ್ಕಪತ್ರ ವ್ಯವಹಾರದಲ್ಲಿ ನಂಜರಾಜ ದಳವಾಯಿ ಸಹಾಯ ಮಾಡುತ್ತಿದ್ದನು. ಹೈದರ ದಿನದಿಂದ ದಿನಕ್ಕೆ ಪ್ರಬಲನಾಗುತ್ತಿದ್ದನು. ನಂಜರಾಜ ಮತ್ತು ಖಂಡೇರಾಯ ಈರ್ವರು ಸೇರಿ ಹೈದರನನ್ನು ಬಗ್ಗುಬಡಿಯುವಲ್ಲಿ ಸಫಲರಾದರು.

**'ಹಳೆಗನ್ನಡ ಕೃತಿಗಳ ಪ್ರಕಟಣೆ ಪಾಶ್ಚಾತ್ಯ ವಿದ್ವಾಂಸರು ಅನುಸರಿಸಿದ ಮಾನದಂಡಗಳು ಒಂದು ವಿಶ್ಲೇಷಣೆ'**

ಪಾಶ್ಚಿಮಾತ್ಯ ಸಂಗ್ರಹ, ಸಂಪಾದನೆ, ಪರಿಷ್ಕರಣೆ ಮಾಡುವುದರ ಮೂಲಕ ತಮ್ಮ ನಾಡಿನ ಸಂಸ್ಕೃತಿ, ಭಾಷೆ, ಸಾಹಿತ್ಯವನ್ನು ಕಲಿಯುವಂಥ ಪರಿಸರ ಸೃಷ್ಟಿಸುತ್ತಿದ್ದರು. ಅಲ್ಲದೆ ತಮ್ಮದೇಯಾದ ಹೊಸ ಸ್ವರೂಪ ಕೊಡುವ ಉದ್ದೇಶ ಅವರದಾಗಿತ್ತು. ಸಂಗ್ರಹ ಮಾಡಿದ ಕೃತಿ, ಹಸ್ತಪ್ರತಿ ಪರಿಷ್ಕರಿಸುವ ಅದನ್ನು ಕಾರ್ಯದಲ್ಲಿ ತೊಡಗಿಕೊಂಡಿದ್ದನ್ನು ಕಾಣಬಹುದು. ಈ ರೀತಿಯ ಸಂಗ್ರಹ, ಸಂಪಾದನೆ ಪರಿಷ್ಕರಣೆ ಪ್ರಕಟನೆ ಮಾಡಿರುವುದು ಮಹತ್ವ ಪಡೆದುಕೊಳ್ಳುತ್ತದೆ. ಈ ನಾಡಿನ ಹಿಡಿತ ಸಾಧಿಸುವುದು ಅವರ ಸ್ವಾರ್ಥವಿತ್ತು. ಇದು ಅವರಿಗೆ ಅನಿವಾರ್ಯವಾಗಿತ್ತು. ಈ ನಾಡಿನಲ್ಲಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಬೇಕಾದರೆ ಭಾಷೆ, ವ್ಯಾಕರಣ ಸಾಹಿತ್ಯ ಸಂಸ್ಕೃತಿ, ಧರ್ಮ ಈ ಹಿನ್ನೆಲೆಯಲ್ಲಿ ಅಧ್ಯಯನ ಮಾಡಿ ಕರಗತ ಮಾಡಿಕೊಂಡು ಈ ನಾಡಿಗೆ ತಮ್ಮದೇಯಾದ ಭಾಷೆ, ವ್ಯಾಕರಣ, ಸಂಸ್ಕೃತಿ, ಸಾಹಿತ್ಯ ಧರ್ಮ ಇವುಗಳ ಮೂಲಕ ದೇಶಿಯವಾಗಿ ಹೊಸ ಸ್ವರೂಪ ಕೊಡಲಿಕ್ಕೆ ಮುಂದಾದರು. ವಿಕಾಸ ದಾರಿ ಕಾಣುವ ಕುತೂಹಲದಿಂದ, ಸಂಗ್ರಹ, ಸಂಪಾದನೆ, ಪರಿಷ್ಕರಣೆ, ಪ್ರಕಟಣೆ ಮಾಡುವ ಕೆಲಸದಲ್ಲಿ ತೊಡಗಿಕೊಂಡರು. ಪಾಶ್ಚಿಮಾತ್ಯ, ೧. ಅಧಿಕಾರವರ್ಗ, ೨. ಧರ್ಮ ಪ್ರಚಾರವರ್ಗ, ೩. ಕಾರ್ಯದಲ್ಲಿ ಆಸಕ್ತರು ಹೀಗೆ ವಿಂಗಡಿಸುವುದರ ಮೂಲಕ ಕಾರ್ಯ ವೈಖರಿಯ ವೈಶಿಷ್ಟತೆಯನ್ನು ಕಾಣುವುದು. ಕರ್ನಲ್ ಮೆಕೆಂಜಿಯು ಮೈಸೂರು ಪ್ರಾಂತ್ಯದ ಪರೀವಿಕ್ಷಕನಾಗಿ ನಿಯೋಜಿತಕೊಂಡ, ನಂತರ ವೃತ್ತಿಯ ಜೊತೆಗೆ ಪ್ರವೃತ್ತಿಯಾಗಿ ಹಸ್ತಪ್ರತಿಗಳನ್ನು ಸಂಗ್ರಹ ಮಾಡಿದವು. ನಂತರ ವಿಲಿಯ ಕೇರಿಯ 'A GRAMMAR OF THE KARNATAKA LANGUAGE' ಎಂಬ ಕೃತಿಯನ್ನು ಪ್ರಕಟಗೊಳಿಸಿದರು(೧೮೧೭). ಕನ್ನಡ ಅಕ್ಷರ ಮುದ್ರಿತಗೊಂಡ ಮೊದಲ ಕೃತಿ.

ಇದರ ತರುವಾಯ ಕೆನರ ಪ್ರಾಂತ್ಯದ ಅಸಿಸ್ಟೆಂಟ್ ಕಮಿಷನರ್ ಜಾನ್ ಮೆಕ್ಕೆರಲ್ ಅದೇ ವಿಷಯದ ಇನ್ನೊಂದು ಶಬ್ದಮಣಿದರ್ಪಣ ಆಧರಿಸಿ ಬರೆದನು. ಹೀಗೆ ಧಾರವಾಡದ ಅಸಿಸ್ಟೆಂಟ್ ಕಲೆಕ್ಟರ್‌ನಾಗಿದ್ದ ವಾಲ್ಟರ್ ಎಲಿಯಟ್ ಶಾಸನಗಳ ಅಧ್ಯಯನದಲ್ಲಿ ತೊಡಗಿಸಿಕೊಂಡನು. ಅಲ್ಲದೆ ಬ್ರಿಟಿಷರ ಆಡಳಿತ ವರ್ಗಕ್ಕೆ ಅಗತ್ಯವಾಗಿದ್ದ ಹೊಸಗನ್ನಡ

ವ್ಯಾಕರಣ ಬರೆಯಲು ಶ್ರೀರಂಗಪಟ್ಟಣದ ಕೃಷ್ಣಾಚಾರ್ಯರಿಗೆ ಪ್ರೋತ್ಸಾಹಿಸಿದನು. ಅಂದರೆ ಆ ಅವಧಿಯಲ್ಲಿ (೧೯ನೇ ಶತಮಾನದ) ಪ್ರಾಚೀನ ಹಸ್ತಪ್ರತಿಗಳ ಸಂಗ್ರಹ ಕೆಲಸ ನಡೆದಿತ್ತು. ಆದರೆ ಬ್ರಿಟಿಷರು ಗಮನಹರಿಸಲಿಲ್ಲ. ಕ್ರಿ.ಶ.೧೮೫೦ರಲ್ಲಿ ಇಡಿಯಾಗಿ ಮತ್ತು ಬಿಡಿಯಾಗಿ ಪ್ರಕಟಿಸುವ ಪದ್ಧತಿ ಪ್ರಾರಂಭವಾಯಿತು. ಮೈಸೂರು ಸಂಸ್ಥಾನದ ವಿದ್ಯಾ ಇಲಾಖೆಯ ಮೊಟ್ಟಮೊದಲ ನಿರ್ದೇಶಕರಾಗಿದ್ದ ಜಾನ್‌ಗ್ಯಾರೇಟ್ ೧೮೬೮ರಲ್ಲಿ ಶಬ್ದಮಣಿದರ್ಪಣವನ್ನು ಇಡಿಯಾಗಿ ಪ್ರಕಟಿಸಿದರು.

ಹಿಂದೂ ಧಾರ್ಮಿಕ ಕೃತಿಗಳನ್ನು ಪರೀಕ್ಷಿಸಿ ಪ್ರಕಟಿಸಿದರು. ಈ ಕಾರ್ಯದ ಉದ್ದೇಶ ಧರ್ಮ ಸಹಿಷ್ಣುತೆಯಲ್ಲಿ ಕ್ರೈಸ್ತ ಧರ್ಮದ ಸಂದೇಶವನ್ನು ಹಿಂದೂಗಳಿಗೆ ಪರಿಚಯಿಸಿ, ತಮ್ಮ ಧರ್ಮದ ಕಡೆಗೆ ಹಿಂದೂಗಳನ್ನು ಸೆಳೆದುಕೊಳ್ಳುವುದು ಮತ್ತು ಪೂರ್ವದಲ್ಲಿ ಹಿಂದೂಗಳ ಧಾರ್ಮಿಕ ಕೃತಿಗಳನ್ನು ಪ್ರಕಟಿಸುವುದು. ಪ್ರಾಚೀನ ಕನ್ನಡ ಸಾಹಿತ್ಯ ಕೃತಿಗಳ ಅಧ್ಯಯನ ಮಾಡಿ ಕೃತಿಗಳನ್ನು ಪ್ರಕಟಿಸಿದರು. ೧. ಬೈಬಲಿನ ಅನುವಾದ ಶಬ್ದ ಸಂಪತ್ತಿನ ಸಂಗ್ರಹ, ೨. ದೇಶಿಯ ಕಾವ್ಯಗಳ ಛಂದಸ್ಸಿನಲ್ಲಿ ಕ್ರೈಸ್ತ ಸಾಹಿತ್ಯ ರಚಿಸಿದರು. ಈ ಕಾರಣಗಳಿಂದ ಕನ್ನಡ ಪ್ರಾಚೀನ ಕೃತಿಗಳನ್ನು ಅಧ್ಯಯನ ಮಾಡಿದರು. ಪಾಶ್ಚಾತ್ಯ ವಿದ್ವಾಂಸರಾದ ರೀವ್, ಕಿಟೆಲ್, ಹಳೆಗನ್ನಡ ಕೃತಿಗಳನ್ನು ಅಭ್ಯಾಸ ಮಾಡಿದರು. ಶಬ್ದ ಸಂಪತ್ತು ಪಡೆದುಕೊಂಡ ರೀವ್‌ರವರದು. ಇಂಗ್ಲಿಷ್-ಕನ್ನಡ ಬರೆಯಲು ಪೂರ್ವ ಅಧ್ಯಯನ 'ಕರ್ನಾಟಕ ಶಬ್ದ ಮಂಜರಿ' ಚತುರಾಸ್ಯ ನಿಘಂಟು, ಕೈಪಿಡಿ ಅಮರಕೋಶ, ನಿಘಂಟುಗಳ ಪ್ರತಿಫಲವಾಗಿ ಕಾವ್ಯ ಸಾಹಿತ್ಯ ಛಂದಸ್ಸಿನಲ್ಲಿ ರಚಿಸಿದರೆ ಹೆಚ್ಚು ಓದುಗರ ಮೇಲೆ ಪರಿಣಾಮ ಬೀರುತ್ತದೆ.

ಕನ್ನಡ-ಇಂಗ್ಲಿಷ್ ಕೋಶವನ್ನು ರಚಿಸಲು ಸಾಧ್ಯವಾಯಿತು. ಹಾಗೆಯೇ ದೇಶಿಯ ಛಂದಸ್ಸಿನ ಆಳವಾದ ತಿಳುವಳಿಕೆ ಹೊಂದಿದ ಕಾವ್ಯ ಮತ್ತು ಸಾಹಿತ್ಯ ಬರೆಯಲು ಬರವಣಿಗೆ, ಓದುವ ಕ್ರಮ, ಅತ್ಯಂತ ಪರಿಣಾಮಕಾರಿಯಾಗಿತ್ತು ಎನ್ನುವ ಕಾರಣದಿಂದ ಪಾಶ್ಚಾತ್ಯ ವಿದ್ವಾಂಸರ ಹಿನ್ನೆಲೆಯನ್ನು ಅರಿಯಲು ಸಾಧ್ಯವಾಯಿತು. ಶಬ್ದಮಣಿದರ್ಪಣ ಛಂದೋಂಬುಧಿ ಇತ್ಯಾದಿ ಪ್ರೌಢಕೃತಿಗಳ ಸಂಪಾದನೆ ಮಾಡಲು ಸಾಧ್ಯವಾಯಿತು.

ಬ್ರಿಟಿಷ್ ಅಧಿಕಾರಿ ವರ್ಗ, ಧರ್ಮಪ್ರಚಾರ, ದೇಶಿಯ ಕಾವ್ಯ ಮತ್ತು ಸಾಹಿತ್ಯ ಅಧ್ಯಯನ ಮಾಡುವುದರ ಮೂಲಕ 'ಬಿಬ್ಲಿಯಾಥಿಕಾ ಕರ್ನಾಟಕ' ಮಾಲೆಯನ್ನು ಮೊಗ್ಲಿಂಗ್ ಪರಿಚಯಿಸಿದನು. ಪಾಶ್ಚಿಮಾತ್ಯ ನಿವೃತ್ತ ನ್ಯಾಯಾಧೀಶರು ಕೆನ್ ಮೇಜರ್ ಧನ ಸಂಪಾದನೆ ಮಾಡುವುದರ ಮೂಲಕ ದೇಶಿಯರಾದ ಲಕ್ಷ್ಮಿನರಸಿಂಹಯ್ಯ ಮತ್ತು ಆನಂದರಾವ್ ಅವರ ಮೂಲಕ ಶುದ್ಧ ಪಾಠವನ್ನು ಪ್ರತಿ ಮಾಡಲು ಕೆಲವು ಹಳೆಗನ್ನಡ ಕೃತಿಗಳಾದ ಜೈಮಿನಿ ಭಾರತ, ತೊರೆವ ರಾಮಾಯಣ, ಹರಿಭಕ್ತಿಸಾರ, ಕುಮಾರವ್ಯಾಸ ಭಾರತ, ಬಸವಪುರಾಣ, ಚೆನ್ನಬಸವಪುರಾಣದಂಥ ಕೃತಿಗಳನ್ನು ಪ್ರಕಟಿಸಿದರು.

ಬಿ.ಎಲ್.ರೈಸ್ ದೇಶಿಯ ವಿದ್ವಾಂಸರಾದ ಕೆ.ಬಿ.ಪಾಠಕ್ ಆರ್.ನರಸಿಂಹಾಚಾರ್ಯರು ಮತ್ತು ರಾಮರಾವ್ ಇವರ ಸಹಾಯದಿಂದ ಪಂಪ ರಾಮಾಯಣ, ಪಂಪಭಾರತ, ಕಾವ್ಯಾವಲೋಕನ, ಭಾಷಭೂಷಣ ಕೃತಿಗಳನ್ನು ಪ್ರಕಟಿಸಲು ಸಾಧ್ಯವಾಯಿತು. ಆದರೆ ೧೦ನೇ ಶತಮಾನದಲ್ಲಿ ಹಳೆಗನ್ನಡ ಕೃತಿಗಳನ್ನು ಪಾಶ್ಚಾತ್ಯ ವಿದ್ವಾಂಸರು ಪ್ರಕಟಿಸುವುದು ಮುಂದುವರಿಸಲಿಲ್ಲ.

೨೦ನೇ ಶತಮಾನದಲ್ಲಿ ಸಾಹಿತ್ಯ ಕೃತಿಗಳ ಸಂಪಾದನೆಯ ಕೆಲಸವನ್ನು ಪಾಶ್ಚಿಮಾತ್ಯ ವಿದ್ವಾಂಸರು ಮುಂದುವರಿಸಿದರು. ಈ ನಾಡಿನಲ್ಲಿ ಪಾಶ್ಚಿಮಾತ್ಯ ಮಾದರಿಯ ಶಿಕ್ಷಣ ಜಾರಿಗೆ ಬಂದಿದ್ದು. (೧೯೫೦) ೧೯ನೇ ಶತಮಾನದ ಅಂತಿಮ ಅವಧಿಗೆ; ಪಾಶ್ಚಿಮಾತ್ಯ ವಿದ್ವಾಂಸರ ಚಿಂತನ ಕ್ರಮವನ್ನು ಅನುಸಂಧಾನ ಮಾಡಿಕೊಂಡರು. ಅಂದರೆ ಅವರೇ ಕಲಿತು, ಪಾಶ್ಚಾಮಾತ್ಯ ಮಾದರಿ ಕ್ರಮದಲ್ಲಿ ಹೊಸ ವಿಧಾನವನ್ನು ಪರಿಚಯಿಸಿದರು. ಹಸ್ತಪ್ರತಿ, ಸಂಗ್ರಹಣೆ, ಸಂಪಾದನೆ, ಕೋಶ ನಿರ್ಮಾಣ, ಶಾಸನ ಈ ರೀತಿಯ ವಿಷಯಗಳ ಕುರಿತ ಅಧ್ಯಯನ ಮಾಡುವ ಸಮುದಾಯ ಬಳಗವನ್ನು ಕಟ್ಟಿಕೊಂಡರು. ಆರ್.ನರಸಿಂಹಾಚಾರ್ ಎಂ.ಎ.ರಾಮಾನುಜಯ್ಯಂಗಾರ್ ಎಸ್.ಜೆ.ನರಸಿಂಹಯ್ಯ, ಕೆ.ಬಿ.ಪಾಠಕ್ ಅವರೆಲ್ಲ ತೊಡಗಿಕೊಂಡರು. ಮಹತ್ವವಾದ ಅಂಶವೆಂದರೆ ವಿದೇಶಿ ವಿದ್ವಾಂಸರು ಕನ್ನಡ ಭಾಷೆ ಸಾಹಿತ್ಯ ಅಳವಾದ ಜ್ಞಾನವನ್ನು ಹೊಂದಿದ್ದರು. ಭಾರತೀಯ ವಿದ್ವಾಂಸರ ನೆರವಿಲ್ಲದೆ ಪ್ರಾಚೀನ ಕನ್ನಡ ಕೃತಿಗಳನ್ನು ಪರಿಷ್ಕರಿಸುವ ಕಾರ್ಯದಲ್ಲಿ ಸಫಲರಾಗುವುದು ಸಾಧ್ಯವಿರಲಿಲ್ಲ. ಹೀಗಾಗಿ ಭಾರತೀಯ ವಿದ್ವಾಂಸರನ್ನು ಗ್ರಂಥ ಸಂಪಾದನೆ ಕೆಲಸಕ್ಕೆ ತೊಡಗಿಕೊಳ್ಳಲು ಸಾಧ್ಯವಾಯಿತು. ದೇಶಿಯ ಪ್ರತಿಭಾವಂತ ವಿದ್ವಾಂಸರನ್ನು ಗಮನಿಸಿದ ಪಾಶ್ಚಾಮಾತ್ಯ ವಿದ್ವಾಂಸರು ದೇಶಿಯ ವಿದ್ವಾಂಸರಿಗೆ ತಮ್ಮ ಹಸ್ತಪ್ರತಿಗಳನ್ನು ಹಸ್ತಾಂತರ ಮಾಡಿದರು. ಆದಕ್ಕೆ ನಿದರ್ಶನವೆಂದರೆ ಬಿ.ಎಲ್.ರೈಸ್ ಎಂ.ಎ.ರಾಮಾನುಜಯ್ಯಂಗಾರರಿಗೆ ಹಸ್ತಪ್ರತಿ ನೀಡಿದ ಪ್ರತಿಫಲವಾಗಿ 'ಕರ್ನಾಟಕ ಕಾವ್ಯಮಂಜರಿ' ಮಾಲೆಯಲ್ಲಿ ಪ್ರಕಟಿಸಿದರು. ೧೯ನೇ ಶತಮಾನದ ಕಾಲಘಟ್ಟದ ಸರ್ಕಾರ ಮತ್ತು ಮಿಶನರಿಗಳಲ್ಲಿ ಮುದ್ರಣ ಯಂತ್ರ ಬಳಕೆ ಸೀಮಿತವಾಗಿತ್ತು. ನಂತರ ಖಾಸಗಿ ಒಡೆತನವನ್ನು ಹೊಂದಿತು.

**ಎ.ಸಿ.ಬರ್ನೆಲ್ (ಪ್ರಾರಂಭಿಕ ಪರಿಚಯ)**

ಭಾರತಕ್ಕೆ ಬಂದ ಪಾಶ್ಚಿಮಾತ್ಯರಾದ ಎ.ಸಿ.ಬರ್ನೆಲ್‌ರವನ್ನು ನ್ಯಾಯಾಂಗ ಇಲಾಖೆಯಲ್ಲಿ ನಿರ್ವಹಿಸಿದರ ಕಾರ್ಯದಕ್ಷತೆಯನ್ನು ಕುರಿತು ಶ್ರೀನಿವಾಸ ಹಾವನೂರ ಪರಿಚಯಿಸಿದರು. ಈ ನಾಡಿಗೆ ಬರುವ ಪೂರ್ವದಲ್ಲಿ ಸಂಸ್ಕೃತ ಪರಿಣಿತಿಯನ್ನು ಹೊಂದಿದ್ದರು. ನಂತರ ದಿನಗಳಲ್ಲಿ ಅವರು ವೇದ, ವೇದಾಂಗ, ಸ್ಮೃತಿಗಳ ವ್ಯಾಕರಣ ಗ್ರಂಥಗಳನ್ನು ಅಧ್ಯಯನ ಮಾಡಿದರು. ಸಾಮವೇದ, ಸ್ಮೃತಿಗಳು, ವ್ಯಾಕರಣ ಗ್ರಂಥಗಳನ್ನು ಅಧ್ಯಯನ ಮಾಡಿದರು. ಸಾಮವೇದಾಂಗ ಮನುಸ್ಮೃತಿಗಳನ್ನು ಸಂಪಾದಿಸಿ ಪ್ರಕಟಿಸಿದರು. ವ್ಯಾಕರಣ ಶಾಸ್ತ್ರಕ್ಕೆ ತಾತ್ವಿಕ

ನೆಲೆಯನ್ನು ಕೊಟ್ಟ ಗೌರವ ಅವರಿಗೆ ಸಲ್ಲುತ್ತದೆ. ಅಲ್ಲದೆ ಎ.ಸಿ.ಬರ್ನೆಲ್‌ರವರಿಗೆ ಮದ್ರಾಸ್ ಗೌರ್ನಮೆಂಟ್ ತಂಜಾವೂರಿನ ಪ್ರಾಚೀನ ಸಂಸ್ಕೃತ ಹಸ್ತಪ್ರತಿಗಳ ಸೂಚಿಯನ್ನು ಸಿದ್ಧಪಡಿಸಲು ಸೂಚಿಸಿತ್ತು. ಆ ಹಸ್ತಪ್ರತಿಗಳನ್ನು ಆಮೂಲಾಗ್ರವಾಗಿ ಪರೀಕ್ಷಿಸಿ ಸೂಚಿಯನ್ನು ಸಿದ್ಧಪಡಿಸಿದರು.

ಎ.ಸಿ. ಬರ್ನೆಲ್‌ರವರು ಮದ್ರಾಸ್ ಪ್ರಾಂತ್ಯದ ಜಿಲ್ಲೆಯ ನ್ಯಾಯಾಧೀಶರಾಗಿ ಕಾರ್ಯ ನಿರ್ವಹಿಸಿದರು. ಆ ಅವಧಿ ಹಿಂದೂ ಕುಟುಂಬಗಳಲ್ಲಿ ಆಸ್ತಿಯ ಒಡೆತನ, ದತ್ತಕನಿಧಿ ಈ ವಿಷಯಗಳ ತಿಳಿದುಕೊಳ್ಳುವ ಕಾರಣದಿಂದ ದಕ್ಷಿಣ ಕನ್ನಡ ಜಿಲ್ಲೆಯ ಜನ ಬಳಕೆ ವ್ಯವಹಾರ ಕುರಿತು ಅಭ್ಯಾಸ ಮಾಡಿದರು. ಅಲ್ಲದೆ ವ್ಯಾಖ್ಯಾನವನ್ನು ಪ್ರಕಟಿಸಿದರು. ಅವರು ಸಂಸ್ಕೃತ ಶಾಸ್ತ್ರದ ಪದವಿ ಪಡೆದ ಕಾರಣ ಜರ್ಮನ್ ಸ್ಟ್ರಾಸ್‌ಬರ್ಗ್ ವಿಶ್ವವಿದ್ಯಾಲಯ ಗೌರವ ಡಾಕ್ಟರೇಟ್ ಪದವಿ ಪಡೆದರು. ಆ ಕಾಲಕ್ಕೆ ವಿದ್ವತ್ ವಲಯದಲ್ಲಿ ಅಪಾರ ಮನ್ನಣೆ ಪಡೆದಿದ್ದರು. ಹಾಗೆಯೇ ಪಶ್ಚಿಮ ಭಾರತಕ್ಕೆ ಬಂದಾಗ ಇತಿಹಾಸದ ಸಂಬಂಧಿಸಿದ ಮೂಲ ದಾಖಲೆಗಳಲ್ಲದೆ ಶಾಸನಗಳಲ್ಲಿ ಅಷ್ಟೇ ಆಸಕ್ತಿ ಇತ್ತು. ತಮಿಳು, ಕನ್ನಡ, ತೆಲುಗು, ಭಾಷೆಗಳ ಹಸ್ತಪ್ರತಿಗಳನ್ನು ತಿಳಿದುಕೊಳ್ಳಲು ಭಾರತ ಲಿಪಿ ಶಾಸ್ತ್ರವನ್ನು ಅಧ್ಯಯನ ಮಾಡಿದರು.

ಭಾರತೀಯ ಲಿಪಿ ವಿಕಾಸವನ್ನು ರೂಪಿಸಲು ಮೊದಲು ಪ್ರಯತ್ನಿಸಿದವರು ಜೆಮ್ಸ್ ಫಿನ್ಸೆಲ್, ನಂತರ ವಾಲ್ಟರ್ ಎಲಿಯಟ್ (ಉತ್ತರ ಕರ್ನಾಟಕದ ಶಾಸನಗಳಲ್ಲಿ ಪ್ರಥಮ ಶೋಧಿಸಿದವರು) ಕನ್ನಡ ಲಿಪಿಯ ಬಗೆಯು ಕೈಯಿಂದ ಬರೆದು ಕಲ್ಲಚ್ಚಿನಲ್ಲಿ, ಬಳಿಕ ಹಾಳೆಗಳಲ್ಲಿ ಮುದ್ರಿಸಿದರು. ಆ ಕೆಲಸವನ್ನು ದಕ್ಷಿಣ ಭಾರತಕ್ಕೆ ಮೊದಲಿಗೆ ಪರಿಚಯಿಸಿದವರು ಬರ್ನಲ್, ಭಾರತದಲ್ಲಿ ಬರಹ ಯಾವಾಗ ಪ್ರಾರಂಭವಾಯಿತು ಎನ್ನುವ ಸಂಗತಿ "Elements of south Indian palaeography ಕೃತಿಯಲ್ಲಿ ಉಲ್ಲೇಖಗೊಂಡಿದೆ. ಅಶೋಕನ ಕಿರುಶಾಸನಗಳಲ್ಲಿ ಕಂಡು ಬಂದ ಕಾಲದಿಂದ ಅಂದರೆ ಕ್ರಿ.ಶ.ಪೂ. ೨೫೦ಕ್ಕೆ ಮೊದಲು ನಮ್ಮ ದೇಶದಲ್ಲಿ ಬಳಕೆ ಇರಲಿಲ್ಲ. ಇದು ಸರಿಯಲ್ಲ ಎನ್ನುವ ವಾದವೂ ಇದೆ. ಹಾಗೆಯೇ ಕಿಟೆಲ್ ಈ ರೀತಿ ಹೇಳುತ್ತಾರೆ. ಮಹಾಭಾರತ ಕಾಲಕ್ಕೆ ಮಹಿಳೆಯರು ಪ್ರತಿ ಮಾಡುತ್ತಿದ್ದ ಉಲ್ಲೇಖ ಕಂಡುಬರುತ್ತದೆ."[೨೮] ಕ್ರಿಶ. ೧೮೮೨ರಲ್ಲಿ ಮೂರನೆಯ ಆವೃತ್ತಿ ಹೊರತಂದರು. ಆಗ ಅವರಿಗೆ ನಲವತ್ತೆರಡು ವರ್ಷವಾಗಿತ್ತು. ಆ ಸಂದರ್ಭದಲ್ಲಿ ವಿಧಿವಶರಾದರು. ದಕ್ಷಿಣ ಭಾರತದಲ್ಲಿ ಇಷ್ಟೆಲ್ಲ ಸಾಧನೆಗಳನ್ನು ಇಪ್ಪತ್ತು ವರ್ಷಗಳಲ್ಲಿ ಮಾಡಿದ್ದಾರೆ. ಕನ್ನಡ ಲಿಪಿಗೆ ಸಂಬಂಧಿಸಿದಂತೆ ಎ.ವಿ.ನರಸಿಂಹಮೂರ್ತಿ ಕನ್ನಡ ಲಿಪಿಯ ವಿಕಾಸ ಕುರಿತು ಕೃತಿ ಬರೆಯುವಲ್ಲಿ ಬರ್ನೆಲ್‌ರ ಕೃತಿಯನ್ನು ಬಳಸಿದ್ದಾರೆ ಎನ್ನುವುದು ಗಮನಾರ್ಹ. ಹಾಗೆಯೇ ೨೦೦೨ರಲ್ಲಿ ಸಮಗ್ರ ಲಿಪಿಯ ಉಗಮ ಮತ್ತು ವಿಕಾಸ ಕುರಿತು ದೇವರಕೊಂಡರೆಡ್ಡಿಯವರು ಕೃತಿಯನ್ನು ರಚಿಸಿದರು. ಅದರಲ್ಲಿ ಎ.ಸಿ. ಬರ್ನೆಲ್ ಕೃತಿಯ ಉಲ್ಲೇಖ ಕಂಡು ಬರುತ್ತದೆ. ಮಹತ್ವದ ಸಂಗತಿಯೆಂದರೆ ಮಂಗಳೂರಿನ ಬಾಸೆಲ್ ಪ್ರೆಸ್ಸಿನವರು ಬರ್ನೆಲ್‌ರವರಿಗೆ

ಮುದ್ರಣ ಬಗ್ಗೆ ಇದ್ದ ಆಸಕ್ತಿ ಕಂಡು ವಿಶಿಷ್ಟ ಆಕಾರ ಮಳೆ+ನಕ್ಷತ್ರ ರೂಪದ ಚಿತ್ರಗಳು ಜರ್ಮನ್‌ನಿಂದ ಎರಕ ಹೊಯ್ಯುಸಿ ತರಿಸಿದನು.

ಎ.ಸಿ. ಬರ್ನೆಲ್‌ರವರಿಗೆ ವಿದ್ವತ್ತಿನಲ್ಲಿ ಸಮನಾದವರು ಕಿಟೆಲ್(೧೮೭೫) ಕೇಶಿರಾಜನ 'ಶಬ್ದಮಣಿ ದರ್ಪಣ' ಎಂಬ ಪ್ರೌಢ ವ್ಯಾಕರಣ ಕೃತಿಯನ್ನು ಕಿಟೆಲ್‌ರವರು ಸಂಪಾದಿಸಿದರು. ಎ.ಸಿ. ಬರ್ನೆಲ್‌ರವರ ಈ ವ್ಯಾಕರಣದ ಗ್ರಂಥದ ಹಸ್ತಪ್ರತಿ ದೊರೆತಾಗ ಕಿಟೆಲ್ ಅದರ ಎರಡನೆಯ ಆವೃತ್ತಿ ಹೊರತಂದರು. 'ಯಜ್ಞತಂತ್ರ ಸುಧಾನಿಧಿ' ಗ್ರಂಥವನ್ನು ಬರ್ನೆಲ್ 'ಇಂಡಿಯನ್ ಎಂಟಿಕ್ವೇರಿ' ಪತ್ರಿಕೆಯಲ್ಲಿ ಸೊಗಸಾಗಿ ವಿಮರ್ಶಿಸಿದರು. ದಕ್ಷಿಣ ಕನ್ನಡ ಜಿಲ್ಲೆಯ ಬೇರೆ ಊರುಗಳಲ್ಲಿ ಬರ್ನೆಲ್‌ರ ಪ್ರಸ್ತಾಪವಿದೆ. ಶಬ್ದಮಣಿದರ್ಪಣ ಹಸ್ತಪ್ರತಿ ದೊರೆತಿದ್ದು ಮೂಡಬಿದರಿಯಲ್ಲಿ ಜೈನಯತಿಗಳ ಮೂರ್ತಿ ಅಷ್ಟು ಬೃಹತ್ ಆಕಾರದಲ್ಲಿವೆ ಎಂಬುದರ ಬಗ್ಗೆ ಕ್ರಿ.ಶ. ೧೮೭೩ರಲ್ಲಿ ಇಂಡಿಯನ್ ಎಂಟಿಕ್ವೆರಿಯಾ ಸಂಚಿಕೆಯಲ್ಲಿ ವಿವರವಿದೆ.

ಭೂತಾರಾಧನೆ ಹಾಗೂ ಪಾಡ್ದನಗಳು ಕುರಿತು ಬರ್ನೆಲ್ ಶೋಧಿಸಿದ್ದಾರೆ. ದಕ್ಷಿಣ ಮತ್ತು ನೆರೆ ಪ್ರದೇಶಗಳಲ್ಲಿ ಬ್ರಾಹ್ಮಣೇತರರು ಮತ್ತು ಪರಿಶಿಷ್ಟರ ವರ್ಗಗಳಲ್ಲಿ ಇದು ಇಂದಿಗೂ ಪ್ರಚಲಿತದಲ್ಲಿದೆ. ಹಿಂದಿನ ದಿನಗಳಲ್ಲಿ ಮಡಿದ ಕೆಲವು ಆತ್ಮಗಳು ನೆಲದಲ್ಲಿ ಸಂಚರಿಸುತ್ತಿದ್ದವು. ವಿವಿಧ ಆರಾಧನೆಗಳು ವರ್ಷಕ್ಕೆ ನಡೆದರೆ ಖಾಸ ಭೂತದ ಆರಾಧನೆ ಹತ್ತು ವರ್ಷಗಳಿಗೊಮ್ಮೆ ನಡೆಯುತ್ತದೆ. ಆರಾಧನೆ ಸ್ಥಳವನ್ನು ಪೂಜಾವಿಧಾನ, ಪಂಜನ್ನು ಹಿಡಿದು ಪೂಜಾರಿ ಕುಣಿಯುವುದು, ತುಳು ಹಾಡುಗಳನ್ನು ಹೇಳುವುದು ಇಂಥ ಅನೇಕ ಅಜ್ಞಾತವಾಗಿದ್ದ ವಿಷಯಗಳನ್ನು ಎ.ಸಿ. ಬರ್ನೆಲ್‌ರವರು ಅಧಿಕೃತವಾಗಿ ದಾಖಲಿಸಿದ್ದಾರೆ. ಅವರು ವೃತ್ತಿಯ ಜೊತೆಗೆ ಪ್ರವೃತ್ತಿಯಾಗಿ ಹೊಸ ಸಂಗತಿಗಳನ್ನು ಇಪ್ಪತ್ತು ವರ್ಷಗಳ ಅವಧಿಯಲ್ಲಿ ಅಪಾರ ಪರಿಶ್ರಮಪಟ್ಟಿರುವುದನ್ನು ಇತಿಹಾಸದಲ್ಲಿ ಅವರ ಕಾರ್ಯಸಾಧನೆಯನ್ನು ಯುವ ಸಮುದಾಯಕ್ಕೆ ಶ್ರೀನಿವಾಸ ಹಾವನೂರ ಅವರು ಪರಿಚಯಿಸಿದ್ದಾರೆ.

**'ಬಾಸೆಲ್ ಮಿಶನ್ನಿನ ಗಾಡ್ ಫ್ರೆ ವೈಗಲ್'**

ಬಾಸೆಲ್ ಮಿಶನ್ನಿನ ಹಿರಿತಲೆಮಾರಿನ ಮಿಶನರಿಯಾದ ಗಾಡ್ ಫ್ರೈ ವೈಗಲ್‌ನ ಕಾರ್ಯವೈಖರಿಯನ್ನು ಶ್ರೀನಿವಾಸ ಹಾವನೂರ ಅವರು ಲೇಖನದಲ್ಲಿ ಅನಾವರಣಗೊಂಡಿದೆ. ಬಾಸಲ್ ಇವ್ಯಾಂಜಿಕಲ್ ಮಿಶನ್ ಸ್ಥಾಪನೆಗೆ ಹಿರಿಯ ತಲೆಮಾರಿನ ಮಿಶನರಿಗಳ ಕಾರಣವಾದರೂ ಇವರ ಹೆಸರು ಚರಿತ್ರೆಯಲ್ಲಿ ಗೌಣವಾಯಿತು. ಹೀಗಾಗಿ ಆ ಕಾರ್ಯದ ಮಹತ್ವವನ್ನು ಹಾವನೂರರು ಪರಿಚಯಿಸಿದರು. ವೈಗಲ್‌ರವರು ಅಲ್ಪಕಾಲ ಬದುಕಿದರೂ, ಅವರ ಕಾರ್ಯಸ್ವರೂಪ ಚರಿತ್ರೆಯಲ್ಲಿ ಜೀವಂತವಾದರು. ಹಾಗೆಯೇ ಅವರಿಗೆ ಭಾರತೀಯ ತತ್ವಶಾಸ್ತ್ರ ಭಾಷಿಕ ವಿದ್ವತ್ ಹಾಗೂ ಕನ್ನಡಾನುವಾದ ಗಮನಿಸಿದರೆ ಅವರ ಕಾರ್ಯವೈಖರಿಯ ಮಹತ್ವವನ್ನು ತಿಳಿಯಬಹುದಾಗಿದೆ.

ವೈಗಲ್ ತ್ಸೆಲ್ ಎಂಬ ಹಳ್ಳಿಯಲ್ಲಿ ಜನಿಸಿದರು. ಬಾಲ್ಯ, ವಿದ್ಯಾಭ್ಯಾಸ, ಅಜ್ಜ, ಅಜ್ಜಿ ಮನೆಯಲ್ಲಿ ಕಳೆದರು. ತೀಬಿಂಜೈನ ವಿಶ್ವವಿದ್ಯಾಲಯದಲ್ಲಿ ವಿದ್ಯಾಭ್ಯಾಸ ಮಾಡಿದರು. ಅರಬ್ಬಿ ಮತ್ತು ಸಂಸ್ಕೃತ ಭಾಷೆಗಳನ್ನು ಕಲಿತಿದ್ದರು. ಬಾಸೆಲ್ ಮಿಶನ್ ಸಂಸ್ಥೆ ಪ್ರಾರಂಭಿಸಿದ ಕಾಲಕ್ಕೆ ಸಂಸ್ಥೆಯ ಶಿಕ್ಷಕನಾಗಿ ವೃತ್ತಿಯನ್ನು ಪ್ರಾರಂಭಿಸಿದನು. ಹರ್ಮನ್ ಮೊಗ್ಲಿಂಗ್ ಮೇಧಾವಿಯಾಗಿದ್ದನು. ಹಾಗೆಯೇ ವೈಗಲ್ ಸಂಬಂಧಿಯು ಹೌದು. ವೈಗಲ್‌ನು ಪಾಲಿನ್‌ಳನ್ನು ವಿವಾಹವಾಗಿದ್ದನು. ಆತನಿಗೆ ನಾಲ್ಕು ಮಕ್ಕಳಿದ್ದವು. ಅಕಾಲಿಕ ಮರಣಕ್ಕೆ ತುತ್ತಾದನು. ಆಗ ಆತನ ಹೆಂಡತಿಯಾದ ಪಾಲಿನ್‌ಳನ್ನು ಮೊಗ್ಲಿಂಗ್ ವಿವಾಹವಾಗಿ ನಾಲ್ಕು ಮಕ್ಕಳ ಹೊಣೆಯು ಹೊತ್ತಿದ್ದನು. ಮೊದಲು ಬಂದ ಮಿಶನರಿಗಳು ಎಲ್ಲಾ ದೃಷ್ಟಿಯಿಂದಲೂ ತಮ್ಮನ್ನು ತಾವು ಪೂರ್ವ ತಯಾರಿ ಮಾಡಿಕೊಳ್ಳಬೇಕಾಗಿತ್ತು. ಪ್ರವಚನ, ಅನುವಾದ, ಮುದ್ರಣ, ಶಿಕ್ಷಣ ವೃತ್ತಿ ಬೇರೆ ಅಳವಡಿಸಬೇಕಾಗಿತ್ತು. ಹಾಗೆಯೇ ವೈಗಲ್ ಮಂಗಳೂರಿನಲ್ಲಿ ಶಾಲೆಯ ಜವಾಬ್ದಾರಿಯನ್ನು ಹೊತ್ತಿದ್ದನು. ನಂತರ ವೈಗಲ್‌ನನ್ನು ನೀಲಗಿರಿಗೆ ಕಳುಹಿಸಲಾಯಿತು. ಬ್ರಿಟಿಷ್ ಅಧಿಕಾರಿ ಕೆಸಮ್ ಬೋಕ್ ಸಹಾಯದಿಂದ ಬಡಗು ಮಿಶನ್ ಸ್ಥಾಪಿಸಿದನು. ಗಣಿತ, ಸಂಗೀತ, ವೈದ್ಯಕೀಯ ವಿಷಯಗಳಲ್ಲಿ ಆಳವಾದ ಪರಿಣತೆಯನ್ನು ಹೊಂದಿದನು. ಅಲ್ಲದೆ ಲಂಡನ್ ಮಿಶನ್ನಿನ ಜಾನ್ ಗ್ಯಾರೇಟ್ ಭಗವದ್ಗೀತೆಯ ವಿವಿಧ ಭಾಷಾನುವಾದ ವ್ಯಾಖ್ಯಾನ ಅವೃತ್ತಿ ಪ್ರಕಟಿಸುವ ಅವಧಿಯಲ್ಲಿ ವೈಗಲ್ ಆತನಿಗೆ ಸಲಹೆ ನೀಡಿದನು. ವೈಗಲ್ ಕೃತಿಯ ಬನ್ನನ್ನನ 'Pilgrams progre' ಕನ್ನಡಾನುವಾದ 'ಯಾಂತ್ರಿಕನ ಸಂಚಾರ' ಮಿಶನ್ನಿನ ಕ್ರೈಸ್ತ ಗೀತೆಗಳ ಸಂಕಲನದ (ನೂರು) ಪದ್ಯಗಳಲ್ಲಿ ಇಪ್ಪತ್ತಮೂರು ವೈಗಲ್‌ನವೇ ಆಗಿವೆ.

ಹೊಸಗನ್ನಡ ಕವಿತೆಗೆ ಕ್ರೈಸ್ತ ಪದ್ಯಗಳೇ ಮೊದಲ ಹೆಜ್ಜೆಗಳು. ಜರ್ಮನಿನ ಪ್ರಸಿದ್ಧ ಪತ್ರಿಕೆ 'ZDMG' ಪತ್ರಿಕೆಯಲ್ಲಿ ಕನ್ನಡ ಭಾಷೆ ಸಾಹಿತ್ಯ ಕುರಿತು ಲೇಖನ ಪ್ರಕಟವಾಗಿವೆ. ಅಲ್ಲದೆ ಕುಮಾರವ್ಯಾಸ, ಜೈಮಿನಿಭಾರತ, ರಾಜಶೇಖರವಿಳಾಸ, ದಾಸರ ಹಾಡುಗಳು ಪ್ರಕಟಗೊಳ್ಳುತ್ತಿದ್ದವು. ತಾಡವೋಲೆ, ಕೈಬರಹ, ಕನ್ನಡ ಸಾಹಿತ್ಯದ ಕಲ್ಪನೆ ಕನ್ನಡಿಗರಿಗೆ ಇರಲಿಲ್ಲ. ಹಾಗೆಯೇ ಕನ್ನಡ ಸಾಹಿತ್ಯವನ್ನು ಯುರೋಪಿಯನ್ನರಿಗೂ ಪರಿಚಯಿಸಿದರು. ಪ್ರಾಂಶುಪಾಲರಾದ ಹರ್ಮನ್ ಮೊಗ್ಲಿಂಗ್ ಲೇಖನ ಬರೆಯಲು ತಿಳಿಸಿದ್ದರು. ಮೊಗ್ಲಿಂಗ್ ಈ ರೀತಿ ಹೇಳಿದರು. ಆತನು ನನಗಿಂತ ಆಳವಾದ ಅನುಭವ ಮತ್ತು ಪರಿಣತಿಯನ್ನು ಹೊಂದಿದ್ದನು.

ಕನ್ನಡ ಭಾಷೆ ಸಂಸ್ಕೃತ ಹಾಗೂ ದ್ರಾವಿಡ ಭಾಷೆಗಳ ವಿಷಯವನ್ನು ತೌಲನಿಕವಾಗಿ ನೋಡುತ್ತಾನೆ. ಯಕ್ಷಗಾನ ಪ್ರಸಂಗ, ಜಾನಪದ ಹಾಡು ಇವುಗಳನ್ನು ಸಾಹಿತ್ಯವೆಂದು ಅಂಗವಾಗಿ ಪರಿಗಣಿಸಬೇಕು. ಜನಪದ ಕಥೆಗಳು ಯಾವುದೇ ಕಥನಗಳಿಗೆ ಸರಿ ಸಾಟಿಯಲ್ಲ ಹಳೆಗನ್ನಡ 'ಕರ್ನಾಟಕ ಶಬ್ದಮಂಜರಿ' ಇದು ಅಮರಕೋಶವೇ ಸೈ, ಕನ್ನಡ ಭಾಷೆಯ

ಪರಿಣತಿ ಪಡೆದಿದ್ದರಿಂದ ಚಿಕ್ಕ ಚಿಕ್ಕ ಪುಸ್ತಕಗಳನ್ನು ರಚಿಸಿದ್ದರು. ಕ್ರೈಸ್ತ ಸಾಹಿತ್ಯಕ್ಕೆ ಆತನ ಕೊಡುಗೆ ಅಪಾರವಿದೆ. ಬೈಬಲ್ ಕನ್ನಡಾನುವಾದ ಪರಿಷ್ಕರಣ ಕಾರ್ಯ ಮದ್ರಾಸ್ ಆಕ್ಸಿಯಂ ಬೈಬಲ್ ಸೊಸೈಟಿಯು ಕ್ರಿ.ಶ. ೧೮೧೪ರಲ್ಲಿ ಕರ್ನಾಟಕ ಎಲ್ಲ ಪ್ರೊಟೆಸ್ಟೆಂಟ್ ಮಿಶನ್ ಸಂಸ್ಥೆಗಳ ಪ್ರತಿನಿಧಿಗಳಿರುವ ಒಂದು ಸಮಿತಿಯನ್ನು ರಚಿಸಿ ಕನ್ನಡ ಬೈಬಲಿನ ನವೀಕರಣ ಕೆಲಸವನ್ನು ವೆಸ್ಲಿಯಸ್, ಲಂಡನ್ ಮಿಶನ್, ಸಂಸ್ಥೆಗಳಿಂದ ಪ್ರತಿನಿಧಿಗಳಲ್ಲಿ ಹಲವು ಮಿಶನರಿಗಳ ಅಧ್ಯಕ್ಷನಾಗಿದ್ದ ವೈಗಲ್‌ನಿಗೆ ವಹಿಸಿಕೊಟ್ಟರು. ಈ ಅನುವಾದ ಕೆಲಸವನ್ನು ಯಾವ ದೇಶಿಯ ವ್ಯಕ್ತಿಗಳ ಸಹಾಯ ಪಡೆಯದೆ. ವೈಗಲ್‌ನು ಮಾಡಿದ್ದನ್ನು ಹಾವನೂರ ಅವರು ಸೋದಾಹರಣವಾಗಿ ವಿವರಿಸಿದ್ದಾರೆ.

**ಮುಂಬಯಿ ಕರ್ನಾಟಕ : ಪ್ರಾದೇಶಿಕ ಇತಿಹಾಸ ಆಕರಗಳು ಮತ್ತು ಅವುಗಳ ಅಧ್ಯಯನ :**

ಈ ನಾಡಿಗೆ ಬ್ರಿಟಿಷರು ಬರುವುದಕ್ಕಿಂತ ಪೂರ್ವದಲ್ಲಿ 'ಮುಂಬಯಿ ಕರ್ನಾಟಕ' ಪ್ರಾಂತ್ಯದ ಪ್ರಾದೇಶಿಕ ಆಡಳಿತ ಸ್ವರೂಪದ ನಂತರ ಕುರಿತ ವಿಚಾರಗಳನ್ನು ಅವಲೋಕಿಸಲಾಗಿದೆ. ಮೂರು ಅವಧಿಯಲ್ಲಿ ಬದಲಾದ ಉತ್ತರ ಕನ್ನಡ ಜಿಲ್ಲೆ (ವಿಜಾಪುರ, ಬೆಳಗಾವಿ, ಧಾರವಾಡ) ಅಂದರೆ ೧೯೫೬ರ ಅವಧಿ ರಾಜ್ಯ ಪುನರ್ ರಚನೆಯಾಗುವರೆಗೂ ಬದಲಾವಣೆಗೆ ಬಳಕೆಯಾದ ಆಕರಗಳ ಅಥವಾ ಪುರಾವೆಗಳ ಬಗ್ಗೆ ಹಾವನೂರ ಅವರು ವಿವರಿಸಿದ್ದಾರೆ. ಪೇಶ್ವೆಯವರ ಆಡಳಿತದ ಅವಧಿಯಿಂದ ತಿಲಕರ ತನಕ ಈ ಪ್ರಾಂತ್ಯಕ್ಕೆ ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಸ್ಪರ ವಿನಿಮಯ ಮಾಡಿಕೊಳ್ಳುವ ಕುರಿತು ಲೇಖನದಲ್ಲಿ ಹಾವನೂರ ವಿವರಿಸಿದ್ದಾರೆ. ಆದಿಲ್‌ಷಾಹಿಗಳ ಪತನದ ಹಾಗೂ ಔರಂಗಜೇಬನ ಮರಣ ನಂತರ ಮರಾಠಿ ನಾಯಕರ, ಮೈಸೂರು ಅರಸರ ಮತ್ತು ನಿಜಾಮರ ವಶದಲ್ಲಿತ್ತು. ಆಗಾಗ ಎಲ್ಲಾ ದೊರೆಗಳು ದಾಳಿ ಮಾಡುತ್ತಿದ್ದರು. ಈ ಪ್ರಾಂತ್ಯದವರು ಸ್ವಾದಿ, ಸವಣೂರು, ಕಿತ್ತೂರು ಮುಂತಾದ ಸಂಸ್ಥಾನಿಕರು ಭಾರಿ ಕಪ್ಪ ಕಾಣಿಕೆಗಳನ್ನು ನೀಡಿ, ದಾಳಿ ಮಾಡದಂತೆ ನೋಡಿಕೊಳುತ್ತಿದ್ದರು. ಆದರೆ ನೈಸರ್ಗಿಕವಾಗಿ ನಿರ್ಮಿತಗೊಂಡಿರುವ ತುಂಗಭದ್ರ ನದಿಯ ತಡೆಯಿಂದಾಗಿ ಮೈಸೂರು ಅರಸರ ದಾಳಿ ಅಷ್ಟೊಂದು ಪ್ರಭಾವ ಬೀರಿರಲಿಲ್ಲ. ಹಾಗೆಯೇ ಭೌಗೋಳಿಕವಾಗಿ ಬಹಳ ಹತ್ತಿರವಿರುವುದರಿಂದ ಈ ಪ್ರಾಂತ್ಯದ ಒಡನಾಟವಿರುವ ಕಾರಣ. ಇಬ್ಬರ ನಡುವೆ ಸಾಮಾಜಿಕ ಧಾರ್ಮಿಕ ಮತ್ತು ಆಡಳಿತಾತ್ಮಕ ಸಂಬಂಧದ ಕಾರಣ. ಅಲ್ಲದೆ ಅಂತರ ಪ್ರಾಂತ್ಯೀಯ ವೈವಾಹಿಕ ಬಾಂದವ್ಯ ಇರುವುದರಿಂದ ದಾಳಿಗಳಾಗಲಿಲ್ಲ. ಮರಾಠರ ರಾಜಕೀಯ ಪ್ರಭಾವ ಮುಂಬಯಿ ಕರ್ನಾಟಕ ಮೇಲೆ ಇತ್ತು. ಈ ಕಾರಣದಿಂದ ಪ್ರಾಂತ್ಯವು ತನ್ನ ಸ್ವಾತಂತ್ರ್ಯ ಚಳುವಳಿಯ ಹಾಗೂ ಸಾಮಾಜಿಕ ಶೈಕ್ಷಣಿಕವಾಗಿ ಪುನರುತ್ಥಾನಗಳ ಅಸ್ತಿತ್ವಕ್ಕಾಗಿ ಆಗರ್‌ಕರ್, ತಿಲಕ, ರಾನಡೆ, ಗೋಖಲೆ ಮುಂತಾದವರು ತೊಡಗಿಕೊಂಡರು.

ಈ ಪ್ರಾಂತ್ಯದ ಐತಿಹಾಸಿಕ ಮರುಅಸ್ತಿತ್ವಕ್ಕೆ ಪುರಾವೆಗಳು ಆಧಾರವಾಗಿದ್ದವು. ಕಾಗದ ಪತ್ರ ದಾಖಲೆ, ಮೋಡಿ ಲಿಪಿ ಮರಾಠಿ ದಾಖಲೆ ಮತ್ತು ಇಂಗ್ಲಿಷ್, ಕನ್ನಡ, ಪರ್ಷಿಯನ್

ಮತ್ತು ಐರೋಪ್ಯ ಭಾಷೆಗಳ ದಾಖಲೆಗಳು, ಸಾಂಸ್ಕೃತಿಕ ಕೃತಿಗಳು (ಕನ್ನಡ, ಮರಾಠಿ) ಬಖೈರುಗಳು ಕೈಫಿಯತ್ತುಗಳು, ಜಾನಪದ, ಸಂಪ್ರದಾಯ, ವಂಶಾವಳಿ ಚರಿತ್ರೆ, ಪೂರ್ವ ಮಾನವ ನಿರ್ಮಿತ ವಾಸ್ತುಶಿಲ್ಪ, ಉಳಿಕಗಳು, ಆಡಳಿತ ಕಲೆ, ಶಿಲ್ಪಕಲೆ, ವಾಣಿಜ್ಯ ಮತ್ತು ಆರ್ಥಿಕ ಪರಿಸ್ಥಿತಿ, ಭಾಷೆ ಮತ್ತು ಸಾಹಿತ್ಯ, ಸೇನಾವ್ಯವಸ್ಥೆ, ಧಾರ್ಮಿಕ ಕಟ್ಟುಪಾಡು, ಸಾಮಾಜದ ನೀತಿ ಈ ಎಲ್ಲಾ ಪುರಾವೆಗಳು ಚರಿತ್ರೆಯ ಜೀವಂತಿಕೆ ಪಡೆದುಕೊಳ್ಳಲು ಸಾಧ್ಯವಾಯಿತು. ಆಡಳಿತಾತ್ಮಕವಾಗಿ ವಿಜಾಪುರ, ಬೆಳಗಾವಿ, ಧಾರವಾಡ ಹಾಗೂ ಉತ್ತರ ಭೌಗೋಳಿಕ ವಿಷಯ ಸೀಮಿತಗೊಳಿಸಿದ್ದರು. ಇತರ ಕೆಲವು ಪ್ರಾಂತ್ಯಗಳಾದ ಸೊಲ್ಲಾಪುರ, ಗುಲ್ಬರ್ಗ, ಚಿತ್ರದುರ್ಗ ಗೋವ ದಕ್ಷಿಣ ಕನ್ನಡಗಳ ಆಕರ ಲಭ್ಯತೆಯ ಅಲ್ಲದೆ ಇತರ ಗ್ರಂಥ ಭಂಡಾರಗಳ ಆಕರಗಳಿಂದ ಮುಂಬಯಿ ಕರ್ನಾಟಕಕ್ಕೆ ಚರಿತ್ರೆಯ ಹೊಸ ಸ್ವರೂಪ ಕೊಡಲು ಸಾಧ್ಯವಾಯಿತು. ಕಾಲಗರ್ಭದಲ್ಲಿ ಗರ್ಭೀಕರಿಸಿಕೊಂಡಿರುವ ವಿಷಯದ ಶೋಧನೆಯಿಂದ ಈ ಪ್ರಾಂತ್ಯದ ವಿಕಾಸಕ್ಕೆ ದಾರಿಯಾಯಿತು. ಹಾವನೂರ ಅಧ್ಯಯನ ಶೋಧನೆ, ದೃಷ್ಟಿಕೋನ ಮತ್ತು ವರ್ತಮಾನದ ವಿದ್ಯಮಾನ ಅರಿಯುವುದರ ಮೂಲಕ ಮುಂಬಯಿ ಕರ್ನಾಟಕ ಚರಿತ್ರೆಯ ತಿಳಿಯಲು ಸಾಧ್ಯವಾಯಿತು. ವರ್ತಮಾನದ ಯುವ ಸಮುದಾಯಕ್ಕೆ ಚರಿತ್ರೆಯ ಅರಿವು ಮೂಡಿಸಲು ಹಾವನೂರರ ಸ್ಥಿತಪ್ರಜ್ಞೆ ಪ್ರತಿನಿಧಿತಗೊಂಡಿದೆ.

**ಹರಿದಾಸರು ಚಿತ್ರಿಸಿದ ಕೆಲವು ಐತಿಹಾಸಿಕ ಹಾಗೂ ಸಮಕಾಲೀನ ಜನಜೀವನ ಅಂಶಗಳು**

ದಾಸರ ಕೀರ್ತನೆಗಳ ಮೂಲಕ ಸಾಮಾಜಿಕ ಬದುಕಿನ ಚಿತ್ರಣ ನಿರೂಪಿತಗೊಂಡಿದೆ. ದೈವಭಕ್ತಿ, ಪುರಾತನ ಬೃಂದಾವನ ಮತ್ತು ನೀತಿ ಭೋದನೆ ಕೀರ್ತನೆಗಳ ಮೂಲಕ ಜನಸಾಮಾನ್ಯರನ್ನು ಜಾಗೃತಿಗೊಳಿಸಲು ಧಾರ್ಮಿಕ ಕೆಲಸ ಮಾಡಿದವರು ಹರಿದಾಸರು ಭಾವನೆ ಮೂಡುವಂತೆ ಕಂಡುಬರುತ್ತದೆ. ಈ ಕೀರ್ತನೆಗಳ ಮೂಲಕ ಆ ಕಾಲಘಟ್ಟದಲ್ಲಿ ಮರಾಠರ ಆಳ್ವಿಕೆ ಕಾಲಕ್ಕೆ ಸ್ತ್ರೀಯರ ಮೇಲೆ ನಡೆದ ಮಾನಹರಣ ಸಮಗ್ರ ಚಿತ್ರಣ ಪ್ರಸ್ತುತಗೊಂಡಿದೆ. ಇಂಥ ದೌಜನ್ಯ ಸಂದರ್ಭದಲ್ಲಿ ಸ್ಥಳೀಯ ನಾಯಕರಾದ ಪರುಷುರಾಮ ಬಾಹು ಮತ್ತು ಕೆಂಪೇಗೌಡ ಗುಪ್ತ ರೀತಿಯಲ್ಲಿ ಸಹಾಯ ಮಾಡುತ್ತಿದ್ದರು. ಈ ದಾಳಿಯ ಪರಿಣಾಮವಾಗಿ ಸಾಮಾಜಿಕವಾಗಿ ಆತಂಕ ಮತ್ತು ಭಯ ಅವಲಂಬಿಸಿತು. ಕೆಲವು ಕೀರ್ತನೆಗಳಲ್ಲಿ ಕಾಲಗರ್ಭದಲ್ಲಿ ಗರ್ಭೀಕರಿಸಿಕೊಂಡಿರುವ ರಾಜವಂಶರ ಚರಿತ್ರೆಯು ನಿರೂಪಿತಗೊಂಡಿದೆ. ಮೈಸೂರಿನ ಮುಮ್ಮಡಿ ಕೃಷ್ಣರಾಜ, ಚಾಮರಾಜೇಂದ್ರ ರಾಜರುಗಳೇ ನಾರಾಯಣ ದಾಸರಿಗೆ ಚಾಮುಂಡೇಶ್ವರಿಯ ಸಕಲ ಸಂಪತ್ತು ಲಭಿಸಲೆಂದು ಹಾರೈಸಿದರು. ದಾಸರು ತಮ್ಮ ಕೀರ್ತನೆಗಳ ಮೂಲಕ ಕನ್ನಡಾಂಬೆಯ ಮತ್ತು ಭಾರತಾಂಬೆಯ ಕುರಿತು ಚರ್ಚೆ ಒಳಗೊಂಡಿದೆ. ಧಾರ್ಮಿಕ ವಿಷಯಗಳು ಅಲ್ಲದೆ ಭಾರತಾಂಬೆ ಕುರಿತು ಕೋಲಾಟದ ಧಾಟಿಯಲ್ಲಿ ಹಾಡಿದ್ದಾರೆ.

ಸ್ವಾತಂತ್ರ್ಯ ಚಳುವಳಿಯ ಕುರಿತ ಕೀರ್ತನೆಗಳು ಅಭಿಯಾನದ ಕಿಚ್ಚನ್ನು ಹಚ್ಚುವ, ಜನಸಾಮಾನ್ಯರಲ್ಲಿ ಜಾಗೃತಿ ಮೂಡಿಸುವ ಕುರಿತ ಚಿತ್ರಣ ಕೀರ್ತನೆಗಳಲ್ಲಿದೆ ಎಂಬುದನ್ನು ಹಾವನೂರ ಅವರು ವಿವರಿಸಿದ್ದಾರೆ. ಗಾಂಧಿಯ ಸತ್ಯ ಮತ್ತು ಅಹಿಂಸೆ ಅಳವಡಿಸಿಕೊಂಡ ಮೌಲ್ಯದ ವಿಚಾರಗಳು ಅನಾವರಣಗೊಂಡಿವೆ. ಹೈದ್ರಾಬಾದ್ ಕರ್ನಾಟಕ ಹೋರಾಟಗಾರರ ಕೀರ್ತನೆಯ ಸ್ವರೂಪ ಒಳಗೊಂಡಿದೆ. ಹರಿದಾಸರು ಬೇರೆ ಬೇರೆ ಮತದ ಗುರುವರ್ಯರನ್ನು ಯತಿಗಳನ್ನು ಸ್ಮರಿಸಿದ್ದಾರೆ. ಮಹಾರಾಷ್ಟ್ರದ ಸಂತ ಸಕ್ಕುಬಾಯಿ ಬಾಸ್ಕರ ಸ್ವಾಮಿ, ವೀರಶೈವ ಶರಣರ ಬಸವೇಶ್ವರ, ಪಕೀರಸ್ವಾಮಿ, ರೇವಣ ಸಿದ್ದೇಶ್ವರ ಮಹಾತ್ಮರ ಸಂಗತಿಗಳು ಪರಿಚಿತಗೊಂಡಿವೆ. ಆ ಕಾಲದ ಘಟ್ಟದಲ್ಲಿ ಪ್ರಾಕೃತಿಕ ಅತಿವೃಷ್ಟಿಗೆ ಒಳಗಾದ ಜನರ ಪರಿಸ್ಥಿತಿ, ಸಂಕಷ್ಟವನ್ನು ಕುರಿತು ಕೀರ್ತನೆಗಳಲ್ಲಿ ನಿರೂಪಿತಗೊಂಡಿದೆ. ಸಾಂಗತ್ಯ ಜನ ಮುಖಿಯಾಗುವಂತೆ ದಾಸ್ಯದಿಂದ ಜನರನ್ನು ಮುಕ್ತಗೊಳಿಸುವ ನಿಮಿತ್ತವಾಗಿ ಲೇಖನದ ಮೂಲಕ ಸಾಮಾಜಿಕ, ಮತ್ತು ಧಾರ್ಮಿಕ ಕುರಿತ ಕೀರ್ತನೆಗಳ ಸ್ವರೂಪ ಅನಾವರಣಗೊಂಡಿದೆ.

**'ಕರ್ನಾಟಕ ಜೈನ ಅಧ್ಯಯನಕ್ಕೆ ಜೈನೇತರ ಕೊಡುಗೆ'**

ಒಂದು ಧರ್ಮವನ್ನು ಕುರಿತು ಅಧ್ಯಯನ ಕೈಗೊಳ್ಳಬೇಕಾದರೆ ಅದರ ಚರಿತ್ರೆಯನ್ನು ಅರಿಯುವುದು ಬಹಳ ಮುಖ್ಯವಾದದು. ಕರ್ನಾಟಕದ ಜೈನ ಧರ್ಮವನ್ನು ಅನ್ಯರು ಅಧ್ಯಯನ ಮಾಡಿರುವುದರ ಬಗೆಗಿನ ಶಾಸನಗಳ ವ್ಯಾಸಂಗ, ಕವಿಗಳ ಕಾಲ, ದೇಶ, ನಿರ್ಣಯ ಧಾರ್ಮಿಕ ಮಾಹಿತಿಗಳ ಬಗ್ಗೆ ಹಾವನೂರ ಅವರು ಗಮನಸೆಳೆದಿದ್ದಾರೆ. ವಿವೇಚನೆ, ಕಲಾವಿಚಾರ ಈ ಅಂಶಗಳ ಆಧಾರದ ಮೇಲೆ ಅಧ್ಯಯನ ಕೈಗೊಳ್ಳುವುದು. ಆಕರಗಳ ಆಧರಿಸಿ ಮತ್ತು ರಾಜಮನೆಗಳ ಪರಂಪರೆಯ ಅನ್ಯಧರ್ಮೀಯರನ್ನು ಕುರಿತು ತಲಕಾಡಿನ ಗಂಗರು–ಕೆ.ಎಂ.ಕೃಷ್ಣರಾವ್, ಪಶ್ಚಿಮ ಗಂಗರ ಬಗೆಗೆ–ಬಿ.ಷೇಕ್‌ಅಲಿ. ರಾಷ್ಟ್ರಕೂಟರ ಬಗ್ಗೆ ವಿ.ಎಸ್.ಆಳ್ತರರು ಆಳವಾದ ಅಧ್ಯಯನ ಮಾಡಿದ್ದಾರೆ. ತುಳುನಾಡಿನ ಬಸ್ತಿಗಳು. ವಾಸ್ತುಶಿಲ್ಪ, ಮೂರ್ತಿಶಿಲ್ಪಗಳ ಸಂಬಂಧ ಉಲ್ಲೇಖಗೊಂಡಿದೆ.

ಧರ್ಮವನ್ನು ಕುರಿತು ಅನೇಕ ಉಲ್ಲೇಖ ಕಂಡುಬರುತ್ತವೆ. ರೈಸ್ ಅವರು ಶ್ರವಣಬೆಳಗೊಳದ ೧೪೪ ಶಾಸನಗಳನ್ನು ಪ್ರತ್ಯೇಕವಾಗಿ ಸಂಪುಟದಲ್ಲಿ ಪ್ರಕಟಿಸಿರುವುದು ಪರಿಚಿತಗೊಂಡಿದೆ. ಬಾ.ರಾ.ಗೋಪಾಲ್ ಅವರು ಶ್ರವಣಬೆಳಗೊಳದ ಬಸದಿಗಳ ನಿರ್ಮಾಣ, ರಾಜವಂಶದ ಇತಿಹಾಸ, ಜೈನ ಮುನಿಗಳ, ಶ್ರವಕರ ಮೇಲೆ ಬೆಳಕು ಚೆಲ್ಲುವ ಉಪಯುಕ್ತ ಮಾಹಿತಿಗಳಿವೆ. ಭಟ್ಕಳದ ಪಾರ್ಶ್ವನಾಥ ಬಸದಿ ಶಾಸನಗಳ ಕುಂದಾಚಾರ್ಯ, ಸಮಂತ ಭದ್ರಬಾಹು, ಚಾವುಂಡರಾಯರ ಮಹತ್ವದ ಸಂಗತಿಗಳು ಅಧ್ಯಯನ ಮಾಡಿದ್ದಾರೆ.

ಬಿ.ಎ.ಸಾತ್ತೂರ್ ಜೈನ ಪಂಗಡ ತತ್ವರಾಜವಂಶಕರು. ತಪಸ್ವಿ ಮತ್ತು ಧರ್ಮಪ್ರಸಾರ, ಹೀಗೆ ಜೈನ ಧರ್ಮದ ಇತಿಹಾಸ ಒಳಗೊಂಡಿದೆ. ಶ್ರವಣಬೆಳಗೊಳದ ಮೂಲವನ್ನು ಕಂಡುಕೊಳ್ಳುವ ಜಿನವಲ್ಲನ ಶಾಸನ, ಬುಕ್ಕರಾಯ ಶಾಸನ, ನಾಗಚಂದ್ರ ಕಟ್ಟಿದ ಬಸದಿ,

ಶಾಸನಗಳಲ್ಲಿ ಕಂಡು ಪಂಪ ಕಾವ್ಯ ಮೂಲಕ ಹೊಸ ಸಂಗತಿಗಳನ್ನು ಚಿದಾನಂದಮೂರ್ತಿ ಕನ್ನಡ ಶಾಸನಗಳನ್ನು ಅಧ್ಯಯನದ ಮೂಲಕ ಅಭಿವ್ಯಕ್ತಗೊಂಡಿರುವುದನ್ನು ಅವಲೋಕಿಸಲಾಗಿದೆ. ಆರ್.ವಿ.ಎಸ್.ಸುಂದರಂ, ಎ.ವಿ.ನರಸಿಂಹಮೂರ್ತಿ ಅವರ ಅಧ್ಯಯನದ ಮೂಲಕ ಕರ್ನಾಟಕ ಇತಿಹಾಸ ಸಮ್ಮೇಳನದಲ್ಲಿ ಮಂಡಿಸಿದ ಸಂಗತಿಗಳು ಪ್ರಾದೇಶಿಕತೆ ಜೈನ ಶಾಸನಗಳು, ಬಸದಿಗಳು, ಹೀಗೆ ಜೈನೇತರರ ಪಾತ್ರವಿದೆ. ಇನ್ನೊಂದು ಮಹತ್ವದ ಜೈನ ಸಾಹಿತ್ಯದ ಚರಿತ್ರೆಯಂತೆ ಜೈನಕಾವ್ಯ, ಶಾಸ್ತ್ರ ಕೃತಿಗಳು ಸಂಪಾದನೆ, ಅಧ್ಯಯನ, ವಿಮರ್ಶೆ ಕನ್ನಡ ನಾಡಿನ ಚರಿತ್ರೆಗಳ ತಮ್ಮದೇಯಾದ ವೈಶಿಷ್ಟ್ಯವನ್ನು ಮೆರೆದಿದೆ. ಮೈಸೂರು ಎಂ.ಎ.ರಾಮಾನುಜಾಚಾರ್ಯ, ಎಸ್.ಜಿ.ನರಸಿಂಹಾಚಾರ್ಯ ಕಾವ್ಯಮಂಜರಿ ಕಾವ್ಯಕಲಾನಿಧಿ ಪತ್ರಿಕೆ ಮೂಲಕ ಅಲ್ಲದೆ ಕೃತಿಯ ರೂಪದಲ್ಲಿ ಕಟ್ಟಿಕೊಟ್ಟಿದ್ದಾರೆ.

ಗದಾಯುದ್ಧ, ಮಲ್ಲಿನಾಥ ಪುರಾಣ ಮುಂತಾದ ಪಾಶ್ಚಿಮಾತ್ಯರ ಪ್ರಭಾವದಿಂದ ಶಾಸ್ತ್ರೀಯವಾಗಿ ಕೃತಿ ಸಂಪಾದನೆ ಮಾಡುವ ಪರಂಪರೆಯನ್ನು ಮುಂದುವರಿಸಿದರು. ಕಾವ್ಯ ಸಂಗ್ರಹ, ಮರು ಸಂಪಾದನೆ ಮತ್ತು ಸಮೀಕ್ಷೆ ಲೇಖನಗಳು ಅಲ್ಲದೆ ಪ್ರಬಂಧ ರೂಪದಲ್ಲಿ ಪರಿಚಿತಗೊಂಡಿತು. ಈ ರೀತಿಯಾಗಿ ಡಿ.ಎಲ್.ಎನ್,ತೀನಂ ಶ್ರೀ,ತ.ರಾಸು ಮುಂತಾದವರು ವಡ್ಡಾರಾಧನೆ ಪಂಪ ರಾಮಾಯಣ, ಗದಾಯುದ್ಧ ಸಂಗ್ರಹ, ವರ್ಧಮಾನ ಪುರಾಣ, ಅಜಿತ ಪುರಾಣ ಸಂಗ್ರಹ, ಜೈನಕಾವ್ಯಗಳನ್ನು ಮತ್ತು ಶಾಸ್ತ್ರ ಕೃತಿಗಳನ್ನು ಜನಪ್ರಿಯಗೊಳಿಸಿದರು.

## ಕೊನೆಯ ಟಿಪ್ಪಣಿ

೧. ಪತ್ರಗಳು ಚಿತ್ರಿಸಿದ ಗೋವಿಂದ ಪೈ, ಶ್ರೀನಿವಾಸ ಹಾವನೂರ ಪು.ಸಂ. ೧೦
೨. ಅದೇ, ಪು.ಸಂ ೧೯
೩. ಅದೇ, ಪು.ಸಂ ೧೯
೪. ಅದೇ, ಪು.ಸಂ ೧೨, ಕನ್ನಡ ಪತ್ರಿಕಾ ಸೂಚಿ, ಶ್ರೀನಿವಾಸ ಹಾವನೂರ
೫. ಅದೇ, ಪು.ಸಂ ೧೩, ಕನ್ನಡ ಪತ್ರಿಕಾ ಸೂಚಿ, ಶ್ರೀನಿವಾಸ ಹಾವನೂರ
೬. ಕನ್ನಡ ಪತ್ರಿಕಾ ಸೂಚಿ, ಶ್ರೀನಿವಾಸ ಹಾವನೂರ ಪು.ಸಂ. ೨೦
೭. ಅದೇ, ಪು.ಸಂ ೦೪
೮. ಅದೇ, ಪು.ಸಂ ೧೨
೯. ಅದೇ, ಪು.ಸಂ ೧೭
೧೦. ಅದೇ, ಪು.ಸಂ ೧೭
೧೧. ಅದೇ, ಪು.ಸಂ ೩೦
೧೨. ಅದೇ, ಪು.ಸಂ ೩೧
೧೩. ಅದೇ, ಪು.ಸಂ ೫೪–೫೫
೧೪. ಅದೇ, ಪು.ಸಂ ೫೭
೧೫. ಅದೇ, ಪು.ಸಂ ೬೦
೧೬. ಅದೇ, ಪು.ಸಂ ೬೧
೧೭. ಅದೇ, ಪು.ಸಂ ೬೨
೧೮. ಅದೇ, ಪು.ಸಂ ೬೨
೧೯. ಅದೇ, ಪು.ಸಂ ೬೨
೨೦. ಅದೇ, ಪು.ಸಂ ೧೨೪
೨೧. ಅದೇ, ಪು.ಸಂ ೧೨೭
೨೨. ಅದೇ, ಪು.ಸಂ ೧೭೬–೧೭೭
೨೩. ಕನ್ನಡ ಪತ್ರಿಕಾ ಸೂಚಿ, ಶ್ರೀನಿವಾಸ ಹಾವನೂರ, ಪು.ಸಂ. ೧೭೭
೨೪. ಅದೇ, ಪು.ಸಂ. ೧೭೭
೨೫. ಕನ್ನಡ ಶಬ್ದ ಮಂಜರಿ, ಶ್ರೀನಿವಾಸ ಹಾವನೂರ, ಪು.ಸಂ. ಮುನ್ನುಡಿಯಲ್ಲಿ
೨೬ ಸಂ–ಕಥನ ನಾ.ದಾ.ಮೋದರಶೆಟ್ಟಿ, ಪು.ಸಂ. ೯೯
೨೭. ಸಮಯ ಪ್ರಜ್ಞೆ ಮತ್ತು ಚಾಕಲೇಟ್ – ಶ್ರೀನಿವಾಸ ಹಾವನೂರ – ಪು.ಸಂ. ೭೦–೭೧
೨೮. ಎ.ಸಿ.ಬರ್ನೆಲ್, ಶ್ರೀನಿವಾಸ ಹಾವನೂರ – ಪು.ಸಂ. ೩೧೪ – (ಇತಿಹಾಸ ದರ್ಶನ.)

## ಅಧ್ಯಾಯ ಎಂಟು

# ಕನ್ನಡ ಸಂಶೋಧನೆ ಮತ್ತು ಶ್ರೀನಿವಾಸ ಹಾವನೂರ

ಆಧುನಿಕ ಸಾಹಿತ್ಯಕ್ಕೆ ಹೊಸ ಸ್ವರೂಪ ಕೊಡುವಲ್ಲಿ ಹಾವನೂರ ಅವರ ಪಾತ್ರ ಮಹತ್ವದ್ದು. ಮನುಷ್ಯನ ಬದುಕಿನಲ್ಲಿ ಹೇಗೋ ಹಾಗೆಯೇ ಸಾಹಿತ್ಯದಲ್ಲಿ ಹೊಸ ಸ್ವರೂಪ ಪಡೆದುಕೊಂಡಿದೆ. ಕನ್ನಡ ನಾಡನ್ನು ಆಳುವಂತಹ ಸಮರ್ಥ ರಾಜವಂಶವು ಇಲ್ಲದ ಕಾರಣಕ್ಕೋ ಇಲ್ಲವೆ ಅನ್ಯಭಾಷಿಗರ ಪ್ರಭಾವ ಹೆಚ್ಚಿಗೆ ಇರುವ ಕಾರಣಕ್ಕೋ? ಹೀಗಾಗಿ ಅನ್ಯ ರಾಜರುಗಳ ಅಧೀನದಲ್ಲಿ ತನ್ನದೇಯಾದ ಪ್ರಗತಿ ಕಾಣಲು ಸಾಧ್ಯವಾಗಲಿಲ್ಲ. ೧೮ನೇ ಶತಮಾನದಲ್ಲಿ ಹಳೆಗನ್ನಡ ಮತ್ತು ನಡುಗನ್ನಡ ಸ್ವರೂಪ ಕಂಡುಬಂದರೂ. ಈ ಎರಡು ಪ್ರಭೇದಗಳಲ್ಲಿ ನಡುಗನ್ನಡ ಸಾಹಿತ್ಯವೇ ಹೆಚ್ಚು ಪ್ರಾಮುಖ್ಯತೆಯನ್ನು ಪಡೆಯುತ್ತದೆ. ೧೮ನೇ ಶತಮಾನದಲ್ಲಿ ಗದ್ಯ ಪುರಾಣ ಮತ್ತು ಶಾಸ್ತ್ರಗ್ರಂಥಗಳ ಟೀಕಾನುವಾದಕ್ಕೆ ಮುಖ್ಯವಾಗಿ ಬಳಸಲಾಯಿತು. ಮೈಸೂರು ಆಸ್ಥಾನ ಮತ್ತು ಶ್ರೀವೈಷ್ಣವ ವಿದ್ವಾಂಸರು ಈ ಟೀಕಾ ಗದ್ಯವನ್ನು ರಚಿಸಿದರು. ಅಲ್ಲದೆ ಜೈನ ಮತ್ತು ಅದ್ವೈತಗಳ ಗದ್ಯಗಳ ದೃಷ್ಟಿಯಿಂದ ಬಹಳ ಕಡಿಮೆ ಸಾಹಿತ್ಯ ಕೃಷಿ ನಡೆಯಿತು.

ಈ ದೇಶಕ್ಕೆ ಆರಂಭದಲ್ಲಿ ಬಂದ ವಾಸ್ಕೋಡಿಗಾಮನ ಕಾಲಕ್ಕೆ ಜನಜೀವನ ಮೇಲೆ ಪಾಶ್ಚಿಮಾತ್ಯರ ಪ್ರಭಾವ ಬೀರಲಿಲ್ಲ. ಆದರೆ ೧೯ನೇ ಶತಮಾನದ ಕಾಲಕ್ಕೆ ಈ ನಾಡಿನ ಒಂದು ಭಾಗ ಬ್ರಿಟೀಷರ ಅಧೀನದಲ್ಲಿದ್ದರೆ, ಮತ್ತೊಂದು ಭಾಗ ಬೇರೆ ಬೇರೆ ಸಂಸ್ಥಾನಿಕರ ಆಳ್ವಿಕೆಗೆ ಒಳಪಟ್ಟಿತ್ತು. ಆಡಳಿತಾತ್ಮಕವಾಗಿ ಇಬ್ಭಾಗವಾದ ಹಿನ್ನೆಲೆಯಲ್ಲಿ ಕನ್ನಡ ನಾಡಿನ ಜನರು ಶೈಕ್ಷಣಿಕ ಮತ್ತು ಸಾಹಿತ್ಯಿಕವಾಗಿ ಪ್ರಗತಿ ಕಾಣಲು ಸಾಧ್ಯವಾಯಿತು. ಕ್ರಿ.ಶ. ೧೮೫೭ರ ಅವಧಿಯಲ್ಲಿ ಬ್ರಿಟೀಷರ ವಿರುದ್ಧ ಪ್ರತಿಭಟಿಸುವ ಸ್ವರೂಪ ಅಲ್ಲಲ್ಲಿ ಜೀವಂತ ಪಡೆದುಕೊಂಡವು. ಉತ್ತರ ಭಾರತದಲ್ಲಿ ಇದ್ದಷ್ಟು ದಕ್ಷಿಣ ಭಾರತದಲ್ಲಿ ಪ್ರತಿಭಟನೆಯ ಸ್ವರೂಪ ಕಾಣಲಿಲ್ಲ. ನಂತರದಲ್ಲಿ ಸಂಪರ್ಕ ಹೆಚ್ಚು ಅನುಕೂಲ ಕಲ್ಪಿಸಿಕೊಟ್ಟಿತು.

೧೯ನೇ ಶತಮಾನದ ಕಾಲಕ್ಕೆ ಹೊಸ ಸ್ವರೂಪ ಕೊಡುವಲ್ಲಿ ಈ ನಾಡಿಗೆ ಬಂದ ಪಾಶ್ಚಿಮಾತ್ಯರಿಂದ ಪಾತ್ರ ಬಹಳ ಮಹತ್ವದ್ದು. ಹೀಗಾಗಿ ಆಡಳಿತಾತ್ಮಕವಾಗಿ ಮುದ್ರಣ

ಯಂತ್ರ ಬಂದ ಮೇಲೆ ಕ್ರೈಸ್ತಮತ ಪ್ರಚಾರ, ನೂತನ ಶಿಕ್ಷಣ ಪದ್ಧತಿ ಈ ಎಲ್ಲದರ ಪರಿಣಾಮವಾಗಿ ಬದಲಾವಣೆ ಕಂಡಿತು. ಪಾಶ್ಚಿಮಾತ್ಯ ಅಧಿಕಾರಿಗಳು ಕರ್ತವ್ಯವನ್ನು ದಕ್ಷತೆಯಿಂದ ಮಾಡುತ್ತಿದ್ದರು. ಜಿಲ್ಲೆ ಅಥವಾ ಪ್ರಾಂತ್ಯವಾರು ಅಧಿಕಾರಿಗಳು ಆ ಪರಿಸರವನ್ನು ಹಿಡಿತದಲ್ಲಿ ಹಿಟ್ಟುಕೊಳ್ಳುತ್ತಿದ್ದರು. ಅಲ್ಲದೆ ಆರ್ಥಿಕವಾಗಿದ್ದ ಪ್ರದೇಶವನ್ನು ಸುಲಿಗೆ ಮಾಡುತ್ತಿದ್ದರು. ಸಾಮಾಜಿಕವಾಗಿ ಇದ್ದ ಆಶಾಂತಿ ವಾತಾವರಣವನ್ನು ನಿಯಂತ್ರಿಸಿದರು.

ಈ ಪ್ರದೇಶದ ಪ್ರಗತಿಗೆ ಪೂರಕವಾದ ಉದ್ಯಮ, ಕೈಗಾರಿಕೆ, ಯಂತ್ರ, ಸಂಚಾರದ ಸಾಧನಗಳನ್ನು ಪಡೆದ ಹಿನ್ನೆಲೆಯಲ್ಲಿ ಈ ನಾಡಿನ ಜನರಿಗೆ ಬದಲಾವಣೆ ಆದದಂತೆ ಭಾಸವಾಯಿತು. ಭಾರತೀಯರ ದೃಷ್ಟಿಯಲ್ಲಿ ಸಾಮಾನ್ಯ ಜನರಿಗೂ ಮನಸೊಲುವಂತೆ ಮಾಡಿತು. ಅವರ ಚಿಕಿತ್ಸಕ ಮನೋವೃತ್ತಿ, ವ್ಯವಹಾರದ ಜಾಣ್ಮೆ ಈ ನಾಡಿನ ಜನಸಾಮಾನ್ಯರಲ್ಲಿ ಬದುಕಿಗೆ ಹೊಸತನ ಬದಲಾದಂತೆ ಕಾಣುತ್ತದೆ. ಮುದ್ರಣ ಯಂತ್ರ ಬಂದ ಅಲ್ಪದಿನದಲ್ಲಿ ಬದಲಾವಣೆ ಕಂಡಿತು. ಅಂದರೆ ಶೈಕ್ಷಣಿಕ ಮತ್ತು ಸಾಹಿತ್ಯಿಕವಾಗಿ ಪ್ರಗತಿ ಕಾಣಲು ಸಾಧ್ಯವಾಯಿತು. ಮಿಶನರಿಗಳು ತಮ್ಮೊಂದೊಂದಿಗೆ ಮುದ್ರಣ ಮತ್ತು ಬೈಬಲ್ ಜೊತೆಗೊಂಡು ಅವರ ಧರ್ಮ ಪ್ರಚಾರಕ್ಕೆ ತಮ್ಮನ್ನು ಪರಿಪೂರ್ಣವಾಗಿ ತೊಡಗಿಸಿಕೊಂಡರು. ಹೀಗಾಗಿ ಸಾಹಿತ್ಯಿಕ ಹಾಗೂ ಶೈಕ್ಷಣಿಕವಾಗಿ ಮುನ್ನಡೆಯಲು ಸಹಕಾರಿಯಾಯಿತು.

ತಮ್ಮ ಧರ್ಮವನ್ನು ಈ ನಾಡಿನಲ್ಲಿ ನೆಲೆಗೊಳಿಸುವ ಉದ್ದೇಶ ಸಫಲವಾಗಬೇಕಾದರೆ ಅದಕ್ಕೆ ಸರಳಮಾರ್ಗವೆಂದರೆ ಶಿಕ್ಷಣ, ಇದರಿಂದ ಬಹಳ ಸುಲಭವಾಗಿ ನಮ್ಮ ಗುರಿ ತಲುಪಲು ಸಾಧ್ಯವಾಗುತ್ತದೆ ಎಂಬುದನ್ನು ಬ್ರಿಟಿಷರು ಬಹುಬೇಗನೆ ಅರಿತುಕೊಂಡರು. ಈ ಹಿನ್ನೆಲೆಯಲ್ಲಿ ಸರ್ಕಾರ ಮತ್ತು ಮಿಶನರಿಗಳು ಕೂಡಿ ಇಂಗ್ಲಿಷ್ ಶಾಲೆಗಳನ್ನು ತೆರೆದು ಶಿಕ್ಷಣವನ್ನು ಸಾಮಾನ್ಯ ಜನರತ್ತ ಕೊಂಡೊಯ್ದುದರು. ಅವರ ಶಿಕ್ಷಣ ಪ್ರಭಾವ ಜನರಲ್ಲಿ ನೀತಿ ಮಾತುಗಳು ಸ್ವಾಭಿಮಾನ, ಸ್ವತಂತ್ರ ವಿಚಾರಗಳು, ಜೀವಂತಿಕೆ ಪಡೆದುಕೊಂಡವು. ಈ ನಾಡಿನ ಧರ್ಮವನ್ನು ನಿಂದಿಸುತ್ತ ತಮ್ಮ ಧರ್ಮವನ್ನು ಜನಪ್ರಿಯಗೊಳಿಸುವ ಉದ್ದೇಶವಾಗಿತ್ತು. ಶಿಕ್ಷಣ ಕೊಡುವುದರ ಮೂಲಕ ತಮ್ಮನ್ನು ಅಡಿಯಾಳಾಗಿ ಇಟ್ಟುಕೊಳ್ಳುತ್ತಾರೆ ಎಂಬುದು ಭಾರತೀಯರಿಗೆ ನಂತರ ಗೊತ್ತಾಯಿತು.

೧೯ನೇ ಶತಮಾನದ ಮಧ್ಯಕಾಲದಲ್ಲಿ ಭಾರತಕ್ಕೆ ಬಂದ ಮಿಶನರಿಗಳಲ್ಲಿ ಅಮೇರಿಕಾ ಮತ್ತು ಯುರೋಪಿನಿಂದ ಬಂದವರ ಸಂಖ್ಯೆ ಹೆಚ್ಚು; ಅಲ್ಲದೆ ನಾಲ್ಕು ಮಿಶನ್ ಸಂಸ್ಥೆಗಳು ಬಂದವು. ಈ ದೇಶದ ಬೇರೆ ಬೇರೆ ಕಡೆ ಅವರನ್ನು ಕೆಲಸದಲ್ಲಿ ತೊಡಗಿಕೊಂಡರು. ಈ ಮಿಶನರಿಗಳಿಗೆ ಬರುತ್ತಿದ್ದ ಅನುದಾನ ೩೦ ಲಕ್ಷ ರೂ ಕಳುಹಿಸುತ್ತಿದ್ದರು. ಈ ಹಣವನ್ನು ಶಿಕ್ಷಣ ಮತ್ತು ಮುದ್ರಣಕ್ಕಾಗಿ ಹೆಚ್ಚು ವೆಚ್ಚವಾಗುತ್ತಿತ್ತು. ಇಷ್ಟೆ ಅಲ್ಲದೆ ಹಣ ಮತ್ತು ಶ್ರಮ ಎರಡನ್ನು ಸಮರ್ಪಕವಾಗಿ ಬಳಸಿಕೊಂಡು ಕಾರ್ಯನಿರ್ವಹಿಸಿದರು. ನಿರೀಕ್ಷಿಸಿದಷ್ಟು ಲಾಭ ಆಗಲಿಲ್ಲ. ಆದರೆ ನಗರದ ಅಥವಾ ಊರುಗಳಲ್ಲಿ ತಮ್ಮ ಕೇಂದ್ರವನ್ನು ತೆರೆದು ಕೆಲವು

ವರ್ಷ ಕೆಲಸ ಮಾಡಿದರೂ ಕೂಡ ಧರ್ಮ ಸ್ವೀಕರಿಸುವವರು ಮತ್ತು ಶಾಲೆಗೆ ಬರುವವರ ಸಂಖ್ಯೆ ಬಹಳ ವಿರಳವಾಯಿತು. ದೇಶದ ಹತ್ತು ಹಲವು ಕಡೆಗೆ ಸುತ್ತಿ ಪ್ರತಿಗಳನ್ನು ಮುದ್ರಿಸಿ ಕೊಟ್ಟರೂ ಆರಂಭದಲ್ಲಿ ಅಂಥ ಪ್ರಗತಿ ಕಾಣಲಿಲ್ಲ.

ಈ ನಾಡಿಗೆ ಬಂದಂತಹ ಮಿಶನರಿಗಳು ಉಚ್ಚ ಶಿಕ್ಷಣ ಪಡೆದವರು. ಬುದ್ಧಿವಂತರು. ಅಲ್ಲದೆ ಅವರು ಬಂದಿದ್ದು ಹುದ್ದೆಗಾಗಿ ಅಲ್ಲ; ತಮ್ಮ ನಾಡಿನ ಅಭಿಮಾನದಿಂದ ಪ್ರಚಾರಕ್ಕೆ ಬಂದರು. ಆ ದೇಶದ ಮಿಶನ್ ಸಂಸ್ಥೆ ಸದಸ್ಯರಾಗಿ ಧರ್ಮಕಾರ್ಯದಲ್ಲಿ ನಿರತರಾಗಿರುತ್ತಿದ್ದರು. ಮಿಶನರಿಗಳಿಗೆ ಬಂದಂತಹ ಸಂಕಷ್ಟ ಅಷ್ಟಿಷ್ಟಲ್ಲ; ಭಾಷೆ, ಹೊಸ ಪರಿಸರ ಆ ಸಂದರ್ಭದಲ್ಲಿ ಬಂದಂಥ ಜನರ ವಿರೋಧ ಮತ್ತು ಅವಮಾನ ಸಹಿಸಿಕೊಳ್ಳುವುದರ ಮೂಲಕ ಆತ್ಮಸ್ಥೈರ್ಯ ಪಡೆದುಕೊಂಡು ಮುನ್ನುಗ್ಗಿದರು. ಮಿಶನರಿಗಳು ನಿರಂತರವಾಗಿ ಕಾರ್ಯೋನ್ಮುಖರಾಗಿರುತ್ತಿದ್ದರು. ಶಾಲೆ, ಮುದ್ರಣಾಲಯ ಮತ್ತು ಸಾರ್ವಜನಿಕ ಸರ್ಕಾರಿ ಕಛೇರಿಗಳನ್ನು ಸಂಪರ್ಕಿಸುವುದು ಅವರ ಪ್ರತಿನಿತ್ಯದ ಕಾರ್ಯಗಳಾಗಿದ್ದವು.

ಸ್ಥಳೀಯ ಪಂಡಿತರು ಮುಕ್ತ ಮನಸ್ಸಿನಿಂದ ಸ್ಪಂದಿಸುತ್ತಿರಲಿಲ್ಲ. ಆದರೂ ಈ ದೇಶದ ಸ್ಥಳೀಯ ಭಾಷೆಗಳ ಪರಿಣತಿ ಪಡೆದು ಉತ್ತಮವಾದ ಸಾಹಿತ್ಯ ಕೃತಿಗಳನ್ನು ರಚನೆ ಮಾಡಿದರು. ಶೈಕ್ಷಣಿಕವಾಗಿ ತಮ್ಮನ್ನು ತೊಡಗಿಸಿಕೊಂಡರು. ಅವರಲ್ಲಿ ಗುಣ ಕಷ್ಟ ಸಹಿಷ್ಣುತೆ, ತ್ಯಾಗದ ಮನೋವೃತ್ತಿ ಮಾಡುವ ಕಾರ್ಯದ ಬಗ್ಗೆ ಬದ್ಧತೆ ಮತ್ತು ಶ್ರದ್ಧೆ ಮತ್ತು ಛಲ ಇದ್ದ ಕಾರಣಕ್ಕಾಗಿ ಹೊಸ ಪರಿಸರ ಸೃಷ್ಟಿಸುವಲ್ಲಿ ಸಾಧ್ಯವಾಯಿತು. ಈ ಮಿಶನರಿಗಳು ಮಾಡುವ ಸಾಹಿತ್ಯದ ಕಾರ್ಯವು ತಮ್ಮದೇಯಾದ ವಿಧಾನವನ್ನು ಅನುಸರಿಸುತ್ತಿದ್ದರು ಅಲ್ಲದೆ ಮಿಶನ್ ಸಂಸ್ಥೆಯವರು ಕೇಂದ್ರದ ಸ್ಥಳೀಯ ಭಾಷೆ ಮೊದಲು ಕಲಿತುಕೊಂಡು ಆನಂತರ ಬೈಬಲ್ ಮತ್ತು ತತ್ವದ ಕೃತಿಗಳನ್ನು ತರ್ಜುಮೆ ಮಾಡಿದರು. ಅದರ ಜೊತೆಗೆ ವ್ಯಾಕರಣ ಕೋಶವನ್ನು ಬರೆಯುತ್ತಿದ್ದರು. ಸ್ಥಳೀಯ ಶಾಲೆಯ ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕಗಳನ್ನು ರಚಿಸುತ್ತಿದ್ದರು. ಆ ಕೇಂದ್ರದಲ್ಲಿ ಮುದ್ರಣ ಸ್ಥಾಪಿಸಿ ಮುದ್ರಿಸಿದ ಪ್ರತಿಗಳನ್ನು ಜನಸಾಮಾನ್ಯರಿಗೆ ತಲುಪಿಸುತ್ತಿದ್ದರು.

ಆ ಕೃತಿಗಳನ್ನು ಪ್ರಕಟಪಡಿಸುವ "ಸಹಾಯಕರು, ಬೈಬಲ್ ಸಂಘ, ಹಾಗೂ ಬುಕ್ ಎಂಡ್ ಟ್ರ್ಯಾಕ್ಟ್‌ಬುಕ್ ಸೊಸೈಟಿಗಳ ಮುಖಾಂತರ ನಡೆಸುತ್ತಿದ್ದರು. ಇಂಥ ಸಂಸ್ಥೆಗಳಿಗೆ ಲಂಡನ್ನಿನಲ್ಲಿದ್ದ 'ಬ್ರಿಟಿಷ್ ಎಂಡ್ ಪಾರನ್ ಬೈಬಲ್ ಸೊಸೈಟಿ' ಹಾಗೂ ರಿಲಿಜನ್ ಟ್ರ್ಯಾಕ್ಟ್ ಸೊಸೈಟಿಗಳು ವಿಶೇಷ ಧನಸಹಾಯ ಒದಗಿಸುತ್ತಿದ್ದವು ಇದರ ಪರಿಣಾಮವಾಗಿ ಮಿಶನರಿ ಕೇಂದ್ರಗಳಿದ್ದವು. ಎಲ್ಲಾ ಮಹತ್ವದ ಸ್ಥಳಗಳಲ್ಲಿಯೂ ಇಂಥ ಪೂರಕ ಸಂಸ್ಥೆಗಳು ಜನ್ಮತಾಳಿದವು. ಗ್ರಂಥೋದ್ಯಮಕ್ಕೆ ನೆರವಾದವು. ಲಂಡನ್ ಕೇಂದ್ರಿಯ ಮಿಶನ್ ಸಂಸ್ಥೆಯು ವರದಿಯೊಂದರ ಪ್ರಕಾರ ೧೮೪೪–೧೮೫೪ರ ಅವಧಿಯಲ್ಲಿ ಭಾರತದ ಮಿಶನರಿಗಳು ಲಕ್ಷ ಪುಸ್ತಕಗಳನ್ನು ವಿವಿಧ ಭಾಷೆಯಲ್ಲಿ ರಚಿಸಿ ಪ್ರಕಟಿಸಿದರು. ಕೆಲವು ಪ್ರಮುಖ ಕೃತಿಗಳನ್ನು ಎಲ್ಲಾ ಭಾಷೆಯಲ್ಲಿ

ಅನುವಾದಗೊಂಡವು. ಜಾನ್ ಬನ್ಯನ್ನನ ಟಿಲ್‌ಗ್ರಿಮ್ಸ್ ಪ್ರೋಗ್ರೆಸ್ ಹಾಗೂ ಹೋಲಿ 'ವಾರ್' 'ಪುಲಮಣಿ ಕರುಣಾ' ಎಂಬ ಕಥಾನಕ ಮೊದಲಾದ ಕೃತಿಗಳು ಹತ್ತಾರು ಭಾಷೆಯಲ್ಲಿ ಕಾಣಿಸಿಕೊಂಡವು."[೧] ಹೀಗೆ ಹಾವನೂರ ಅವರು ಸೋದಾಹರಣವಾಗಿ ವಿವರಿಸಿದ್ದಾರೆ.

ಈ ಎಲ್ಲಾ ಮಹತ್ವದ ಸಂಗತಿ ಆಧರಿಸಿ ಹೇಳುವುದಾದರೆ ಮಿಶನರಿಗಳು ಮತ್ತು ಬ್ರಿಟಿಷ್ ಅಧಿಕಾರಿಗಳು ಮಾಡುವ ಕಾರ್ಯದ ಹಿಂದೆ ತನ್ನದೇ ಉದ್ದೇಶವನ್ನು ಇಟ್ಟುಕೊಂಡಿರುತ್ತಿದ್ದರು. ಅದು ಈ ರೀತಿ ತಮ್ಮ ಧರ್ಮ, ತತ್ವ, ಭಾಷೆ, ಸಂಸ್ಕೃತಿಯನ್ನು ಈ ನಾಡಿನ ಜನರ ಮೇಲೆ ಸಾರ್ವತ್ರಿಕವಾಗಿ ಒತ್ತಡ ಹೇರುವುದು. ಇದರ ಜೊತೆಗೆ ಸಾಹಿತ್ಯ ಸಂಸ್ಕೃತಿ ಈ ನಾಡಿನ ಜನಮಾನಸದಲ್ಲಿ ಹಾಸುಹೊಕ್ಕಗಿರುವಂತೆ ಮಾಡಿ ತಮ್ಮ ಅಸ್ತಿತ್ವ ನೆಲೆ ಭದ್ರಗೊಳಿಸುವುದು ಅವರ ಗುರಿಯಾಗಿತ್ತು. ಅವರು ಮಾಡುವ ಕೆಲಸದಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಳ್ಳುತ್ತಿದ್ದರು. ಹೀಗಾಗಿ ಅವರ ಕಾರ್ಯದ ಪ್ರತಿರೂಪವು ಗುಣಾತ್ಮಕವಾಗಿ ಇರುತ್ತದೆ. ಅದಕ್ಕೆ ನಿದರ್ಶನವೆಂದರೆ ಕಿಟೆಲ್ ಅವರ ಕನ್ನಡ ನಿಘಂಟು ಈ ಶಬ್ದ ಕೋಶವು ಸರ್ವಕಾಲಕ್ಕೂ ಮೌಲ್ಯಯುತವಾದದ್ದು.

ಭಾರತಕ್ಕೆ ಬಂದ ಮಿಶನರಿಗಳು ನಾಲ್ಕು ಸಂಸ್ಥೆಯವರು ೧ ಜೆಸುಯಿಟ್ ಸೊಸೈಟಿ ೨. ಲಂಡನ್ ಮಿಶನ್ ೩, ವೆಸ್ಲಿಯನ್ ಮೆಥಾಡಿಸ್ಟ್ ಮಿಶನ್ ೪. ಬಾಸೆಲ್ ಮಿಶನ್ ಈ ಎಲ್ಲಾ ಮಿಶನ್ ಸಂಸ್ಥೆಗಳಿಂದ ಬಂದವರು. ಆದರೆ ಪ್ರಥಮ ಬಂದವರು ಕೆಥಲಿಕ್‌ರು ನಂತರ ಬಂದರು ಪ್ರೊಟೆಸ್ಟೆಂಟ್ ಕೆಥೋಲಿಕರು ತಮ್ಮ ಕಾರ್ಯಕ್ಷೇತ್ರವನ್ನು ಮಂಗಳೂರು, ಬೆಂಗಳೂರು ಮೈಸೂರು ಮಾಡಿಕೊಂಡರು ಚಾರ್ಬೋಸ್‌ರವರ ಮೈಸೂರು ಸಂಸ್ಥಾನ ವಿಕಾರ್ ಎಪೊಸ್ಟಿಲಿಕ್ ಆದಾಗಿನಿಂದ ಕನ್ನಡ ಕಾರ್ಯಗಳಿಗೆ ಚಾಲನೆ ನೀಡಿದರು. ಹಾಗೆಯೇ ಪ್ರೋಟಸ್ಟೆಂಟ್ ಮಿಶನರಿಗಳು ಲಂಡನ್ ಮಿಶನ್‌ನರಿಯಾದರಾದ ಜಾನ್‌ಹ್ಯಾಂಡ್ ಬಳ್ಳಾರಿಯನ್ನು (ಕ್ರಿ.ಶ. ೧೮೧೦ರಲ್ಲಿ) ಕಾರ್ಯಕ್ಷೇತ್ರದ ಕೇಂದ್ರವನ್ನಾಗಿ ಮಾಡಿಕೊಂಡನು. ನಂತರದಲ್ಲಿ ಬೆಳಗಾವಿ ಬೆಂಗಳೂರನ್ನು ಕೇಂದ್ರ ಮಾಡಿಕೊಂಡರೂ. ಬೆಳಗಾವಿಯನ್ನು ಶೈಕ್ಷಣಿಕ ಪರಿಸರ ನಿರ್ಮಾಣವಾಗಲು ಬೆಯನ್ಸ್ ಸ್ಮಿಥ್ ದಾರಿ ಮಾಡಿದರು.

ಈ ಮೇಲಿನ ಸಂಗತಿ ಕುರಿತು ಹೇಳುವುದಾದರೆ ಈ ಮಿಶನ್ ಸಂಸ್ಥೆಯ ಮಿಶನರಿಗಳು ಪ್ರಾಮಾಣಿಕವಾಗಿ ಕಾರ್ಯದಲ್ಲಿ ತೊಡಗಿದ್ದರು. ನಂತರ ಬಂದ ಮಿಶನರಿ ಬಿ.ಎಲ್.ರೈಸ್‌ರವರ ಅವಧಿಯಲ್ಲಿ ಶೈಕ್ಷಣಿಕವಾಗಿ ಪ್ರಗತಿ ಕಂಡಿತು ವೆಲ್ಲೆಸ್ಲಿಯ ಕನ್ನಡ ಕಾರ್ಯಚಟುವಟಿಕೆಗಳ ಆರಂಭ ಮಾಡಿದರು. ಆದರೆ ಥಾಮಸ್ ಹಾಡ್ಸನ್‌ನ ಕಾರ್ಯ ವ್ಯಾಪ್ತಿ ಮೈಸೂರಿಗೆ ಸೀಮಿತವಾಗಿತ್ತು. ನಂತರ ಹಾಡ್ಸನ್ನನು ಶೈಕ್ಷಣಿಕವಾಗಿ ಮತ್ತು ಭೌಗೋಳಿಕ ವ್ಯಾಪ್ತಿಯನ್ನು ಹೆಚ್ಚಿಸಿಕೊಂಡನು. ಮತ್ತೋರ್ವ ಮಿಶನರಿಯಾದ ಹೆನ್ನಿಹೇಗ್‌ನು ಮೈಸೂರಲ್ಲಿ ಮುದ್ರಣ, ಪತ್ರಿಕೋದ್ಯಮ, ಕನ್ನಡ ಬೈಬಲ್ ಪರಿಷ್ಕರಿಸಿದ ಫಲವಾಗಿ ಜೀವಂತಿಕೆ ಪಡೆದುಕೊಳ್ಳಲು ಸಾಧ್ಯವಾಯಿತು. ಬಾಸೆಲ್ ಮಿಶನರಿಗಳು ತಮ್ಮ ಕ್ಷೇತ್ರವನ್ನು ಕಾರ್ಯ ಮಂಗಳೂರನ್ನಾಗಿ

ಮಾಡಿಕೊಂಡಿದ್ದರು. ಇತರ ಮಿಶನರಿ ಸಂಸ್ಥೆಗಳಿಗಿಂತ ಹೆಚ್ಚು ಪ್ರಗತಿ ಕಂಡರು ಈ ಮಿಶನ್ ಸಂಸ್ಥೆಯು ಸ್ಯಾಮುಯ್ಯಲ್ ಹೆಬಿಕ್ ಎಂಬ ಮಿಶನರಿಯಿಂದ ಕಾರ್ಯವನ್ನು ಆರಂಭ ಮಾಡಿದನು. ನಂತರ ವೈಗಲ್ ಮೊಗ್ಲಿಂಗ್‌ರವರ ಅವಧಿಯಲ್ಲಿ ಮಿಶನ್ ಸಂಸ್ಥೆಯು ಕಾರ್ಯ ಹೆಚ್ಚು ಮಹತ್ವ ಪಡೆದುಕೊಂಡಿತು. ಮಂಗಳೂರು ಮಿಶನ್ ಕೇಂದ್ರದಲ್ಲಿ ಅರವತ್ತಮೂರು ಮಿಶನ್‌ನರಿಗಳ ಪರಿಶ್ರಮದ ಪ್ರತಿಫಲವಾಗಿ ತನ್ನದೇಯಾದ ಛಾಪು ಮೂಡಿಸಿದೆ ಎಂಬುದನ್ನು ಆ ಸಂಸ್ಥೆಯ ಚರಿತ್ರೆಯ ಅಧ್ಯಯನದಿಂದ ತಿಳಿಯುತ್ತದೆ. ಹಾಗೆಯೇ ಕಿಟೆಲ್ ಮತ್ತು ತಿಗ್ಲರ್‌ರವ ಕಾರ್ಯ ಅಮೋಘವಾದದು.

ಈ ಮಿಶನರಿಯ ಸಂಸ್ಥೆಯ ಮಹತ್ವ ತಿಳಿಯುತ್ತ ಹೋದರೆ ಆ ಕಾಲಘಟ್ಟದಲ್ಲಿ ಬದುಕಿನ ಸ್ವರೂಪ ತಿಳಿಯಲು ಸಾಧ್ಯವಾಗುತ್ತದೆ. ಈ ನಾಡಿನ ವ್ಯವಸ್ಥೆಗೆ ಚಲನಶೀಲತೆ ಕೊಡುವಲ್ಲಿ ಅವರ ಕಾರ್ಯದಕ್ಷತೆ ಮತ್ತು ಕ್ರೈಸ್ತರ ಮನೆತನಗಳು ರೂಪುಗೊಂಡವು. ಈ ಹಿನ್ನೆಲೆಯಲ್ಲಿ ಶಿಕ್ಷಣ ಮತ್ತು ಗ್ರಂಥೋದ್ಯಮ ಪ್ರಗತಿ ಕಾಣಲು ಸಾಧ್ಯವಾಯಿತು. ಈ ಸಂಗತಿಗಳನ್ನು ಆಧರಿಸಿ ಹೇಳುವುದಾದರೆ ಭಾರತೀಯ ಸಾಹಿತ್ಯ ಪರಂಪರೆಯಲ್ಲಿ ಹೊಸ ಸ್ವರೂಪ ಪಡೆದುಕೊಂಡಿತು. ಈ ಸಂದರ್ಭದಲ್ಲಿ ಮಿಶನರಿಗಳಿಗೆ ತೀಕ್ಷ್ಣವಾಗಿ ವಿರೋಧ ಕಂಡು ಬಂದರೂ ಆ ಸಮಯಕ್ಕೆ ತಮ್ಮ ಅಧಿಕಾರ ಬಳಸಿ ಹತ್ತಿಕ್ಕುವ ಕಾರ್ಯಕ್ಕೆ ಹೆಚ್ಚು ಒತ್ತುಕೊಟ್ಟರು.

ಆ ಕಾಲಕ್ಕೆ ಪ್ರತಿಭಟನೆಗಳು ತೀವ್ರಸ್ವರೂಪ ಪಡೆಯಲು ಸಾಧ್ಯವಾಗಲಿಲ್ಲ. ಏಕೆಂದರೆ ಆಡಳಿತಾತ್ಮಕವಾಗಿ ಪ್ರಬಲರಾಗಿದ್ದ ಕಾರಣಕ್ಕಾಗಿ ಅಧಿಕಾರ ಬಳಸಿಕೊಂಡು ನಿಯಂತ್ರಣಕ್ಕೆ ತರುವಲ್ಲಿ ಸಾಧ್ಯವಾಯಿತು. ಅವರು ತಮ್ಮ ಧರ್ಮವನ್ನು ಎತ್ತಿ ಹಿಡಿಯುವುದಕ್ಕಾಗಿ ಹಿಂದೂ ಧರ್ಮವನ್ನು ಟೀಕಿಸುತ್ತಿದ್ದರು. ಹೀಗೆ ಧರ್ಮದ ಜೊತೆಗೆ ಸಾಹಿತ್ಯ ಪ್ರವೇಶ ಮಾಡಲು ಸಾಧ್ಯವಾಯಿತು. ನೂತನ ಸಾಹಿತ್ಯಕ್ಕೆ ಬಾಹ್ಯ ಪ್ರೇರಣೆಯಾದ ಕ್ರೈಸ್ತ ಮತ ಪ್ರಚಾರ, ಮುದ್ರಣ, ಹೊಸ ಶಿಕ್ಷಣ ಪದ್ಧತಿ ಈ ಅಂಶಗಳು ಸಾಹಿತ್ಯದ ಉಗಮಕ್ಕೆ ಕಾರಣವಾದವು. ಮಧ್ಯಮ ವರ್ಗದ ಜನರಲ್ಲಿ ಹೊಸ ಶಿಕ್ಷಣದ ಪರಿಸರ ಪ್ರಭಾವದಿಂದ ಹೊಸ ಆಲೋಚನೆ ಹುಟ್ಟಿಕೊಳ್ಳಲು ಸಾಧ್ಯವಾಯಿತು. ನಾಡಿನ ಉದಯ ಕಾಲದ ವಿಚಾರ ಸ್ಪಷ್ಟತೆಯ ಕಾಣುತ್ತದೆ. ಸಾಹಿತ್ಯ ಹೆಜ್ಜೆಗಳು ಶಬ್ದಕೋಶ, ವ್ಯಾಕರಣ ಕೃತಿ ಪಾಶ್ಚಾತ್ಯ ವಿಚಾರಗಳು, ತರ್ಜುಮೆ, ಕಥನ ರೂಪಗಳ ಬಗ್ಗೆ ವಿವರಿಸಲಾಗಿದೆ. ಮಿಶನರಿ ಆಡಳಿತವರ್ಗ ಸಹಾಯದೊಂದಿಗೆ ಮುಂದೆ ಸಾಗಲು ಸಾಧ್ಯವಾಯಿತು. ಈ ಎರಡರ ಪ್ರಭಾವದಿಂದ ಸಾಹಿತ್ಯ ಮನೆತನದ ಒತ್ತಡದ ವಿಚಾರಗಳು ಒಡಮೂಡಿದವು. ಲೌಕಿಕ ದೃಷ್ಟಿ ಮತ್ತು ವಾಸ್ತವಿಕತೆಯ ಪ್ರಜ್ಞೆ ಈ ಅಂಶಗಳು ಸಾಹಿತ್ಯದಲ್ಲಿ ಪ್ರಸ್ತಾಪಗೊಂಡವು.

ಆಧುನಿಕ ಸಾಹಿತ್ಯದ ಉಗಮಕ್ಕೆ ಅನುಕರಣೆ, ಪರಿಷ್ಕರಣೆ, ಸ್ವಂತಿಕೆ ವಿಚಾರ ಈ ಅಂಶಗಳನ್ನು ಸಹಕಾರಿಯಾಗುತ್ತವೆ. ಇತರೆ ಭಾಷೆಯ ಕೃತಿ ಮತ್ತು ಕರ್ತೃವಿನ ವಿಚಾರ

ಕನ್ನಡ ಭಾಷೆಯ ತರ್ಜುಮೆ ಮಾಡುವ ಹಂತವನ್ನು ತಲುಪುತ್ತದೆ. ಆ ನಿದರ್ಶನ ವಿಚಾರಗಳು ಕಾಳಿದಾಸ, ಹರ್ಷ, ಶೇಕ್ಸ್‌ಪಿಯರ್ ಅಲ್ಲದೆ ಅರೇಬಿಕ್ ನೈಟ್ಸ್‌ದಂತಹ ಕಥೆಗಳು ಈ ನಾಡಿನ ಭಾಷೆಯಲ್ಲಿ ಪರಿಚಿತಗೊಂಡವು. ಅರುಣೋದಯ ಕಾಲದಲ್ಲಿ ಮಿಶನರಿ ಮತ್ತು ಆಡಳಿತ ವರ್ಗ ಮಾಡದ ಕಾರ್ಯವೈಖರಿ ಮಹತ್ವವನ್ನು ಹಾವನೂರ ಅವರು ಪರಿಚಯಿಸಿದರು. ಹೀಗಾಗಿ ಮಾಹಿತಿ ಸಂಗ್ರಹಿಸಿ ಅಧ್ಯಯನ ಮಾಡಿದ ಪ್ರತಿಫಲವಾಗಿ ಸಾಹಿತ್ಯದ ಹೊಸ ಸ್ವರೂಪ ಕೊಟ್ಟರು. ಭಾಷೆ ಮತ್ತು ಧರ್ಮ ಅಭಿಮಾನ ಅಂದತ್ವ ಹತ್ತು ಹಲವು ಸಂಗತಿಯನ್ನು ಒಳಗೊಂಡಿದೆ. ಪೂರ್ವಕಾಲದ ಕೃತಿಗಳ ಪರಿಷ್ಕರಣೆ, ಟೀಕೆ, ಟಿಪ್ಪಣಿ, ತರ್ಜುಮೆಯೇ ಜೊತೆಗೆ ಸಂಪಾದನೆ ಕಾರ್ಯ ನಡೆಯಿತು. ಆದರೆ ಪ್ರಾರಂಭದಲ್ಲಿ ಶಾಸ್ತ್ರೀಯವಾಗಿ ಪರಿಷ್ಕರಿಸಲಿಲ್ಲ. ಕೋಶ ವ್ಯಾಕರಣ, ಭಾಷಾಭ್ಯಾಸದಂತಹ ಸಂಗತಿಗಳನ್ನು ಹೊಸ ರೀತಿಯಲ್ಲಿ ಪರಿಷ್ಕರಿಸುವ ಪ್ರಯತ್ನ ಮಾಡಿದರು. ಈ ಅವಧಿಯಲ್ಲಿ ಕಾಗದ ಬಳಕೆ, ಮುದ್ರಣ ಯಂತ್ರ ಇವುಗಳ ಬಳಕೆಯಿಂದ ಮಹತ್ವದ ವಿಚಾರಗಳನ್ನು ನೆನಪಿನಲ್ಲಿ ಇಟ್ಟುಕೊಳ್ಳುವ ಪ್ರಮೇಯವೇ ಬರುವುದಿಲ್ಲ; ಹೀಗಾಗಿ ಬದಲಾವಣೆ ಕಂಡುಬರುತ್ತದೆ.

**'ಆರಂಭದ ಸಾಹಿತ್ಯದ ಗುರುತು'**

ಈ ದೇಶದ ಸಾಹಿತ್ಯ ನೂತನ ಸ್ವರೂಪ ಪಡೆದಿದ್ದು ೧೯ನೇ ಶತಮಾನದಲ್ಲಿ ಅಂದರೆ ತಮಿಳು ಮತ್ತು ಬಂಗಾಳಿ ಭಾಷೆಯಲ್ಲಿ ಸಾಹಿತ್ಯ ಹೊಸ ಸ್ವರೂಪ ಪಡೆದುಕೊಳ್ಳಲು ದಾರಿಯಾಯಿತು. ಹೀಗಾಗಿ ೧೯ನೇ ಶತಮಾನದಲ್ಲಿ ಹೊಸ ಸಾಹಿತ್ಯ ಉದಯವಾಯಿತು. ಮಿಶನರಿಗಳ ದೃಷ್ಟಿ ಬಿದ್ದದ್ದು ಮೊದಲು ಕೊಂಕಣಿ ಭಾಷೆಯ ಮೇಲೆ: ನಂತರ ತಮಿಳು ಮತ್ತು ಬಂಗಾಳಿಯ ಭಾಷೆಯ ಮೇಲೆ ಗಮನಹರಿಸಿದ್ದು ಹೀಗಿದ್ದರೂ ಕೊಂಕಣಿ ಭಾಷೆ ಪ್ರಗತಿಯನ್ನು ಕಾಣಲಿಲ್ಲ. ಏಕೆಂದರೆ ಮುದ್ರಣ ಕಾರ್ಯ ೧೬ನೇ ಶತಮಾನದಲ್ಲಿ ಸ್ಥಗಿತಗೊಂಡ ಕಾರಣ ಪ್ರಗತಿಯಾಗಲಿಲ್ಲ.

ಈ ಮಹತ್ವ ಸಂಗತಿಯನ್ನು ಅವಲೋಕಿಸಿ ಹೇಳುವುದಾದರೆ ಮಿಶನರಿಗಳಲ್ಲಿ ತನ್ನದೇಯಾದ ವೈಶಿಷ್ಟ್ಯತೆ ಕಾಣಬಹುದು. ಕ್ರಿ.ಶ. ೧೫೭೭ರ ಪೂರ್ವದಲ್ಲಿ ಸಂತ ಝೇವಿಯರನ್ನು ಕೃತಿಯ 'ದೌಟ್ರಿನಾ ಕ್ರಿಸ್ತಾ' ಎಂಬ ಕೃತಿ ಖ್ಯಾತಿ ಪಡೆದು ಪ್ರಕಟಗೊಂಡಿತು. ಹೀಗಾಗಿ ತಮಿಳಿನ ಮೊದಲ ಕೃತಿಯು ಅಂದರೆ ರಾಬರ್ಟ್ ದ ನೋಬಿಲಿ ಎಂಬ ಮಿಶನರಿಯ ಹೊಸ ಸಾಹಿತ್ಯ ಪರಿಚಯಿಸಿದರು. ಈತನು ತತ್ವಬೋಧ ಸ್ವಾಮಿ ದೇಶಿಯ ಹೆಸರಿನೊಂದಿಗೆ ಸ್ವಮತ ಪ್ರಚಾರದಲ್ಲಿ ತೊಡಗಿದನು. ಅಲ್ಲದೆ ಪಾಶ್ಚಿಮಾತ್ಯರಿಗೆ ತಮಿಳು ಭಾಷೆಯ ಸಂಪರ್ಕವನ್ನು ಕಲ್ಪಿಸಿದರು. ಝೀಗೆನಬಾಗ್‌ರವರು ಹಾಗೆಯೇ ಆತನು ಡೆನಿಶ್ ಮಿಶನರಿಯ ಟ್ರಾಂಕ್ವೆಬೂರ್‌ನಲ್ಲಿ ಯುದ್ಧ ಯಂತ್ರವನ್ನು ಸ್ಥಾಪಿಸಿ ನಂತರ ಕೃತಿಗಳನ್ನು ಪ್ರಕಟಿಸಿದನು. ತರುವಾಯ ಬಂದ್ ಬೆಸ್ಕಿ ಎಂಬ ಮಿಶನರಿಯು ತಮಿಳು ಭಾಷೆಯ ಕ್ರೈಸ್ತ ವಿಚಾರದ ತಾತ್ವಿಕ ಪ್ರಬಂಧಗಳನ್ನು 'ತೆಂಬವಣಿ' ಎಂಬ ದೀರ್ಘ ಕಾವ್ಯ ಬರೆದನು.

ನವೋದಯ ಸಾಹಿತ್ಯಕ್ಕೆ ತಮಿಳು ಸಾಹಿತ್ಯ ಹೊಸ ಸ್ವರೂಪ ಕೊಡುವಲ್ಲಿ ಈ ಮೂರು ಮಿಶನರಿಗಳ ಪಾತ್ರ ಬಹಳ ಮಹತ್ವದ್ದು.

ವಂಗ ದೇಶವು ಬ್ರಿಟಿಷ್ ಆಳ್ವಿಕೆಗೆ ಒಳಪಟ್ಟ ಸಂದರ್ಭದಲ್ಲಿ ಹಿಂದಿ ಬಂಗಾಲಿ ಕೃತಿಗಳು ಪ್ರಕಟಗೊಂಡವು. ಬ್ರಿಟಿಷ್ ಮತ್ತು ಸ್ಕಾಟೀಸ್ ಮಿಶನರಿಗಳು ಆ ಸಾಹಿತ್ಯದ ಕಾರ್ಯವನ್ನು ಮುಂದುವರಿಸಿದರು. ಆ ಶ್ರೇಷ್ಠ ಮಿಶನರಿಯೇ ವಿಲಿಯಮ್‌ಕೇರಿ ಭಾರತದ ಗ್ರಂಥೋದ್ಯಮಕ್ಕೆ ಅಪಾರ ಕೊಡುಗೆ. ಶ್ರೀರಾಮಪುರದಲ್ಲಿ ಮುದ್ರಣ ಪ್ರಕಟಣ ಕಾರ್ಯವನ್ನು ಕ್ರಿ.ಶ. ೧೭೯೯ರಲ್ಲಿ ಆರಂಭಿಸಿದರು. ಆ ಕಾಲದಲ್ಲಿ ಸಂಸ್ಕೃತ ಮತ್ತು ಬಂಗಾಲಿ ಭಾಷೆಯ ಪ್ರೌಢಿಮೆಯ ಸಂಪಾದಿಸಿದ್ದರು. ಈ ಹಿನ್ನೆಲೆಯಲ್ಲಿ ಅವರಿಗೆ ಇರುವ ಕಾರಣ ಅಂದರೆ ಹತ್ತಾರು ಭಾಷೆಗಳ ವ್ಯವಹಾರ ತಿಳುವಳಿಕೆ ಹೊಂದಿದ್ದರು. ಐವತ್ತು ಭಾಷೆಗಳಲ್ಲಿ ಬೈಬಲ್ ತರ್ಜುಮೆ ಮಾಡಿ ಕೋಶಗಳ ರಚನೆ ಮತ್ತು ಮುದ್ರಣ ಕಾರ್ಯದ ಪ್ರತಿಫಲವಾಗಿ ಯಶಸ್ಸು ಪಡೆದುಕೊಳ್ಳಲು ಸಾಧ್ಯವಾಯಿತು.

ಪೌರ್ವಾತ್ಯ ಶಿಕ್ಷಣವನ್ನು ಬ್ರಿಟಿಷ್ ಅಧಿಕಾರಿಗಳಿಗೆ ಕಲ್ಪಿಸಬೇಕು ಎನ್ನುವ ಗುರಿ ಹೊಂದಿದ್ದರು. ಆ ವಂಗ ಸಾಹಿತ್ಯ ವಿಚಾರ ಗೋಷ್ಠಿ ಮಾಡಿದರು. ಆಗ ವಿಲಿಯಮ್ ಕೇರಿಯ ನಾಯಕತ್ವದಲ್ಲಿ ಕೆಲವು ಕೃತಿಗಳ ಪ್ರಕಟಿಸಿದರು. ಹಾಗೆಯೇ ಪಠ್ಯಪುಸ್ತಕ ಸಮಿತಿಗೆ ನಿಯೋಜಿಸಿಕೊಂಡರು. ಈ ದೇಶಕ್ಕೆ ಬಂದ ಬ್ರಿಟಿಷ್ ಅಧಿಕಾರಿಗಳ ಕೊಡುಗೆ ಅಪಾರ ಎಂಬುದು ಎರಡು ಮಾತಿಲ್ಲ ಆದರೆ ಅವರ ಸ್ವಾರ್ಥವು ಇದೆ. ಅವರ ಭಾಷೆ ಸಂಸ್ಕೃತಿ ಸಂಪ್ರದಾಯ ಎಲ್ಲವೂ ಈ ದೇಶದ ಜನರಲ್ಲಿ ಹೃದಯ ನಾಡಿಯಂತೆ ಬೆರೆತುಹೋಗುವಂತೆ ಮಾಡಿದರು. ಹೀಗೆ ಅವರು ಮಾಡಿದ ಕಾರ್ಯವನ್ನು ಬಹಳ ಜಾಣ್ಮೆಯಿಂದ ಚರಿತ್ರೆಯ ಕಟ್ಟಿಕೊಡುವಲ್ಲಿ ಶ್ರೀನಿವಾಸ ಹಾವನೂರ ಪಾತ್ರ ಮಹತ್ವದ್ದು.

ಬ್ರಿಟೀಷ್ ಅಧಿಕಾರಿಗಳು ಈ ನಾಡಿನಲ್ಲಿ ಸಾಹಿತ್ಯ ಪೋಷಣೆಯಲ್ಲಿ ತೊಡಗಿಕೊಂಡರು. ಅದಕ್ಕೆ ಉತ್ತಮ ನಿದರ್ಶನವೆಂದರೆ ಮುಂಬಯಿ ಪ್ರಾಂತ್ಯದ ಗವರ್ನರ್‌ರಾಗಿದ್ದ ಎಲ್‌ಫಿನ್‌ಸ್ಟನ್ನನು ಪ್ರಥಮ ದರ್ಜೆಯ ಸ್ಥಾನ ಪಡೆಯುತ್ತಾರೆ. ಹೀಗಾಗಿ ನೂತನ ಶಿಕ್ಷಣ ಪರಿಚಯಿಸುವಲ್ಲಿ ಮತ್ತು ನಂತರ ಬಂದ ಅಧಿಕಾರಿಗಳಿಗೆ ಅದೇ ದೆಸೆಯಲ್ಲಿ ಸಾಗುವಂತೆ ಮಾರ್ಗದರ್ಶನ ಮಾಡುತ್ತಾನೆ. ಅಧಿಕಾರ ವರ್ಗದ ಕಾರ್ಯವೈಖರಿ ಗಮನಿಸಿದಾಗ ತಿಳಿಯುತ್ತದೆ. ಮುಂಬಯಿ ಪ್ರಾಂತ್ಯದಲ್ಲಿ ಗುಜರಾತಿ, ಸಿಂಧೀ, ಕನ್ನಡ, ಉರ್ದು ಈ ಎಲ್ಲಾ ಭಾಷೆಗಳಲ್ಲಿ ಇದ್ದರೂ ಸಹ ಮರಾಠಿ ಭಾಷೆ ತನ್ನದೇಯಾದ ಅಸ್ತಿತ್ವವನ್ನು ಉಳಿಸಿಕೊಳ್ಳುತ್ತದೆ. ಈ ಮಹತ್ವದ ಹಿನ್ನೆಲೆಯನ್ನು ಅರಿಯಬೇಕಾದರೆ ಅದರ ಹಿಂದೆ ಇದ್ದ ಎಲ್‌ಫಿನ್‌ಸ್ಟನ್ನನ ಕಾಳಜಿ ಅದು ಈ ತೆರನಾಗಿರುತ್ತದೆ. "ಮರಾಠಿ ಪಂಡಿತರನ್ನು ಕಲೆಹಾಕಿ ಅವರಿಂದ ಗ್ರಂಥಗಳನ್ನು ಬರೆಯಿಸಿದರು. ಅಲ್ಲದೆ ಮುದ್ರಣವನ್ನು ಮಾಡಿಸಿದರು. ಇದರ ಈ ಪರಿಣಾಮವಾಗಿ ಕ್ರಿ.ಶ. ೧೮೨೯ರ ಹೊತ್ತಿಗೆ ಮರಾಠಿ, ವ್ಯಾಕರಣ, ಕೋಶ, ಅಲ್ಲದೆ ಒಂದು ವಿಶ್ವಕೋಶ ಸಹ

ಬೆಳಕಿಗೆ ತಂದರು. ಅನಂತರದ ಜರ್ವಿಸ್, ಮಲ್ಕಮ್, ಗ್ಯಾಂಟ್ ಮೊದಲಾದ ಅಧಿಕಾರಿಗಳು ಮರಾಠಿ ಭಾಷೆಯ ಪೋಷಕರಾದರು. ಜರ್ವಿಸ್‌ನಂತೂ ಆ ಭಾಷೆಯಲ್ಲಿಯೇ ವಿಜ್ಞಾನ ವಿಷಯವಾದ ಮೂರು ಕ್ರಮಿಕ ಪುಸ್ತಕ ರಚಿಸಿದನು."[೨]

ಈ ಹಿಂದಿನ ಸಂಗತಿ ಗಮನಿಸಿ ಹೇಳುವುದು ಉಚಿತವೆನಿಸುತ್ತದೆ. ಅಧಿಕಾರ ವರ್ಗ ಮಾಡಿದ ಸಾಹಿತ್ಯದ ಕಾರ್ಯದ ಮಹತ್ವ ಅರಿತ ಪೋರ್ಬಸ್ ಎಂಬ ಅಧಿಕಾರಿಯು ಗುಜರಾತಿ ಸಾಹಿತ್ಯ ಪೋಷಕನಾಗಿ ಕಾರ್ಯ ಮಾಡಿದನು. ಹಾಗೆಯೇ ಮದ್ರಾಸ್ ಪ್ರಾಂತ್ಯದ ಅಧಿಕಾರಿಯಾದ ಥಾಮಸ್ ಮನ್ರೋ ಶಿಕ್ಷಣ ಮತ್ತು ವಾಙ್ಮಯ ಕಾರ್ಯಗಳಿಗೆ ಹೆಚ್ಚಿನ ಪ್ರೋತ್ಸಾಹ ನೀಡಿದರು. ಈ ನಾಡಿನ ಪ್ರಗತಿಯ ಮಾಡುವ ಉದ್ದೇಶದಿಂದ ಕ್ರೈಸ್ತ ಸಾಹಿತ್ಯ ಪಠ್ಯ ಪುಸ್ತಕಗಳು ಪ್ರಾಚೀನ ಗ್ರಂಥಗಳ ಪರಿಷ್ಕೃತ ಮುದ್ರಣ ಜ್ಞಾನ ವಿಜ್ಞಾನ ಕೃತಿಗಳ ಅನುವಾದ ಈ ಕಾರ್ಯಗಳಿಗೆ ಅಧಿಕಾರಿಗಳು ಕಾಯ, ವಾಚ, ಮನಸ್ಸು ದೃಷ್ಟಿಯನ್ನಿಟ್ಟುಕೊಂಡು ಕಾರ್ಯೋನ್ಮುಖರಾದರು. ಪಾಶ್ಚಿಮಾತ್ಯರು ಈ ದೇಶದ ಸಂಪರ್ಕದ ನಂತರ ಸಾಮಾಜಿಕ ಮತ್ತು ಧಾರ್ಮಿಕವಾಗಿ ಬದಲಾವಣೆ ಗಾಳಿ ಬಿಸಲು ಪ್ರಾರಂಭವಾಯಿತು. ಈ ಪಾಶ್ಚಿಮಾತ್ಯ ಹೊಸ ವಿಚಾರಧಾರೆ ಹಿಂದೂ ಧರ್ಮದ ಮೇಲೆ ಇರುವ ಒತ್ತಡ ಸ್ವಧರ್ಮ ದೇಶಿಯ ಅಭಿಮಾನ ಈ ಕೆಲವು ಅಂಶಗಳು ಈ ದೇಶದ ಜನರಲ್ಲಿ ಹೊಸ ಆಲೋಚನೆಗಳು ಹುಟ್ಟಿಕೊಂಡವು. ಸ್ಥಳೀಯ ಸಂಪ್ರದಾಯಗಳು, ಬಾಲ್ಯವಿವಾಹ, ವಿವಾಹ ವಿಚ್ಛೇದನ, ಬಹು ಪತ್ನಿತ್ವ ಮೂಢನಂಬಿಕೆ ಇವುಗಳ ವಿರೋಧಿಸುವ ಚಿಂತನೆ ಸಾಹಿತ್ಯ ಮುಖಿಯಾಗಿ ಪರಿಚಯಿಸುವ ಪ್ರಯತ್ನ ಕಾಣಬಹುದು. ಹೊಸ ಶಿಕ್ಷಣದ ಸ್ವರೂಪ ಆ ಸಂದರ್ಭದಲ್ಲಿ ಅನಿವಾರ್ಯವಾಗಿತ್ತು. ಏಕೆಂದರೆ ಸಾಮಾಜಿಕ ಸ್ವಾಸ್ಥ್ಯದ ದೃಷ್ಟಿಯಿಂದ ಈ ರೀತಿ ಬದಲಾವಣೆಯಾಯಿತು.

ಈ ದೇಶದ ಪ್ರಗತಿಗೆ ಅನೇಕ ಸುಧಾರಕರು ಹೊಸ ಸ್ವರೂಪ ಕೊಡುವಲ್ಲಿ ಅವರ ಪಾತ್ರ ಮಹತ್ವದ್ದು, ಆದರೆ ಸುಧಾರಕರು ಮೊದಲು ಪರಿಚಿತವಾದದ್ದು ಬಂಗಾಲ ಪ್ರಾಂತ್ಯದಲ್ಲಿ ರಾಜಾರಾಮ ಮೋಹನರಾಯ. ಆತನ ಕೌಟುಂಬಿಕ ಕಲಹದಿಂದ ಮನೆಯ ತೊರೆದು ಹೋಗಿ ನಂತರದಲ್ಲಿ ಈ ನಾಡಿನ ಹಳೆಯ ಗ್ರಂಥಗಳಾದ ವೇದಾಂತ ಉಪನಿಷತ್ತು, ಅಧ್ಯಯನ ಮಾಡಿ ವಿವೇಚನಾತ್ಮಕ ಲೇಖನ ಬರೆದು ನಂತರ ತರ್ಜುಮೆ ಮಾಡಿದರು. ಹಾಗೆಯೇ ಮಿಶನರಿಗಳ ವಿಚಾರಧಾರೆಯನ್ನು ಪ್ರತಿಭಟಿಸುತ್ತ; ಹಿಂದೂ ಧರ್ಮದ ಸನಾತನ ಸಂಪ್ರದಾಯಗಳ ವಿರೋಧಿಸುತ್ತ ಬಂಧುತ್ವದಿಂದ ಹೊರ ಬರುವಂತೆ ಮಾಡಿದರು. ಪತಿ ತೀರಿದ ನಂತರ ಸತಿಹೋಗುವ ಪದ್ಧತಿಯನ್ನು ತಿರಸ್ಕರಿಸಿದರು. ಈ ಸಾಮಾಜಿಕ ಜಾಗೃತಿಯ ಪ್ರತಿಯಾಗಿ ಆಗಿನ ಗೌವರ್ನರ್ ಜನರಲ್ ವಿಲಿಯಂ ಬೆಂಟಿಕ್‌ನು ಕಾಯ್ದೆ ಅನುಷ್ಠಾನಗೊಳಿಸಲು ಅನುವು ಮಾಡಿಕೊಟ್ಟರು. ರಾಜರಾಮ ಮೋಹನ್‌ರಾಯರು ಆರ್ಯಸಮಾಜ ಕಟ್ಟುವುದರ

ಮೂಲಕ ಸಮಾಜದ ಪ್ರಗತಿ ಮತ್ತು ಸ್ವಾಸ್ಥ್ಯವನ್ನು ಕಾಪಾಡಲು ಸಾಧ್ಯವಾಯಿತು. ಅಲ್ಲದೆ ವಂಗ ಸಾಹಿತ್ಯದ ತನ್ನ ವೈಶಿಷ್ಟತೆ ಉಳಿಸಿಕೊಳ್ಳಲು ಸಾಧ್ಯವಾಯಿತು.

ವಂಗ ಸಾಹಿತ್ಯದ ಅಸ್ಮಿತೆಯನ್ನು ಉಳಿಸಿಕೊಳ್ಳಲು ಈಶ್ವರಚಂದ್ರ ವಿದ್ಯಾಸಾಗರರ ಪಾತ್ರ ಮಹತ್ವದ್ದು. ಏಕೆಂದರೆ ಕಾಳಿದಾಸನ ಮತ್ತು ಶೇಕ್ಸ್‌ಪಿಯರ್ ಶ್ರೇಷ್ಠ ಗ್ರಂಥಗಳನ್ನು ತರ್ಜುಮೆ ಮಾಡಿದನು. ಈತನ ಮಹತ್ವದ ನಿಲುವು ಸ್ತ್ರೀ ಶಿಕ್ಷಣ ಚಳುವಳಿ ಹಾಗೂ ಬಹುಪತ್ನಿತ್ವ ವಿರೋಧಿಸಿದನು. ರಾಜಾರಾಮ್ ಮೋಹನರಾಯ ಗಂಡಿನನೊಂದಿಗೆ ಹೆಣ್ಣು ಬದುಕು ನಶಿಸುವ ಬದಲು ಬದುಕು ಇನ್ನೊಂದು ಘಟ್ಟಕ್ಕೆ ಹೋಗಲು ಅವಕಾಶ ಕಲ್ಪಿಸಿದರು. ಈಶ್ವರಚಂದ್ರ ವಿದ್ಯಾಸಾಗರ ಹೆಣ್ಣಿನ ಬದುಕಿನ ವೈವಾಹಿಕ ಬದುಕಿಗೆ ತಿರಸ್ಕಾರಗೊಂಡಿದ್ದನ್ನು ಪುರಸ್ಕಾರಗೊಳ್ಳುವ ಪರಿಸರವನ್ನು ಸೃಷ್ಟಿಸಿದರು. ಮೈಕಲ್ ಮಧುಸೂಧನ್‌ದತ್ತನು ಸುಧಾರಣೆವಿಚಾರ ತನ್ನ ಬರವಣಿಗೆಯ ಮೂಲಕ ಪ್ರಗತಿ ಕಂಡಿತು. ಆತನ ವಿಷಯ ವಸ್ತು ಪುರಾಣ, ಮಹಾಕಾವ್ಯದ ಸ್ವರೂಪ ಆಯ್ಕೆ ಮಾಡಿಕೊಂಡನು ಹೊಸ ಸ್ವರೂಪ ಪಡೆದುಕೊಂಡಿತು.

ಬಂಕಿಮಚಂದ್ರ ಚಟರ್ಜಿಯವರು ಕಾದಂಬರಿ ಸಾಹಿತ್ಯ ಮೂಲಕ ಮಹತ್ವ ಸಂಗತಿಯನ್ನು ಪರಿಚಯಿಸಿದರು. ಮುಸ್ಲಿಮರ ಕಾಲಕ್ಕೆ ಇತಿಹಾಸ ಸಂಬಂಧಿಸಿದಂತೆ ಸಂಗತಿ ಸ್ತ್ರೀಯರ ಸಾಹಸದ ಚಿತ್ರಣ, ರಾಷ್ಟ್ರೀಯತೆ ಮನೋಧರ್ಮವು ಪ್ರಸ್ತಾಪಗೊಂಡಿದೆ. ಬಾಳಾಶಾಸ್ತ್ರಿ ಜಾಂಬೇಕರರು ಶಿಕ್ಷಣ ಮತ್ತು ಪತ್ರಿಕೆ ಕ್ಷೇತ್ರದ ಸಾಹಿತ್ಯ ಕಾರ್ಯದೊಂದಿಗೆ ಪ್ರಾರಂಭಿಸಿದರು. ಈ ಸುಧಾರಕ ಬರವಣಿಗೆಯ ಸಾಹಿತ್ಯ ಗುಣಧರ್ಮವುಳ್ಳದ್ದು ಹಾಗೆಯೇ ಸಾಹಿತ್ಯದ ಕೃಷಿಗೆ ಪ್ರೇರಣೆಯಾಯಿತು.

ಪಾಶ್ಚಿಮಾತ್ಯ ಮಿಶನರಿಗಳ ಮತ್ತು ಅಧಿಕಾರಿಗಳ ಕನ್ನಡ ಕಲಿಯುವುದು ಅನಿವಾರ್ಯವಾಗಿತ್ತು. ಆದ್ದರಿಂದ ಅವರ ಭಾಷೆ ನೆಲೆಗೊಳಿಸುವುದು ಅವರ ಉದ್ದೇಶವಾಗಿತ್ತು. ಭಾಷಾಭ್ಯಾಸದ ಕನ್ನಡ ವ್ಯಾಕರಣ ಶಬ್ದಕೋಶಗಳು ಹೊರ ಬಂದವು. ಪಾಶ್ಚಿಮಾತ್ಯ ಸಾಹಿತ್ಯವು ಮೊದಲ ಆರಂಭಗೊಂಡಿದ್ದು ಸ್ಥಳೀಯರಲ್ಲಿ ನಿಧಾನಗತಿಯಲ್ಲಿ ಪ್ರಭಾವ ಬೀರಿತು. ಹೀಗಿದ್ದಾಗಲೂ ಶೈಕ್ಷಣಿಕ ತೀವ್ರವಾದ ಬೆಳವಣಿಗೆ ಕಾಣಲಿಲ್ಲ. ಈ ನಾಡಿನ ಉದಯ ಕಾಲದಲ್ಲಿ ಪಾಶ್ಚಿಮಾತ್ಯ ಸಾಹಿತ್ಯದ ಪ್ರಭಾವ ಮೈಸೂರು ಭಾಗದ ಲೇಖಕರ ಕವಿಗಳ ಮೇಲೆ ಪ್ರಭಾವ ಬೀರಲಿಲ್ಲ. ಏಕೆಂದರೆ ಆ ಪರಂಪರೆ ಶಿಕ್ಷಣ ಪರಿಸರದಿಂದ ಹೊರಬರಲು ಬಹಳ ಕಾಲ ತೆಗೆದುಕೊಂಡರು. ಈ ಎಲ್ಲಾ ಸಂಗತಿಗಳ ಆಧರಿಸಿ ಹೇಳುವುದಾದರೆ ಅನುವಾದ ಪರಿಷ್ಕರಣೆ ಪಠ್ಯ ಪುಸ್ತಕಗಳ ಉದಯ ಕಾಲದಲ್ಲಿ ಹೆಚ್ಚು ಪ್ರಾಮುಖ್ಯತೆ ಪಡೆದುಕೊಂಡಿತು. ಅಲ್ಲದೆ ಬ್ರಿಟಿಷ್ ಅಧಿಕಾರಿಗಳು ಮಿಶನರಿಗಳು ವಿದ್ವಾಂಸರು ಹರಿದಾಸರು ಯಕ್ಷಗಾನ ಕವಿಗಳು ಸಾವಿರಾರು ಶಿಕ್ಷಕರು ಈ ಸ್ಥಳೀಯ ಸಹಕಾರದಿಂದ ಪ್ರಗತಿ ಕಂಡಿತು.

**ಮುದ್ರಣ ಮತ್ತು ಗ್ರಂಥ ಉದ್ಯಮಕ್ಕೆ ಪಾಶ್ಚಿಮಾತ್ಯರ ಕೊಡುಗೆ**

ಉದಯ ಕಾಲಕ್ಕೆ ಮುದ್ರಣ ಮತ್ತು ಗ್ರಂಥೋದ್ಯಮ ಏಕಕಾಲದಲ್ಲಿ ಕಾರ್ಯಕ್ಕೆ ಚಾಲನೆ ಸಿಕ್ಕಿತು. ಈ ಸಂಗತಿಯು ನವೋದಯ ಕಾಲದ ಸಮಗ್ರ ಚಿತ್ರಣ ನಿರೂಪಗೊಂಡಿದೆ. ಹಾಗೆಯೇ ಯುರೋಪ್ ದೇಶದಲ್ಲಿ ಮುದ್ರಣ ಆರಂಭಗೊಂಡು ಒಂದು ಶತಮಾನದ ನಂತರ ಭಾರತ ದೇಶದಲ್ಲಿ ಮುದ್ರಣ ಆರಂಭವಾಯಿತು ಎಂಬುದು ಆ ಚರಿತ್ರೆಯಿಂದ ತಿಳಿಯುತ್ತದೆ. ಆದರೆ ತನ್ನ ಕಾರ್ಯ ಆರಂಭಗೊಂಡಿದ್ದು ಪೋರ್ಚುಗೀಸ್ ಪಾದ್ರಿಯೂ ಸಂತ ಝೇವಿಯರ್ ಅವರು 'ದೌಟ್ರಿನಾಕ್ರಿಸ್ತಾ' ಎಂಬ ಕೃತಿಯ ಮೊದಲು ಗೋವೆಯಲ್ಲಿ ಮುದ್ರಿತಗೊಂಡಿತು. ಮಿಶನರಿಗಳ ಮಹತ್ವದ ನಿರ್ಧಾರ ಈ ರೀತಿ ಇರುತ್ತದೆ. ಅವರು ದೇಶದ ಭಾಷೆ, ಧರ್ಮ, ಮತ್ತು ಸಂಸ್ಕೃತಿ ಹೆಚ್ಚು ಕಾಲ ಜೀವಂತಿಕೆ ಇರಬೇಕಾದರೆ, ಅದರ ಪರಿಣಾಮ ಜನಸಾಮಾನ್ಯರ ಮೇಲೆ ಆಗಬೇಕು. ದೇಶಿಯ ಭಾಷೆಯನ್ನು ಕಲಿಯುವುದು ಮತ್ತು ಅವರ ಧರ್ಮದ ತತ್ವ ಸಂದೇಶಗಳನ್ನು ಪರಿಚಯಿಸುವುದರಿಂದ ಭಾಷೆ ಜೀವಂತಿಕೆ ಪಡೆದುಕೊಳ್ಳಲು ಸಾಧ್ಯ. ಈ ಹಿನ್ನೆಲೆಯಲ್ಲಿ ಜೆಸುಯಿಟ್ ಪಾದ್ರಿಗಳು ಗೋವಾದ ಕೊಂಕಣಿ ಭಾಷೆಯಲ್ಲಿ ಮುದ್ರಿಸಿದರು. ಈ ಭಾಷೆಗೆ ಲಿಪಿ ಇಲ್ಲದ ಕಾರಣ ಕನ್ನಡ ಭಾಷೆಯ ಮೊಳಗಳ ಬಳಕೆಯಿಂದ ಗೋನ್ಸಾಲ್ಸ್‌ನು ಕೊಂಕಣಿ ಮುದ್ರಣ ಮಾಡಿದರು. ಅಂದರೆ ಮುದ್ರಣ ದೋಷದಿಂದ ಕಂಡುಬಂದ ಹಿನ್ನೆಲೆಯಲ್ಲಿ ಈ ಕಾರ್ಯವನ್ನು ಗೋನ್ಸಾಲಿಸನು ಸ್ಥಗಿತಗೊಳಿಸಿದನು. ಕನ್ನಡ ಮೊಳಗಳಿಂದ ಇನ್ನೊಂದು ಭಾಷೆಯ ಮುದ್ರಣ ಕಾರಣವಾಗುವುದಾದರೆ ಆ ಕಾಲದಲ್ಲಿ ಕನ್ನಡ ಮುದ್ರಣಗೊಳ್ಳದಿರುವುದು ದುರದೃಷ್ಟವೇ ಸರಿ. ಹಾಗೆಯೇ ಈ ದೇಶದಲ್ಲಿ ಪ್ರಥಮವಾಗಿ ಕನ್ನಡ ಭಾಷೆಯಿಂದ ಮುದ್ರಣವಾಗಬೇಕಾಗಿತ್ತು. ಏಕೆ ಈ ಕಾರ್ಯ ಚಾಲ್ತಿ ಪಡೆಯಲಿಲ್ಲ ಎನ್ನುವುದು ಯಕ್ಷಪ್ರಶ್ನೆಯಾಗಿದೆ.

ಉದಯ ಕಾಲಕ್ಕೆ ಕನ್ನಡ ಮೊದಲ ಕೃತಿ ಎಂದರೆ ವಿಲಿಯಂ ಕೇರಿಯವರ 'A GRAMMAR OF THE KURNATAKA LANGUAGE' ಕೃತಿಯೂ ಬಂಗಾಲದ ಶ್ರೀರಾಮ ಪುರದ ಪ್ರೆಸ್ಸ್‌ನಲ್ಲಿ ಕ್ರಿ.ಶ. ೧೮೧೭ರಲ್ಲಿ ಮುದ್ರಣಗೊಂಡಿದೆ. ಅಂದರೆ ಮುನಶಿ ಸಹಾಯದಿಂದ ಕನ್ನಡ ಕಲಿತು ನಂತರ ಬೈಬಲ್‌ನ್ನು ಕನ್ನಡದಲ್ಲಿ ತರ್ಜುಮೆ ಮಾಡಿದರು. ಅವರು ಕನ್ನಡ ಮೊಳೆಗಳು ತಯಾರಿಸಲಿಲ್ಲ. ಅವನ ಸಹಾಯಕರಲ್ಲಿ ಒಬ್ಬ ಮನೋಹರ ವಂಗಿ ಎಂಬುವನು ಕನ್ನಡ ಮೊಳೆಗಳನ್ನು ಸಿದ್ಧಪಡಿಸಿದನು. ಅವನು ಬರೆದ ಕನ್ನಡ ವ್ಯಾಕರಣ ಕೃತಿ ತರ್ಜುಮೆ ಮಾಡಿ ಅದನ್ನು ಕನ್ನಡದಲ್ಲಿ ಮುದ್ರಿಸಿದನು.

ಮದ್ರಾಸ್ ಮತ್ತು ಬಳ್ಳಾರಿಯಲ್ಲಿ ಕನ್ನಡದ ಮುದ್ರಣ ಪ್ರಾರಂಭಗೊಂಡಿತು. ಆ ಹೊತ್ತಿಗಾಗಲೇ ಮದ್ರಾಸ್ ಅಚ್ಚುಕೂಟದಿಂದ ಪ್ರಾರಂಭಗೊಂಡಿತು. ಅಲ್ಲದೆ ತೆಲುಗು ತಮಿಳು ಪುಸ್ತಕಗಳು ಆರಂಭಗೊಂಡವು. ಹಾಗೆಯೇ ಬ್ರಿಟಿಷ್ ಅಧಿಕಾರಿಯಾದ ಚಾರ್ಲ್ಸ್ ಮಕ್ಕೆರಲ್

ಕನ್ನಡ ವ್ಯಾಕರಣ ಬರವಣಿಗೆ ಸಹಕಾರ ನೀಡುವಂತೆ ಮದ್ರಾಸ್ ಸರ್ಕಾರಕ್ಕೆ ಬೇಡಿಕೆ ಇಟ್ಟನು. ಈ ಹಿನ್ನೆಲೆಯಲ್ಲಿ ಆತನನ್ನು ಮದ್ರಾಸ್ ಪ್ರಾಂತ್ಯಾಧಿಕಾರಿ ಮತ್ತು ಭಾಷಾಂತರಕಾರನೆಂದು ನೇಮಿಸಿದರು. ಈ ಕಾರಣದಿಂದ ಈ ಕೃತಿಯನ್ನು ಪ್ರಕಟಿಸಿದನು. ನಂತರ ಮುದ್ರಣಗೊಂಡ ಕನ್ನಡ ಕೃತಿಯೆಂದರೆ ವಿಲಿಯಮ್ ರೀವ್ ಅವರು ಬರೆದ ಕನ್ನಡ ಶಬ್ದಕೋಶ ಉದಯ ಕಾಲದ ಪ್ರಥಮ ಬರವಣಿಗೆಯ ಕೋಶ ಎಂದು ಹೇಳಬಹುದು. ಅದರ ಪ್ರತಿಯಾಗಿ ರೀವ್ ಅವರು 'ಕನ್ನಡ ಇಂಗ್ಲಿಷ್ ಕೋಶ' ಬರೆದರು. ಇದು ಗಾತ್ರ ಪ್ರಮಾಣದಲ್ಲಿ ದೊಡ್ಡದಾಗಿತ್ತು ಏಕೆಂದರೆ ಮುದ್ರಣದ ಮೊಳೆಗಳು ಗಾತ್ರದಲ್ಲಿ ದೊಡ್ಡದಾಗಿತ್ತು.

ಜಾನ್ ಹ್ಯಾಂಡ್ಸ್ ಎಂಬ ಮಿಶನರಿಯು ಬಳ್ಳಾರಿಗೆ ಬಂದ ಎರಡು ವರ್ಷಗಳಲ್ಲಿ ಕನ್ನಡ ವ್ಯಾಕರಣ ಶಬ್ದಕೋಶ ಮತ್ತು ಬೈಬಲ್ ತರ್ಜುಮೆ ಮಾಡಿ ಮೂರು ಹಸ್ತ ಪ್ರತಿಗಳನ್ನು ಮಾಡಿದರು. ಆ ಸಂದರ್ಭದಲ್ಲಿ ಮುದ್ರಣ ಇಲ್ಲದ ಕಾರಣ ಒಬ್ಬ ಸ್ಥಳೀಯ ವ್ಯಕ್ತಿ ಶಾಲಾ ಶಿಕ್ಷಕರಿಂದ ಅವುಗಳನ್ನು ಪ್ರತಿ ಮಾಡಿಸಿ ವಿತರಿಸಿದರು. ಮದ್ರಾಸ್ ಪ್ರೆಸ್ ಒಪ್ಪಂದ ಮಾಡಿಕೊಂಡು ಈ ಹಿನ್ನೆಲೆಯಲ್ಲಿ ಹ್ಯಾಂಡ್ಸನು ಮುದ್ರಿಸಲು ತೊಡಗಿಕೊಂಡನು. ಕ್ರಿ.ಶ. ೧೮೨೦ರ ನಂತರ ಕನ್ನಡ ಭಾಷೆ ಮತ್ತು ಲಿಪಿಗೆ ಹೆಚ್ಚು ಪ್ರಾಮುಖ್ಯತೆ ಕೊಟ್ಟರು. ಅಲ್ಲದೆ ಬೈಬಲ್‌ಗೆ ಸಂಬಂಧಿಸಿದಂತೆ ಚಿಕ್ಕ ಕೃತಿಗಳನ್ನು ಪ್ರಕಟಿಸಿದರು. ದೂರದ ಮದ್ರಾಸ್‌ಗೆ ನಿರಂತರ ಹೋಗಿ ಬರಲು ಕಷ್ಟವಾದ ಹಿನ್ನೆಲೆಯಲ್ಲಿ ಲಂಡನ್ನಿನ ಪ್ರಧಾನ ಕಛೇರಿಗೆ ಮುದ್ರಣ ಯಂತ್ರವನ್ನು ಸ್ಥಾಪಿಸಲು ಅನಿವಾರ್ಯತೆ ಇದೆ. ಈ ಕಾರಣದಿಂದ ಮುದ್ರಣ ಯಂತ್ರ ಮತ್ತು ಮುದ್ರಕನನ್ನು ಕಳುಹಿಸುವಂತೆ ಅಧಿಕಾರಿಗಳಿಗೆ ವಿನಂತಿಸಿಕೊಂಡರು.

ಕನ್ನಡ ಮತ್ತು ತೆಲುಗು ಎರಡು ಭಾಷೆಗಳಲ್ಲಿ ಬಳ್ಳಾರಿ ಮಿಶನ್ ಪ್ರೆಸ್‌ನಲ್ಲಿ ಮುದ್ರಣ ಮಾಡುತ್ತಿದ್ದರು. ಏಕೆಂದರೆ ಕನ್ನಡ ಮೊಳೆಗಳು ಪ್ರತ್ಯೇಕವಾಗಿ ಇಲ್ಲದ್ದರಿಂದ ಹೀಗೆ ಮುದ್ರಣ ಮಾಡುವುದು ಅವರಿಗೆ ಅನಿವಾರ್ಯವಾಗಿತ್ತು. ನಂತರ ಹ್ಯಾಂಡ್ಸ್‌ನು ಮೊಳೆಗಳನ್ನು ಲಂಡನ್ನಿನಿಂದ ಮಾಡಿಸಿ ತಂದಿದ್ದನು. ಅದರ ಜೊತೆಗೆ ಪೇನ್ ಎಂಬ ಮುದ್ರಕನು ಬಂದಿದ್ದನು. ನಂತರ ಬಂದ ಅಧಿಕಾರಿ ಜಾನ್‌ರೀಡ್ ಮುದ್ರಕ ಪೇನ್ ಸೇರಿಕೊಂಡು ಮುದ್ರಣ ಕಾರ್ಯಮಾಡಿದರು. ನಂತರ ಆತನು ಕಾಲರ ಕಾಯಿಲೆಗೆ ತುತ್ತಾಗಿ ತೀರಿಕೊಂಡನು. ಹೀಗಾಗಿ ಮುದ್ರಣ ಕಾರ್ಯ ಅಸ್ತಿತ್ವವನ್ನು ಕಳೆದುಕೊಂಡಿತು. ಕ್ರಿ.ಶ. ೧೮೪೦ರಲ್ಲಿ ಅವಧಿಯಲ್ಲಿ ಬೆಂಗಳೂರಲ್ಲಿ ಕನ್ನಡ ಮುದ್ರಣವಿರಲಿಲ್ಲ ಈ ಕಾರಣದಿಂದ ತೆಲುಗು, ತಮಿಳು ಕೃತಿಗಳು ಮಾತ್ರ ಇರುತ್ತಿದ್ದವು. ಲಂಡನ್ ಮಿಶನ್ ಸಂಸ್ಥೆ ವ್ಯಾಪ್ತಿಗೆ ಬಳ್ಳಾರಿ ಬರುವ ಹಿನ್ನೆಲೆಯಲ್ಲಿ ಮತಪ್ರಸಾರ ಶಿಕ್ಷಣ ಮತ್ತು ಈ ಕಾರ್ಯಗಳಿಗಾಗಿ ಮುದ್ರಣವನ್ನು ಸ್ಥಾಪಿಸಿದನು. ಪ್ರಥಮ ಪ್ರಕಟವಾದ ಪುಸ್ತಕವೆಂದರೆ 'ಪ್ರಶ್ನೋತ್ತರ ಶಾಲಾ' ಪುಸ್ತಕ ಪ್ರಕಟಿಸಿದರು. ಮುದ್ರಣ ಸುಧಾರಣಕ್ಕೆ ಹೆಚ್ಚಿಗೆ ಪ್ರಾಶಸ್ತ್ಯಕೊಟ್ಟರು. ವೆಸ್ಲಿಯನ್ ಮಿಶನರಿಗಳು ಮುದ್ರಣದ ಸುಧಾರಣೆಗೆ ಭಾಜನರಾದರೆ ನಂತರ ಬಂದ

ಸ್ಯಾಂಡರ್ಸ್‌ನ ಅಕ್ಷರ ಸುಧಾರಣೆಗೆ ದಾರಿ ಮಾಡಿಕೊಟ್ಟರು. ಬೆಂಗಳೂರಿನ ಮುದ್ರಣಾಲಯವು ದಕ್ಷಿಣ ಭಾರತದ ಶೇಷ್ಠ ಮುದ್ರಣಾಲಯ ಎಂಬ ಹೆಗ್ಗಳಿಕೆಗೆ ಪಾತ್ರವಾಯಿತು. ಮಹತ್ವದ ಸಂಗತಿ ಎಂದರೆ ಬೆಂಗಳೂರಿನ ಮಿಶನರಿಗೆ ಸೇರಿದ ಕೆಥೋಲಿಕ್ ಪ್ರೆಸ್ ಪ್ರಚಾರವಿಲ್ಲದೆ ಶಿಕ್ಷಣದ ಮತ ಪ್ರಚಾರ ಕಾರ್ಯದಲ್ಲಿ ಇ.ಎಲ್.ಚಾರ್ಬೋನ್ ಎ ಜೌತೆಲೊ ತೊಡಗಿಸಿಕೊಂಡರು.

ಬಾಸಲ್ ಮಿಶನ್ನಿನ ಮಿಶನರಿಗಳು ಕನ್ನಡ ಮುದ್ರಣ ಕಾರ್ಯದಲ್ಲಿ ಬಹಳ ಶ್ರದ್ಧೆ ವಹಿಸಿದರು. ಬಿ.ಎಚ್.ವೈಗಲ್‌ರು ಇಂಗ್ಲಿಷ್ ಕೃತಿಯ ಮುದ್ರಿತ ನಿಮಿತ್ತವಾಗಿ ಮುಂಬಯಿಗೆ ಹೋಗಿದ್ದನು. ಆಗ ಮುದ್ರಣ ಯಂತ್ರವನ್ನು ದಾನವಾಗಿ ಪಡೆದುಕೊಂಡು ತಂದಿದ್ದರು. ಜರ್ಮನ್ 'ಇವ್ಯಾಂಜಲಿಕಲ್ ಮಿಶನ್' ಪ್ರೆಸ್ ಹೆಸರಿನಲ್ಲಿ ವೈಗಲ್ ಮುದ್ರಿಸಿದ ಮೊದಲ ಕೃತಿ ಎಂದರೆ ತುಳು ಕೀರ್ತನೆಗಳು ಈ ಮುದ್ರಣ ಕಲ್ಲಚ್ಚಿನಲ್ಲಿ ಮಾಡಿದರು. ಅಲ್ಲದೆ ಮತಧರ್ಮಕ್ಕೆ ಸಂಬಂಧಿಸಿದ ಕೃತಿಗಳು ಪ್ರಕಟವಾದವು. ಇದರ ಮುಂದುವರಿದ ಭಾಗವಾಗಿ ಕುಮಾರ ವ್ಯಾಸಭಾರತ, ಬಸವಪುರಾಣ, ಚನ್ನಬಸವಪುರಾಣ, ಜೈಮಿನಿಭಾರತ ಈ ರೀತಿಯ ಕೃತಿಗಳು ಮುದ್ರಣಗೊಂಡವು. ಕನ್ನಡ, ಇಂಗ್ಲಿಷ್ ತುಳು, ಮಲಯಾಳಂ, ಸಂಸ್ಕೃತ, ಜರ್ಮನ್ ಭಾಷೆಗಳ ಗ್ರಂಥಗಳು ಮುದ್ರಣಗೊಂಡಿದ್ದವು.

ದಕ್ಷಿಣ ಕನ್ನಡ ಜಿಲ್ಲೆಯ ಮುದ್ರಣಾಲಯ ಐವತ್ತು ವರ್ಷಗಳ ಕಾಲ ಒಂದೇ ಕಾರ್ಯನಿರ್ವಹಿಸಿತ್ತು. (ಕೊಡಿಯಾಲಬೈಲ್ ಪ್ರೆಸ್) ಮುದ್ರಿತಗೊಂಡಿರುವ ಕೃತಿಗಳು ಈ ತೆರನಾಗಿವೆ. "ಪಠ್ಯ ಪುಸ್ತಕ ಹಾಗೂ ಕ್ರೈಸ್ತ ಧರ್ಮ ಅನೇಕ ವ್ಯಾವಹಾರಿಕ ಪುಸ್ತಕ, ಕರಪತ್ರ, ಪಂಚಾಂಗ, ರೈಲ್ವೆ ವೇಳೆ ಪತ್ರಿಕೆ, ಕೋಷ್ಟಕ ಬರ್ನೆಲರ ದಕ್ಷಿಣ ಲಿಪಿ ಶಾಸ್ತ್ರದಂಥ ಸಂಶೋಧನ ಗ್ರಂಥ ಕೆಥೋಲಿಕರ್ ಕೊಂಕಣಿ ಭಾಷಾ ಗ್ರಂಥಗಳನ್ನು (ಕ್ರಿ.ಶ. ೧೮೮೪) ಇಲ್ಲಿ ಮುದ್ರಿಸಲಾಗಿದೆ. ಈ ಮಿಶನ್ನಿನವರ ಪಡಿ ಅಚ್ಚು ತಂದಿದ್ದರು."[೨] ಹೀಗಾಗಿ ಮುದ್ರಣ ಮತ್ತು ಲಿಪಿ ಸುಧಾರಣೆ ಕುರಿತು ಹೊಸ ಸ್ವರೂಪ ಪಡೆದುಕೊಳ್ಳಲು ಸಾಧ್ಯವಾಯಿತು. ಕೊಡಿಯಾಲಬೈಲ್ ಪ್ರೆಸ್ ಕೆಥೋಲಿಕ್ ಮಿಶನರಿಗೆ ಸೇರಿದ್ದು. ಅವರು ವಚನ ಪುಸ್ತಕದ ಪಠ್ಯಗಳಿಗಾಗಿ ಅಗತ್ಯವಿದ್ದಾಗ ಬಾಸೆಲ್ ಮಿಶನಿನವರು ಪುಸ್ತಕ ಮುದ್ರಿಸಲಿಕ್ಕೆ ಹೆಚ್ಚು ಬೆಲೆ ತೆಗೆದುಕೊಳ್ಳುತ್ತಿದ್ದರು. ಹೀಗಾಗಿ ಪ್ರತ್ಯೇಕ ಮುದ್ರಣ ಸ್ಥಾಪಿಸುವುದು ಅನಿವಾರ್ಯವಾಗಿತ್ತು. ಆಗ ೧೮೮೨ರಲ್ಲಿ ಪ್ಯಾರಿಸ್‌ನಿಂದ ಕೈಯಚ್ಚಿನ ಯಂತ್ರ ತರಿಸಿ ಅದಕ್ಕೆ ಲಿಪಿ ತಯಾರಿಸಿದರು. ನಂತರ ವರ್ಷದಲ್ಲಿ ಬೆಂಗಳೂರಿನಿಂದ ಕನ್ನಡ ಮೊಳೆಗಳು ಬಂದವು. ಈ ಪ್ರೆಸ್ ಕಾರ್ಯದ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡು ದೊನೆದಾ ಮತ್ತು ಸೋರ್ಸ್ ಅಚ್ಚುಕೂಟವನ್ನು ಅಭಿವೃದ್ಧಿ ಹೊಂದಿತ್ತು.

**ಅಧಿಕಾರಿ ವರ್ಗ ಮುದ್ರಣದ ಕೊಡುಗೆ**

ಬ್ರಿಟಿಷರು ಆಡಳಿತದ ಸುಧಾರಣ ದೃಷ್ಟಿಯಿಂದ ಈ ದೇಶವನ್ನು ಭೌಗೋಳಿಕವಾಗಿ ಮೂರು ಭಾಗಗಳನ್ನಾಗಿ ಮಾಡಿಕೊಂಡರು. ಮದ್ರಾಸ್, ಮುಂಬಯಿ ಮತ್ತು ಮೈಸೂರು

ಹೀಗೆ ವರ್ಗೀಕರಿಸಿಕೊಂಡ ಅಧಿಕಾರಿ ವರ್ಗವು ಆಡಳಿತದ ಹಿಡಿತಕ್ಕಾಗಿ ಮತ್ತು ಶೈಕ್ಷಣಿಕ ಪ್ರಗತಿಗಾಗಿ ಈ ಕಾರ್ಯವನ್ನು ಸರಳ ಮಾಡಿಕೊಂಡರು. ಹಾಗೆಯೇ ಶ್ರೇಯಸ್ಸು ಪಡೆಯಬೇಕಾದರೆ ಅದಕ್ಕೆ ಮುದ್ರಣ ಅನಿವಾರ್ಯವಾಗಿತ್ತು. ಈ ಹಿನ್ನೆಲೆಯಲ್ಲಿ ಈ ವಿಷಯಕಕ್ಕೆ ಸರ್ಕಾರ ಹೆಚ್ಚು ಪ್ರಾಮುಖ್ಯತೆಯನ್ನು ಕೊಟ್ಟಿತ್ತು. ಯಂತ್ರ ಅದರ ಮೊಳೆಗಳ ಕುರಿತು ಅಧಿಕಾರಿಗಳಿಗೆ ತರಬೇತಿ ಕೊಟ್ಟರು. ಆ ಕಾರ್ಯದಲ್ಲಿ ಪ್ರಗತಿ ಕಂಡಿತು. ಹೀಗಾಗಿ ಈ ಕೆಲಸಕ್ಕೆ ಚಾಲನೆ ನೀಡಿದರು. ಮದ್ರಾಸ್ ಅಧಿಕಾರಿ ವರ್ಗಕ್ಕೆ ತರಬೇತಿಗಾಗಿ ಕನ್ನಡ ಮುದ್ರಣದ ಅನುಕೂಲವಿದ್ದ ಪ್ರೊಟೆಸ್ಟೆಂಟ್ ಜಾರ್ಜ್ ತರಬೇತಿಗೆ ಕಳುಹಿಸಿದರು. ಅಲ್ಲದೆ ಕನ್ನಡ ಪ್ರಗತಿ ಕಾರ್ಯಕ್ಕೆ ಮದ್ರಾಸ್ ಪ್ರಾಂತ್ಯ ಸರ್ಕಾರಿ ಅಚ್ಚುಕೂಟದಿಂದ ಕನ್ನಡ ಕಾರ್ಯವನ್ನು ಮಾಡಿತು.

ಕ್ರಿ.ಶ. ೧೮೪೨ರ ಪೂರ್ವದಲ್ಲಿ ಪ್ರೆಸ್‌ನ್ನು ಪ್ರಾರಂಭಗೊಂಡಿತು. ಅದಕ್ಕೆ ಸಾಮಗ್ರಿಗಳನ್ನ ಕಲ್ಲಿನ ಹಲಗೆಗಳನ್ನು ಕರ್ನೂಲದಿಂದ ತರಿಸುತ್ತಿದ್ದರು. ಅಚ್ಚಿನ ಪುಸ್ತಕವೆಂದರೆ ಸಣ್ಣ ಹಿತೋಪದೇಶ; ಬಾಂಬೆ ಎಜ್ಯುಕೇಶನ್ ಸೊಸೈಟಿ ಸರ್ಕಾರಿ ಅಂಗ ಸಂಸ್ಥೆಯು ಒಂದು ಪ್ರೆಸ್ಸ್ ಹೊಂದಿತ್ತು. ಇಲ್ಲಿ ಮರಾಠಿ ಗುಜರಾತಿ ಮತ್ತು ಕನ್ನಡ ಪುಸ್ತಕಗಳು ಮುದ್ರಣಗೊಂಡಿವೆ. ವೆಂಕಟರಂಗೋ ಕಟ್ಟಿಯುವರು 'ಅರಬ್ಬಿಯನ್ ನೈಟ್', ಚುರುಮರಿ ಶೇಷಗಿರಿರಾಯರು 'ಶಾಂಕುಂತಲೆ' ನಾಟಕ ಪುಸ್ತಕಗಳು ಹೊರಬಂದವು. ಕ್ರಿ.ಶ. ೧೮೫೭ರಲ್ಲಿ ಮುಂಬಯಿ ಮತ್ತು ಮದ್ರಾಸ್ ಪ್ರಾಂತ್ಯದ ಸಹಯೋಗದೊಂದಿಗೆ ವಿಶ್ವವಿದ್ಯಾಲಯದವರು ಮುದ್ರಣಾಲಯ ಪ್ರಾರಂಭಿಸಿದರು. ಆಗ ಮುದ್ರಣ ಅನಿವಾರ್ಯವಾಗಿತ್ತು. ಆದ್ದರಿಂದ 'ಪ್ರಶ್ನೆ ಪತ್ರಿಕೆ' ಮತ್ತು ಇತರ ಕಾರ್ಯಗಳಿಗೆ ಬಳಸಿಕೊಂಡರು. ಒಬ್ಬ ನ್ಯಾಯಾಧೀಶರು ಸರ್ಕಾರದಿಂದ ಕ್ರಿ.ಶ. ೧೮೪೨-೪೩ರಲ್ಲಿ ಕಲ್ಲಚ್ಚಿನ ಮುದ್ರಣ ಸ್ಥಾಪಿಸಿದರು. ಇದು ನಂತರದ ದಿನಗಳಲ್ಲಿ ಮಹತ್ವದ ಪಡೆದುಕೊಂಡಿತು. ಆ ಅವಧಿಯಲ್ಲಿ ಪ್ರಕಟಗೊಂಡ ಪುಸ್ತಕ ಮಹತ್ವ ಮಾಹಿತಿ ಕನ್ನಡ ಪ್ರಥಮ ಪತ್ರಿಕೆಯು 'ಮಂಗಳೂರು ಸಮಾಚಾರ' ಎಂಬ ಪತ್ರಿಕೆಯಲ್ಲಿ ಉಲ್ಲೇಖಗೊಂಡಿದೆ. ಅಲ್ಲದೆ ಅಚ್ಚು ಕೂಟದಲ್ಲಿ ಶಾಲಾ ಮಕ್ಕಳ ಓದಿಗಾಗಿ ಉಪಯೋಗವಾಗುವ ಪುಸ್ತಕ ಹಾಗೂ ಇತರೆ ಪುಸ್ತಕಗಳು ಮುದ್ರಣಗೊಂಡಿವೆ.

ಜಾನ್ ಗ್ಯಾರೇಟ್ ಮುಂದಾಳತ್ವದಲ್ಲಿ ಕ್ರಿ.ಶ. ೧೮೮೦ರಲ್ಲಿ ಮೈಸೂರು ಸಂಸ್ಥಾನದಿಂದ ಸರ್ಕಾರ ಮುದ್ರಣಾಲಯವನ್ನು ಪ್ರಾರಂಭಿಸಿದರು. ನಂತರ ದಿನಗಳಲ್ಲಿ ಕನ್ನಡ ಶಾಸನ, ಹಳೆಯ ಕಾವ್ಯಗಳು ಮುದ್ರಣಕ್ಕೆ ಬಳಕೆಯಾದವು. ಅಲ್ಲಿ ಸರ್ಕಾರಿ ಕಾರ್ಯಕ್ಕೆ ಅಲ್ಲದೆ ಕೆಲವು ಖಾಸಗಿ ಕೃತಿಗಳು ಕೂಡ ಮುದ್ರಣಗೊಂಡವು. ಆ ಕಾಲದಲ್ಲಿ ಜನಪ್ರಿಯಗೊಂಡ ಪತ್ರಿಕೆಗಳಲ್ಲಿ 'ಹಿತಭೋದಿನಿ' ಎಂಬ ಪತ್ರಿಕೆ ಸರ್ಕಾರ ಮುದ್ರಣದಿಂದಲೇ ಪ್ರಕಟಗೊಂಡಿತು. ಅದೇ ನಗರದಲ್ಲಿ ಮುದ್ರಣ ಉಪಶಾಖೆಯ ಆರಂಭಗೊಂಡಿತು. ಅಲ್ಲದೆ ಮೈಸೂರು ಅರಸರಾದ ಮುಮ್ಮಡಿ ಕೃಷ್ಣರಾಜರ ಹೆಸರಿನಲ್ಲಿ ಹಲವು ಗ್ರಂಥಗಳು ಮುದ್ರಣಗೊಂಡಿವೆ.

(೧೮೫೦-೬೦) ಅವುಗಳು ಈ ರೀತಿ 'ಸಂಖ್ಯಾರತ್ನಕೋಶ,' ಚದುರಂಗದಾಟಕ್ಕೆ ಸಂಬಂಧಿಸಿದ ಮರಾಠಿ ಭಾಷೆಯ ಪುಸ್ತಕ ಪ್ರಕಟಗೊಂಡವು. ಅದೇ ಅವಧಿಯಲ್ಲಿ ಮುಮ್ಮಡಿ ಕೃಷ್ಣರಾಜರ ಹೆಸರಿನಲ್ಲಿ 'ಸೌಗಂದಿಕಾ ಪರಿಣಯವು' ಎಂಬ ಪ್ರಕಟಗೊಂಡಿರುವುದು ಪುಸ್ತಕ ಗಮನಾರ್ಹ.

**ಖಾಸಗಿ ಮುದ್ರಣದ ಸ್ವರೂಪ**

ಶ್ರೀನಿವಾಸ ಹಾವನೂರ ಅವರು ಸರ್ಕಾರೇತರ ಅಂದರೆ ಖಾಸಗಿ ಒಡೆತನ ಇರುವ ಮುದ್ರಣಗಳು ಈ ನಾಡು ಪ್ರಗತಿಯಾಗಲು ಹೇಗೆ ಸಹಕಾರಿಯಾದವು ಎಂಬುದನ್ನು ಹಾವನೂರ ಅವರು ನಿರೂಪಿಸಿದ್ದಾರೆ. ಮಿಶನರಿ ಮತ್ತು ಸರ್ಕಾರಿ ಅಧಿಕಾರಿಗಳು ಮಾಡಿದ ಮುದ್ರಣ ಕಾರ್ಯ ಸ್ಥಳೀಯ ಜನರ ಮೇಲೆ ಪ್ರಭಾವ ಬೀರಿದೆ. ಇದರ ಪ್ರತಿಯಾಗಿ ಖಾಸಗಿ ಮುದ್ರಣಾಲಯಗಳು ಹುಟ್ಟಿಕೊಂಡವು. ಖಾಸಗಿ ಮುದ್ರಣವನ್ನು ಸ್ಥಾಪಿಸಿದ ಮೊದಲಿಗರೆಂದರೆ ಕರ್ನಾಟಕದವರು. ಆ ಅವಧಿಯಲ್ಲಿ ಪ್ರಾಥಮಿಕ ಶಾಲೆಗಳು ಅಧಿಕೃತವಾಗಿ ಆರಂಭವಾದವು. ಈ ಕಾರಣದಿಂದ ಸಾಕ್ಷರತೆಯ ಪ್ರಮಾಣದ ವ್ಯಾಪ್ತಿ ವಿಸ್ತಾರಗೊಂಡ ಹಿನ್ನೆಲೆಯಲ್ಲಿ ಸರ್ಕಾರ ಪಠ್ಯಪುಸ್ತಕಗಳನ್ನು ವಿತರಿಸುವಲ್ಲಿ ಅಡೆತಡೆಯಾದ ಕಾರಣ ಮತ್ತು ಪಠ್ಯ ಪುಸ್ತಕಗಳಿಗೆ ತುಂಬ ಬೇಡಿಕೆ ಇರುವ ಕಾರಣ ಖಾಸಗಿ ಮುದ್ರಣಾಲಯಗಳು ಸ್ಥಾಪನೆಯಾದವು.

ಆ ಸಂದರ್ಭವನ್ನು ಅರಿತುಕೊಂಡ ಖಾಸಗಿ ಮುದ್ರಣದವರು ಸರ್ವಜ್ಞರ ವಚನ, ದುಂದುಮೆ ಪದಗಳು, ಜೈಮಿನಿ ಭಾರತ, ರಾಜಶೇಖರವಿಳಾಸ, ಕುಮಾರವ್ಯಾಸ ಭಾರತ- ಈ ರೀತಿಯ ಕಾವ್ಯಗಳು ಮತ್ತು ಧಾರ್ಮಿಕ ಗ್ರಂಥ, ಸ್ತೋತ್ರಗಳು, ಶೃಂಗಾರ ಮತ್ತು ನೀತಿ ಬೋಧನ ಕಥಾವಸ್ತುಗಳು ಮುದ್ರಿಸಿದರು.

ಕ್ರಿ.ಶ. ೧೮೪೯ರಲ್ಲಿ ಸುಬುದ್ಧಿ ಪ್ರಕಾಶನ ಬೆಳಗಾವಿಯಲ್ಲಿ ಮೊದಲಿಗೆ ತನ್ನ ಖಾತೆಯನ್ನು ತೆರೆದುಕೊಂಡಿತು. ಇದಕ್ಕಿಂತ ಪೂರ್ವದಲ್ಲಿ ಮುಂಬಯಿ ಕರ್ನಾಟಕದಲ್ಲಿ ಖಾಸಗಿಯಾಗಿ ಕನ್ನಡ ಪುಸ್ತಕ ಮತ್ತು ಪತ್ರಿಕೆ ಮುದ್ರಿಸಿರಲಿಲ್ಲ. ಈ ಎಲ್ಲಾ ಖಾಸಗಿ ಮುದ್ರಣ ಕಾರ್ಯ ಕಲ್ಲಚ್ಚಿನದಾಗಿದ್ದು, ಬೆಳಗಾವಿಯಲ್ಲಿ ಪ್ರಥಮವಾಗಿ ಆರಂಭಗೊಂಡಿತು. ಆ ಕಾಲಘಟ್ಟದಲ್ಲಿಯೂ ಗ್ರಂಥಗಳು ಕನ್ನಡ, ಮರಾಠಿ ಎರಡು ಭಾಷೆಯಲ್ಲಿ ಪ್ರಕಟಗೊಂಡವು. ಕೆಲವು ವರ್ಷಗಳಲ್ಲಿ ಹಾವೇರಿ ಜಿಲ್ಲೆಯ ಸವಣೂರಿನಲ್ಲಿ ಎರಡು ಖಾಸಗಿ ಮುದ್ರಣಗಳಾದ ಸವಣೂರು ಪ್ರೆಸ್ ಜ್ಞಾನ ಬೋಧಕ ಪ್ರೆಸ್, ತಮ್ಮ ಕಾರ್ಯವನ್ನು ನಿರ್ವಹಿಸುತ್ತಿದ್ದವು. ಮುಸ್ಲಿಮ್ ಸಂಸ್ಥಾನದಲ್ಲಿ ಪರ್ಷಿಯನ್ ಭಾಷೆಯ ಮುದ್ರಣವಿತ್ತು ಈ ಹಿನ್ನೆಲೆಯಲ್ಲಿ ಮುಸ್ಲಿಮ್ ಸಂಸ್ಥಾನದ ಆಡಳಿತಾತ್ಮಕ ಸಂಗತಿಗೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಡುತ್ತಿದ್ದರು. ಹೀಗಿದ್ದರೂ ನಾಡಿನ ಜನಸಾಮಾನ್ಯರ ಕನ್ನಡ ಕೃತಿಗಳು ಮುದ್ರಣಕ್ಕೆ ಹೆಚ್ಚು ಒತ್ತಡವಿರುತ್ತಿತ್ತು.

ಖಾಸಗಿ ಮುದ್ರಣಾಲಯಗಳಾದ ಜ್ಞಾನ ಭೋದಕ ಪ್ರೆಸ್‌ನಿಂದ ಕನ್ನಡ ಕೃತಿಗಳು ಮುದ್ರಣಗೊಂಡವು. "ಶ್ರೀಕೃಷ್ಣಪಾರಿಜಾತ ಮತ್ತು ದುಂದುಮೆ ಹಾಡಿನ ಪುಸ್ತಕ ಜೈಮಿನಿಭಾರತ,

ಸರ್ವಜ್ಞನ ತ್ರಿಪದಿ, ಬಸವಪುರಾಣ ಮೊದಲಾದ ಹಳಗನ್ನಡದ ಕೃತಿಗಳು ಮತ್ತು ಕೆಲವು ಶತಕಗಳು ಇವನೆಲ್ಲ ಗಮನಿಸಿದಾಗ ಈ ಅಚ್ಚಕೂಟದವರಲ್ಲಿ ಪ್ರಕಟಗೊಂಡವು. ಮೇಲೆ ಹೇಳಿದ ಜನಸಾಮಾನ್ಯ ದೃಷ್ಟಿ ಎಷ್ಟರ ಮಟ್ಟಿಗೆ ಇತ್ತೆಂಬುದು ವೇದ್ಯವಾಗುತ್ತದೆ. ಈ ಮುದ್ರಣಾಲಯದಿಂದ ನಾಗವರ್ಮನ 'ಛಂದೋಂಬುಧಿಯ' ಕ್ರಿ.ಶ. ೧೮೬೨ರಲ್ಲಿ ಎಂದರೆ ಕಿಟೆಲ್ ಆವೃತ್ತಿ (ಕ್ರಿ.ಶ. ೧೮೭೫) ಗಿಂತಲೂ ಪೂರ್ವದಲ್ಲಿ ಅಚ್ಚಾಯಿತು. ಇಲ್ಲಿ ಅಚ್ಚಾದ ಕೆಲವು ಕೃತಿಗಳು ಲೇಖಕರಾದ ಬಸವಲಿಂಗಯ್ಯ, ಮಡಿವಾಳಯ್ಯ ಕುಂದಗೋಳ."[೪] ಇವರ ಹೆಸರು ಉಲ್ಲೇಖಗೊಂಡಿದೆ. ಕ್ರಿ.ಶ. ೧೮೬೫ರಲ್ಲಿ ಹೊತ್ತಿಗೆ ಸವಣೂರಿಂದ ಜ್ಞಾನಭೋದಕ ಮುದ್ರಣಾಲಯ ಧಾರವಾಡಕ್ಕೆ ವರ್ಗವಾಯಿತು.

ಅಚ್ಚು ಕೂಟಗಳು ಸನ್ಮಾರ್ಗ ದರ್ಶನ ಜ್ಞಾನ ಸಾಗರ ಮತ್ತು ಜ್ಞಾನವರ್ಧಕ ಈ ಮುದ್ರಣಗಳು ಕಾರ್ಯನಿರ್ವಹಿಸುತ್ತಿದ್ದವು. ಸನ್ಮಾರ್ಗದ ದರ್ಶನದ ಮಾಲೀಕತ್ವವನ್ನು ಪ್ರಭಾಕರ್ ಜೋಶಿ ಹೊಂದಿದ್ದರು. ಮರಾಠಿ ಕೃತಿಗಳನ್ನು ಮುದ್ರಿಸಿ ಪ್ರಕಟಿಸಿದರು. ಹಾಗೆಯೇ ಕನ್ನಡ ಜ್ಞಾನ ಬೋಧಕ ಪತ್ರಿಕೆ ಆರಂಭದಲ್ಲಿ ಮುದ್ರಣಗೊಂಡಿತು. ಇನ್ನೊಂದು ಜ್ಞಾನ ಸಾಗರ ಪ್ರೆಸ್, ಸುರ್ಜಾನ್ ಸಿಂಗ್‌ರವರು ಮಾಲಕರು; ಈ ಮುದ್ರಣಾಲಯದಲ್ಲಿ ಪಂಚಾಂಗಗಳು ಮುದ್ರಣಗೊಂಡವು. ಶಿಕ್ಷಣಾಧಿಕಾರಿಯಾದ ಚನ್ನಬಸಪ್ಪ ಅವರ ಸಹಕಾರದಿಂದ ಜ್ಞಾನವರ್ಧಕ ಪ್ರೆಸ್, ಕಲ್ಯಾಣದ ಮಾದನ ಶೆಟ್ಟಿಯವರು ಈ ಪ್ರೆಸ್ಸನ್ನು ಕ್ರಿ.ಶ. ೧೮೬೫ರಲ್ಲಿ ಪ್ರಾರಂಭಿಸಿದರು.

ಕ್ರಿ.ಶ. ೧೮೬೦ರ ಕಾಲಾವಧಿಯಲ್ಲಿ ಬೆಳಗಾವಿಯಲ್ಲಿ ಕೆಲವು ಅಚ್ಚುಕೂಟಗಳು ಕಾರ್ಯನಿರ್ವಹಿಸುತ್ತಿದ್ದವು. ಇಲ್ಲಿ ಕನ್ನಡ, ಮರಾಠಿ ಎರಡು ಭಾಷೆಯಲ್ಲಿ ಮುದ್ರಣಗೊಂಡವು. ದೇಶಬಾಂಧವ ಪ್ರೆಸ್ ಮತ್ತು ಸಮಾಚಾರ ಪ್ರೆಸ್‌ಗಳ ಕಾರ್ಯವೈಖರಿಯನ್ನು ಕಾಣಬಹುದು. ಅಲ್ಲದೆ ಬೆಳಗಾವಿ ಸಮಾಚಾರ ಪತ್ರಿಕೆ ಕೆಲವು ವರ್ಷಗಳ ಕಾಲ ಪತ್ರಿಕೆ ಕಾರ್ಯನಿರ್ವಹಿಸಿತು. ಕಲ್ಲಚ್ಚನ್ನು ಆಧರಿಸಿ ಅಚ್ಚು ಕೂಟಗಳು ಮೊಳೆಗಳು ಬಳಸಿ ಉತ್ತಮ ರೀತಿಯ ಅಚ್ಚು ಹಾಕಬಹುದು. ಮುಂಬಯಿ ಕರ್ನಾಟಕ ಶಿಕ್ಷಣಾಧಿಕಾರಿ ವಿಲಿಯಂ ರಸೆಲ್ ಮಾರ್ಗದರ್ಶನದಲ್ಲಿ ಸಹಾಯಕ ಅಧಿಕಾರಿಯಾದ ರಂಗೋ ಕಟ್ಟಿಯವರು ಧಾರವಾಡ ಮತ್ತು ಬೆಳಗಾವಿಯಲ್ಲಿ ಪಠ್ಯಪುಸ್ತಕ ಮುದ್ರಿಸಬೇಕು ಎನ್ನುವ ಉದ್ದೇಶದಿಂದ ಮೊಳೆಗಳು ದೊರೆಯುವ ಸ್ಥಳಕ್ಕೆ ಸಂಬಂಧಿಸಿದಂತೆ ಸರ್ಕಾರಿ ಮುದ್ರಣ ಮತ್ತು ಮಿಶನರಿ ಸಂಸ್ಥೆಯೊಂದಿಗೆ ಪತ್ರ ವ್ಯವಹಾರ ಮಾಡಿದರು.

ರೆಸೆಲ್ ಅವರು ಈ ದೇಶದಲ್ಲಿ ಮುದ್ರಣ ಮೊಳೆಗಳು ದೊರೆಯುವುದಿಲ್ಲ ಎಂಬುದನ್ನು ಗಮನಿಸಿ ವೆಸ್ಲಿಯನ್ ಮಿಶನ್ನಿನ ಸ್ಯಾಂಡರ್ಸ್‌ನಿಂದ ಲಂಡನ್ನಿನಲ್ಲಿ ಸಿಗುವ ಮದ್ರಣದ ಮೊಳೆಗಳನ್ನು ತರಿಸಲು ಪ್ರಯತ್ನಿಸಿದನು. ಆದರೆ ಜರ್ಮನ್ ಮಿಶನರಿ ಮೊಳೆಗಳ ಸ್ವಾಯತ್ತತೆಯನ್ನು ಬಿಟ್ಟುಕೊಡಲಿಲ್ಲ. ಈ ಪ್ರಯತ್ನ ಫಲವಾಗಿ ವೆಂ.ರಂ.ಕಟ್ಟಿಯವರು ಕಂಚುಗಾರರ

ಸಹಕಾರ ಪಡೆದುಕೊಂಡು ಬೆಳಗಾವಿಯಲ್ಲಿ ಮೊಳೆಗಳನ್ನು ಸಿದ್ಧಪಡಿಸಿಕೊಂಡು ಅವುಗಳನ್ನು ನಯವಾಗಿಸಲು ಕುಶಲಕರ್ಮಿಯವರನ್ನು ಮುಂಬಯಿಗೆ ತರಬೇತಿಗಾಗಿ ಕಳುಹಿಸಿದರು. ತರಬೇತಿ ಪಡೆದ ನಂತರ ಬೆಳಗಾವಿಯ ಲಿಥೋಗ್ರಾಫಿಕ್ ಪ್ರೆಸ್ ಮೊಳೆಗಳ ತಯಾರಿಕ ಕೇಂದ್ರವನ್ನು ತೆರೆದರು. ಈ ಕುರಿತು ಹೇಳಬೇಕಾದರೆ ರೆಸೆಲ್ ಶ್ರಮದ ಪ್ರತಿಫಲವಾಗಿ ಕನ್ನಡ ಮೊಳೆಗಳು ಮಾರಾಟಕ್ಕೆ ಸಿಗುವಷ್ಟು ಅನುಕೂಲ ಕಲ್ಪಿಸಿದರು.

ಮುದ್ರಣದ ೩ನೇ ಹಂತದ ಸ್ವರೂಪ ಬೆಳಗಾವಿಯಲ್ಲಿ ಮೊಳೆಗಳ ಕೇಂದ್ರವಾಗುವುದಕ್ಕಿಂತ ಮೊದಲು ಬೆಂಗಳೂರು ಮತ್ತು ಮದ್ರಾಸ್‌ನಲ್ಲಿ ಇಂಥ ಕೇಂದ್ರಗಳು ಇದ್ದವು. ಈ ನಾಡಿನಲ್ಲಿ ಅಲ್ಲಲ್ಲಿ ಮುದ್ರಣದ ಕೇಂದ್ರಗಳು ಹುಟ್ಟಿಕೊಂಡವು. ಕ್ರಿ.ಶ. ೧೮೮೦ರ ಹೊತ್ತಿಗೆ ಬಳ್ಳಾರಿ ಮಿಶನ್ ಪ್ರೆಸ್ ಸ್ಥಗಿತಗೊಂಡಿತು. ಈ ಹಿನ್ನೆಲೆಯಲ್ಲಿ ಪುಸ್ತಕ ವ್ಯವಹಾರದಲ್ಲಿ ಕೋನೇರು ಶ್ರೆಟ್ಟ್ರಿ ಮತ್ತು ಆದಿನಾರಾಯಣರಾಯರು ತೊಡಗಿಕೊಂಡರು. ಇನ್ನೊಂದು ಮಹತ್ವದ ಸಂಗತಿ ಎಂದರೆ ಮದ್ರಾಸ್ ಪ್ರಾಂತ್ಯದಲ್ಲಿ ಪುಂಗನೂರು ಮತ್ತು ಕುಂಭಕೋಣಂ ಪರಿಸರದಲ್ಲಿ ಕನ್ನಡದ ಕೆಲವು ಟೀಕಾ ಗ್ರಂಥಗಳು ಅಚ್ಚಾಗಿವೆ. ಅಲ್ಲದೆ ಕ್ರಿ.ಶ. ೧೮೬೦ರ ಹೊತ್ತಿಗೆ ಹಿಂದೂ ಭಾಷಾ ಸಂಜೀವಿನಿ ಅಚ್ಚುಕೂಟಗಳು ತೊಡಗಿಕೊಂಡಿದ್ದವು ಬೆಂಗಳೂರು ಮತ್ತು ಮೈಸೂರು ಪರಿಸರದಲ್ಲಿ ಯತೇಚ್ಛವಾಗಿ ಕಂಡುಬರುತ್ತವೆ.

ಕ್ರಿ.ಶ. ೧೮೬೨ರ ವಿಚಾರ ದರ್ಪಣ ಪ್ರೆಸ್ ಪ್ರಾರಂಭಗೊಂಡಿದೆ. ಅದಕ್ಕೆ ಕೆಲವು ನಿದರ್ಶನಗಳು ಕಾಣಬಹುದು. ಹರಿರಾಮ್, ಮಿಸರ್, ಟಾನ್ ಪ್ರೆಸ್ ಎಂ. ರುದ್ರಪ್ಪ ಅಂಡ್ ಸನ್ಸ್ ಚಾಮುಂಡೇಶ್ವರ ಪ್ರೆಸ್ ಹೀಗೆ ಅನೇಕ ಪ್ರೆಸ್‌ಗಳು ಮಾಹಿತಿ ಪ್ರಸ್ತಾಪಗೊಂಡಿದೆ. ಮೈಸೂರು ವಲಯದ ಸ್ಥಳೀಯ ಮುದ್ರಣ ಕಾರ್ಯವು ನಿಧಾನಗತಿಯಲ್ಲಿ ಬೆಳಕಿಗೆ ಬಂದವು. ಬೆಂಗಳೂರು ವಲಯದ ಮುಮ್ಮಡಿ ಕೃಷ್ಣರಾಜರ ಗದ್ಯ ಗ್ರಂಥಗಳು ಹಳೆಗನ್ನಡ ಕಾವ್ಯಗಳು ಈ ಅಚ್ಚುಕೂಟಗಳು ಪ್ರಾರಂಭವಾಗಿದ್ದವು. ಕರ್ನಾಟಕ ಕಾವ್ಯ ಮಂಜರಿ ಕಾವ್ಯ ಕಲಾನಿಧಿ ಗ್ರಂಥಮಾಲೆ ಪುಷ್ಪಗಳು ಸದ್ವಿದ್ಯಾನ ಮಂದಿರ ಮತ್ತು ಸ್ಟಾರ್ ಪ್ರೆಸ್ ಹುಟ್ಟಿಕೊಂಡವು. ವಾಗೀಶ್ವರ ಜಗನ್ಮೋಹಿನಿ ಪ್ರೆಸ್ ವೀರಶೈವ ಗ್ರಂಥಗಳ ಮುದ್ರಣಕ್ಕೆ ಪ್ರಾಮುಖ್ಯತೆ ಕೊಟ್ಟಿತು. ಆ ಕಾಲದ ಕೃತಿಗಳಲ್ಲಿ ಕರ್ನಾಟಕ ಮುದ್ರಣಾಭಿವೃದ್ಧಿ ಕಂಪನಿ ಎಂಬ ಹೆಸರು ಉಲ್ಲೇಖಗೊಂಡಿದೆ.

ಮದ್ರಾಸ್ ಪರಿಸರದಲ್ಲಿಯೂ ಕನ್ನಡದ ಮುದ್ರಣಾಲಯಗಳಿರುವುದನ್ನು ಗಮನಿಸಬಹುದಾಗಿದೆ. "ಹಿಂದೂ ಭಾಷಾ ಸಂಜೀವಿನಿ, ಸರಸ್ವತಿ ವಿಲಾಸ ಪ್ರೆಸ್, ವಸುಮತಿ ಪ್ರಿಂಟಿಂಗ್ ಪ್ರೆಸ್, ವೀರರಾಘವ ಮುದ್ರಣಾಲಯ, ಸ್ಕಾಟಿಸ್ ಪ್ರೆಸ್ ಮುಂತಾದ ಅಚ್ಚು ಕೂಟಗಳಲ್ಲಿ ಆ ಕಾಲಕ್ಕೆ ಪುಸ್ತಕಗಳು ಪ್ರಕಟವಾದವು ಈ ಸಂಬಂಧ ಎಸ್.ವೆಂಕಟಸುಬ್ಬಶಾಸ್ತ್ರಿ ನನ್ಸೂರು ಬಿ ಗುಂಡಪ್ಪ, ವಿ.ರಾಮಕೃಷ್ಣ, ವಾಜಪೇ ವೆಂಕಟೇಶಶಾಸ್ತ್ರಿ"[೫] ಹೀಗೆ ಅನೇಕರ

ಹೆಸರು ಉಲ್ಲೇಖಗೊಂಡಿರುವುದನ್ನು ಕಾಣಬಹುದು. ಕ್ರಿ.ಶ. ೧೮೮೦ ಕಾಲಘಟ್ಟದಲ್ಲಿ ಉಡುಪಿಯ ಹಿಂದೂ ಮುದ್ರಣ ತನ್ನ ಕಾರ್ಯ ಆರಂಭಿಸಿತು. ಆ ಭಾಗದಲ್ಲಿ ಮಿಶನರಿಗಳ ಮುದ್ರಣ ಪ್ರಭಾವ ಯತೇಚ್ಛವಾಗಿ ಪ್ರಸ್ತಾಪಗೊಂಡಿದೆ.

ಕ್ರಿ.ಶ."೧೮೮೬ರಲ್ಲಿ ಸುಮಾರಿಗೆ ಮುಂಬಯಿ ನಗರದಲ್ಲಿ ಶಾಮರಾವ್ ವಿಠಲ್ ಕೈಕಿಣಿಯವರ ಪ್ರೋತ್ಸಾಹದಿಂದ ಮತ್ತು ಸೂರಿ ವೆಂಕಟರಮಣ ಶಾಸ್ತ್ರೀ ಅವರ ಪರಿಶ್ರಮದ ಪ್ರತಿಫಲವಾಗಿ ಕರ್ನಾಟಕ ಛಾಪಖಾನೆ ಮತ್ತು ಭಾರತೀಯ ಪ್ರೆಸ್‌ನಲ್ಲಿ ಕನ್ನಡ ಪುಸ್ತಕಗಳು ಮುದ್ರಣಗೊಂಡವು. ಹವ್ಯಕ ಸುಭೋದ ಕನ್ನಡ ಸುವಾರ್ತೆ ಹಿತೋಪದೇಶ ಎಂಬ ಪತ್ರಿಕೆಗಳ ವೆಂಕಟಧ್ವರಿಯ ಕಾವ್ಯನುವಾದ ಕನ್ನಡ ಎರಡು ಸಾಮಾಜಿಕ ನಾಟಕಗಳು ತುರಂಗ ಭಾರತಿ ಕಾವ್ಯ ಮನುಸ್ಮೃತಿಯ ಟೀಕೆ ಇದೇ ಮೊದಲಾದ ಮಹತ್ವದ ಪೂರ್ಣವಾದ ಕೃತಿಗಳನ್ನು ಅಚ್ಚು ಕೂಟಗಳು ಕನ್ನಡಕ್ಕೆ ನೀಡಿವೆ. ಕನ್ನಡ ಮೊಳೆಗಳ ಮಾರಾಟ ಮಾಡುತ್ತಿದ್ದ ನಿರ್ಣಯ ಸಾಗರ ಪ್ರೆಸ್ಸಿನವರೆಗೂ ಆಗಾಗ ಕನ್ನಡ ಪುಸ್ತಕಗಳನ್ನು ಅಚ್ಚು ಹಾಕಿಸಿದರು."[೬]

**ಗಂಥೋದ್ಯಮದ ಮೇಲೆ ಕಾಯ್ದೆ ಅನುಷ್ಠಾನ**

ಈ ದೇಶಕ್ಕೆ ಬಂದ ಬ್ರಿಟಿಷ್ ಅಧಿಕಾರಿ ವರ್ಗ ಮತ್ತು ಮಿಶನರಿಗಳ ಮಾಡಿದ ಕಾರ್ಯ ಸ್ಮರಣೀಯ. ಆದರೆ ಈ ದೇಶದ ಜನರ ಭಾಷೆ, ಸಂಸ್ಕೃತಿ, ಧಾರ್ಮಿಕ, ಸಾಮಾಜಿಕ ಶೈಕ್ಷಣಿಕ ಮತ್ತು ರಾಜಕೀಯ ಈ ಎಲ್ಲದರ ಮೇಲೆ ಹಿಡಿತವನ್ನು ಹೊಂದಿದರು. ಹಾಗೆಯೇ ಮುದ್ರಣ, ಪತ್ರಿಕೆ, ಸಾಹಿತ್ಯ ಕೃತಿಗಳ ಮೇಲೆ ನಿರ್ಬಂಧ ಹೇರುವುದು ಈ ಚರಿತ್ರೆ ಅಧ್ಯಯನದಿಂದ ತಿಳಿಯುತ್ತದೆ. ಅಧಿಕಾರಿ ವರ್ಗ ಮತ್ತು ಮಿಶನರಿಗಳು, ಮುದ್ರಣ ಮತ್ತು ಆಡಳಿತದಲ್ಲಿ ತಮ್ಮ ಹಿಡಿತವಿರುವರಿಗೆ ಯಾವ ಕಾಯ್ದೆಯನ್ನು ಮಾಡಲಿಲ್ಲ. ಆದರೆ ದೇಶಿಯರು ಮುದ್ರಣ ಮತ್ತು ಸಾಹಿತ್ಯ ಕೃಷಿಯಲ್ಲಿ ತೊಡಗಿಕೊಳ್ಳುವವರ ಮೇಲೆ ಕಠಿಣ ಕಾಯ್ದೆಗಳನ್ನು ಜಾರಿಗೆ ತಂದರು. ಅಲ್ಲದೆ ಕಾಯ್ದೆಯು ತಮ್ಮ ಪರವಾಗಿ ನಿಲ್ಲುವಂತೆ ಮಾಡಿದರು.

ಮೇಲಿನ ಮಹತ್ವ ಸಂಗತಿಯನ್ನು ಆಧರಿಸಿ ಹೇಳುವುದಾದರೆ ಮುದ್ರಣಾಲಯಗಳಲ್ಲಿ ಕಾರ್ಯನಿರ್ವಹಿಸುವ ನೌಕರರು ಬ್ರಿಟಿಷರ ಹಿಡಿತದಲ್ಲಿ ಇರುವಾಗ ಯಾವುದೇ ಕಾಯ್ದೆ ನಿರ್ಬಂಧಗಳನ್ನು ಹೇರುವ ಜರೂರು ಇರಲಿಲ್ಲ. ನಂತರ ಕಾಲಘಟ್ಟದಲ್ಲಿ ಪತ್ರಿಕೆ ಮುದ್ರಣ ಕಾರ್ಯವನ್ನು ಸ್ಥಳೀಯರು ನಿರ್ವಹಿಸುವಾಗ ಕಾಯ್ದೆ ಮಾಡಬೇಕಾಗುತ್ತದೆ. ಎಂಬುದನ್ನು ಅರಿತುಕೊಂಡಿದ್ದರು. ಕೇಂದ್ರದ ವರಿಷ್ಠರ ಗಮನಕ್ಕೆ ತಂದು ಈ ವಿಷಯ ಕುರಿತು ಮನವರಿಕೆ ಮಾಡಿಕೊಟ್ಟರು. ಈ ಹಿನ್ನೆಲೆಯಲ್ಲಿ ಭಾರತೀಯ ಗ್ರಂಥೋದ್ಯಮ ಕುರಿತು ಕಾಯ್ದೆಯನ್ನು ಕ್ರಿ.ಶ. ೧೮೬೩ರಲ್ಲಿ ಲಂಡನ್ನಿನ ರಾಯಲ್ ಏಶಿಯಾಟಿಕ್ ಸೊಸೈಟಿಯವರು ಬ್ರಿಟಿಷರಿಗೆ ಮನವಿ ಸಲ್ಲಿಸಿದರು.

ಆ ವರದಿಯು ಈ ರೀತಿಯಾಗಿತ್ತು. "ಈಚೆಗೆ ಹಿಂದಿನವರು ಬಹಳ ಸಾಹಿತ್ಯ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುತ್ತಿದ್ದರು. ಆ ಕಾಲದಲ್ಲಿ ಸಂಸ್ಕೃತ ಕೃತಿಗಳನ್ನು ಸಂಪಾದಿಸಿ ಪ್ರಕಟಿಸಿದರು. ಇಂಗ್ಲಿಷ್ ಮತ್ತು ಸಂಸ್ಕೃತ ಗ್ರಂಥಗಳನ್ನು ದೇಶಿಯ ಭಾಷೆಯಲ್ಲಿ ಅನುವಾದಿಸಿದರು. ಅಲ್ಲದೆ ಧಾರ್ಮಿಕ ರಾಜಕೀಯ ವೈಜ್ಞಾನಿಕ ಹಾಗೂ ಧಾರ್ಮಿಕ ಪ್ರಬಂಧ ಕೃತಿಗಳನ್ನು ಬರೆದು ಪ್ರಕಟಿಸುತ್ತಿದ್ದರು. ಹಿಂದೂಸ್ತಾನ ಮತ್ತು ಅಲ್ಲಿಯ ಜನರು ಸದ್ಯದ ಪರಿಸ್ಥಿತಿ ತಿಳಿಯಲು ಈ ಕೃತಿಗಳು ಸಹಕಾರಿಯಾದವು. ಇಂಗ್ಲೆಂಡಿನಲ್ಲಿ ಪಾರ್ವಾತ್ಯ ವಾಙ್ಮಯ ಅಭ್ಯಾಸಕ್ಕೆ ಅನುವು ದೊರೆಯಿತು."[೭] ಹಾಗೆಯೇ ಆಡಳಿತಕ್ಕೂ ಸಹಕಾರಿಯಾಗುವುದು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

ಈ ಮಹತ್ವದ ವಿಚಾರವನ್ನು ಪರಿಶೀಲಿಸಿದ ವರಿಷ್ಠರು ಸರ್ಕಾರ ಕಾಯ್ದೆಯನ್ನು ಪಾಸುಮಾಡಲು ಇಚ್ಚಿಸಿದರು. ಹೀಗಾಗಿ ಕ್ರಿ.ಶ. ೧೮೬೭ರ ಮುದ್ರಣ ಮತ್ತು ಪುಸ್ತಕ ಕಾಯ್ದೆಯನ್ನು ಪಾಸುಮಾಡಿದರು. ಈ ನಿಯಮವನ್ನು ಆಧರಿಸಿ "ಭಾರತದಲ್ಲಿ ಅಚ್ಚಾದ ಪ್ರತಿಯೊಂದು ಪತ್ರಿಕೆಯ ಮೂರು ಪ್ರತಿಗಳನ್ನು ಸರ್ಕಾರದ ತನಿಖೆಗೆ ಒಪ್ಪಿಸಬೇಕೆಂದು ವಿಧಿಸಲಾಯಿತು. ಅದಕ್ಕಾಗಿ ಪ್ರತಿಯೊಂದು ಪ್ರಾಂತ್ಯದಲ್ಲಿ ಪರಿಶೀಲನಾಧಿಕಾರಿಯ ನೇಮಕ ಮಾಡಿದರು. ಆ ಅಧಿಕಾರಿಯು ಅವುಗಳನ್ನು ಪರಿಶೀಲಿಸಿ ಸೂಕ್ತ ವರದಿಯನ್ನು ಸರ್ಕಾರಕ್ಕೆ ಒಪ್ಪಿಸುವುದಲ್ಲದೆ ಮುದ್ರಿತವಾದ ಪುಸ್ತಕಗಳ ಒಂದು ತ್ರೈಮಾಸಿಕ ಸೂಚಿಯನ್ನು ಪ್ರಕಟಿಸಬೇಕಾಗಿತ್ತು. ಪ್ರತಿಯೊಂದು ಕೃತಿಯ ಮೂರು ಪ್ರತಿಗಳನ್ನು ಸಲ್ಲಿಸುತ್ತಿದ್ದರು. ಒಂದನ್ನು ಪ್ರಾಂತ್ಯಿಯ ಸರ್ಕಾರ ಇಟ್ಟುಕೊಂಡು ಇನ್ನೊಂದು ಪ್ರತಿಯನ್ನು ಕೇಂದ್ರ ಹಾಗೂ ಲಂಡನ್ನಿನ ಕೆಲವು ಲೈಬ್ರಿರಿಗಳಿಗೆ ಕಳುಹಿಸುವ ಕ್ರಮವು ರೂಢಿಯಾಯಿತು."[೮] ಇದರಿಂದಾಗಿ ನಂತರ ದಿನಗಳಲ್ಲಿ ಅಧ್ಯಯನ ಮಾಡುವರಿಗೆ ಅವು ಆಕರ ಸಾಮಗ್ರಿಗಳಾದವು.

ಬ್ರಿಟಿಷರ ನಿರ್ಧಾರಗಳು ಹೇಗೆ ಇರುತ್ತಿದ್ದವು ಎನ್ನುವುದಕ್ಕೆ ಕೆಲವು ನಿದರ್ಶನ ನೋಡಬಹುದು. ತ್ರೈಮಾಸಿಕ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದ ಪುಸ್ತಕ ಸೂಚಿ, ಈ ಕಾನೂನು ಕಾರ್ಯಚರಣೆಗೆ ಬರುವುದಕ್ಕಿಂತ ಮೊದಲು ಅಂದರೆ ಕ್ರಿ.ಶ. ೧೮೬೭ಕ್ಕಿಂತ ಮೊದಲು ಮುದ್ರಣಗೊಂಡ ಕೃತಿಗಳ ಮಾಹಿತಿಗಳನ್ನು ತಯಾರಿಸಿಕೊಂಡರು. ಈ ಅವಧಿಯಲ್ಲಿ ಭಾರತ ಸರ್ಕಾರದ ಆದೇಶದನ್ವಯ ವಿವಿಧ ಪ್ರಾಂತ್ಯಗಳಲ್ಲದೆ ಸಂಸ್ಥಾನದವರು ಸಹ ತ್ರೈಮಾಸಿಕ ಸೂಚಿಯನ್ನು ಪ್ರಕಟಿಸುತ್ತ ಬಂದರು. ಈ ಮಹತ್ವ ಸಂಗತಿ ಗಮನಿಸಿ ಸರ್ಕಾರವು ಗ್ರಂಥೋದ್ಯಮಕ್ಕೆ ಸಂಬಂಧಿಸಿದ ವಾರ್ಷಿಕ ವರದಿಯ ಸೂಕ್ತವಾದ ಟೀಕೆಗಳೊಡನೆ ಪ್ರಕಟಿಸುತ್ತ ಬಂತು, ಪ್ರಾಂತೀಯ ಮತ್ತು ಕೇಂದ್ರ ಸರ್ಕಾರ ಈ ನಿಯತಕಾಲಿಕ ವರದಿ ಒದಗಿಸುತ್ತಿತ್ತು.

ಕನ್ನಡ ನಾಡಿನ ಸಾಹಿತ್ಯ ಕೃಷಿಯ ಅಂಥ ಪ್ರಗತಿ ಕಾಣಲಿಲ್ಲ. ಕ್ರಿ.ಶ. ೧೮೮೫-೯೫ರ ಕಾಲಘಟ್ಟದಲ್ಲಿ ಭಾರತ ಸರ್ಕಾರ ಪ್ರಕಟಿಸುವ ಹಲವು ಪ್ರಾಂತೀಯ ವರದಿಗಳನ್ನು ಗಮನಿಸಿದರೆ,

(RPIP) "Report on publication issued and registered in the several provices of Birth India" ಪರಿಶೀಲಿಸಿದಾಗ ಆ ಕಾಲಕ್ಕೆ ಪ್ರತಿವರ್ಷ ಸುಮಾರು ಎರಡು ನೂರು ಕನ್ನಡ ಪುಸ್ತಕಗಳು ಪ್ರಕಟವಾಗುತ್ತಿದ್ದವೆಂದು ತಿಳಿಯುತ್ತದೆ. ಸರಾಸರಿ ಪ್ರಮಾಣ ಇಂತಿದೆ. ಮೈಸೂರು-೧೧೦, ಮದ್ರಾಸ್ ಕರ್ನಾಟಕ-೬೦, ಮುಂಬಯಿ ಕರ್ನಾಟಕ-೩೦; ಇವುಗಳಲ್ಲಿ ಪಠ್ಯ ಪುಸ್ತಕಗಳ ಪುನರ್ ಮುದ್ರಣಗಳ ಸಂಖ್ಯೆಯೇ ಹೆಚ್ಚು ಇತರೆ ಯಾವುದೇ ನೆರೆಯ ಭಾಷೆಗಳ ಹೋಲಿಸಿದಾಗ ಕನ್ನಡ ಸಾರಸತವ ಪ್ರಪಂಚ ಪ್ರಗತಿ ಹಿನ್ನೆಡೆ ಸ್ಪಷ್ಟವೇ"[೯] ಆಗಿದ್ದಿತು. ಈ ಸಂಗತಿ ಆಧರಿಸಿ ಹೇಳುವುದಾದರೆ ಕನ್ನಡ, ಉರ್ದು, ಸಿಂಧೀ ಭಾಷೆಗಳ ಕೃತಿಗಳಲ್ಲಿ ಗುಣಮಟ್ಟವಿರುವುದಿಲ್ಲ ಎನ್ನುವುದು ಈ ವರದಿಯ ಅಧ್ಯಯನದಿಂದ ವೇದ್ಯವಾಗುತ್ತದೆ.

ಕ್ರಿ.ಶ. ೧೮೯೫ರ ವರದಿಯು ಈರೀತಿಯಾಗಿತ್ತು. "This poverty Literary activity ameng the canarose people is not confined only to the year under Report but has to be Regetted in each years Report"[೧೦] ಈ ವರದಿಯ ಆಧರಿಸಿ ಹೇಳುವುದಾದರೆ ಈ ನಾಡು ಭಾಷೆ ಸಾಹಿತ್ಯ ಮತ್ತು ಜನರ ಬಗ್ಗೆ ಟೀಕಿಸಿದ್ದು ಕಂಡುಬರುತ್ತದೆ. ಕನ್ನಡ ನಾಡು, ಭಾಷೆ ಪ್ರಗತಿ ಆಗಲಿಲ್ಲ ಎನ್ನುವ ಹಿನ್ನೆಲೆಯನ್ನು ತಿಳಿಯಲು ಈ ಅಂಶಗಳಿಂದ ಕಾಣಬಹುದು. ೧. ಆಡಳಿತಾತ್ಮಕವಾಗಿ ಇಚ್ಛೆ ಇಲ್ಲದದ್ದು ಕಾರಣ ೨. ಕಾನೂನಿನ ಒತ್ತಡ ಹೇರುವ ತಂತ್ರ ತಮ್ಮ ಪರವಾಗಿ ನಿಲ್ಲುವ ನಿಲುವು ತೆಗೆದುಕೊಳ್ಳುವುದು. ಈ ರೀತಿ ಅಂಶಗಳಿಂದ ಕನ್ನಡ ಭಾಷೆಯ ಸಾಹಿತ್ಯ ಅಭಿವೃದ್ಧಿ ಕಾಣಲು ಸಾಧ್ಯವಾಗಲಿಲ್ಲ. ಬಿ.ಎಲ್.ರೈಸ್‌ರವರು ಕ್ರಿ.ಶ. ೧೮೮೮ರವರೆಗೆ ವರದಿ ಸಿದ್ಧಪಡಿಸಿದರು. ಎಚ್.ಜೆ.ಭಾಭಾ ಶಿಕ್ಷಣಾಧಿಕಾರಿಯಾಗಿದ್ದಾಗ ವಾರ್ಷಿಕ ವರದಿಯಲ್ಲಿ ಹೆಚ್ಚು ಮಾಹಿತಿಗಳಿರುವುದನ್ನು ಸಂಪಾದಕರು ಉಲ್ಲೇಖಿಸಿದ್ದಾರೆ.

ಕಾನೂನಿನ ಇತಿಮಿತಿ ಅರಿತು ಸಾಹಿತ್ಯ ಬರೆಯುವುದು ಮತ್ತು ಸರ್ಕಾರದ ವಿರುದ್ಧವಲ್ಲದ ಸಂಗತಿಯನ್ನು ಅರಿಯುವಂತೆ ಮಾಡುವುದು. ಕ್ರಿ.ಸ. ೧೮೯೦ರ ವರದಿಯಲ್ಲಿ ಅತಿರೇಕದ ಸಂಗತಿ ಉಲ್ಲೇಖಗೊಂಡಿವೆ. ಎರಡು ಕಾವ್ಯ ಸಂಕಲನಗಳಲ್ಲಿ ಶೃಂಗಾರ ವರ್ಣನೆ ಕಂಡುಬರುತ್ತದೆ. ಈ ಸಂಗತಿ ಗಮನಿಸಿದ ಅಧಿಕಾರಿ ವರ್ಗದವರು ಈ ವಿಷಯಕ್ಕೆ ಸಂಬಂಧಿಸಿದ ಪ್ರಕಾಶಕರನ್ನು ಕರೆಸಿ ಎಚ್ಚರಿಕೆ ನೀಡಿದರು. ಅಲ್ಲದೆ ಆ ಪ್ರಕಾಶಕರಿಗೆ ಕೃತಿಯ ಪ್ರತಿಗಳನ್ನು ಕಛೇರಿಗೆ ತಲುಪುವಂತೆ ಸೂಚಿಸಿದರು. ಇಲ್ಲವಾದರೆ ಸರ್ಕಾರ ತಮ್ಮ ಮೇಲೆ ಕಾನೂನಿನ ಕ್ರಮ ಜರುಗಿಸುತ್ತದೆ. ಎಂದೂ ಸೂಚಿಸಿದರು. ಕನ್ನಡ ಸಾಹಿತ್ಯ ಕೃತಿಗಳು ವಮೌಲ್ಯವನ್ನು ಕಾಯ್ದುಕೊಳ್ಳಲು ಅವರ ಕಾನೂನಿನ ನಿಲುವುಗಳೇ ಕಾರಣ. "ಎಚ್.ಜೆ.ಭಾಭಾರವರ ನಿರ್ದೇಶನದಲ್ಲಿ ಮೈಸೂರು ಸರ್ಕಾರ ಕನ್ನಡ ಭಾಷಾಂತರಕಾರನಾಗಿದ್ದ ಆರ್ ನರಸಿಂಹಾಚಾರ್ಯರು ಇಂಥ ಸಮೀಕ್ಷೆಯ ಕೆಲಸವನ್ನು ಕೈಗೆತ್ತಿಕೊಂಡಿದ್ದರಿಂದ ಮೌಲ್ಯಯುತವಾದ ಕೃತಿಗಳಾಗಲಿಕ್ಕೆ ಸಾಧ್ಯವಾಯಿತು."[೧೧] ತಿಳಿದುಬರುತ್ತದೆ.

**ಉದಯ ಕಾಲದ ಕೃತಿಗಳ ಪ್ರಸರಣಗೊಂಡ ಸ್ವರೂಪ**

ಕನ್ನಡ ಗ್ರಂಥೋದ್ಯಮವು ತನ್ನದೇಯಾದ ಚರಿತ್ರೆಯ ಹಿನ್ನೆಲೆ ಹೊಂದಿದೆ. ಮುದ್ರಿಸಿದ ಕಲ್ಲಚ್ಚಿನ ಮುದ್ರಣ ಸ್ಥಗಿತಗೊಂಡು ಸಾಹಿತ್ಯ ಧಾರ್ಮಿಕ ವಿಷಯಗಳಿಗೆ ಸಂಬಂಧಿಸಿದ ಕೃತಿಗಳು ಪ್ರಸಾರಗೊಂಡವು. ಮುದ್ರಣದ ಸೊಗಸು, ಅಚ್ಚುಕಟ್ಟುತನ ಆಧುನಿಕ ದಿನಮಾನಗಳಲ್ಲಿ ತಂತ್ರಜ್ಞಾನ ಎಷ್ಟೇ ಮುಂದಿದ್ದರೂ ಈ ಕಾಲಕ್ಕೆ ಸರಿಸಾಟಿಯಾಗುವ ಸಾಮರ್ಥ್ಯವನ್ನು ಹೊಂದಿವೆ. ಮಿಶನರಿಗಳು ಮತ್ತು ಸರ್ಕಾರಿ ಮುದ್ರಣಾಲಯವು ಬಳಸುತ್ತಿದ್ದ ಕಾಗದ ಉತ್ತಮ ದರ್ಜೆಯದಾಗಿತ್ತು. ಅಲ್ಲದೆ ಸ್ಥಳೀಯ ಅಚ್ಚು ಕೂಟ ಬಳಸುತ್ತಿದ್ದ ಕಾಗದ ತೆಳ್ಳನೆಯ ಮತ್ತು ಒರಟಾಗಿತ್ತೆಂದು ತಿಳಿದುಬರುತ್ತದೆ. ಆದರೂ ಕೂಡ ಕೃತಿಗಳ ಓದುಗರ ಸಂಖ್ಯೆ ಹೆಚ್ಚಾಗುತ್ತಾ ಹೋಯಿತು.

**ಶಿಕ್ಷಣ ಮತ್ತು ಸಾಹಿತ್ಯದ ಪ್ರಗತಿಯ ಸ್ವರೂಪ**

ಈ ನಾಡಿನ ಶಿಕ್ಷಣ ಮಠ, ಗುರುಮನೆ, ದೇವಸ್ಥಾನದಿಂದ ಆರಂಭಗೊಂಡಿದೆ. ಸರಳವಾಗಿ ಮತ್ತು ಮಿತ ವೆಚ್ಚದಲ್ಲಿ ಕಲಿಸುತ್ತಿದ್ದರು. ವಿದ್ಯಾರ್ಥಿಗಳಲ್ಲಿ ಗಣಿತ, ವಿಷಯದಲ್ಲಿ ಬುದ್ಧಿವಂತರಿದ್ದರು. ಹಿರಿಯರು ಕಿರಿಯರಿಗೆ ಕಲಿಸುವ ಸಂಪ್ರದಾಯವಿತ್ತು. ಹಾಗೆಯೇ ಮನದಟ್ಟಾಗುವಂತೆ ಕಲಿಸುತ್ತಿದ್ದರು. ದೇಶಿಯ ಪ್ರಾಥಮಿಕ ಶಿಕ್ಷಣ ಓದು, ಬರಹ ಅಲ್ಲದೆ ಗಣಿತ ವಿಷಯಕ್ಕೆ ಹೆಚ್ಚಿನ ಒತ್ತು ಕೊಡುತ್ತಿದ್ದರು. ದೇಶಿಯ ಶಿಕ್ಷಣ ಕಲಿಯಲಿಕ್ಕೆ ಅಷ್ಟೇ ಅಲ್ಲ ಕಲಿತ ನಂತರ ಮೌಲ್ಯಯುತ ಗುಣಗಳನ್ನು ದೈನಂದಿನ ಬದುಕಿನಲ್ಲಿ ಮೈಗೂಡಿಕೊಳ್ಳುವಂತೆ ಮಾಡುತ್ತಿದ್ದರು. ಅಲ್ಲದೆ ಬಾಲ್ಯದಲ್ಲಿ ರಾಮಾಯಣ, ಮಹಾಭಾರತ ಮುಂತಾದ ಮಹಾಕಾವ್ಯಗಳನ್ನು ಕಲಿಸುತ್ತಿದ್ದರು.

ಶಾಲೆಯಲ್ಲಿ ಕುಮಾರವ್ಯಾಸ ಭಾರತ, ಜೈಮಿನಿಭಾರತ, ಬಸವಪುರಾಣ, ರಾಜಶೇಖರ ವಿಳಾಸ, ಹರಿಭಕ್ತಸಾರ, ದಾಸರಹಾಡು, ಸರ್ವಜ್ಞನ ತ್ರಿಪದಿ, ಹೀಗೆ ಶಿಕ್ಷಣ ಕಲಿಸುವ ರೀತಿ ತುಂಬ ಭಿನ್ನವಾಗಿರುತ್ತಿತ್ತು. ಉನ್ನತ ಶಿಕ್ಷಣವು ಕೂಡ ಪ್ರಾಚೀನ ಕಾವ್ಯ, ಧಾರ್ಮಿಕ ಕಾವ್ಯ, ಶಾಸ್ತ್ರಗ್ರಂಥಗಳು, ಮಠಗಳು ಮತ್ತು ಪಂಡಿತರ ಮನೆಗಳಲ್ಲಿ ನಡೆಯುತ್ತಿದ್ದವು. ವಿದ್ಯೆ ಜ್ಞಾನಾರ್ಜನೆಗೆ ಎಂದು ಭಾವಿಸಿದರು. ದೇಶಿಯ ಶಿಕ್ಷಣ ಕೆಲವರ ಸ್ವತ್ತಾಗಿತ್ತು. ಪಾಶ್ಚಿಮಾತ್ಯರ ಶಿಕ್ಷಣ ಸ್ವರೂಪ, ಹಲವರ ಸ್ವತ್ತಾಗಿತ್ತು. ಶಿಕ್ಷಣ ಎಂದರೆ ಹಲವರ ಸ್ವತ್ತು ಹೊರತು ಕೆಲವರ ಸ್ವತ್ತು ಅಲ್ಲ ಎನ್ನುವುದನ್ನು ಬ್ರಿಟೀಷರು ನಮ್ಮ ದೇಶದವರಿಗೆ ಪರಿಚಯ ಮಾಡಿಕೊಟ್ಟರು.

ಭಾರತಕ್ಕೆ ಬಂದ ಮಿಶನರಿ ಮತ್ತು ಅಧಿಕಾರಿ ವರ್ಗದವರಿಂದ ಶಿಕ್ಷಣ ಕ್ಷೇತ್ರದ ವಿಕಾಸಗೊಳ್ಳಲು ಸಾಧ್ಯವಾಯಿತು. ತಾಯಿ ನೆಲದ ಪ್ರೀತಿ ಮತ್ತು ತನ್ನ ದೇಶದ ಬಗ್ಗೆ ಅಭಿಮಾನವನ್ನು ಮಿಶನರಿ ಮತ್ತು ಅಧಿಕಾರಿಗಳಲ್ಲಿ ಕಾಣುತ್ತದೆ. ಶ್ರದ್ಧೆ ಮತ್ತು ಪ್ರಾಮಾಣಿಕತೆಯಿಂದ ನಿರ್ವಹಿಸಿದರು.

**ಶಿಕ್ಷಣ ವಿಕಾಸ ಪಡೆದುಕೊಂಡ ರೀತಿ**

ಈ ನಾಡಿಗೆ ಬಂದ ಮಿಶನರಿ ವರ್ಗ ಮತ್ತು ಅಧಿಕಾರಿ ವರ್ಗದವರಿಂದಾಗಿ ಮೇಲೆ ಶಿಕ್ಷಣದ ಪರಿಸರ ನಮ್ಮ ಬದಲಾವಣೆಯನ್ನು ಕಂಡುಕೊಂಡಿತು. ೧. ಕಲಿಸುವ ರೀತಿ ವ್ಯಾಪಕ ಇಲ್ಲದಿರುವುದು, ೨. ಕೆಲವು ವರ್ಗಕ್ಕೆ ಸೀಮಿತ ಕಲಿಕೆಯ ವ್ಯಾಪ್ತಿ ಅಕ್ಷರ ಲೆಕ್ಕಗಳ ತಿಳುವಳಿಕೆ, ಕಾವ್ಯ, ಶಾಸ್ತ್ರ ಪಠಣ ಇದನ್ನು ಹೊರತುಪಡಿಸಿದರೆ ಜಗತ್ತಿನ ವಿದ್ಯಮಾನಗಳ ಮತ್ತು ಆಗುಹೋಗುಗಳ ಕುರಿತು ವಿವೇಚಿಸುವ ತಿಳುವಳಿಕೆ ಇಲ್ಲದಿರುವುದು ನಮ್ಮ ದೇಶಿಯ ಶಿಕ್ಷಣ ಪದ್ಧತಿಯಾಗಿತ್ತು. ಹಾಗೆಯೇ ಶಿಕ್ಷಕರಿಗೆ ಸರಿಯಾದ ತರಬೇತಿ ಇಲ್ಲದಿರುವುದು, ಮಕ್ಕಳಿಗೆ ಕಲಿಸಲು ನಿಖರವಾದ ಪಠ್ಯ ಇಲ್ಲದಿರುವುದು ಗಮನಾರ್ಹ ವಿಚಾರ.

ಈ ನಾಡಿನ ಶಿಕ್ಷಣದ ನ್ಯೂನ್ಯತೆಗಳನ್ನು ಸರಿಪಡಿಸಲು ಕಾರ್ಯೋನ್ಮುಖರಾದ ಬ್ರಿಟಿಷ್ ಅಧಿಕಾರಿಗಳಲ್ಲಿ ಮೊದಲಿಗರೆಂದರೆ ಮದ್ರಾಸ್ ಪ್ರಾಂತ್ಯ ಮನ್ರೋ ಮತ್ತು ಮುಂಬಯಿಯ ಎಲ್‌ಫಿನ್‌ಸ್ಟನ್; ಈ ಇಬ್ಬರು ಗವರ್ನರ್ ಸಮಕಾಲೀನರಾಗಿದ್ದರು. ಎಲ್‌ಫಿನ್‌ಸ್ಟನ್ ಪ್ರಾಂತ್ಯದಲ್ಲಿ ಬಾಂಬೆ ಎಜ್ಯುಕೇಶನ್ ಸೊಸೈಟಿ ಮತ್ತು ನೇಟಲ್‌ಸ್ಕೂಲ್ ಅಂಡ್ ಬುಕ್ ಸೊಸೈಟಿಗಳೊಂದಿಗೆ ಶಿಕ್ಷಣ ಸೂತ್ರವನ್ನು ಕಾರ್ಯರೂಪಕ್ಕೆ ತಂದರು. ಜೊತೆಗೆ ಪಠ್ಯಪುಸ್ತಕ ಬರೆಯಿಸಿ ತರ್ಜುವೆ ಮಾಡಿದರು. ನಂತರ ಮುದ್ರಿಸುವ ಕೆಲಸ ಆತನದಾಗಿತ್ತು. ಅಲ್ಲದೆ ದೇಶಿಯ ಭಾಷೆಯಲ್ಲಿ ಶಿಕ್ಷಣ ಕೊಡಬೇಕು. ಹಾಗೆಯೇ ದೇಶಿಯ ಪದ್ಯಗಳಷ್ಟೇ ಅಣಿಗೊಳಿಸಬೇಕೆಂಬ. ಅಂಶಗಳನ್ನು ಆಧರಿಸಿ ನಂತರ ಬಂದ ಅಧಿಕಾರಿಗಳು ಮುಂದುವರಿಸಿದರು. ಆ ದೋಷಗಳನ್ನು ಸರಿಪಡಿಸುವ ಹಿನ್ನೆಲೆಯಲ್ಲಿ ಮುಂಬಯಿ ಪ್ರಾಂತ್ಯದಲ್ಲಿ ಸ್ಥಳೀಯ ಭಾಷೆಯಾಗಿದ್ದ ಮರಾಠಿ ಪುಸ್ತಕ ರಚನೆಗೊಂಡಿದ್ದವು. ಕನ್ನಡ ಕ್ರಮಿಕ ಪುಸ್ತಕ ಮುದ್ರಣವಾಗುವುದಕ್ಕೆ ಒಂದು ದಶಕವೇ ಕಳೆಯಿತು. ಇದಕ್ಕೆ ಸಂಬಂಧಿಸಿದಂತೆ ಧಾರವಾಡದ ಕಲೆಕ್ಟರ್ ವಾಲ್ಟರ್ ಎಲಿಯಟ್ ಸೂಚನೆ ನೀಡಿದನು.

ಕನ್ನಡ ಪರಿಸರದಲ್ಲಿ ಮರಾಠಿ ಶಾಲೆಯನ್ನು ತೆರೆಯುವುದನ್ನು ಖಂಡಿಸಿದರು. "ಧಾರವಾಡದಂತಹ ಸಂಪೂರ್ಣ ಕನ್ನಡ ಪ್ರದೇಶದಲ್ಲಿ ಸರ್ಕಾರವು ಮರಾಠಿ ಶಾಲೆಯೊಂದನ್ನು ಸ್ಥಾಪಿಸುವುದು (೧೮೨೬) ತಪ್ಪು; ಏಕೆಂದರೆ ಇಲ್ಲಿ ಜನರಾಡುವ ಭಾಷೆ ಕನ್ನಡ. ಹೀಗಾಗಿ ಮಾತೃಭಾಷೆಯಲ್ಲಿ ಶಿಕ್ಷಣ ಕೊಡಬೇಕಾದದು ನ್ಯಾಯವಾದದು."[೨] ಎಂದು ಆತ ವರದಿಯಲ್ಲಿ ಉಲ್ಲೇಖಿಸಿದ್ದಾನೆ. ಬ್ರಿಟಿಷ್ ಅಧಿಕಾರಿಯಾದ ಜಿಲ್ಲಾ ಕಲೆಕ್ಟರ್‌ಗೆ ಇಲ್ಲಿನ ಜನರ ಭಾಷೆಯ ಮೇಲೆ, ಇರುವ ಪ್ರೀತಿ ಅಭಿಮಾನದಿಂದಾಗಿ ಅವರನ್ನು ನ್ಯಾಯಯುತವಾದ ತೀರ್ಮಾನ ಕೊಡಲು ಸಾಧ್ಯವಾಯಿತು.

ಕನ್ನಡ ಭಾಷೆ ಪಠ್ಯ ರಚನೆಯಲ್ಲಿ ಇಸೋಪನ ನೀತಿಕಥೆ, ಗಣಿತಪುಸ್ತಕ, ಪೂರ್ಣಾಂಕ, ಮತ್ತು ಶಾಲಾಪದ್ಧತಿ ಎಂಬ ಮೂರು ಪುಸ್ತಕಗಳ ಹೊರಬಂದವು. ಆದರೆ ಕನ್ನಡ

ಬರವಣಿಗೆ ಮಾಡುವವರು ನಂತರ ಸಿಗಲಿಲ್ಲ. ಹೀಗಾಗಿ ಬಳ್ಳಾರಿ ಮಿಶನ್ ಪ್ರೆಸ್‌ನಲ್ಲಿ ಮುದ್ರಣ ಮಾಡಿದನು. ಈ ಪಠ್ಯಪುಸ್ತಕ ಪಾಶ್ಚಿಮಾತ್ಯ ಮಾದರಿಯನ್ನು ಅವಲಂಬಿಸಿತ್ತು. ಇತರ ಭಾಷೆಗಳಾದ ಮರಾಠಿ, ಗುಜರಾತಿ ಭಾಷೆಗಳಲ್ಲಿ ತರ್ಜುಮೆಗೊಂಡವು. ಆಡಳಿತ ಮತ್ತು ಶಿಕ್ಷಣ ಜನಭಾಷೆಯಾದ ಕನ್ನಡದಲ್ಲಿ ನಡೆಯಬೇಕು. ಈ ಹಿನ್ನೆಲೆಯಲ್ಲಿ ಸರ್ಕಾರ ಶಾಲೆಗಳು ದಿನದಿಂದ ದಿನಕ್ಕೆ ಹೆಚ್ಚುತ್ತ ಹೋದವು. ದೇಶಿಯ ಸಾಹಿತ್ಯದ ಕೃತಿಗಳು ಮಂದಗತಿಯಲ್ಲಿ ಸಾಗುತ್ತಿದ್ದವು. ಆ ಸಂದರ್ಭದಲ್ಲಿ ಇದ್ದ ಶಿಕ್ಷಣಾಧಿಕಾರಿಗಳು ಬಾಳಶಾಸ್ತ್ರಿ ಜಾಂಬೆಕರ್ ಈ ಕೆಲಸವನ್ನು ಚುರುಕುಗೊಳಿಸಿದರು. ಆಡಳಿತ ಮತ್ತು ಶಿಕ್ಷಣ ಅಧಿಕಾರಿಯಾಗಿದ್ದರಿಂದ ಕನ್ನಡ ಕೃತಿಗಳ ಸಿದ್ಧತೆಗಾಗಿ ಒಂದು ಸಮಿತಿ ಮಾಡಿದರು. ಅದಕ್ಕೆ ಅಧ್ಯಕ್ಷರಾಗಿದ್ದವರು ಕೃ.ಬಾ.ಗಾಡಗೀಳ. ಶ್ರೀನಿವಾಸ, ಸುಬ್ಬಜಿ ಸದಸ್ಯರಾಗಿದ್ದರು.

ಪಠ್ಯ ಸಮಿತಿಯು ತನ್ನ ಕಾರ್ಯಚಟುವಟಿಕೆಯನ್ನು ಆರಂಭಿಸಿದರು. ಅವು ಈ ರೀತಿ "ಲಘು ವ್ಯಾಕರಣ ಶಾಲಾ ನಿಯಮಾವಳಿ ಸಿದ್ಧಗೊಳಿಸಿ ಸರ್ಕಾರ ಕಲ್ಲಚ್ಚಿನ ಮುದ್ರಣ ಮಾಡಿಸಿ ಹೊರತಂದಿತು. ಅಲ್ಲದೆ ಅಪೂರ್ಣಾಂಕ ಬೀಜಗಣಿತ, ಏಶಿಯಾ ಖಂಡದ ಭೂಗೋಳ ಮತ್ತು ಮಹಾರಾಷ್ಟ್ರದ ಇತಿಹಾಸ"[೧೩] ಈ ರೀತಿ ವಿಷಯ ಒಳಗೊಂಡಿದೆ. ಹಾಗೆಯೇ ಜಾಂಬೇಕರ್ ಮಾಡಿದ ಮಹತ್ವದ ಕಾರ್ಯವೆಂದರೆ ಮಂಗಳೂರು ಮತ್ತು ಬೆಂಗಳೂರು ನಡುವೆ ಸಂಬಂಧ ಏರ್ಪಡಿಸಿದ್ದು, ಕನ್ನಡ ಕ್ರಮಿಕ ಕೃತಿಗಳು ಶಾಲೆಗಳಿಗೆ ಕೊಟ್ಟರು. ಆತನ ಹಿಂದಿನ ಅಧಿಕಾರಿ ಎಲಿಯಟ್‌ನಂತೆ ಜಾಂಬೇಕರ್ ಮಾಡಿದರು. ಶೈಕ್ಷಣಿಕ ಮತ್ತು ಆಡಳಿತಾತ್ಮಕವಾಗಿ ಕ್ರಿ.ಶ. ೧೮೩೫ರ ಕಾಯ್ದೆ ಅನ್ವಯ ಆಡಳಿತ ಕನ್ನಡದಲ್ಲಿ ನಡೆಸಬೇಕಾಗಿತ್ತು. ಹೀಗಾಗಿ ಈ ಪ್ರದೇಶದ ಮರಾಠಿ ಉದ್ಯೋಗಿಗಳಿಗೆ ಕನ್ನಡ ಕಲಿಯುವುದು ಜರೂರಾಗಿತ್ತು. ಹಾಗಾದರೆ ಕಲಿಯಲು ಬೇಕಾದ ಆಕರಗಳು ಇಲ್ಲದೆ ಕನ್ನಡ ಭಾಷೆ ಬೆಳವಣಿಗೆಗೆ ಹಿನ್ನಡೆಯಾಯಿತು. ಈ ಬಂದಿರುವ ಸಮಸ್ಯೆ ನೀಗಿಸಿಕೊಳ್ಳಲು ಕನ್ನಡ ಕಲಿಕೆಯ ಪುಸ್ತಕ ಮುಂಬಯಿ ಪ್ರಾಂತ್ಯದ ದಕ್ಷಿಣ ಶಿಕ್ಷಣಾಧಿಕಾರಿಯಾದ ಮ್ಯಾಸೆ ವರದಿಯಲ್ಲಿ ಉಲ್ಲೇಖಗೊಂಡಿದೆ.

ಕನ್ನಡ ಭಾಷೆಯ ದುರಂತವೇ ಸರಿ ಎನ್ನಬಹುದು. ಏಕೆಂದರೆ ಈ ಪ್ರಗತಿಯ ಹೊತ್ತಿಗೆ ಜಾಂಬೇಕರು ವಿಧಿವಶರಾದ ಹಿನ್ನೆಲೆಯಲ್ಲಿ ಕ್ರಿ.ಶ. (೧೮೪೫) ಕನ್ನಡ ಪಠ್ಯ ರಚನೆಯ ಕೆಲಸ ನಿಂತುಹೋಯಿತು. ಈ ಪರಿಣಾಮ ಕನ್ನಡ ಭಾಷೆ ಆ ಕಾಲಕ್ಕೆ ತನ್ನ ಅಸ್ತಿತ್ವ ಕಳೆದುಕೊಳ್ಳತೊಡಗಿತು. ಮರಾಠಿ, ಗುಜರಾತಿ ಭಾಷೆಗಳು ಪ್ರಗತಿಯಾದವು. ಮತ್ತೊಂದು ಮಹತ್ವದ ಸಂಗತಿಯೆಂದರೆ ಪಠ್ಯರಚನೆ ಕಾರ್ಯ ಮೊದಲ ಅಸ್ತಿತ್ವ ಕಂಡುಕೊಂಡಿತು. ಮುಂಬಯಿ, ಮದ್ರಾಸ್ ಮತ್ತು ಮೈಸೂರುಗಳಲ್ಲಿ ಈ ಕಾರ್ಯ ನಡೆಯಿತು. ಇಂಗ್ಲಿಷ್ ಶಾಲೆಯನ್ನು ಮೈಸೂರಲ್ಲಿ ಮೊದಲಿಗೆ ತೆರೆದವರು ಮಿಶನರಿಗಳು ಜನಸಾಮಾನ್ಯರಿಗೆ ಶಿಕ್ಷಣ ತಲುಪಿಸುವ ಅವರ ಉದ್ದೇಶದಿಂದ ಕ್ರಿ.ಶ. ೧೮೩೩ರ ಅವಧಿಯಲ್ಲಿ ಮುಮ್ಮಡಿ ಕೃಷ್ಣರಾಜ

ಒಡೆಯರು ಇಂಗ್ಲಿಷ್ ಶಾಲೆಯನ್ನು ತೆರೆದರು. ಅದುವೇ ಆ ಭಾಗದ ಸ್ಥಳೀಯ ಶಿಕ್ಷಣ ಸಂಸ್ಥೆಯಾಗಿ ಹೊರಹೊಮ್ಮಿತು. ಇದರ ಮುಂದುವರಿದ ಭಾಗವಾಗಿ ಕೊಡಗಿನಲ್ಲಿ ಸರ್ಕಾರದ ವತಿಯಿಂದ ಶಾಲೆಯನ್ನು ತೆರೆದರು. ಅಲ್ಲದೆ ಮುಂಬಯಿ ಪ್ರಾಂತ್ಯದ ಧಾರವಾಡದಲ್ಲಿ ಸರ್ಕಾರದ ಸಹಾಯದಿಂದ ಇಂಗ್ಲಿಷ್ ಶಾಲೆಯನ್ನು ತೆರೆದರು.

**ಮಿಶನರಿಗಳ ಶೈಕ್ಷಣಿಕ ಕೊಡುಗೆ**

ಒಂದೇ ನಾಣ್ಯದ ಎರಡು ಮುಖಗಳಂತೆ ಇರುವ ಮಿಶನರಿಗಳು ಮತ್ತು ಸರ್ಕಾರ ಕನ್ನಡ ನಾಡಿನ ಪ್ರಗತಿಗಾಗಿ ಶ್ರಮ ಮತ್ತು ಸಮಯ ಹೇಗೆ ವ್ಯಯ ಮಾಡಿದರು ಎಂಬುದಕ್ಕೆ ಆ ಕಾಲದ ಚರಿತ್ರೆಯೇ ನಿದರ್ಶನ. ಒಂದು ಪ್ರಗತಿಯಾದರೆ ಇನ್ನೊಂದು ಧನಸಂಪತ್ತನ್ನು ಅಗತ್ಯಗೆ ಅನುಸಾರವಾಗಿ ಬಳಸಿಕೊಂಡು ಈ ಚರಿತ್ರೆಯ ಭೂಪಟದಲ್ಲಿ ಅಜರಾಮರವಾಗಿ ಉಳಿಯಿತು. ಇಂದಿನ ಇತಿಹಾಸ ಚರಿತ್ರೆಯಲ್ಲಿ ಅಂದಿನ ಕಾರ್ಯ ವೈಖರಿಗಳು ಪುರಾವೆಯಾಗಿ ನಿಲ್ಲುತ್ತವೆ. ಮುಂಬಯಿ ಕರ್ನಾಟಕದಲ್ಲಿ ಶೈಕ್ಷಣಿಕ ಪರಿಸರದ ಪ್ರಭಾವ ಈ ನಾಡಿನ ಜನರ ಮೇಲೆ ಬೀರುವಂತೆ ಮಾಡಿದರು.

ಆ ಕಾಲಕ್ಕೆ ದೇಶಿಯ ಶಿಕ್ಷಣ ಕೊಡುವುದು ಸಕಾಲವಾಗಿತ್ತು. ಅದರ ಪ್ರಭಾವ ಜನಸಾಮಾನ್ಯರ ಮೇಲೆ ಪ್ರಭಾವ ಬೀರಿತು. ಅದು ಸನಾತನ ಕಾಲದ ನಂಬಿಕೆಯ ಕುರಿತು ಆತ್ಮವಲೋಕನ ಮಾಡಿಕೊಳ್ಳುವ ಸಂದರ್ಭವಾಗಿತ್ತು. ಅಲ್ಲದೆ ಮಿಶನರಿ ಮತ್ತು ಸರ್ಕಾರ ಸ್ವಧರ್ಮವನ್ನು ನೆಲೆಗೊಳಿಸುವುದು ಮತ್ತು ಅವರದೇಯಾದ ಸಿದ್ಧಾಂತಗಳನ್ನು ಹೇರುವುದು ಸಾಧ್ಯವಾಯಿತು. ಅಂದರೆ ವಯಸ್ಕರನ್ನು ನಂಬಿಸುವುದು ಕಷ್ಟವಾಯಿತು. ಆದರೆ ಕ್ರೈಸ್ತ ಧರ್ಮದ ತತ್ವಗಳನ್ನು ಬೋಧಿಸುವುದರ ಮೂಲಕ ಸಂಸ್ಕೃತಿ ಭಾಷೆಯನ್ನು ಬಾಲಕರ ಮೂಲಕ ಸುಲಭವಾಗಿ ಅವರ ಉದ್ದೇಶವನ್ನು ಪೂರೈಸಿಕೊಳ್ಳಬಹುದು ಎಂಬುದನ್ನು ಮನಗಂಡಿದ್ದರು. ಈ ಮಹತ್ವದ ಹಿನ್ನೆಲೆ ಅರಿತು ಹೇಳುವುದಾದರೆ ಪ್ರೊಟೆಸ್ಟೆಂಟ್ ಮಿಶನರಿಯಾದ ಜಾನ್ ಹ್ಯಾಂಡ್ಸ್ ಬಳ್ಳಾರಿಗೆ ಬಂದ ಒಂದು ವರ್ಷದ ನಂತರ ಶಾಲೆಯನ್ನು ತೆರೆದನು. ಬಾಲಕರಿಗೆ ಶಿಕ್ಷಣ ಕಲಿಸು ಮೂಲಕ ಅವರ ಭಾಷೆ, ಸಂಸ್ಕೃತಿ, ಧರ್ಮ ಮತ್ತು ಈ ನಾಡಿನ ಜನರ ಮೇಲೆ ಪ್ರಭಾವ ಬೀರುವಂತೆ ಮಾಡುವುದು ಅವರ ಉದ್ದೇಶವಾಗಿತ್ತು.

ಅಧಿಕಾರಿ ವರ್ಗ ಮತ್ತು ಮಿಶನರಿಗಳು ಅನುಸರಿಸಿದ ಕೆಲವು ಮಹತ್ವದ ಅಂಶಗಳನ್ನು ಕಾಣಬಹುದು. ತಮ್ಮ ವೃತ್ತಿಯ ಜೊತೆಗೆ ಇತರ ಕೆಲಸಗಳನ್ನು ಮಾಡುವ ಪ್ರವೃತ್ತಿಯನ್ನು ಮೈಗೂಡಿಸಿಕೊಂಡಿದ್ದರು. ಅದಕ್ಕೆ ಶ್ರಮ, ಸಮಯ ಮತ್ತು ನಿಷ್ಠೆಯಿಂದ ಕಾರ್ಯನಿರ್ವಹಿಸಿದರು. ಈ ಕಾರಣಕ್ಕಾಗಿ ಅವರು ಪ್ರಗತಿ ಕಾಣಲು ಸಾಧ್ಯವಾಯಿತು. ೧. ಪಠ್ಯಪುಸ್ತಕ ರಚನೆ, ೨. ಶಾಲೆಗೆ ಮಕ್ಕಳ ಕರೆತರುವ ಒತ್ತಡ ೩. ಮಹತ್ವ ದಾಖಲೆಗಳ ಸಂಗ್ರಹ ೪. ಹಸ್ತಪ್ರತಿ ಸಂಗ್ರಹ, ೫. ಪರಿಷ್ಕರಣೆ, ೬ ಮತಾಂತರಗೊಳಿಸುವುದು ಹೀಗೆ ಅನೇಕ ಕಾರ್ಯಗಳಲ್ಲಿ ತೊಡಗಿಕೊಳ್ಳುತ್ತಿದ್ದರು ಮಿಶನರಿ ಮತ್ತು ಅಧಿಕಾರಿ ವರ್ಗ. ಈ ನಾಡಿನ ಜನರಿಂದ

ಅವಮಾನ ಆತಂಕ ಸಹಿಸಿಕೊಂಡು ತಮ್ಮ ಮುಂದೆ ಕಹಿ ಘಟನೆ ನಡೆದರೂ ಆತ್ಮಸ್ಥೈರ್ಯ ಕಳೆದುಕೊಳ್ಳಲಿಲ್ಲ.

ಲಂಡನ್ ಮಿಶನರಿಗಳಾದ ಮ್ಯಾಥ ಮತ್ತು ಲೇಡ್ಲರ್ ಈ ಇಬ್ಬರು ಬೆಂಗಳೂರಿನಲ್ಲಿ ಕಾಲೇಜು ತೆರೆಯಬೇಕು ಎನ್ನುವುದು ಅವರ ಹಂಬಲವಾಗಿತ್ತು. ಸರ್ಕಾರಿ ಮಾದರಿಯನ್ನು ಅನುಸರಿಸುವ ಉದ್ದೇಶ ಹೊಂದಿದ್ದರು. ಈ ಕಾರ್ಯವು ಹಲವು ಅಡೆತಡೆಗಳಿಂದ ಕೈಗೂಡಲಿಲ್ಲ. ಹೀಗಾಗಿ ಕಾಲೇಜು ತೆರೆಯಲಾಗಲಿಲ್ಲ. ಕನ್ನಡ ಮತ್ತು ಸಾಹಿತ್ಯ ಕೃಷಿ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿತ್ತು. ಆ ಕಾಲದ ಆಕರಗಳು ಈ ಕಾಲದ ಪುರಾವೆಯಾಗಿ ನಿಲ್ಲುತ್ತವೆ. ನಂತರ ಈ ಮಿಶನರಿಗಳಿಗೆ ಅಂಥದ್ದೇ ಇನ್ನೊಂದು ಅವಕಾಶವೆಂದರೆ ಮಂಗಳೂರಲ್ಲಿ ಸೆಮಿನರಿ (ಬೋಧನಶಾಲೆ) ತೆರೆದರು, ಅದರ ಮುಂದಿನ ಸ್ವರೂಪವೇ ಕರ್ನಾಟಕ ಮಿಶನರಿಗಳ ಸೆಮಿನರಿ ಎಂದು ಕರೆಯುತ್ತಾರೆ. ಮ್ಯಾಥೆ ಮತ್ತು ಲೆಡ್ಲರ್ (ಬೋಧನಾಶಾಲೆ) ಸೆಮಿನರಿನಲ್ಲಿ ಇಂಗ್ಲಿಷ್ ಮಾಧ್ಯಮ ಬಳಕೆಯಾಗಬೇಕು ಎನ್ನುವುದು ಅವರ ವಾದವಾಗಿತ್ತು. ಆದರೆ ಕ್ಯಾಂಬೆಲ್ ಕನ್ನಡ ಮಾಧ್ಯಮದಲ್ಲಿ ಶಿಕ್ಷಣ ನೀಡಬೇಕು ಎನ್ನುವ ವಾದ ಮಂಡಿಸುತ್ತಾನೆ. ಮಿಶನರಿಯ ಕೆಲಸ ಬಿಡುವ ಹಂತವನ್ನು ತಲುಪುತ್ತಾನೆ. ಈ ಸಂದರ್ಭವನ್ನು ಅರಿತ ವರಿಷ್ಠರು ಸಮಧಾನ ಮಾಡುವುದರ ಮೂಲಕ ಮಿಶನರಿಯಾಗಿ ಮುಂದುವರಿಯುವಂತೆ ಸೂಚನೆ ನೀಡುತ್ತಾರೆ.

ಶಿಕ್ಷಣ ಕ್ಷೇತ್ರದೊಂದಿಗೆ ಗುರುತಿಸಿಕೊಂಡು ಅನೇಕ ಶಾಲೆಗಳ ಪ್ರಾರಂಭಿಸಿದನು. ಅಲ್ಲದೆ ಪಠ್ಯಪುಸ್ತಕ ರಚಿಸಿದನು. ಈತನು ಐದು ದಶಗಳ ಕಾಲ ನಿರಂತರವಾಗಿ ಸೇವೆ ಮಾಡುತ್ತಾನೆ. ಶಿಕ್ಷಣ ಕ್ಷೇತ್ರಕ್ಕೆ ಈತನು ಕೊಡುಗೆ ಅಪಾರ. ಈ ಮಿಶನ್ ಸಂಸ್ಥೆಯು ಸ್ತ್ರೀಶಿಕ್ಷಣಕ್ಕೆ ಪ್ರಾಮುಖ್ಯತೆಯನ್ನು ಕೊಟ್ಟಿತು: ಅಲ್ಲದೆ ಬಳ್ಳಾರಿಯ ನಂತರ ಬೆಂಗಳೂರಿನಲ್ಲಿ ಅಂಥ ಶಾಲೆಗಳನ್ನು ತೆರೆದರು. (೧೮೪೦) ಆ ಶಾಲೆಗೆ ಹೋಗುವವರೆಂದರೆ ೧. ಮಧ್ಯಮ ವರ್ಗದ ಮಕ್ಕಳು ೨ ಅನಾಥರು ಮತ್ತು ದೇಶಿಯ ಕ್ರಿಶ್ಚಿಯನ್ನರ ಮಕ್ಕಳು ಈ ಮಕ್ಕಳಿಗೆ ಅನ್ನ-ಶಿಕ್ಷಣ ಕೊಡುವುದರ ಮೂಲಕ ಮಿಶನರಿಗಳು ದೇಶಿಯ ವ್ಯವಸ್ಥೆಯ ಪ್ರಗತಿ ಮಾಡಲು ಕಾರಣೀಭೂತರಾದರು.

ವೆಸ್ಲಿಯನ್ ಮಿಶನ್ ಸಂಸ್ಥೆಯು ಶಿಕ್ಷಣ ಕಾರ್ಯಚಟುವಟಿಕೆ ಮೈಸೂರಿಗೆ ಸೀಮಿತವಾಗಿದ್ದಿತು. ಥಾಮಸ್ ಹಡ್ಸನ್ ಬಂದ ವರ್ಷದಲ್ಲಿಯೇ ಬೆಂಗಳೂರಲ್ಲಿ ಕಂಟೋನ್ಮೆಂಟ್‌ನಲ್ಲಿ ಇಂಗ್ಲಿಷ್ ಶಾಲೆಯನ್ನು ಆರಂಭಿಸಿದನು. ಆ ಶಾಲೆಯಲ್ಲಿ ಕಮಿಷನರ್‌ರಾದ ಕಬ್ಬನ್ನನ ನೇತೃತ್ವದಲ್ಲಿ ಪಬ್ಲಿಕ್ ಪರೀಕ್ಷೆ ಮಾಡಿದನು. ಆ ಪರೀಕ್ಷೆ ಉತ್ತಮ ಫಲಿತಾಂಶ ಪಡೆದ ವಿದ್ಯಾರ್ಥಿಗಳಿಗೆ ಲಾರ್ಡ್ ಕಬ್ಬನ್ ಕೂಡ ಐದು ನೂರ ರೂಪಾಯಿ ಮತ್ತು ಗವರ್ನರ್ ಜನರಲ್ ಬೆಟ್ಟಿಂಗ್ ಮುನ್ನೂರು ರೂಪಾಯಿ ಪುರಸ್ಕಾರ ಕೊಡಿಸಿದನು. ಈ ಹಡ್ಸನ್ ಉತ್ಸಾಹ ಗಮನಿಸಿದ ಒಳಭಾಗದ ಸಾರ್ವಜನಿಕರು ವಿನಂತಿಸಿಕೊಂಡರು. ಈ

ಪೂರ್ವದಲ್ಲಿ ಮೈಸೂರು ನಗರದ ಮುಮ್ಮಡಿ ಕೃಷ್ಣರಾಯರು ಶಾಲೆಯನ್ನು ತೆರೆದರು. ನಂತರ ಮೈಸೂರು ಅಧಿಕಾರ ವಹಿಸಿಕೊಂಡ ನಂತರ ರಾಜರ ಮುಂದಾಳತ್ವದಲ್ಲಿ ಪರೀಕ್ಷೆ ಮಾಡಿದರು. ಅದರಲ್ಲಿ ಉತ್ತಮ ಫಲಿತಾಂಶವನ್ನು ಪಡೆದ ವಿದ್ಯಾರ್ಥಿಗಳಿಗೆ ಬಹುಮಾನಗಳನ್ನು ರಾಜರ ಅಮೃತಹಸ್ತದಿಂದ ವಿತರಿಸುವಂತೆ ಮಾಡಿದರು. ಆ ಶಾಲೆಯು ಮಹಾರಾಜ ಕಾಲೇಜಿನ ಮೂಲರೂಪವಾಗಿತ್ತು. ವೆಸ್ಲಿಯನ್ ಆಡಳಿತ ಮತ್ತು ಶಿಕ್ಷಣಕ್ಕೆ ದಕ್ಷತೆಯನ್ನು ಗಮನಿಸಿದ ಸಾರ್ವಜನಿಕರು ಅಧಿಕಾರದ ಮೂಲಕ ಮೈಸೂರು ನಗರದಲ್ಲಿ ಹೈಸ್ಕೂಲ್ ತೆರೆಯುವಂತೆ ಬ್ರಿಟನ್ ಕೇಂದ್ರ ವರಿಷ್ಠರಲ್ಲಿ ವಿನಂತಿಸಿಕೊಂಡರು. ಅಲ್ಲದೆ ಅದರ ವೆಚ್ಚವನ್ನು ನಾವೇ ಭರಿಸುವುದಾಗಿ ಹೇಳಿಕೊಂಡರು. ಸ್ಥಳೀಯ ಪಂಡಿತರೊಂದಿಗೆ ಹಡ್ಸ ಮುಂದಾಳತ್ವದಲ್ಲಿ ಮತ್ತೆ ಕೆಲವು ಶಾಲೆಗಳನ್ನು ತೆರೆದರು.

ದೇಶಿಯ ಮತ್ತು ವಿದೇಶಿಯ ಮಿಶನರಿಗಳ ಕನ್ನಡ ಅಧ್ಯಯನಕ್ಕಾಗಿ ಮೆಕ್ಕೆರಲ್ ವ್ಯಾಕರಣ ಮಾತ್ರವಿತ್ತು. ಇದನ್ನು ಗಮನಿಸಿದ ಹಡ್ಸನ್ ಸಂಕ್ಷಿಪ್ತ ಮಾಡಿ ಪರಿಷ್ಕರಿಸಿದ ಆವೃತ್ತಿಯನನು ಪ್ರಕಟಿಸಿದನು. ಈತನು ನಿರ್ವಹಿಸಿದ ಕಾರ್ಯದ ಪ್ರತಿಯಾಗಿ ಕನ್ನಡ ವ್ಯಾಕರಣ ಅಧ್ಯಯನಕ್ಕೆ ಹೆಚ್ಚು ಅನುಕೂಲವಾಗುವಂತೆ ಕಲ್ಪಿಸಿದರು. ದೇಶಿಯ ಭಾಷೆಯಾದ ಕನ್ನಡದಲ್ಲಿ ಮೈಸೂರು ನಕ್ಷೆಯನ್ನು ಮೊದಲು ಮಾಡಿದನು. ಈತನು ಶಿಕ್ಷಣ ಕ್ಷೇತ್ರಕ್ಕೆ ಸಲ್ಲಿಸಿದ ಸೇವೆ ಅಪಾರ; ಆ ಸಂದರ್ಭದಲ್ಲಿ ಅಧ್ಯಾಪಕನಾಗಿಯೂ ಕಾರ್ಯನಿರ್ವಹಿಸಿದನು. ಬೆಂಗಳೂರು, ಮೈಸೂರು ಮತ್ತು ಮದ್ರಾಸ್ ವಿಶ್ವವಿದ್ಯಾಲಯಗಳಿದ್ದವು. ಮೈಸೂರು ಭಾಗದ ಜನರು ಪರೀಕ್ಷೆಗಾಗಿ ಮದ್ರಾಸ್‌ಗೆ ಹೋಗುವುದನ್ನು ತಪ್ಪಿಸಿದನು. ಇನ್ನೊಂದು ಮಹತ್ವ ಕಾರ್ಯವೆಂದರೆ ಪ್ರಾಥಮಿಕ ಶಾಲಾ ಶಿಕ್ಷಕರ ತರಬೇತಿ ಕೇಂದ್ರವನ್ನು ಶಿವಮೊಗ್ಗದಲ್ಲಿ ತೆರೆದನು.

ಬಾಸೆಲ್ ಮಿಶನರಿಯ ರೂವಾರಿಯಾದ ಸ್ಯಾಮುಯೆಲ್ ಹೆಬಿಕ್ ಮಂಗಳೂರಿನಲ್ಲಿ ಶಾಲೆಯನ್ನು ತೆರೆದನು. ಅದಕ್ಕೆ ತಿಮ್ಮಪ್ಪ ಎಂಬ ಶಿಕ್ಷಕನನ್ನು ನೇಮಿಸಿದನು. ಮತ್ತೆ ಕೆಲವು ಶಾಲೆಗಳನ್ನು ತೆರೆದನು. ಆ ಕಾಲಕ್ಕೆ ಧಾರವಾಡದ ಮುಖ್ಯ ನಗರವಾಗಿದ್ದರಿಂದ ಬೇರೆ ಬೇರೆ ಉದ್ಯೋಗಸ್ಥರು ಇರುವ ಕಾರಣ ಅಲ್ಲಿ ಮರಾಠಿ ಮತ್ತು ಕನ್ನಡ ಶಾಲೆ ಮಾತ್ರ ಇತ್ತು. ಈ ಸಂಗತಿಯನ್ನು ಗಮನಿಸಿದ ಮೊಗ್ಲಿಂಗ್‌ನು ಇಂಗ್ಲಿಷ್ ಶಾಲೆಯನ್ನು ಆರಂಭಿಸಿದನು. ಈ ಶಾಲೆಯಲ್ಲಿ ವಿದೇಶಿ ಮಿಶನರಿ ಮಕ್ಕಳು ಮತ್ತು ತಮಿಳು ಮಿಶನರಿ ಮಕ್ಕಳು ಅಭ್ಯಾಸ ಮಾಡುತ್ತಿದ್ದರು. ಈ ಶಾಲೆಯು ಬಹು ಬೇಗ ಸಾರ್ವಜನಿಕರ ಗಮನಸೆಳೆಯಿತು. ಈ ಹಿನ್ನೆಲೆಯಲ್ಲಿ ಸಾರ್ವಜನಿಕರಿಂದ ನಿಧಿ ಸಂಗ್ರಹಿಸಿ ಶಾಲೆ ಕಟ್ಟಲು ಅನುವು ಮಾಡಿಕೊಟ್ಟರು. ಹಾಗೆಯೇ ಬಾಸೆಲ್ ಮಿಶನ್ ಸಂಸ್ಥೆ ಬೋಧಕ ಶಾಲೆಯನ್ನು ಮಂಗಳೂರಲ್ಲಿ ತೆರೆಯಿತು. ಅಲ್ಲಿ ಮೊಗ್ಲಿಂಗ್ ಕನ್ನಡ ಕಾವ್ಯ, ವ್ಯಾಕರಣ, ಬೈಬಲ್ಲಿನ ತಾತ್ವಿಕ ಸಂಗತಿ ಹೇಳುತ್ತಿದ್ದರು.

ಹಾಗೆಯೇ ಗುಂಡರ್ಟ್ ಭಾರತೀಯ ತತ್ವಜ್ಞಾನಿ ಸಂಸ್ಕೃತ ವಿಷಯ ಕಲ್ಪಿಸುತ್ತಿದ್ದರು. ಇತರೆ ಭಾಷೆಗಳಾದ ಗ್ರೀಕ್, ಜರ್ಮನ್, ಲ್ಯಾಟಿನ್ ಭಾಷೆಗಳನ್ನು ಸಹ ಕಲಿಸುತ್ತಿದ್ದರು.

ಬಹಿರಂಗ ಬೋಧನೆಗಾಗಿ ವೇದಿಕೆಗಳನ್ನು ಹಂಚಿಕೊಳ್ಳುತ್ತಿದ್ದರು. ಪ್ರಾರಂಭ ಮತ್ತು ಕೊನೆಯ ಅವಧಿಯಲ್ಲಿ ತಮಿಳು, ಕನ್ನಡ ಗೀತೆಗಳನ್ನು ಹಾಡುತ್ತಿದ್ದರು. ಹಿಂದೂ ವಿಚಾರಗಳ ಕುರಿತು ಅಧ್ಯಯನಗಳನ್ನು ಬಹಳ ಶಿಸ್ತಿಗೆ ಒಳಪಡಿಸುತ್ತಿದ್ದರು. ಈ ಬಾಸಲ್ ಮಿಶನ್ ಶಿಕ್ಷಣ ಕ್ಷೇತ್ರದಲ್ಲಿ ಬಹಳ ಪ್ರಗತಿ ಕಂಡಿತ್ತು. ಅಂದರೆ ಕ್ರಿ.ಶ. ೧೮೫೩ರ ಹೊತ್ತಿಗೆ ಐವತ್ತು ಪ್ರೈಮರಿ ಸ್ಕೂಲ್, ಎಂಟು ಹೈಸ್ಕೂಲ್ ಹೊಂದಿತ್ತು. ಸಂಸ್ಥೆಯ ಶಾಲೆಗಳಲ್ಲಿ ಶೈಕ್ಷಣಿಕ ಪರಿಸರ ಪಡೆದುಕೊಳ್ಳಲು ಸಾಧ್ಯವಾಯಿತು. ಹಾಗೆಯೇ ಈ ಮಿಶನರಿಗಳಂತೆ ಕೆಥೋಲಿಕ್ ಮಿಶನರಿಗಳೂ ತಮ್ಮದೇಯಾದ ಕೊಡುಗೆ ಕೊಟ್ಟಿದ್ದಾರೆ. ಈ ಮಿಶನ್ ಸಂಸ್ಥೆ ಸಹ ಕೆಲವು ಶಾಲೆಗಳನ್ನು ತೆರೆಯಿತು. ಬೇಕಾದ ಪಠ್ಯಗಳು ತಮಿಳು ಭಾಷೆಯಿಂದ ಪಡೆದುಕೊಂಡು ಅವನ್ನು ಕನ್ನಡಕ್ಕೆ ತರ್ಜುಮೆ ಮಾಡಿಸಿತು. ಮಂಗಳೂರಿನಲ್ಲಿ ಕಾಲೇಜು ಆರಂಭಿಸಿತು.

## ಕೊನೆಯ ಟಿಪ್ಪಣಿ

೧. ಹೊಸಗನ್ನಡ ಅರುಣೋದಯ ಶ್ರೀವಾಸ ಹಾವನೂರ ಪು.ಸಂ.೧೩
೨. ಅದೇ, ಪು.ಸಂ. ೨೨
೩. ಅದೇ, ಪು.ಸಂ. ೩೬-೩೭
೪. ಅದೇ, ಪುಟಸಂ.೪೫
೫. ಅದೇ, ಪು.ಸಂ. ೪೭
೬. ಅದೇ, ಪು.ಸಂ. ೪೭-೪೮
೭. ಅದೇ, ಪು.ಸಂ. ೪೯
೮. ಅದೇ, ಪು.ಸಂ. ೪೯
೯. ಅದೇ, ಪು.ಸಂ. ೫೦
೧೦. ಅದೇ, ಪು.ಸಂ. ೫೦
೧೧. ಅದೇ, ಪು.ಸಂ. ೫೧
೧೨. ಅದೇ, ಪು.ಸಂ. ೬೨
೧೩. ಅದೇ, ಪು.ಸಂ. ೬೪

## ಅಧ್ಯಾಯ ಒಂಬತ್ತು

# ಸಮಾರೋಪ

ಶ್ರೀನಿವಾಸ ಹಾವನೂರ ಅವರು ಸಂಶೋಧಕರಾಗಿ ಕಥೆಗಾರರಾಗಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಚಿರಪರಿಚಿತರು. ಹಾವೇರಿಯ ಹಾವನೂರಿನಲ್ಲಿ ಜನಿಸಿದ ಶ್ರೀನಿವಾಸ ಹಾವನೂರ ಅವರು ಹಾವೇರಿ, ಧಾರವಾಡ, ಸಾಂಗ್ಲಿಯಲ್ಲಿ ಶಿಕ್ಷಣವನ್ನು ಪಡೆದರು. ನಂತರ ಕೆಲಸ ಕಾರ್ಯಗಳ ನಿಮಿತ್ತ ಸಂಶೋಧನ, ಸಂಗ್ರಹಣೆಗಳ ನಿಮಿತ್ತ, ಮುಂಬಯಿ, ಪುಣೆ, ಮಂಗಳೂರು ಮತ್ತು ಬೆಂಗಳೂರಿನಲ್ಲಿ ನೆಲೆನಿಂತರು. ೨೦೧೧ರಂದು ಇಹಲೋಕ ತ್ಯಜಿಸಿದ ಹಾವನೂರ ಅವರದು ಬಹುಮುಖ ಪ್ರತಿಭೆ. ಈ ಹಿನ್ನೆಲೆಯಿಂದಲೇ ಅವರನ್ನು ಕರ್ನಾಟಕ ಕಂಡ ಬಹುವಿಚಿತ್ರವಾದ ಮಾಹಿತಿಕೋಶ ಎಂದು ಕರೆಯುತ್ತಿದ್ದರು.

ಶಿಕ್ಷಣ ಮುಗಿಸಿ ಕೆಲವು ಕಾಲ ಸೇಲ್ಸ್ ಟ್ಯಾಕ್ಸ್ ಇನ್ಸ್‌ಪೆಕ್ಟರ್ ಆಗಿದ್ದ ಶ್ರೀನಿವಾಸ ಹಾವನೂರ ಅವರು ಮುಂಬಯಿಯ ಭಾಭಾ ಅಣುಕೇಂದ್ರದ ಗ್ರಂಥಾಲಯದಲ್ಲಿ ಗ್ರಂಥಪಾಲಕರಾಗಿ ಕಾರ್ಯನಿರ್ವಹಿಸಿದ್ದರು. ನಂತರ ಮುಂಬಯಿಯ ಟಾಟಾ ಮೂಲಭೂತ ಸಂಶೋಧನ ಸಂಸ್ಥೆಯಲ್ಲಿ ಇಪ್ಪತ್ತೊಂದು ವರ್ಷಗಳ ದೀರ್ಘಕಾಲ ಗ್ರಂಥಪಾಲಕರಾಗಿ ಸೇವೆ ಸಲ್ಲಿಸಿದ್ದರು. ಮಂಗಳೂರು ವಿಶ್ವವಿದ್ಯಾಲಯ ಸ್ಥಾಪನೆಯಾದಾಗ ಕನ್ನಡ ವಿಭಾಗದಲ್ಲಿ ಮೊದಲ ಪ್ರಾಧ್ಯಾಪಕರಾಗಿದ್ದ ಹಾವನೂರ ಅವರು ಪುನಃ ಮುಂಬಯಿ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿ ಕಾರ್ಯನಿರ್ವಹಿಸಿದರು. ಮತ್ತೆ ಮಂಗಳೂರಿನ ಥಿಯಾಲಾಜಿಕಲ್ ಸಂಶೋಧನ ಕೇಂದ್ರದಲ್ಲಿ ಕನ್ನಡದ ಕೆಲಸದಲ್ಲಿ ನಿರತರಾಗಿದ್ದರು. ಹೀಗೆ ತನ್ನ ವಯಸ್ಸನ್ನು ಪರಿಗಣಿಸದೇ ನಿಷ್ಠೆ, ಪ್ರಾಮಾಣಿಕತೆಯಿಂದ ಕನ್ನಡದ ಸಾಹಿತ್ಯ ಕೃಷಿಯನ್ನು ತನ್ನ ಇಳಿಗಾಲದವರೆಗೂ ಮುಂದುವರೆಸಿಕೊಂಡು ಬಂದಿದ್ದರು.

ಸುಮಾರು ೬೦ಕ್ಕೂ ಹೆಚ್ಚು ಕೃತಿಗಳನ್ನು ವಿವಿಧ ಪ್ರಕಾರಗಳಲ್ಲಿ ರಚಿಸಿದ ಹಾವನೂರ ಅವರು ಕೈಯಾಡಿಸದ ಕ್ಷೇತ್ರಗಳಿಲ್ಲವೆಂದೇ ಹೇಳಬೇಕು. ಅಷ್ಟರಮಟ್ಟಿಗೆ ಕಾಲಿಗೆ ಚಕ್ರ ಕಟ್ಟಿಕೊಂಡವರಂತೆ ದೇಶ-ವಿದೇಶಗಳ ಉದ್ದಗಲಕ್ಕೂ ಓಡಾಡುತ್ತಾ ಕನ್ನಡ ಸಂಬಂಧಿ

ದಾಖಲೆಗಳನ್ನು ಸಂಗ್ರಹಿಸುತ್ತಾ, ದಾಖಲಿಸುತ್ತಾ ಬಂದವರು. ವಿದ್ವಾಂಸರಾದ ಪಾದೇಕಲ್ಲು ವಿಷ್ಣುಭಟ್ಟ ಅವರು ಶ್ರೀನಿವಾಸ ಹಾವನೂರ ಅವರ ಕಾರ್ಯಪ್ರವೃತ್ತಿ, ಕಾರ್ಯಕ್ಷಮತೆಗಳ ಬಗ್ಗೆ ಹೀಗೆ ಹೇಳುತ್ತಾರೆ. "ಎಲ್ಲಿಂದಲೋ ಹೇಗೋ ಅವರು ಮಾಹಿತಿಗಳನ್ನು ಕಲೆಹಾಕುತ್ತಾರೆ; ಅವುಗಳನ್ನು ಬೇಕಾದಲ್ಲಿ ಜೋಡಿಸುತ್ತಾರೆ; ಅವುಗಳಿಗೆ ರೂಪ ಕೊಟ್ಟು ಅಮೂಲ್ಯ ವಿಷಯಗಳಾಗಿ ಪರಿವರ್ತಿಸುತ್ತಾರೆ. ಅವರು ಬರೆದಾಗ ಚಿಕ್ಕಪುಟ್ಟ ವಿವರಗಳೂ ನಮಗೆ ಮಹತ್ವಪೂರ್ಣವಾಗಿ ಕಾಣಿಸುತ್ತವೆ. ಬರೆದು ಹರಿದೆಸೆವ ಕಾಗದ ಚೂರುಗಳಲ್ಲಿಯೂ ಹಾವನೂರರಿಗೆ ಮುಖ್ಯ ವಿಷಯಗಳು ಕಾಣಿಸುತ್ತವೆ." ಎಂದು ಹಾವನೂರರ ಅವರ ಜೀವನ ಪ್ರವೃತ್ತಿಯನ್ನು ಕೊಂಡಾಡಿದ್ದಾರೆ. ಈ ಹಿನ್ನೆಲೆಯಿಂದಲೇ ಶ್ರೀನಿವಾಸ ಹಾವನೂರ ಅವರು ಕನ್ನಡ ಸಾಹಿತ್ಯಲೋಕ ಕಂಡ ಅದ್ಭುತ ವಿಚಕ್ಷಣ ವಿದ್ವಾಂಸ, ಸಾಹಿತಿ, ಸಂಶೋಧಕ, ಗ್ರಂಥಪಾಲಕ, ಶಿಕ್ಷಕ, ವಾಕ್ಪಟು, ಸಂಘಟಕ, ನಟ ಹಾಗೂ ಉತ್ತಮ ಬಾಣಸಿಗ ಎಂದು ಕರೆಯಲ್ಪಟ್ಟರು.

ತನ್ನೆಲ್ಲ ಬಿಡುಪಿಲ್ಲದ ಕಾರ್ಯಕ್ಷಮತೆಗೆ, ಕನ್ನಡದ ಕಟ್ಟೋಣಕ್ಕೆ ಕನ್ನಡ ಸಾಹಿತ್ಯ ಕೃಷಿಗೆ ಹಲವು ಪ್ರಶಸ್ತಿ, ಗೌರವಗಳು ಶ್ರೀನಿವಾಸ ಹಾವನೂರ ಅವರನ್ನು ಹುಡುಕಿಕೊಂಡು ಬಂದವು. ಹಂಪಿ, ಕನ್ನಡ ವಿಶ್ವವಿದ್ಯಾಲಯ ಗೌರವಿಸುವ ನಾಡೋಜ ಗೌರವಕ್ಕೆ ಭಾಜನರಾದ ಹಾವನೂರ ಅವರನ್ನು ಕರ್ನಾಟಕ ರಾಜ್ಯೋತ್ಸವ, ಆಳ್ವಾಸ್ ನುಡಿಸಿರಿ, ಮುಳಿಯ ತಿಮ್ಮಪ್ಪಯ್ಯ ಪ್ರಶಸ್ತಿ, ಸಂದೇಶ ಪ್ರತಿಷ್ಠಾನ ಪ್ರಶಸ್ತಿಗಳು ಹುಡುಕಿಕೊಂಡು ಬಂದವು. ಪುಣೆ ವಿಶ್ವವಿದ್ಯಾಲಯ ಶ್ರೀನಿವಾಸ ಹಾವನೂರ ಅವರಿಗೆ ಗೌರವ ಡಾಕ್ಟರೇಟ್ ಪದವಿ ನೀಡಿ ಗೌರವಿಸಿದೆ. ಚಿದಾನಂದ ಪ್ರಶಸ್ತಿ, ರಾಜ್ಯ ಸಾಹಿತ್ಯ ಅಕಾಡೆಮಿ ಗೌರವ, ರಾಜ್ಯ ಇತಿಹಾಸ ಮಹಾಪರಿಷತ್ ಗೌರವಗಳು ಹಾವನೂರ ಅವರಿಗೆ ಸಂದಿವೆ.

ಕನ್ನಡ ಭಾಷೆ, ಸಾಹಿತ್ಯಕ್ಕೆ ಸಂಬಂಧಿಸಿದಂತೆ ಶ್ರೀನಿವಾಸ ಹಾವನೂರ ಅವರು ಐತಿಹಾಸಿಕ ದಾಖಲೆ ಸಂಗ್ರಹದಲ್ಲಿ 'ಅಭಿನವ ಮೆಕೆಂಜಿ' ಎಂಬ ಪರ್ಯಾಯ ಹೆಸರನ್ನು ಪಡೆದಿದ್ದಾರೆ. ಮೊತ್ತಮೊದಲ ಬಾರಿಗೆ ಗಣಕ ಯಂತ್ರಗಳನ್ನು ಬಳಸಿ ಕನ್ನಡ ಗ್ರಂಥಸೂಚಿ, ಅಭಿವೃದ್ಧಿ, ಗ್ರಂಥಾಲಯ ಗಣಕೀಕರಣವನ್ನು ಮಾಡಿ ಸೈ ಎನಿಸಿಕೊಂಡ ಹಾವನೂರ ಅವರು ಕನ್ನಡದ ಸಂದರ್ಭದಲ್ಲಿ ತಜ್ಞರೇ ಸರಿ. ಈ ಅಪ್ರತಿಮ ಕಾರ್ಯಸಾಧನೆಗಾಗಿ ಪ್ರಪ್ರಥಮ ಕನ್ನಡ ಗಣಕ ಸಮ್ಮೇಳನದಲ್ಲಿ ಹಾವನೂರ ಅವರನ್ನು ಸನ್ಮಾನಿಸಲಾಯಿತು.

ಪ್ರಸ್ತುತ ಶ್ರೀನಿವಾಸ ಹಾವನೂರ ಅವರ ಸಮಗ್ರ ಸಾಹಿತ್ಯ ಶೀರ್ಷಿಕೆಯ ಅಧ್ಯಯನದಲ್ಲಿ ಶ್ರೀನಿವಾಸ ಹಾವನೂರ ಅವರ ಸಮಗ್ರ ಸಾಹಿತ್ಯದ ಕುರಿತು ಅಧ್ಯಯನ ಮಾಡಲಾಗಿವೆ. ಅವರು ವಿವಿಧ ಕ್ಷೇತ್ರಗಳಿಗೆ ನೀಡಿದ ಕೊಡುಗೆಗಳ ಬಗೆಗೆ ವಿಶ್ಲೇಷಿಸಲಾಗಿದೆ. ಸುಮಾರು ಎಂಟು ಅಧ್ಯಾಯಗಳನ್ನು ಮಾಡಿಕೊಂಡು ಹಾವನೂರ ಅವರ ಜೀವನ ಸಾಹಿತ್ಯದ ಕುರಿತು ವಿಮರ್ಶಿಸಲಾಗಿದೆ.

**ಅಧ್ಯಯನದ ಫಲಿತಗಳು**

೧. ಸಂಶೋಧಕರಾಗಿ, ವಿಮರ್ಶಕರಾಗಿ, ಕಥೆಗಾರರಾಗಿ, ಸಂಪಾದಕರಾಗಿ ಗ್ರಂಥಪಾಲಕರಾಗಿ, ಭಾಷಾಂತರಕಾರರಾಗಿ ಹೀಗೆ ವಿವಿಧ ಕ್ಷೇತ್ರಗಳಲ್ಲಿ ಪ್ರತಿನಿಧಿಸಿರುವ ಶ್ರೀನಿವಾಸ ಹಾವನೂರ ಅವರು ಅತ್ಯಂತ ವಿರಳ ಸಾಹಿತಿ ಸಂಶೋಧಕರಲ್ಲಿ ಒಬ್ಬರು.

೨. ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕೆ ಸಂಬಂಧಿಸಿದಂತೆ ಮೊತ್ತಮೊದಲ ಬಾರಿಗೆ ಕಂಪ್ಯೂಟರ್ ಅಳವಡಿಸುವ ಮೂಲಕ ತಂತ್ರಜ್ಞಾನ ಬಳಕೆಯನ್ನು ಆವಿಷ್ಕರಿಸಿದವರಲ್ಲಿ ಹಾವನೂರ ಪ್ರಥಮರು.

೩. ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಕಾಲದ ಪತ್ರಿಕೆಗಳಲ್ಲಿ ಪ್ರಕಟವಾದ ಅತ್ಯಮೂಲ್ಯ ಮಾಹಿತಿಗಳನ್ನು, ಹಸ್ತಪ್ರತಿಗಳನ್ನು ಸಂಗ್ರಹಿಸಿ ಅತ್ಯುತ್ತಮ ಜ್ಞಾನ ಭಂಡಾರವನ್ನು ಅಭಿವೃದ್ಧಿಪಡಿಸಿದ್ದಾರೆ.

೪. ಮಂಗಳೂರಿನ ಬಾಸೆಲ್ ಮಿಶನ್ ಹೆರಿಟೇಜ್ ಯೋಜನೆಯ ಮೂಲಕ ಹಳೆಯ ಕೃತಿಗಳನ್ನು ಮೈಕ್ರೋಫಿಲ್ಮ್ ರೂಪದಲ್ಲಿ ಸಂರಕ್ಷಣೆ ಮಾಡಿದ ಹೆಗ್ಗಳಿಕೆ ಶ್ರೀನಿವಾಸ ಹಾವನೂರ ಅವರದು. ಕನ್ನಡ, ತುಳು, ಮಲಯಾಳಂ ಭಾಷೆಗಳಲ್ಲಿ ಪ್ರಕಟಗೊಂಡ ಮೂರು ಸಾವಿರ ಕೃತಿಗಳನ್ನು ಮೈಕ್ರೋಫಿಲ್ಮ್ ಮೂಲಕ ನೋಡುವಂತೆ ಮಾಡಿದರು.

೫. ಗಂಧ ಮತ್ತು ಕಲ್ಲು ಕಥಾ ಸಂಕಲನ ಶ್ರೀನಿವಾಸ ಹಾವನೂರ ಅವರ ಸೂಕ್ಷ್ಮಪ್ರಜ್ಞೆಗೆ ಉದಾಹರಣೆಯಾಗಿದೆ. ಹೆಣ್ಣಿನ ಜೀವನದ ಏಳು-ಬೀಳುಗಳನ್ನು ಕಥೆಗಳಲ್ಲಿ ಮನೋಜ್ಞವಾಗಿ ಚಿತ್ರಿಸಿರುವುದು ಗಮನಾರ್ಹ. ಹೆಣ್ಣು ತನ್ನ ಜೀವನದಲ್ಲಿ ಅನುಭವಿಸುವ ಪಾತ್ರಗಳಷ್ಟು ಗಂಡು ಅನುಭವಿಸಲಾರ ಎಂಬುದನ್ನು ಗಂಧ ಮತ್ತು ಕಲ್ಲು ಕಥಾಸಂಕಲನ ನಿರೂಪಿಸುತ್ತದೆ.

೬. ಉತ್ತರ ಕರ್ನಾಟಕದಲ್ಲಿ ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗಳ ಕುರಿತಂತೆ ಅತ್ಯುತ್ತಮವಾಗಿ ಕಾರ್ಯನಿರ್ವಹಿಸಿದ, ಸಾಹಿತ್ಯ ಕೃಷಿ ಮಾಡಿದ ಎಲೆಮರೆಯ ಕಾಯಿಯಂತಿದ್ದ, ಅನೇಕ ಸಾಹಿತಿಗಳನ್ನು ಅವರ ಸಾಹಿತ್ಯಗಳನ್ನು ಮೊದಲಬಾರಿಗೆ ಸಾಹಿತ್ಯ ಕ್ಷೇತ್ರಕ್ಕೆ ಶ್ರೀನಿವಾಸ ಹಾವನೂರ ಅವರು ಪರಿಚಯಿಸಿದರು.

೭. ಕನ್ನಡ ಸಾಹಿತ್ಯ ಕ್ಷೇತ್ರದ ಎಲ್ಲ ಪ್ರಕಾರಗಳಲ್ಲೂ ಕೃಷಿ ಮಾಡಿ ಶ್ರೀನಿವಾಸ ಹಾವನೂರ ಅವರು 'ಕಾದಂ-ಕಥನ' ಎಂಬ ಹೊಸ ಪ್ರಕಾರವನ್ನು ಹುಟ್ಟುಹಾಕಿದ್ದಾರೆ.

೮. 'ಕಸದಿಂದ ರಸ' ಎಂಬಂತೆ ಸಣ್ಣಪುಟ್ಟ ಚಿಂದಿಯಾಗಿ ಸಿಕ್ಕಿರುವ ದಾಖಲೆಗಳನ್ನು ಸಂಗ್ರಹಿಸಿ ಪೂರಕವಾದಂಥ ಇತರೆ ದಾಖಲೆಗಳನ್ನು ಅಧ್ಯಯನ ಮಾಡಿ ಪರಿಪೂರ್ಣ ದಾಖಲೆಗಳನ್ನಾಗಿಸಿದ ವಿದ್ವಾಂಸರಲ್ಲಿ ಹಾವನೂರ ಒಬ್ಬರು.

೯. ಕನ್ನಡ ಭಾಷೆ–ಸಾಹಿತ್ಯ, ಚರಿತ್ರೆಗಳಿಗೆ ಸಂಬಂಧಿಸಿದಂತೆ ದಾಖಲೆಗಳನ್ನು ಅಧ್ಯಯನ ಮಾಡಲೆಂದೇ ವಿದೇಶಗಳನ್ನು ಸುತ್ತಿಕ ವಿರಳ ಅಧ್ಯಯನಕಾರರಲ್ಲಿ ಶ್ರೀನಿವಾಸ ಹಾವನೂರ ಮೊದಲಿಗರು.

೧೦. ವಿದೇಶಿ ಮಿಶನರಿಗಳ ಕನ್ನಡ ಪ್ರೇಮವನ್ನು, ಕನ್ನಡ ಸಾಹಿತ್ಯ ಮತ್ತು ಕನ್ನಡ ನಾಡಿಗೆ ಅವರ ಕೊಡುಗೆಗಳನ್ನು ಕುರಿತು ಆಮೂಲಾಗ್ರವಾಗಿ ಕೃತಿಗಳನ್ನು ಸಂಪಾದಿಸಿದ ಅಗ್ರಗಣ್ಯರೆಂದರೆ ಶ್ರೀನಿವಾಸ ಹಾವನೂರ ಅವರು.

# ವಕ್ತೃವಿವರ

## ಅನುಬಂಧ-೧

| ಕ್ರಸಂ. | ಹೆಸರು | ವೃತ್ತಿ | ಸ್ಥಳ | ವರ್ಷ |
|---|---|---|---|---|
| ೧. | ನಾ.ದಾಮೋದರ ಶೆಟ್ಟಿ | ಪ್ರಾಧ್ಯಾಪಕರು | ಮಂಗಳೂರು | ೨೦೧೦ |
| ೨. | ಬೆನಿಟ್ ಅಮ್ಮನ್ | ಸಹಾಯಕ ಗ್ರಂಥಪಾಲಕ | ಮಂಗಳೂರು | ೨೦೧೦ |
| ೩. | ವಸಂತ ತಾಳ್ತಜೆ ಕುಮಾರ | ವಿಶ್ರಾಂತ ಪ್ರಾಧ್ಯಾಪಕರು | ಉಪ್ಪಿನಂಗಡಿ ದಕ್ಷಿಣ ಕನ್ನಡ | ೨೦೧೧ |
| ೪. | ಶ್ರೀಮತಿ ರೋಹಿಣಿ ದೇವಿ | ಶಿಕ್ಷಣ | ಕುಡುಪು ಮೂಡಬಿದರೆ | ೨೦೧೧ |
| ೫. | ರೆವರೆಂಡ್ ಸದಾನಂದ | ಜಪಸ್ಥರು | ಮಂಗಳೂರು | ೨೦೧೧ |
| ೬. | ವಿವೇಕ ರೈ | ವಿಶ್ರಾಂತ ಕುಲಪತಿಗಳು | ಮಂಗಳೂರು | ೨೦೧೧ |
| ೭. | ಭಾರತೀ ಹಾವನೂರ | ಗೃಹಿಣಿ | ಬೆಂಗಳೂರು | ೨೦೧೨ |
| ೮. | ನಾಗೇಶ್ ಹಾವನೂರ | ಪ್ರಾಧ್ಯಾಪಕರು | ಬೆಂಗಳೂರು | ೨೦೧೨ |
| ೯. | ನಿವೇದಿತಾ ಹೊನ್ನತಿ | ಉದ್ಯೋಗ | ಬೆಂಗಳೂರು | ೨೦೧೩ |
| ೧೦. | ಎಸ್.ಎಲ್.ಶ್ರೀನಿವಾಸ | ಪ್ರಾಧ್ಯಾಪಕರು | ಬೆಂಗಳೂರು | ೨೦೧೩ |

## ಶ್ರೀನಿವಾಸ ಹಾವನೂರ ಅವರ ಗ್ರಂಥಗಳು

**ಅನುಬಂಧ-೨**

| | | |
|---|---|---|
| ೧. | ಅವಿವಾಹಿತೆ ರಾ.ಕಾ.ಕು. ಪ್ರಕಾಶನ ಕುಮಟಾ | ೨೦೦೦ |
| ೨. | ಇವರೇ ಲಾಂಗೂಲಾಚಾರ್ಯರು, ಪಾ.ವೆಂ. ಆಚಾರ್ಯ ಆಯ್ದ ಹರಟೆಗಳು ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ ಪ್ರಕಾಶಕರು ಉಡುಪಿ. | ೨೦೦೨ |
| ೩. | ಉಡುಪಿಯ ಪರಿಸರದಲ್ಲಿ ಪಾ.ವೆಂ. ಆಚಾರ್ಯರ ಸಮಗ್ರ ಸಾಹಿತ್ಯ ಸಂಪುಟ-೩ ಪ್ರಸಾದನ ಪ್ರಕಾಶನ ಬೆಂಗಳೂರು | ೨೦೦೧ |
| ೪. | ಒಂದಷ್ಟು ಲಘು, ಒಂದಷ್ಟು ಗಂಭೀರ, ಕರ್ನಾಟಕ ಸಂಘ ಪುತ್ತೂರು | ೨೦೦೦ |
| ೫. | ಓದುಗರೊಡನೆ ಹರಟೆಗಳು ಪಾ.ವೆಂ. ಆಚಾರ್ಯರ ಸಮಗ್ರ ಸಾಹಿತ್ಯ ಸಂಪುಟ-೧೩ ಲೋಕಶಿಕ್ಷಣ ಟ್ರಸ್ಟ್‌ಗ್ರಂಥ ಹುಬ್ಬಳ್ಳಿ, ಬೆಂಗಳೂರು | ೨೦೦೩ |
| ೬. | ಕನ್ನಡ ಸಾಹಿತ್ಯ ದರ್ಶನ ಪರಾಗ ಪ್ರಕಾಶನ, ಧಾರವಾಡ | ೧೯೫೭ |
| ೭. | ಕನ್ನಡ ಕ್ರೈಸ್ತ ಸಾಹಿತ್ಯ ಹನಿಗತೆ ಕಂಪ್ಯೂಟರ್ ಇತ್ಯಾದಿ ಅನನ್ಯ ಪ್ರಕಾಶನ, ಮೈಸೂರು | ೧೯೮೨ |
| ೮. | ಕನ್ನಡ ಪತ್ರಿಕಾ ಸೂಚಿ (೧೮೭೩-೧೯೭೨) ಪ್ರಸಾರಂಗ ಮೈಸೂರು ವಿಶ್ವವಿದ್ಯಾಲಯ | ೨೦೦೪ |
| ೯. | ಕನಕದಾಸರ ಕೀರ್ತನೆಗಳ ಶಬ್ದಕೋಶ ಪ್ರಯೋಗ ಕೋಶ ಕನಕದಾಸ ಸಂಶೋಧನ ಕೇಂದ್ರ, ಮಂಗಳೂರು | ೨೦೧೦ |
| ೧೦. | ಕವಿ ಕಾವ್ಯ ಪರಂಪರೆಯ ಮುದ್ದಣ ಐ.ಬಿ. ಪ್ರಕಾಶನ ಬೆಂಗಳೂರು | ೧೯೭೮ |
| ೧೧. | ಕಾದಂಬರಿಕಾರ ಗಳಗನಾಥ ಸಾಹಿತ್ಯ ಅಕಾಡೆಮಿ ಬೆಂಗಳೂರು | ೨೦೦೦ |
| ೧೨. | ಕುಮುದಿನಿ ಹಾಗೂ ಇತರೆ ಕಾದಂ-ಕಥನಗಳು ಅನನ್ಯ ಪ್ರಕಾಶನ, ಧಾರವಾಡ | ೧೯೮೪ |
| ೧೩. | ಕುಚೋದ್ಯದ ಕಥೆಗಳು ಹೇಮಂತ ಸಾಹಿತ್ಯ, ಬೆಂಗಳೂರು | ೧೯೮೩<br>೨೦೧೦ |
| ೧೪. | ಗಳಗನಾಥ ಮಾಸ್ತರರು ಕನ್ನಡ ಸಾಹಿತ್ಯ ಪ್ರಕಾಶನ ಬೆಂಗಳೂರು | ೧೯೭೨ |
| ೧೫. | ಗಂಗಾಧರ ಮಡಿವಾಳೇಶ್ವರ ತುರಿಮರಿ ಅವರ ಸಟೀಕಿನ ಶಬ್ದ ಮಂಜರಿ ಕೋಶ ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು | ೧೯೬೯ |
| ೧೬. | ಗೋವಿಂದ ಪೈ ವಾಙ್ಮಯ ದರ್ಶನ ಗೀತಾ ಬುಕ್‌ಹೌಸ್, ಮೈಸೂರು | ೧೯೮೩ |

೧೭. ಜಗದ್ವಿಖ್ಯಾತರು ಪಾ.ವೆಂ. ಸಮಿತಿ, ಹುಬ್ಬಳ್ಳಿ ೨೦೦೩

೧೮. ತುಂಗಭದ್ರೆ ನಾಡಿಗೆ–ವರವೂ ಭಾಗ್ಯಲಕ್ಷ್ಮೀ ಪ್ರಕಾಶನ, ಬೆಂಗಳೂರು ೨೦೦೮

೧೯. ದಕ್ಷಿಣ ಕನ್ನಡ ಸಾರಸ್ವತ ಪರಂಪರೆ ಕನ್ನಡ ಸಾಹಿತ್ಯ ಪರಿಷತ್ತು ೨೦೦೪
ಬೆಂಗಳೂರು

೨೦. ಪತ್ರ ಚಿತ್ರಿಸಿದ ಗೋವಿಂದ ಪೈ ವಿನಯ ಪ್ರಕಾಶನ ಬೆಂಗಳೂರು ೧೯೮೭

೨೧. ಪಾ.ವೆಂ. ಆಚಾರ್ಯ ಆಯ್ದ ನಗೆ ಬರಹಗಳು ೨೦೦೦
ಪ್ರಿಸಮ್ ಬುಕ್ಸ್, ಪ್ರೈ ಲಿ. ಬೆಂಗಳೂರು

೨೨. ಪ್ರಥಮ ಕನ್ನಡ ನಾಟಕ ಶಾಂಕುತಲ ೧೮೬೯
ಚುರುಮರಿ ಶೇಷಗಿರಿರಾಯರು ೧೮೮೨
ಮತ್ತು ನಾಟಕದ ಸಮಗ್ರ ಸಮೀಕ್ಷೆ ೧೮೯೪
ಭೀಮರಾಯ ಚಿಟಗುಪ್ಪೆ ೧೯೮೯
ಭಾಗ್ಯಲಕ್ಷ್ಮಿ ಪ್ರಕಾಶನ, ಬೆಂಗಳೂರು ೨೦೦೭

೨೩. ಪಾ.ವೆಂ. ಆಚಾರ್ಯ ಸಮಗ್ರ ಸಾಹಿತ್ಯ ಆಯ್ದು ೨೦೦೨
ಹರಟೆಗಳು ಸಂಪುಟ–೧ ಪ್ರಿಸಮ್, ಬುಕ್ಸ್ ಪ್ರೈ ಲಿ. ಬೆಂಗಳೂರು ೨೦೦೩

೨೪. ಪುರಂದರದಾಸರು ಜನಪ್ರಿಯ ಕೀರ್ತನೆಗಳು ೨೦೦೨
ಅಂಕಿತ ಪುಸ್ತಕ ಬೆಂಗಳೂರು ೨೦೦೮

೨೫. ಬೆಂಗೇರಿಯವರ ಬರಹಗಳು ಆಲೂರು ವೆಂಕಟರಾವ್ ಪ್ರತಿಷ್ಠಾನ ೧೯೮೫
ಧಾರವಾಡ

೨೬. ಮರೆಯಲಾಗದ ಮುಂಬಯಿ ಕರ್ನಾಟಕ ಐತಿಹಾಸಿಕ ೨೦೦೮
ಒಳನೋಟಗಳು ಶ್ರೀನಿವಾಸ ಹಾವನೂರ ಬೆಂಗಳೂರು

೨೭. ಮರೆಯಲಾಗದ ಬರಹಗಾರರು ಹಟ್ಟಿಯಂಡಿ ನಾರಾಯರಾಯರು ೧೯೯೩
ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು

೨೮. ಮಧ್ಯಕಾಲೀನ ಕರ್ನಾಟಕ (ಜಿ.ಎಸ್.ದೀಕ್ಷಿತ್ ಅವರ ಆಯ್ದಬರಹ) ೨೦೦೮
ಕರ್ನಾಟಕ ರಾಜ್ಯಮುಕ್ತ ವಿಶ್ವವಿದ್ಯಾಲಯ, ಧಾರವಾಡ

೨೯. ರಂ.ಶ್ರೀ ಮುಗಳಿ ಚಿತ್ರಿಸಿದ ಪಂಪ, ರನ್ನರು ಅತ್ತಿಮಬ್ಬೆ ೨೦೦೬
ಪ್ರಕಾಶನ ಧಾರವಾಡ

೩೦. ರಂ.ಶ್ರೀ ಮುಗಳಿ ಕನ್ನಡ ಸಾಹಿತ್ಯ ಚರಿತ್ರೆಯ ಮುಂದುವರಿಕೆ ೨೦೦೬
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೩೧. ಶ್ರೀ ವಾದಿರಾಜತೀರ್ಥ ಪ್ರಬಂಧ ಗುಲಬರ್ಗಾ, ವಿಶ್ವವಿದ್ಯಾಲಯ ೧೯೯೧
ಪ್ರಸಾರಾಂಗ, ಗುಲಬರ್ಗಾ

೩೨. ಶ್ರೇಷ್ಠ ಪುಸ್ತಕೋದ್ಯಮಿ ಮ.ಗೋವಿಂದ ರಾವ್ ೧೯೯೬
ಸಾಹಿತ್ಯ ಭಂಡಾರ ಬೆಂಗಳೂರು

೩೩. ಸುಭಾಷಿತ ಚಮತ್ಕಾರ ಪಾ.ವೆಂ. ಆಚಾರ್ಯ ಆಯ್ದು ಸಂಸ್ಕೃತ ೧೯೮೬
ಸುಭಾಷಿತಗಳ ಕನ್ನಡೀಕರಣ ಸಾಹಿತ್ಯ ಭಂಡಾರ ಬೆಂಗಳೂರು ೨೦೦೪

೩೪. ಸೋದೆಮಠದ ಶ್ರೀವಿಶ್ವೇಂದ್ರ ತೀರ್ಥರ ಕೀರ್ತನಮಂಜರಿ ೨೦೦೧
ಹಾವನೂರಿನ ಶ್ರೀವಾದಿರಾಜ ವೃತ್ತಿಕಾ ವೃಂದಾವನ ಮಠ ಕನ್ನಡ
ಸಾಹಿತ್ಯ ಪರಿಷತ್ತು ಬೆಂಗಳೂರು

೩೪. ಎಸ್.ಎಲ್.ಭೈರಪ್ಪ ಅವರ ಕಾದಂ–ಕಥನ ೧೯೯೯
ಪ್ರಸಾದನ ಪ್ರಕಾಶನ ಮಂಗಳೂರು

೩೫. ಹರಿದಾಸರು ಸುತ್ತಿಸಿದ ಮಂತ್ರಾಲಯ ಮಠದ ಯತಿವರೇಣ್ಯರು ೨೦೦೧
ಹಾವನೂರಿನ ಶ್ರೀವಾದಿರಾಜ ವೃತ್ತಿಕಾ ವೃಂದಾವನ ಮಠ
ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು

೩೬. ಹರಿದಾಸರು ಹೊಗಳಿ ಹಾಡಿದ ಶ್ರೀವಾದಿರಾಜರು ೨೦೧೦
ಹಾವನೂರಿನ ಶ್ರೀವಾದಿರಾಜ ವೃತ್ತಿಕಾ ವೃಂದಾವನ ಮಠ
ಶ್ರೀಕನಕ ಸಾಹಿತ್ಯ ಪ್ರತಿಷ್ಠಾನ, ಬೆಂಗಳೂರು

೩೭. ಹರಿದಾಸರು ಸ್ತುತಿಸಿದ ಶ್ರೀಸತ್ಯಭೋದತೀರ್ಥರು ೨೦೧೦
ಹಾವನೂರಿನ ಶ್ರೀವಾದಿರಾಜ ವೃತ್ತಿಕಾ ವೃಂದಾವನ ಮಠ
ಶ್ರೀಕನಕ ಸಾಹಿತ್ಯ ಪ್ರತಿಷ್ಠಾನ, ಬೆಂಗಳೂರು

೩೮. ಹೈದ್ರಾಬಾದಿನ ವೀರಗನ್ನಡಗ ಬಿ.ಜಿ.ಚಿಮ್ಮಲಗಿ ೧೯೮೦
ವಿಜಯ ಪ್ರಕಾಶನ, ಬೆಳಗಾವಿ

೩೯. ಹೊಸಗನ್ನಡ ಅರುಣೋದಯ ೧೯೭೪
ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು ೨೦೦೦
೨೦೧೧

**ಬಿಡಿ ಲೇಖನ**

೦೧. ಅಪರಿಚಿತ ಹೈದರ ಇತಿಹಾಸ ಅಕಾಡೆಮಿ, ಬೆಂಗಳೂರು ೨೦೧೦

೦೨. ಅಭಿನಂದನ ಭಾಷಣ ಸೂರ್ಯನಾಥ ಕಾಮತ್ ಸಾಗರ ೨೦೦೮
ಪ್ರಕಾಶನ ಬೆಂಗಳೂರು

೦೩. ಕನ್ನಡ ಸಾಹಿತ್ಯ ಚರಿತ್ರೆಯ ಅವಸ್ಥಾಭೇದಗಳು ಒಂದು ಸಮನ್ವಯ ೧೯೭೬
ತೀ.ನಂ.ಶ್ರೀ ಸಂಸಾರ ವರ್ಗದ ಪರವಾಗಿ ಬೆಂಗಳೂರು

೦೪. ಕಳೆದ ಶತಮಾನದಲ್ಲಿ ಬ್ರಿಟಿಷರಿಂದ ಕರ್ನಾಟಕ್ಕೆ ಆದ ಅನ್ಯಾಯ ೧೯೯೩
ಇತಿಹಾಸ ಅಕಾಡೆಮಿ ಬೆಂಗಳೂರು

೦೫. ಕರ್ನಾಟಕದ ಸರ್ವಾಂಗೀಣ ಇತಿಹಾಸಕ್ಕೆ ಕಂಪ್ಯೂಟರ್ ಅಳವಡಿಕೆ ೨೦೦೯
(ಒಂದು ಯೋಜನೆ) ಇತಿಹಾಸ ಅಕಾಡೆಮಿ

೦೬. ಕರ್ನಾಟಕ ಜೈನ ಅಧ್ಯಯನಕ್ಕೆ ಜೈನೇತರ ಕೊಡುಗೆ ೧೯೮೮
ಇತಿಹಾಸ ಅಕಾಡೆಮಿ ಬೆಂಗಳೂರು

೦೭. ಕರ್ನಾಟಕ ಇತಿಹಾಸ ಅಕಾಡೆಮಿ ೧೩ನೇ ಸಮ್ಮೇಳನ, ೨೦೦೦
ಹರಪನಹಳ್ಳಿ, ಇತಿಹಾಸ ಅಕಾಡೆಮಿ ಬೆಂಗಳೂರು

೦೮. ಕನ್ನಡ ಸಾಹಿತಿಗಳ ಮಾರ್ಗಸೂಚಿ ಥಿಯಾಸಾಫಿಕಲ್ ಕಾಲೇಜು ೨೦೦೪
ಮಂಗಳೂರು

೦೯. ಕನ್ನಡ ಮೊದಲ ಕಾದಂಬರಿಗಳ ಚಾರಿತ್ರಿಕ ಹಿನ್ನೆಲೆ ಗೋವಿಂದ ಪೈ೧೯೯೫
ಸಂಶೋಧ ಪ್ರತಿಷ್ಠಾನ ಉಡುಪಿ.

೧೦. ಕನ್ನಡ ಸಾಹಿತ್ಯ ಮಾಹಿತಿ ಕೋಶ ಥಿಯೋಸಾಫಿಕಲ್ ಕಾಲೇಜು ೨೦೦೩
ಮಂಗಳೂರು

೧೧. ಕಂಪ್ಯೂ-ಕನ್ನಡ ಸಾ.ಶಿ. ಮರುಳಯ್ಯ ಅಭಿನಂಧನ ಸಮಿತಿ ೨೦೦೪
ಧಾರವಾಡ

೧೨. ಕರ್ನಾಟಕದಲ್ಲಿ ಮುದ್ರಣ ಕಾರ್ಯ ಕನ್ನಡ ಸಾಹಿತ್ಯ ಪರಿಷತ್ತು ೧೯೭೨
ಬೆಂಗಳೂರು

೧೩. ಕಥಾಂಜಲಿ ಪ್ರಕರಣ ಸಾಗರ ಪ್ರಕಾಶನ, ಬೆಂಗಳೂರು ೨೦೦೮

೧೪. ಕಾರಂತರ ಅಂತಃಕರಣ ಸಾಹಿತ್ಯ ಸಮಿತಿ, ಹುಬ್ಬಳ್ಳಿ ೨೦೦೫

೧೫. ಕಾರಂತರ ಯುಗಾಂತರ ಹೃದಯವಂತ ಸಾಮಾಜಿಕ ೧೯೯೯
ಚಿಂತಕ ಶಿವರಾಮಕಾರಂತ ಅಧ್ಯಯನ ಕೇಂದ್ರ ಪುತ್ತೂರು

೧೬. ಗೋವಿಂದ ಪೈಗಳ ಕಾವ್ಯ ಗೀತಾ ಬುಕ್ ಹೌಸ್ ಮೈಸೂರು ೧೯೮೪

೧೭. ಚಂದ್ರೋದಯ ಪತ್ರಿಕೆ ಅನನ್ಯ ಪ್ರಕಾಶನ, ಪುತ್ತೂರು ೧೯೮೧

೧೯. ತುಂಗಭದ್ರೆ ನಾಡಿಗೆ ವರವೊ ಶಾಪವೊ ಇತಿಹಾಸ ಅಕಾಡೆಮಿ ೧೯೯೮

೨೦. ತುಳುವಿನಲ್ಲಿ ಪ್ರಾಥಮಿಕ ಶಿಕ್ಷಣ ಅಮೃತ ಸೋಮೇಶ್ವರ ೧೯೯೫
ಅಭಿನಂದನ ಸಮಿತಿ.

೨೧. ಧಾರವಾಡ ಶಿಕ್ಷಣ ಸಂಸ್ಥೆಯೊಂದರ 'ಪ್ರಸವ ವೇದನೆ' ಇತಿಹಾಸ ೧೯೯೯
ಅಕಾಡೆಮಿ ಬೆಂಗಳೂರು

೨೨. ದತ್ತಕ ವಿಧಿ-ಮುಂಬಯಿ ಕರ್ನಾಟಕದ ಕೆಲವು ಘಟನೆಗಳು ೧೯೯೬
ಇತಿಹಾಸ ಅಕಾಡೆಮಿ

೨೩. ಫೆಡ್ರಿಕ್ ತಿಗ್ಲರ್ ಅಖಿಲ ಭಾರತ ಸಾಹಿತ್ಯ ಪರಿಷತ್ತು ಮೂಡಬಿದರಿ ೨೦೦೩

೨೪. ಬ್ರಿಟಿಷ್ ದಾಖಲೆಗಳ ಸಂಗೊಳ್ಳಿರಾಯಣ್ಣನ ಕ್ರಾಂತಿ ೨೦೧೧
ಬೆಳದಿಂಗಳು ಪ್ರಕಾಶನ ಬೆಳಗಾವ

೨೫. ಬಾಸಲ್ ಮಿಶನ್ನಿನ್ ಗಾಡ್ ಫ್ರೆ ವೈಗಲ್ (೧೮೧೬-೫೫) ೧೯೮೭
ಇತಿಹಾಸ ಅಕಾಡೆಮಿ ಬೆಂಗಳೂರು

೨೬. ಮಂಗಳೂರು ಭೋಟನ್ ಆಟೋಗ್ರಫಿ ಪ್ರಕೃತಿಯ ಸ್ವಮುದ್ರಣ
ಅನಂತ ಪೈ ಅಭಿನಂದನ ಸಮಿತಿ ದಕ್ಷಿಣ ಕನ್ನಡ ಮುಲ್ಕಿ

೨೭. ಮೆಕಂಜಿಯ ಒಂದು ಅಜ್ಞಾನ ಸಂಗ್ರಹ ಇತಿಹಾಸ ಅಕಾಡೆಮಿ ೧೯೯೬
ಬೆಂಗಳೂರು

೨೮. ಮರಾಠಿಯಲ್ಲಿ ಗೇಯ ಸಾಹಿತ್ಯ ಸಪ್ಪಣಾರ್ಯರ ಕಾಲದವರೆಗೆ ೧೯೯೯
ಸರ್ಪಭೂಷಣ ಶಿವಯೋಗಿ ಸ್ವರಮಠ, ಬೆಂಗಳೂರು

೨೯. ಮುಂಬಯಿ ಕರ್ನಾಟಕ: ಪ್ರಾದೇಶಿಕ ಇತಿಹಾಸ ಆಕರಗಳು ೧೯೭೧
ಮತ್ತು ಅವುಗಳ ಅಧ್ಯಯನ ಇತಿಹಾಸ ಅಕಾಡೆಮಿ

೩೦. ಯುರೋಪಿಯನ್ನರ ಕಂಡ ಧಾರವಾಡ ಇತಿಹಾಸ ಅಕಾಡೆಮಿ ೧೯೯೨

೩೧. ರಾಮಚಂದ್ರಪ್ಪ ಉಚ್ಚಿಲ ಸಂದರ್ಶನ-೧ ಕಲಾಗಂಗೋತ್ರಿ ೨೦೦೫
ಯಕ್ಷಗಾನ ಅಧ್ಯಯನ ಕೇಂದ್ರ ಉಚ್ಚಿಲ ದಕ್ಷಿಣ ಕನ್ನಡ

೩೨. ರಾಜ್ಯಮಟ್ಟದ ೧೬ನೇ ಕರ್ನಾಟಕ ಇತಿಹಾಸ ಸಮ್ಮೇಳ ೨೦೦೧
ಮೈಸೂರು ಇತಿಹಾಸ ಅಕಾಡೆಮಿ

೩೩. ವಾಲ್ಟರ್ ಎಲಿಯಟ್ ವೀರಶೈವ ಅಧ್ಯಯನ ಸಂಸ್ಥೆ ೧೯೯೮
ಶ್ರೀಜಗದ್ಗುರು ತೋಂಟದಾರ್ಯ ಮಠ, ಗದಗ.

೩೪. ಎ.ಸಿ. ಬರ್ನೆಲ್ ಇತಿಹಾಸ ಅಕಾಡೆಮಿ ಬೆಂಗಳೂರು ೨೦೦೬

೩೫. ಸಂಚು ಒಂದು ಪ್ರವೇಶ ಶ್ರೀಭೀಮಸೇನ ತೊರಗಲ್ಲ ೧೯೯೯
ಅಭಿನಂದನ ಸಮಿತಿ ಬೆಳಗಾವ

೩೬. ಸಿ.ಪ. ಎಂಬ ಮಹಾಶಯ ವಸಂತ್ರೀ ಪ್ರಕಾಶನ ಮೈಸೂರು ೨೦೦೪

೩೭. ಸಮಯ ಪ್ರಜ್ಞೆ ಮತ್ತು ಚಾಕಲೇಟ್ ಶ್ರೀವಿರೇಂದ್ರ ಹೆಗ್ಗಡೆ ೧೯೯೨
ಪಟ್ಟಾಭಿಷೇಕ ಅಭಿನಂದನ ಸಮಿತಿ, ಧರ್ಮಸ್ಥಳ

೩೮. ಶ್ರೀ ಅಕ್ಷೋಭ್ಯ ವಿದ್ಯಾರಣ್ಯ ವಾಕ್ಯಾರ್ಥ ನಿಜವೇ ಕರ್ನಾಟಕ ೨೦೦೬
ಥಿಯೋಲಾಜಿಕಲ್ ಕಾಲೇಜು, ಮಂಗಳೂರು

೩೯. ಹರಿದಾಸರು ಚಿತ್ರಿಸಿದ ಕೆಲವು ಐತಿಹಾಸಿಕ ಹಾಗೂ ಸಮಕಾಲೀನ ೨೦೦೮
ಜನಜೀವನ ಇತಿಹಾಸ ಅಕಾಡೆಮಿ

೪೦. ಹಳೆಗನ್ನಡ ಕೃತಿಗಳ ಪ್ರಕಟಣೆ ಪಾಶ್ಚಾತ್ಯ ವಿದ್ವಾಂಸರು ಅನುಸರಿದ ೨೦೦೩
ಮಾನದಂಡಗಳ ಒಂದು ವಿಶ್ಲೇಷಣೆ ಇತಿಹಾಸ ಅಕಾಡೆಮಿ

೪೧. Contribution of the Basel Mission to Kannada Leterature Karnataka
Theological college Manglor

೪೨. Ferdinand Kittel Contribution to Induology and 2006
Dravidian Philogy Karnataka Theological college Manglor

## ಅನುಬಂಧ–೩

## ಪರಾಮರ್ಶ ಗ್ರಂಥಗಳು


| ಕ್ರಸಂ. | ಕರ್ತೃ | ಕೃತಿ | ಪ್ರಕಾಶಕರು | ವರ್ಷ |
|---|---|---|---|---|
| ೦೧. | ಅಮರೇಶ ನುಗುಡೋಣಿ | ಕನ್ನಡ ಸಂಶೋಧನೆಯ ವೈಧಾನಿಕತೆಗಳು | ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ | ೨೦೦೮<br>೨೦೧೧ |
| ೦೨. | ಎಂ.ಎಂ.ಕಲಬುರ್ಗಿ | ಕನ್ನಡ ಸಂಶೋಧ ಶಾಸ್ತ್ರ | ಸ್ವಪ್ನ ಬುಕ್ ಹೌಸ್, ಬೆಂಗಳೂರು | ೧೯೯೨ |
| ೦೩. | ಎಂ.ಎಂ.ಕಲಬುರ್ಗಿ | ಪರಿಕಲ್ಪನೆ | ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ | ೨೦೦೭ |
| ೦೪. | ಎಂ.ಚಂದ್ರಪೂಜಾರ | ಸಂಶೋಧನೆ ಏನು? ಏಕೆ?ಹೇಗೆ | ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ | ೨೦೦೯ |
| ೦೫. | ಎಫ್.ಟಿ.ಹಳ್ಳಿಕೇರಿ | ಎಂ.ಎಂ.ಕಲಬುರ್ಗಿ ಮಾರ್ಗದ ಮಹಾವಾಕ್ಯಗಳು | ವಿಕಾಸ ಪ್ರಕಾಶನ ಹೊಸಪೇಟೆ | ೨೦೧೨ |
| ೦೬. | ಎಫ್.ಟಿ.ಹಳ್ಳಿಕೇರಿ | ಕಂಠಪತ್ರ–೩ | ವಿಕಾಸ ಪ್ರಕಾಶನ ಹೊಸಪೇಟೆ | ೨೦೧೪ |
| ೦೭. | ಎಲ್.ಬಸವರಾಜು | ಕೇಶಿರಾಜ ವಿರಚಿತ ಶಬ್ದ ಮಣಿದರ್ಪಣ | ಎಂ.ಬೈರೇಗೌಡ ಮುದ್ದು ಶ್ರೀಗ್ರಂಥಮಾಲೆ, ಬೆಂಗಳೂರು | ೧೯೮೬<br>೨೦೦೯ |
| ೦೮. | ಎಸ್.ಎಸ್.ಅಂಗಡಿ | ಎಂ.ಚಿದಾನಂದಮೂರ್ತಿ ಸಾಹಿತ್ಯ–ಸಾಧನೆ | ಕನ್ನಡ ವಿಶ್ವವಿದ್ಯಾಲಯ ಹಂಪಿ ವಿದ್ಯಾರಣ್ಯ | ೨೦೦೭ |
| ೦೯. | ಎಸ್.ಎಲ್.ಶೇಷಗಿರಿರಾವ್ | ಹೊಸಗನ್ನಡ ಸಾಹಿತ್ಯ ಚರಿತ್ರೆ | ಅಂಕಿತ ಪುಸ್ತಕ ಬೆಂಗಳೂರು | ೧೯೯೯<br>೨೦೦೨ |
| ೧೦. | ಎಸ್.ಚಂದ್ರಮೌಳಿ | ಸಿದ್ದಲಿಂಗಯ್ಯ ಪಟ್ಟಣಶೆಟ್ಟಿ ಯವರ ಸಮಗ್ರ ಸಾಹಿತ್ಯ ಒಂದು ಅಧ್ಯಯನ | ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ | ೨೦೦೯ |
| ೧೧. | ಕೆ.ಕೆಂಪೇಗೌಡ | ಕನ್ನಡ ಭಾಷಾ ಚರಿತ್ರೆ | ನವಭಾರತಿ ಪ್ರಕಾಶನ ಮೈಸೂರು | ೧೯೯೩<br>೧೯೯೭<br>೨೦೦೭ |
| ೧೨. | ಕೆ.ವಿ.ನಾರಾಯಣ | ಕನ್ನಡ ಶೈಲಿ ಕೈಪಿಡಿ | ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ | ೨೦೦೭ |
| ೧೩. | ಚಿದಾನಂದಮೂರ್ತಿ | ಸಂಶೋಧನೆ | ವಿ.ಕೆ. ಪ್ರಕಾಶನ | ೧೯೬೨<br>೨೦೧೧<br>೨೦೧೨ |
| ೧೪. | ಜಿ.ಎಸ್.ಶಿವರುದ್ರಪ್ಪ | ಕಾವ್ಯರ್ಥ ಚಿಂತನ | ಪ್ರಿಯದರ್ಶಿನಿ, ಪ್ರಕಾಶನ ಬೆಂಗಳೂರು | ೧೯೮೩ |
| ೧೫. | ಡಿ.ಎಸ್.ಕರ್ಕಿ | ಕನ್ನಡ ಛಂದೋವಿಕಾಸ | ಭಾರತ್‌ಬುಕ್ ಡಿಪೋ ಮತ್ತು ಪ್ರಕಾಶನ ಧಾರವಾಡ | ೧೯೫೬<br>೧೯೮೬ |

